ಉಷಾ ಸಾಹಿತ್ಯ ಮಾಲೆ: ೧೬-೧೭

# ಕುಡಿಯರ ಕೂಸು

ಶಿವರಾಮ ಕಾರಂತ

ಉಷಾ ಸಾಹಿತ್ಯ ಮಾಲೆ
ಮೈಸೂರು

ಮಾಲೆಯ ೧೯೫೦ ಡಿಸೆಂಬರ್ ಮತ್ತು ೧೯೫೧ ಫೆಬ್ರುವರಿ ಸಂಚಿಕೆ.

ಮಾಲೆಯ ಐದನೆಯ ವರುಷದ ಎರಡು, ಮೂರನೆಯ ಸಂಚಿಕೆ.







ಬೆಲೆ: ನಾಲ್ಕೂವರೆ ರೂಪಾಯಿ

ಮುದ್ರಕರು, ಪ್ರಕಾಶಕರು

**ಆರ್. ಎನ್. ಹಬ್ಬು,**

**ಉಷಾ ಪ್ರೆಸ್, ಓಲ್ಡ್ ಪೋಸ್ಟ್ ಆಫೀಸ್ ರೋಡ್,**

**ಮೈಸೂರು**

# ಮುನ್ನುಡಿ

ನನ್ನ ಹಿಂದಿನ ಬರವಣಿಗೆ " ಬೆಟ್ಟದ ಜೀವ " ಬರೆದಾಗಲೇ ಘಟ್ಟದ ಪ್ರದೇಶಗಳಲ್ಲಿ ವಾಸಿಸುತ್ತಿರುವ ನಿಸರ್ಗದ ಮಕ್ಕಳಾದ ಮಲೆಕುಡಿಯರನ್ನು ಕುರಿತು ಬರೆಯಲು ಹವಣಿಸಿದ್ದೆ. ಆದರೆ ಆಸೆ ಪಕ್ವವಾಗಲು ಇಷ್ಟು ಸಮಯ ಹಿಡಿಯಿತು. ಅದು ಪಕ್ವವಾಗಿದೆ ಎನ್ನುವ ಸಾಹಸವೂ ನನಗಿಲ್ಲ. ಅವರ ಜೀವನದಲ್ಲಿ ನಟ್ಟ ಕಟ್ಟಳೆ, ನಂಬಿಕೆ, ಆಚರಣೆಗಳು ಹೇಗಿವೆ ಎಂದು ತಿಳಿಯಲು ಇನ್ನಷ್ಟು ಸೂಕ್ಷ್ಮವಾದ ಪರಿಚಯ ಬೇಕೆಂದು ಬಲ್ಲೆ. ಇಲ್ಲಿ ಕಾಣಬಹುದಾದ ಸ್ಥೂಲ ಚಿತ್ರ, ಅವರಿಗೂ ನಿಸರ್ಗಕ್ಕೂ ಇರುವ ಸಂಬಂಧ ವನ್ನು, ಅವರ ಜೀವನದ ಮಾರ್ಪಾಡಾಗುತ್ತಿರುವ ಆರ್ಥಿಕ ಬದಲಾವಣೆ ಗಳನ್ನು.

ಅವರಲ್ಲಿ ಬೆಳೆದುಬಂದಿರುವ ನಂಬಿಕೆಗಳ ಪ್ರಭಾವವನ್ನು ಸ್ವಲ್ಪವಾಗಿ ಯಾದರೂ ಚಿತ್ರಿಸಲು ಪ್ರಯತ್ನಿಸಿದ್ದೇನೆ. ಅಲ್ಲದೆ—ಮಲೆಯ ಕೂಸೊಂದು ಮಲೆಯ ಮೃಗಗಳಲ್ಲಿರಿಸಿದ ಮಮತೆಯನ್ನು ಕುರಿತಾದ ಅಂಶವನ್ನು ಚಿತ್ರಿಸಲು ಪ್ರಯತ್ನಿಸಿದ್ದೇನೆ. ಇದು ನಮ್ಮ ದಕ್ಷಿಣದ ಜೀವನ ಚಿತ್ರಗಳಲ್ಲಿ ಒಂದಾದರೂ—ಉಳಿದ ಸಾಮಾಜಿಕ ಚಿತ್ರಗಳಿಗಿಂತ ಇದು ಬೇರೆಯಾದುದು ಎಂಬುದರಿಂದಲೇ ಇದಕ್ಕೆ ಬೇರೆಯೇ ಸ್ಥಾನವಿದೆ.

ಹೆಚ್ಚಿಗೆ, ಮುನ್ನುಡಿ ಬೆಳೆಸುವ ಕಾರಣವಿಲ್ಲವಷ್ಟೆ.

ಪುತ್ತೂರು ದ.ಕ.<br>13—1—51

ಇತಿ<br>ಶಿವರಾಮ ಕಾರಂತ

# ನಮ್ಮ ಮಾತು

'ಮರಳಿ ಮಣ್ಣಿಗೆ', 'ಬೆಟ್ಟದ ಜೀವ' ಕಾದಂಬರಿಗಳನ್ನು ಕನ್ನಡ ಸಾಹಿತ್ಯಕ್ಕೆ ಒದಗಿಸಿ, ದಕ್ಷಿಣಕನ್ನಡದ ಜನಜೀವನವನ್ನು ಪರಿಚಯಮಾಡಿಕೊಟ್ಟ ಶಿವರಾಮ ಕಾರಂತರ ಲೇಖನಿ, ಅದೇ ಕಟ್ಟಕಾಡಿನಲ್ಲಿರುವ, ಇಂದಿನ ನಾಗರಿಕತೆಯ ಸಂಪರ್ಕವಿಲ್ಲದ, ಮಲೆ ಕುಡಿಯರ ಜೀವನವನ್ನು ಚಿತ್ರಿಸಿದ್ದಾರೆ—"**ಕುಡಿಯರ ಕೂಸು**" ಕಾದಂಬರಿಯಲ್ಲಿ. ಅನೇಕ ವರುಷಗಳ ಶ್ರೀ ಕಾರಂತರ ಸಾಹಿತ್ಯಸಂಪರ್ಕವಿದ್ದ ಕನ್ನಡಿಗರಿಗೆ ಇಲ್ಲಿನ ಕೆಲವು ಬಳಕೆ ನುಡಿಗಳು ಅಷ್ಟೇನೂ ಹೊಸತಾಗಿ ಕಾಣುವುದಿಲ್ಲವೆಂದು ನಂಬಿದ್ದೇವೆ. ಶ್ರೀಯುತರ ಕಾದಂಬರಿಗಳಿಗೆ ಮಾರುಹೋದ ಕನ್ನಡಿಗರು "ಕುಡಿಯರ ಕೂಸು" ಕಾದಂಬರಿಯನ್ನು ಅತ್ಯಾದರದಿಂದ ಬರಮಾಡಿಕೊಳ್ಳುವರೆಂದು ಆಶಿಸುತ್ತೇವೆ.

ನಮ್ಮ ಮಾಲೆಯಲ್ಲಿ ಈ ಶ್ರೇಷ್ಠ ಕಾದಂಬರಿಯನ್ನು ಪ್ರಕಟಿಸಲು ಅನುಮತಿ ಕೊಟ್ಟದ್ದಕ್ಕಾಗಿ ನಾವು ಅವರಿಗೆ ತುಂಬಾ ಋಣಿಯಾಗಿದ್ದೇವೆ.

ನಮ್ಮ ಮಾಲೆಯ ಮುಂದಿನ ಕಾದಂಬರಿ ಶ್ರೀ ಕೃಷ್ಣಮೂರ್ತಿ ಪುರಾಣಿಕ ಅವರ "ಮಂಜುಳಾ" ಎಂದು ತಿಳಿಸಲು ತುಂಬಾ ಸಂತೋಷವಾಗುತ್ತದೆ.

ಪ್ರಕಾಶಕ

*

# ಕುಡಿಯರ ಕೂಸು

## ಅಧ್ಯಾಯ ೧

ಎಷ್ಟೋ ವರ್ಷಗಳ ಹಳೆಯ ಕತೆಯಿದು. ಇಂದಿನ ದಿನಕ್ಕೂ ಆ ದಿನಕ್ಕೂ ಆವರಣದಲ್ಲಿ, ಕುಡಿಯರು ಬಾಳಿ ಬದುಕಿದ ರೀತಿಯಲ್ಲಿ, ಬಹು ಮಟ್ಟಿನ ವ್ಯತ್ಯಾಸವನ್ನು ನಾವು ಕಾಣಲಾರೆವಾದರೂ ಕುಡಿಯರ ಕೆಂಚ ಅವನ್ನೆಲ್ಲ ಕಾಣಬಲ್ಲ. ಅವನಿಗೀಗ ಅರವತ್ತು ವಯಸ್ಸಿರಬಹುದು. ಆ ಅರವತ್ತು ವಯಸ್ಸಿನ ಬಾಳ್ವೆಯಲ್ಲೇ ಅವನ ಮತ್ತು ಅವನ ಬಳಗದ ಅರಣ್ಯಜೀವನದಲ್ಲಿ ಎಷ್ಟೋ ಪರಿವರ್ತನೆಗಳಾಗಿವೆ ಎಂದು ತಿಳಿದುಕೊಂಡಿದ್ದಾನೆ ಆತ. ಕಾಲದ ಎಣಿಕೆ, ಸಂವತ್ಸರಗಳ ಎಣಿಕೆ, ಹೊತ್ತುಗೊತ್ತುಗಳ ನಿಶ್ಚಿತ ಲೆಕ್ಕ ಕೆಂಚನಿಗಿಲ್ಲ. ಅವನ ಜನಕ್ಕೂ ಆ ಲೆಕ್ಕ ಇರುವುದು ಅಷ್ಟಕ್ಕಷ್ಟೆ. ಆದರೂ ವರ್ಷಗಳು ಸರಿದುದರ ಅನುಭವವಾಗುವುದಿಲ್ಲವೇ ? ತಾವು ನೆಲೆಸಿದ ಮನೆಮಾರುಗಳಲ್ಲಾದ ಬದಲಾವಣೆ, ಜನಸಂಪರ್ಕದಿಂದಾದ ಬದಲಾವಣೆ, ಇತರರ ಜೀವನಪ್ರವಾಹಗಳಿಂದ ಉಂಟಾದ ವರ್ಚಸ್ಸು ಇವೆಲ್ಲ ಗೊತ್ತಾಗಲೇ ಬೇಕಷ್ಟೆ. ಅದೆಷ್ಟೋ ಬಾರಿ, ತನ್ನ ಜೀವನದಲ್ಲಾದ ವ್ಯತ್ಯಾಸಗಳನ್ನು ನೋಡಿ, ಅಳಿದು ನೆನೆದವ ಕೆಂಚ. ಹಿಂದೆಯೂ ನೆನೆದವನೆ. ಆದರೆ ಆಗ ನೆನೆದುದಕ್ಕೂ ಈಗ ನೆನೆಯುತ್ತಿರುವುದಕ್ಕೂ ತುಂಬ ವ್ಯತ್ಯಾಸವಿದೆ. ಈಗ ಕಿರಿ ಮಲೆಯ ಹತ್ತು ಮೂವತ್ತು ಕುಟುಂಬಗಳನ್ನೊಳಗೊಂಡ ಕುಡಿಯರ ಸಂಸಾರಕ್ಕೆ ಅವನೇ ಗುರಿಕಾರ. ಹಿರಿಯವ—ವಯಸ್ಸಿನಲ್ಲಿ, ಬುದ್ಧಿಯಲ್ಲಿ. ತನ್ನ ಬಳಗದವರಿಗೆ ಏನಾದರೂ ಬುದ್ಧಿ ಹೇಳಬೇಕಾದವನು, ತಿಳಿವು ಹೇಳಬೇಕಾದವನು ಅವನೇನೆ. ಕಿರಿ ಮಲೆಯರ ಕುಡಿಯರ ಪಾಲಿಗೆ ಅವನು ಅರಸನೆಂದರೂ ತಪ್ಪಿಲ್ಲ. ಮುದುಕನಾಗಿದ್ದಾನೆ ನಿಜ, ಮೈ ಮುಖಗಳಲ್ಲಿ ನೆರಿಗೆ ಬಂದಿವೆ. ಅದರಿಂದ ಆತನ ಮಾತಿನ ತೂಕ, ವರ್ಚಸ್ಸು ಕಡಿಮೆಯಾಗಿಲ್ಲ. ಕೇರಿಯ ಪ್ರತಿಯೊಬ್ಬರೂ ಅವನೆಂದಂತೆ ನಡೆದುಕೊಳ್ಳುವವರು. ಆದರೆ ಪ್ರತಿಯೊಬ್ಬನಿಗೂ ತನ್ನದೇ ಆದ ಸಂಸಾರವೊಂದು ಇದ್ದೇ ಇರುತ್ತ

ದಲ್ಲ. ಅಂಥ ಸಂಸಾರ ಕೆಂಚನಿಗೂ ಹಿಂದೆ ಇತ್ತು; ಈಗ ಇಲ್ಲ. ಇಲ್ಲ—ಎಂದು ಹಂಗುತೊರೆದು ವಿರಕ್ತ ಬಾಳು ನಡೆಸುವುದಕ್ಕೂ ಸಾಧ್ಯವಿಲ್ಲ. ಎಂಟು ವಯಸ್ಸಿನ ಮೊಮ್ಮಗ ಕರಿಯ ಉಳಿದಿದ್ದಾನೆ. ಆ ಹುಡುಗನನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು—ಈ ಕೂಸಿನ ಪಾಡೇನು, ನನ್ನ ಬಳಿಕ ಅದನ್ನು ಯಾರು ನೋಡತಕ್ಕವರು? ಎಂಬ ಚಿಂತೆ ಕಾಡುತ್ತದೆ ಕೆಂಚನನ್ನು. ಕೆಂಚ ಲಗ್ನವಾಗುವಾಗ ಇಪ್ಪತ್ತುನಾಲ್ಕು ವಯಸ್ಸಿನ ಹರೆಯ. ಅವನ ಹೆಂಡತಿ ಹಡೆಯುವುದಕ್ಕೆ—ನಾಲ್ಕು ಮಕ್ಕಳನ್ನು ಹಡೆದಿದ್ದರೂ ಬದುಕಿ ಉಳಿದದ್ದು ಗಂಡು ಕೂಸೊಂದೇ. ಉಳಿದ ಮಕ್ಕಳು ಅಲ್ಪಾಯುಷಿಗಳಾಗಿದ್ದರು; ದೈವಕ್ಕೆ ಮುನಿಸು ಬಂದು, ಅವನ್ನು ಕೊಂಡುಹೋಗಿರಬೇಕೆಂದು ಆತ ಯೋಚಿಸಿದ.

ಕಿರಿ ಮಲೆಯ ಕಲ್ಕುಡ ಉಳಿದ ದೈವಗಳಂತಲ್ಲವಂತೆ. ಬಲು ಸಿಡುಕಿನ ದೈವ, ಪ್ರತಾಪಶಾಲಿ ದೈವ. ಕಣಿವೆಯ ಕೆಳಗಿನ ದೆವ್ವ, ದೇವರುಗಳಂತೆ ಶಾಂತಸ್ವಭಾವಿಯಲ್ಲ. ಕಣಿವೆಯ ಕೆಳಗಿನ ದೆವ್ವಗಳಿಗೆ ಸಲ್ಲಿಸುವ ಕೋಲ, ನೇಮ ನಾಲ್ಕು ದಿನ ಹೆಚ್ಚುಕಡಿಮೆಯಾದರೂ ನಡೆಯುತ್ತದೆ. ಪೂಜೆಯ ಕ್ರಮದಲ್ಲಿ ತುಸು ವ್ಯತ್ಯಾಸವಾದರೂ ನಡೆಯುತ್ತದೆ. "ನನ್ನಪ್ಪ, ನನ್ನಮ್ಮ ತಪ್ಪಿ ನಡೆದೆ, ಇದೋ ಕಾಣಿಕೆ" ಎಂದರೆ ದೈವ ತೆಪ್ಪಗಾಗುತ್ತದೆ. ಕಿರಿ ಮಲೆಯ ಕಲ್ಕುಡ ಆ ರೀತಿಯ ಬೆನ್ನುಮೂಳೆ ಇಲ್ಲದ ದೆವ್ವವೇ ಅಲ್ಲ. ಅಂಥ ದೆವ್ವವಾಗಿದ್ದರೆ, ಮನುಷ್ಯ ಕಾಲಿರಿಸಲು ಅಂಜುವ ಮಲೆಯ ಕೊರಕಲೊಂದರಲ್ಲಿ ಕುಳಿತು, ಕಣ್ಣಿಟಕುವಷ್ಟು ದೂರದ ಬೆಟ್ಟಗಳಿಗೆ ಅಧಿನಾಯಕನಾಗಿದ್ದು, ತನ್ನವರಿಂದ ಕಪ್ಪಕಾಣಿಕೆಯನ್ನು ತರಿಸಿಕೊಳ್ಳುವಷ್ಟು ಶಕ್ತಿ ಅದಕ್ಕಿರುವುದು ಅಸಾಧ್ಯದ ಮಾತು. ಅಲ್ಲದೆ ಕಂಪನಿ ಸರಕಾರ ಬರುವ ಮುಂಚೆ ಆ ಕಲ್ಕುಡ ಎಂದೆಂದೂ ಕುರಿ ಕೋಳಿಗಳ ಕಾಣಿಕೆ ಪಡೆದು, ತೃಪ್ತಿಪಟ್ಟ ದೈವವೇ ಅಲ್ಲ. ಐದು ವರ್ಷಕ್ಕಾದರೂ ಒಮ್ಮೆ, ನರಮನುಷ್ಯನ ತಲೆಯನ್ನೇ ಕೊಂಡ ದೈವ ಅದು! ಅಲ್ಲದೆ ಹತ್ತು ಹದಿನೆರಡು ವರ್ಷಗಳಿಗೊಮ್ಮೆ ತನ್ನ ಅಪೂರ್ವ ಉತ್ಸವಕಾಲದಲ್ಲಿ, ಜನ ಸಿಡಿ ಚುಚ್ಚಿಸಿಕೊಳ್ಳುವ ಉತ್ಸವ ಜರುಗಿಸಿ, ಭಕ್ತರು ಕೇಳಿದ ವರಗಳನ್ನು ಸಲ್ಲಿಸಿ, ಮೆರೆದ ಹಿರಿಯ ದೆವ್ವ ಕಲ್ಕುಡ. ಕಾಲದ ಗತಿ ಕೆಟ್ಟಿತು; ಕರ್ಮ ಧರ್ಮ ಬದಲಾಯಿತು; ನಿಜಕ್ಕೂ ಕೆಂಚ

ಆ ಹಿಂದಿನ ಕಾಲವನ್ನು ನೋಡಿರಲಿಲ್ಲ. ಅವನ ತಂದೆಯಿಂದಲೋ ಅಜ್ಜ ನಿಂದಲೋ ತಿಳಿದುಕೊಂಡ ಮಾತುಗಳಿವು.

ಅವನಿಗೆ ಗೊತ್ತಿರುವ ವಿಚಾರವೆಂದರೆ—ಈಗಿನ ಜನಕ್ಕೆ ದೆವ್ವದ ಮೇಲೆ ಭಕ್ತಿ ಕಡಿಮೆ—ಎಂದಿಷ್ಟೆ. ಕಟ್ಟುನಿಟ್ಟು, ಆಚಾರ ವಿಚಾರಗಳಲ್ಲಿ, ನಂಬಿಕೆ ಸಡಲಿದೆಯೋ ಅಥವಾ ಉದಾಸೀನತೆ ಬಂದಿದೆಯೋ ಏನೋ. ಸಹ್ಯಾದ್ರಿಯ ಸೆರಗಿನ ಕುಡಿಯರ ಬಳಗಗಳಲ್ಲಿ ಒಗ್ಗಟ್ಟೊ ಸಡಲಿವೆ. ಬಣ, ವೈರಗಳೂ ಹೆಚ್ಚಿವೆ. ಎಲ್ಲರಿಗೂ ಒಬ್ಬ ನಾಯಕ ಇಲ್ಲದಾಗಿದ್ದಾನೆ. ಕೆಂಚ ಕಿರಿ ಮಲೆಗಷ್ಟೆ ಗುರಿಕಾರನೆನಿಸಿದ್ದಾನೆ. ಇನ್ನು ಹಾಗೆಯೇ—ಹಿರಿ ಮಲೆ ಯಿದೆ; ನೆರಿಯದ ಎರಡು ಮಲೆಗಳಿವೆ. ಹತ್ತಿಯಡ್ಕ, ಬಿಸಿಲೆಗಳಲ್ಲೂ ನಾಲ್ಕಾರು ಕುಡಿಯರ ಕೂಡುಕಟ್ಟುಗಳಿವೆ. ಈಗ ಅವೆಲ್ಲ ಬೇರೆ ಬೇರೆ ಬಣ ಗಳಾಗಿವೆ. ಒಬ್ಬರ ಮುಖ ಒಬ್ಬರು ನೋಡುವ ದಿನ ಅಲ್ಲವಾಗಿವೆ. ಅವರೆ ಲ್ಲರಿಗೂ ಒಬ್ಬನೇ ಗುರಿಕಾರನಿದ್ದ ದಿನಗಳೂ ಇದ್ದುವಂತೆ. ಎಲ್ಲರಿಗೂ ಕಿರಿ ಮಲೆ ಕಲ್ಕುಡನೇ ಅಧಿಷ್ಠಾತ್ರಿಯಾದ ಕಾಲವೂ ಇತ್ತಂತೆ. ಆ ಮಲೆಯಲ್ಲಿ ಬದುಕಿದ್ದಕ್ಕೆ, ನೆಚ್ಚಿ ಬಂದುದಕ್ಕೆ, ತಾನು ಗುರಿಕಾರನಾದ ಉಭಯ ಸಂಕ ಟಕ್ಕೆ, ಕೆಂಚ ತನ್ನ ಮಟ್ಟಿನ ಸೇವೆ ಸಲಿಸುತ್ತಲೇ ಇದ್ದಾನೆ. ಹಾಗೆಯೇ ಇದಿರು ಬೆಟ್ಟದಲ್ಲಿ ವಾಸಿಸುವ ಹಿರಿ ಮಲೆಯ ಕುಡಿಯರೂ ಆ ದೆವ್ವದ ಮಾತಿಗೆ ಬಗ್ಗಿ ನಡೆಯುತ್ತಿದಾರೆ. ಆದರೆ ಉಳಿದವರು—ತಂತಮ್ಮ ದೆವ್ವಗಳ ಗುಡಿ ಗಳನ್ನು ಬೇರೆಯಾಗಿಯೇ ಸ್ಥಾಪಿಸಿ, ಪೂಜಿಸುತ್ತಾ ಬಂದು ಎಷ್ಟೋ ಕಾಲ ವಾಗಿದೆ. ಹೀಗಾಗಿ, ಕುಡಿಯರ ಕುಲಕ್ಕೆ ಕುಲವೇ ಸೇರಿ ಸಲಿಸಬೇಕಾದ ಸೇವೆಯನ್ನು ಮಲೆಯ ಕಲ್ಕುಡನಿಗೆ ಸಲ್ಲಿಸಬೇಕೆಂದರೆ ಹೇಗೆ ಸಾಧ್ಯ? ಆದರೆ ದೆವ್ವ ಅವನ ಕನಸಿನಲ್ಲಿ ಬಂದು ಹೇಳುತ್ತಿದೆ: "ನೀನೆಂಥ ಯಜ ಮಾನ! ನೀನೆಂಥ ಗುರಿಕಾರ! ನನಗೆ ಸಲಿಸುವ ಪೂಜೆಯೆಲ್ಲಿ? ಹತ್ತಿಯ ಡ್ಕದಿಂದ ಕೋಳಿ ಬಂತೇ? ಬಿಸಿಲೆ ಬೆಟ್ಟದಿಂದ ಹಂದಿ ತಂದರೆ? ನರಬಲಿ ಕೊಡುವುದಿರಲಿ—ಇಷ್ಟನ್ನಾದರೂ ಮಾಡಿಸದ ಮೇಲೆ ನನ್ನ ಹಸಿವು ಹಿಂಗ ಬೇಕು ಹೇಗೆ? ವರ್ಷದ ಪೂಜೆಯನ್ನು ಎರಡು ವರ್ಷಕ್ಕಾದರೂ ಸಲಿಸ ಬೇಡವೇ?" ಎಂದು ಎಚ್ಚರಿಕೆ ಕೊಡುತ್ತಲೇ ಇದೆ. ಕೆಂಚ ವಿಶ್ವಪ್ರಯತ್ನ ಮಾಡಿದ್ದ. ಆ ಎಲ್ಲ ಮಲೆಗಳಿಗೂ ಒಸಗೆ ಕಳುಹಿಸಿದ್ದ; ಇತರ ಮಲೆಯ

ವರು ಉದಾಸೀನ ಮಾಡಿದರು. ಸಮೀಪದ ಮಲೆಯವರು ಸಹ ದಿನ ತಳ್ಳಿದರು; ಆ ತಪ್ಪಿಗೆಲ್ಲ ದಂಡ ತೆತ್ತವನು ಕೆಂಚ. ಕೆಂಚ ಒಬ್ಬನೇ ಹೊರತು ಇನ್ನಾರೂ ಅಲ್ಲ.

ಅವನ ಕಣ್ಣೆದುರಿಗೆ ಕಾಣಿಸುತ್ತಿದೆ ಅದೆಲ್ಲ ಚಿತ್ರ. ಅವನ ಮಗ ತಿಪ್ಪ—ಎಂಥ ಹುಡುಗ! ಏನು ಮೈಕಟ್ಟು! ಗಿಡ್ಡವಾಗಿ, ದಪ್ಪನಾಗಿ ಉಕ್ಕಿನ ತುಂಡಿನಂತಿದ್ದ ಹುಡುಗ. ಮರ ಏರುವುದರಲ್ಲಿ ಮಂಗ ಸುಳ್ಳು! ಎಂಥ ಮಳೆಗಾಲದಲ್ಲೂ ಗೋಸರು ಹಿಡಿದ ಬಯನಿ ಮರವನ್ನು ಹತ್ತಿ, ನಿಮಿಷದಲ್ಲಿ ಹೆಂಡದ ಬುರುಡೆ ತುಂಬಿಸಿಕೊಂಡು ಕೆಳಕ್ಕೆ ಇಳಿಯಬಲ್ಲ ಹುಡುಗ. ಆತ ಏಕಾಯೋಕಿ, ತಾನು, ತನ್ನವರು ಹೆಂಡ ಕುಡಿಯಲು ಕೈಯಲ್ಲಿ ದೊನ್ನೆ ಹಿಡಿದು ಕುಳಿತು, ಇದಿರುಕಾಯುತ್ತಿದ್ದಾಗಲೇ ಏನಾಯಿತು? ತಮ್ಮೆಲ್ಲರ ಬಾಯಿ ಬಯನಿ ಹೆಂಡಕ್ಕಾಗಿ ಚಪ್ಪರಿಸುತ್ತಿದ್ದಾಗಲೇ, ಎಣಿಸದ ಪ್ರಮಾದವಾಯಿತು. ಕಣ್ಣೆದುರಿಗೇನೇ ತಿಪ್ಪ ಈಚಲು ಮರದಿಂದ ಧೊಪ್ಪನೆ ಕಿರಿಚಿಕೊಂಡು ಕೆಳಕ್ಕೆ ಬೀಳಬೇಕೇ! ನಾಲ್ಕು ಹನಿ ರಕ್ತ ತುಟಿಗಳಿಂದ, ಮೂಗಿನ ಸೊಳ್ಳೆಗಳಿಂದ ತುಟುಕಿದ್ದು ಮಾತ್ರ. ದೊನ್ನೆ ಎಸೆದುಬಿಟ್ಟು ಕೆಂಚನೂ ಉಳಿದವರೂ ಬಿದ್ದ ತಿಪ್ಪನ ಬಳಿಗೆ ಓಡಿದರು, ಅವನನ್ನು ಹಿಡಿದರು; ಗಾಳಿ ಹಾಕಿದರು! ಬಿದ್ದ ಕ್ಷಣವೇ ತಿಪ್ಪನ ಪ್ರಾಣದ ಹಕ್ಕಿ ಹಾರಿಹೋಗಿತ್ತು. ಉಸಿರೆತ್ತಲಿಲ್ಲ ಕೆಂಚ; ಅವನ ಅಂತರಂಗಕ್ಕೆ ಗೊತ್ತಿತ್ತು—ಇದು ಕಲ್ಕುಡ ತನ್ನಿಂದ ಕೊಂಡ ಬಲಿ—ಎಂದು. ಮಗನನ್ನೊಯ್ದು, ಎದೆ ಗಟ್ಟಿ ಮಾಡಿಕೊಂಡು, ಬೂದಿಮಾಡಿ ಬಂದುಬಿಟ್ಟ. ಮುಂದಿನ ಸಂಕ್ರಾಂತಿಯೇ—ಮನದಲ್ಲಿ ನಿಶ್ಚಯಿಸಿದಂತೆ, ಕಲ್ಕುಡನಿಗೆ ವಿಜೃಂಭಣೆಯಿಂದ ಕೋಲ ಮಾಡಿಸಿ, 'ದೈವವೇ, ಆದದ್ದಾಯಿತು. ನಿನ್ನ ಸಿಟ್ಟಿಗೆ ನನ್ನಂಥ ಬಡವರು ಆಳಲ್ಲ. ಉಳಿದುದನ್ನಾದರೂ ಉಳಿಸು' ಎಂದು ಬೇಡಿದ.

ಉಳಿದದ್ದೇನಂತೆ? ತುಂಬ ಗರ್ಭಿಣಿಯಾಗಿದ್ದ ಸೊಸೆ. ಅವಳ ಮೈ, ಮುಖ ನೋಡುವ ಧೈರ್ಯ ಅವನಿಗಿರಲಿಲ್ಲ. ಯಾವ ಮಾವನಿಗೂ ಇರಲಾರದು. ಸೊಸೆಯ ಕಣ್ಣಿಗೆ ಆಕೆಯ ಗಂಡನ ಶವವನ್ನು ತೋರಿಸದೆ ಬೂದಿಮಾಡಿದ್ದ. ಆಕೆ ಹಡೆವ ಗಳಿಗೆಯ ತನಕ ಆ ಸುದ್ದಿ ಅವಳ ಕಿವಿಗೆ ಬೀಳಬಾರದೆಂದು ಕಟ್ಟಪ್ಪಣೆ ಮಾಡಿದ. ತನ್ನಲ್ಲಿ ಒತ್ತಿಬರುತ್ತಿದ್ದ ದುಃಖ

ವನ್ನು ಅಡಗಿಸಿಕೊಂಡು 'ತಿಪ್ಪ ಬಿಸಲೆಗೆ ಹೋಗಿದ್ದಾನೆ, ಅಲ್ಲಿಂದ ಸುಬ್ರಹ್ಮಣ್ಯಕ್ಕೆ ಹೋಗುತ್ತಾನೆ. ಬೇಗ ಬಂದಾನು' ಎಂದು ಸೊಸೆಯ ಮುಂದೆ ನಾಲ್ಕು ದಿನ ನಾಟಕವನ್ನೇ ಹೂಡಿದ.

ಸೊಸೆ ಹಡೆದಳು—ಗಂಡು ಕೂಸನ್ನು. ಕೊಂಡ ಜೀವಕ್ಕೆ ದೈವ ಬದಲು ಜೀವ ಸಲಿಸಿತು ಎಂದು ತಿಳಿದ ಕೆಂಚ. ಆ ಕೂಸೇ ಈಗ ಅವನ ತೊಡೆಯ ಮೇಲೆ ಕುಳಿತಿರುವ ಕರಿಯ. 'ಸುಬ್ಬ' ಎಂದು ಅವನಿರಿಸಿದ ಹೆಸರು ಅದಕ್ಕೆ. ಆದರೆ ಕೇರಿಯ ಬಳಕೆಯಿಂದ 'ಕರಿಯ'ನೆಂಬ ಹೆಸರೇ ಮಗುವಿಗೆ ಒಪ್ಪಿತು. ಅದೇನೆ ಕರೆದು ರೂಢಿಯಾಯಿತು. ಮಗು ಹುಟ್ಟಿದ ಗಳಿಗೆಗೆ ಅವನ ಮನಸ್ಸು ಕುಕ್ಕೆ ಸುಬ್ರಹ್ಮಣ್ಯದೇವರನ್ನು ನೆನೆದದ್ದು ನಿಜ. 'ತನ್ನ ದೆವ್ವ ಇದನ್ನೂ ಕೊಂಡರೆ' ಎಂಬ ಭೀತಿಯಿಂದ ಒಳಗಿಂದೊಳಗೆ ಅಂಜಿ, 'ಇಕೋ ಇದು ನಿನ್ನದು. ಕಾಯುವ ಭಾರ ನಿನ್ನದು' ಎಂದು ಸುಬ್ರಹ್ಮಣ್ಯನನ್ನು ಬೇಡಿದ್ದ ಕೆಂಚ.

ಮುಂದೆ ಅವನ ಪಾಲಿಗೆ ಬಂದವುಗಳೆಲ್ಲ ಕಷ್ಟದ ದಿನಗಳೇ! ಸೊಸೆಗೆ ಗಂಡನ ಸಾವಿನ ಸುದ್ದಿಯನ್ನು ಕೆಲವು ದಿನಗಳಾದಮೇಲೆ ತಾನೇ ಹೇಳಿದ. 'ದೈವ ಮುನಿದರೆ ಮನುಷ್ಯನೇನು ಮಾಡಿಯಾನು?' ಎಂಬ ಸಮಾಧಾನ ಹೇಳಿದ. 'ತಿಪ್ಪನ ಜೀವವೇ ಸುಬ್ಬನಲ್ಲಿ ತುಂಬಿದೆ. ಆ ಮಗುವನ್ನು ಕಾಯು, ಬೆಳೆಸು. ಕೊಟ್ಟವನೇ ಕೊಂಡರೆ ಯಾರಿಗೆ ಹೇಳಬೇಕು? ಅವನು ಬಿಟ್ಟುದರಲ್ಲಿ ತೃಪ್ತಿಪಡೆದು ಸಂತೋಷಗೊಳ್ಳಬೇಕು ನಾವು' ಎಂದು ಸಮಾಧಾನ ಹೇಳಿದ. ವರ್ಷವರ್ಷಗಳು ಸಂದರೂ ಅವಳಿಗೂ ಗಂಡನ ನೆನಪು ಅಳಿಯಲಿಲ್ಲ, ಅವನಿಗೂ ಮಗನ ನೆನಪು ಅಳಿಯಲಿಲ್ಲ. ಆದರೂ ಕೆಂಚ ತುಟಿ ಕಚ್ಚಿ ಬಾಳುತ್ತಾ ಬಂದಿದ್ದಾನೆ, ಮೊಮ್ಮಗನನ್ನು ಮುದ್ದಿನಿಂದ ಬೆಳೆಸುತ್ತಾ ಬಂದಿದ್ದಾನೆ. ಆಮೇಲೆ ಕರಿಯನ ತಾಯಿ ಚಿಕ್ಕಿ ಇನ್ನೊಂದು ಮದುವೆಯಾಗಬಹುದಾಗಿತ್ತು. ಆಗಲಿಲ್ಲ. ಆಗುವುದು ನ್ಯಾಯವಿತ್ತು. ಜೀವದ ಅಪೇಕ್ಷೆಯೂ ಅಂತಿತ್ತು. ಮಾವನಿಗೆ ಅಂಜಿಯೋ, ಮಗುವನ್ನು ನೋಡಿಯೋ ಅದೇ ಮನೆಯಲ್ಲೇ ಬಾಳಿದಳು. ಕೆಂಚನ ಸಂಸಾರ ಬರಡಾಗದಂತೆ ನೋಡಿಕೊಂಡು ಬಂದಳು.

ತಿಂಗಳ ಹಿಂದೆ, ಕೆಂಚ ಯಾವುದೋ ಮಾತುಕತೆಗೆಂದು ತನ್ನ ಕೇರಿ

ಯಿಂದ ಬೆಟ್ಟ ಇಳಿದು, ಎದುರಿನ ಹಿರಿ ಮಲೆಗೆ ಹೊರಟ. ಹೊರಡುವಾಗಲೇ ಅವನ ಎಡದ ಹುಬ್ಬು ಹಾರಿತು. ಹತ್ತು ಹೆಜ್ಜೆ ಹೋಗುತ್ತಲೇ ಬೆಕ್ಕೊಂದು ಅಡ್ಡ ಬಂದಿತು. ಇವುಗಳ ಪರವೆಮಾಡದೆ ಮುಂದುವರಿದ. ಒಂದಿಷ್ಟು ದೂರ ನಡೆದು, ಆ ಬೆಟ್ಟದ ಸೆರಗಿಗೆ ಬಂದ. ಅದರ ನೈರುಂಚಿನ ಇಳಕಲು ದಾರಿಯಲ್ಲಿ ಮೆಲ್ಲಗೆ ಇಳಿದು ಸಾಗಿದ. ಇಳಿದು ಇಳಿದು ಬಂದುದೇ ಕಲ್ಕುಡನ ತಾಣಕ್ಕೆ. ನಾಲ್ಕು ಸುತ್ತಲೂ ಓಟೆಯ ಮೆಳೆಗಳು, ಅವುಗಳ ಎಡೆಯಲ್ಲಿ ನಾಲ್ಕು ಚಪ್ಪಡಿಕಲ್ಲುಗಳಿಂದ ಮಾಡಿದ ಚಿಕ್ಕ ಗೂಡು. ಅದೇನೆ ಕಲ್ಕುಡನ ಗುಡಿ. ಎದುರಿಗೆ ಬತ್ತಿದ ಬೆಟ್ಟದ ಅಬ್ಬಿಯೊಂದು, ಬಂಡೆಕಲ್ಲುಗಳ ಎಡೆಯಲ್ಲಿ ವಿರಮಿಸಿ, ಕಲ್ಕುಡನಿಗಾಗಿ ಕಾದು ನಿಂತು, ಮುಂದಕ್ಕೆ ಹರಿದು, ಕೆಳಗಿನ ಹಿರಿಯ ತೊರೆಯೊಂದನ್ನು ಸೇರುತ್ತದೆ. ಕೆಂಚ ನೀರಿನ ಬಳಿಗೆ ಹೋದ. ಮುಖ, ಕಾಲುಗಳನ್ನು ತೊಳೆದುಕೊಂಡ. ಗುಡಿಯ ಮುಂದಕ್ಕೆ ಬಂದು, ಮೊಣಕಾಲೂರಿ 'ದೈವವೇ, ಕುಲವನ್ನು ಕಾಯು, ಕೇರಿಯನ್ನು ಕಾಯು, ಮಳೆ, ಬೆಳೆ ಕೊಡು. ಬದುಕನ್ನು ಹಸನಾಗಿ ಮಾಡು' ಎಂದು ಬೇಡಿ, ಮುಂದಿನ ಹಾದಿ ಹಿಡಿದ; ಬೆಟ್ಟ ಇಳಿದ. ತೊರೆಯ ಮೇಲೆ ಹಾಕಿದ ಸಂಕ ದಾಟಿ, ಬಂಡೆಯಿಂದ ಬಂಡೆಗೆ ಕುಪ್ಪಳಿಸಿ, ಎದುರಿನ ಏರುವ ದಾರಿ ಹಿಡಿದು ಹಿರಿ ಮಲೆಗೆ ಹೋದ. ಹಿರಿಮಲೆಯ ಗುರಿಕಾರ ಕೊಟ್ಟಿಗೆಹಾರಕ್ಕೆ ಹೋಗಿದ್ದನಂತೆ. ಇನ್ನೂ ಬರುವುದಕ್ಕೆ 'ನಾಲ್ಕು ದಿನ ಹೋದೀತು' ಎಂದರು ಅವನ ಬಂಧುಗಳು. ನಿರಾಶೆಯಿಂದ ಕೆಂಚ ಮನೆಗೆ ಮರಳಿದ. ಹೋದದ್ದು, ದೈವಕ್ಕೆ ಪೂಜೆ ಸಲ್ಲಿಸುವ ದಿನ ನಿಷ್ಕರ್ಷೆಮಾಡಲು, ಅಂಥ ಕೆಲಸಕ್ಕೂ ವಿಘ್ನ ಬರಬೇಕೇ? ಅಲ್ಲಿನ ಗೆಳೆಯರು ಒತ್ತಾಯಿಸಿದರು. ನಿಲ್ಲುವ ಮನವಾಗದೆ, ಹೋದಂತೆ ಮರಳಿ ಬಂದ. ಬರುವಾಗ ದಾರಿಯಲ್ಲಿ ಕಲ್ಕುಡನ ಗುಡಿಯ ಮುಂದೆ ನಿಂತು 'ನನ್ನ ತಪ್ಪೇನಿಲ್ಲ ದೊರೆಯೇ. ಈ ಬಾರಿ ಯಾರೂ ಸಿಗ ಲಿಲ್ಲ. ಹುಣ್ಣಿಮೆ ಕಳೆದಮೇಲೆ ಇನ್ನೊಮ್ಮೆ ಹೋಗುತ್ತೇನೆ, ಕೋಪಿಸಿಕೊಳ್ಳ ಬೇಡ?' ಎಂದು ಗುಡಿಯಿಂದ ಮರಳಿದ. ಆ ದಿನ ಮಾತ್ರ ಅವನ ಮನಸ್ಸು ತುಂಬ ಕಳವಳಗೊಂಡಿತ್ತು. 'ವರ್ಷಕ್ಕೆ, ಎರಡು ವರ್ಷಕ್ಕೆ ಎರಡು ಬೆಟ್ಟಗಳ ವರೂ ಸೇರಿ ಮಾಡುವ ಪೂಜೆಗೆ ಹೀಗೆ ಯಾಕೆ ವಿಘ್ನ ಬರಬೇಕು? ಹಿರಿ ಮಲೆಯ ಗುರಿಕಾರನಿಗೆ ಹೇಳಿಕಳುಹಿಸಿದರೆ, ಬರುವುದು ಗೌರವಕ್ಕೆ ಕಡಿಮೆ

ಎಂದು ತಿಳಿಯುತ್ತಾನೆ ಆತ. ನಾನೇ ಹೋದರೆ ಕಾಣಲಿಕ್ಕೆ ಸಿಗುವುದಿಲ್ಲ. ಕಾಲಕ್ಕೆ ಸಮನಾಗಿ ಪೂಜೆ ಸಲ್ಲಿಸದೆಹೋದರೆ, ಕಲ್ಕುಡ ಗೊತ್ತಿದ್ದೂ ಇಲ್ಲದವನಂತೆ, ನನ್ನ ಮೇಲೆಯೇ ರೇಗುತ್ತಾನೆ. ನನ್ನ ಕೇರಿಯವರು ಮಾತ್ರವೇ ಸೇರಿ ಈ ಪೂಜೆಯ ಕೆಲಸ ನಡೆಸುವುದು ಸಾಧ್ಯವೇ?' ಎಂದು ಅನುಮಾನಿಸುತ್ತ, ಚಿಂತಿಸುತ್ತ ಮಲಗಿಕೊಂಡ. ಆ ರಾತ್ರಿಯೆಲ್ಲ ಅವನಿಗೆ ಘೋರ ಕನಸುಗಳೇ. ಬೆದರಿಸುತ್ತಿರುವ ಕಲ್ಕುಡನೊಬ್ಬನೇ ಅವನ ಕಣ್ಣಿಗೆ ಕಾಣಿಸುತ್ತಿದ್ದ ವ್ಯಕ್ತಿ. ಈತ ಕ್ಷಮೆ ಕೇಳುತ್ತಲೇ ಇದ್ದಾನೆ. ಕಲ್ಕುಡ 'ನಿನ್ನ ತಲೆ ತೆಗೆಯುತ್ತೇನೆ' ಎಂದು ಬೆದರಿಸುತ್ತಲೇ ಇದ್ದಾನೆ. ಒಂದಲ್ಲ ಎರಡು ತಲೆಗಳನ್ನು ತೆಗೆಯುತ್ತಾನಂತೆ. ಕೆಂಚನಿಗೆ ಹೆದರಿಕೆಯಲ್ಲೇ ಬೆಳಗಾಯಿತು. ತಲೆ ತುರಿಸಿಕೊಂಡು, ಏನು ಮಾಡುವುದಕ್ಕೂ ದಾರಿ ಕಾಣದೆ, ತಾನೇ ತುಕ್ರನ ಮನೆಗೆ ಹೋದ. ಹತ್ತೇ ಹತ್ತು ಮಾರು ದೂರದಲ್ಲಿ ತುಕ್ರನ ಮನೆ. "ಏನು ಅಜ್ಜ?" ಎಂದು ಕೇಳಿದ ತುಕ್ರ ಅವನನ್ನು ಕಾಣುತ್ತಲೇ.

"ತುಕ್ರ, ನೀನು ಧೈರ್ಯಶಾಲಿ. ನನಗೆ ಮಾತ್ರ ಹೆದರಿಕೆ ಹಿಡಿದು ಬಿಟ್ಟಿದೆ. ಕರಡಿ ಕೊಂದವ ನೀನು. ನಿನ್ನ ಧೈರ್ಯ, ನಿನ್ನ ರಕ್ತ, ನಿನ್ನ ಕೆಚ್ಚು—ನನಗೆ ಬರಲಾರದು. ನಮ್ಮ ಜನಗಳಲ್ಲೇ ನೀನು ಬಲ್ಲವ; ಬುದ್ಧಿವಂತ" ಎಂದು ವಿಸ್ತಾರವಾದ ಪೀಠಿಕೆ ಹಾಕಿ, ತನಗಾದ ಸ್ವಪ್ನವಾರ್ತೆಯನ್ನೆಲ್ಲ ಅವನ ಮುಂದೆ ಹೇಳಿಕೊಂಡ. ಹಿಂದಣ ರಾತ್ರಿಯ ಸ್ವಪ್ನದ ಕತೆ ಕೇಳಿದ ತುಕ್ರನಿಗೆ ಕೆಂಚನಷ್ಟೇ ಭಯವಾಯಿತು. ಆತ ನುಡಿದ—"ಅಜ್ಜ, ನೀವು ಇನ್ನೊಮ್ಮೆ ಮಲೆಯ ತನಕ ದಣಿದು ಹೋಗುವುದು ಬೇಡ. ಎರಡು ದಿನ ಬಿಡಲಿ; ನಾನು ಹೋಗಿ ನಿಶ್ಚಯ ಮಾಡಿಕೊಂಡು ಬರುತ್ತೇನೆ. ಕೋಲಕ್ಕೆ ಒಳ್ಳೆಯ ದಿನ ಯಾವುದೆಂದು ನೀವು ಹೇಳಿದರೆ ಸಾಕು. ಅವರು ಬರಲಿ; ಬಿಡಲಿ. ನಾವು ಸಲಿಸುವ ಪೂಜೆ ಸಲಿಸಲೇಬೇಕು. ಕಲ್ಕುಡನಿಗೆ ಸಿಟ್ಟು ಬಂದರೆ, ಹೇಳಿದ ಹಾಗೆ ಎರಡಲ್ಲ, ನಾಲ್ಕು ತಲೆಗಳನ್ನು ಬಲಿಕೊಂಡಾನು." ಮುಂದಣ ಸಂಕ್ರಾಂತಿಗೆ ಅದು ನಡೆಯಬೇಕೆಂದು ಇಬ್ಬರೂ ಸೇರಿ ನಿರ್ಧರಿಸಿದರು.

ಮುಂದಣ ಸಂಕ್ರಾಂತಿಯ ದಿನ ಬಂತು. ಪೂಜೆ ಮಾತ್ರ ಎಣಿಸಿದಂತೆ ನಡೆಯಲಿಲ್ಲ. ಅದರ ಮುಂಚಿನ ದಿನ ದೆವ್ವ ತನ್ನ ಬಲಿಯನ್ನು ಮಾತ್ರ

ಕೊಂಡೇ ಬಿಟ್ಟಿತು! ಆದುದರಿಂದಲೇ ಕುಲಕ್ಕೆ ಸೂತಕ ಬಂದಿತು; ಪೂಜೆಯೂ ನಿಂತಿತು. ದೈವದ ವಿಚಾರದಲ್ಲಿ ಕೆಂಚನಿಗಿದ್ದ ಭೀತಿಯನ್ನು ತುಕ್ರನೂ ಹೊರದೆ ಇರಲು ಸಾಧ್ಯವಿರಲಿಲ್ಲ. ಇಬ್ಬರ ಭೀತಿಗಳು ಎರಡೆರಡು ತೆರನಾಗಿದ್ದುವು. 'ದೈವ ತನ್ನನ್ನು ದಂಡಿಸುವುದಕ್ಕೆ ಒಂದು ಜೀವವನ್ನು ಮಾತ್ರ ಕೊಂಡಿದೆ. ಅದು—ತನ್ನ ಸೊಸೆಯ ಜೀವವನ್ನು! ಎರಡು ಜೀವ ಕೊಳ್ಳುತ್ತೇನೆಂದ ದೈವ, ಆ ಇನ್ನೊಂದನ್ನೂ ಬೇಡಿದರೆ ತನ್ನ ಬಾಳು ಮುಗಿದಂತೆಯೇ' ಎಂದು ಕೆಂಚ ಬೆದರಿದ. ಸೊಸೆ ಸತ್ತು ಅಲ್ಲ, ದೆವ್ವದ ಸಿಟ್ಟಿಗೆ ಬಲಿಯಾಗಿ ಹೋದಳು. ಇನ್ನು ಆ ಎರಡನೆಯ ಜೀವ, ಸಲಬೇಕಾದ ಬಲಿ, ಯಾರೆಂಬುದು ಕೆಂಚನಿಗೆ ಸ್ಪಷ್ಟವಾಗಿ ತೋರುತಿತ್ತು. ಅದು ತನ್ನ ಮೊಮ್ಮಗನೇ ಇರಬೇಕು—ಎಂದು ಊಹಿಸಬೇಕಾಯಿತು. ಅದರಿಂದ ಎದೆ ನಡುಗತೊಡಗಿತು. ಅಲ್ಲವಾದರೆ, ಬೆಳಗಿನ ಹೊತ್ತು ಆ ಹುಡುಗನನ್ನು ತೊಡೆಯ ಮೇಲೆ ಹೀಗೆ ಕುಳ್ಳಿರಿಸಿಕೊಂಡು, ಕೆಂಚ ಬೆಳಚುಗಟ್ಟಿದ ಮುಖದಿಂದ, ಬಿರುಗಣ್ಣ ನೋಟದಿಂದ, ಆ ಮಗುವನ್ನೇ ನೋಡುತ್ತಿರಲು ಕಾರಣವಿಲ್ಲ. ಹಿಂದಣ ದಿನ ತನಗೆ ಗಂಜಿ ಉಣ್ಣಿಸಿದ ತಾಯಿಯನ್ನು, ಅದೇ ಸಂಜೆ ಕಳೆದುಕೊಂಡ ಮಗು, ಬೆಪ್ಪುಗಟ್ಟಿಹೋಗಿತ್ತು. ಅದರ ಪ್ರಪಂಚದಲ್ಲಿ ಅಳಿಲು, ಹಕ್ಕಿ, ಕೋತಿ—ಇಂಥ ಚಿಕ್ಕ ಗೆಳೆಯರನ್ನು ಬಿಟ್ಟರೆ, ತನ್ನವರೆಂದಿದ್ದರು ಅಮ್ಮ, ಅಜ್ಜ ಇಬ್ಬರೇ. ಅವರಿಬ್ಬರಲ್ಲಿ ಈ ತಾಯಿಯೂ ಕಣ್ಮರೆಯಾಗಿ, ಉಳಿದವನು ಅಜ್ಜನೊಬ್ಬ. ಅಜ್ಜನನ್ನು ಬಿಟ್ಟರೆ ತನಗ್ಯಾರು ಗತಿ ಎಂಬ ಚಿಂತೆ ತುಂಬಿತ್ತು ಮಗುವಿನ ಮನದಲ್ಲಿ. ಅದಕ್ಕೆ ಪ್ರತಿಯಾದ, ಸಾವಿರ ಪಾಲು ದಾರುಣವಾದ, ಭಯಾನಕವಾದ, ಮನದ ವಿಹ್ವಲ ಕೆಂಚನದ್ದು. ಯೋಚನೆಯೇ ಹೊರಡದೆ ಜಡವಾಗಿದೆ ಅವನ ಮನಸ್ಸು. ಹೊರಟ ಪ್ರತಿಯೊಂದು ಯೋಚನೆಯಿಂದಲೂ ಬೆದರಿಕೆ ಹೆಚ್ಚುತ್ತಿದೆಯೇ ಹೊರತು, ಶಾಂತಿಯ ದಾರಿ ತೋರುತ್ತಲಿಲ್ಲ. 'ತೊಡೆಯ ಮೇಲೆ ಕುಳಿತ ಕರಿಯ ಆತನ ತಾಯಂತೆ, ತಂದೆಯಂತೆ ದೆವ್ವಕ್ಕೆ ಆಹುತಿಯಾಗಬೇಕೇ? ತನ್ನ ಜನವೆಲ್ಲ ಒಟ್ಟುಸೇರಿ ಮಾಡಿದ ತಪ್ಪಿಗೆ, ಕುಲಕ್ಕೆ ಹಿರಿಯನಾಗಿ ಗುರಿಕಾರನಾದ ಮಾತ್ರಕ್ಕೆ, ಕೋಲದ ದಂಡವನ್ನೆಲ್ಲ ತನ್ನೊಬ್ಬನ ಮೇಲೆಯೇ ಕಲ್ಕಿಡ ವಿಧಿಸಬೇಕೇ' ಎಂದು ವಿಚಾರ ತಾಳುತ್ತದೆ ಅವನ ಮನಸ್ಸು. 'ಅದು ದೆವ್ವದ

ರೋಷ! ಕಲ್ಕುಡನ ಹಟ! ಶಕ್ತಿಯಿದೆ ಅದಕ್ಕೆ; ಸೇಡನ್ನು ಸಾಧಿಸಬಹುದು —ಸಾಧಿಸಲಿ. ಆದರೆ ಸೇವೆ ಸಲ್ಲಿಸಲು ಸರ್ವವಿಧದಿಂದಲೂ ಪ್ರಯತ್ನ ಮಾಡಿದ. ತನ್ನ ಕುಲವನ್ನೇ ಕ್ಷಯಿಸುವ ಹಟ ಕಲ್ಕುಡ ಮಾಡಿದ್ದಾದರೆ, ತನ್ನ ಬಳಿಕ ಕುಲ ಅಳಿದು, ಆತನ ಪೂಜೆಯನ್ನೇ ಮಾಡುವವರಿಲ್ಲವಾದೀತು. ತಾನೊಬ್ಬನಿದ್ದುದಕ್ಕೆ ಇಷ್ಟಾದರೂ ನಡೆಯುತ್ತಿದೆ. ತನ್ನ ಮೊಮ್ಮಗನ ಬಲಿಯನ್ನು ಕೇಳಿದರೆ, ಬಲಿ ಕೊಂಡರೆ, ತನಗೆ ಇನ್ನು ಆ ದೈವದ ಹಂಗೂ ಇಲ್ಲ, ಭೀತಿಯೂ ಇಲ್ಲ. ಮುದುಕನಾದ ತಾನು ವಂಶ ಕಳಕೊಂಡು ಬದುಕಿದ್ದರೇನು, ಸತ್ತರೇನು? ಬದುಕಿದ್ದು, ಉಳಿದದ್ದೂ, ಬಾಳು ನಡೆಸಿದ್ದೂ ಈ ಒಂದು ಮಗುವಿಗಾಗಿ. ಅದನ್ನೇ ಕೊಳ್ಳುವುದೇನು ದೈವ'—ಎಂಬ ವಿಚಿತ್ರ ವಿಚಾರಲಹರಿ ಕೆಂಚನದು.

ಧೈರ್ಯಮಾಡಿಕೊಂಡು ಕಲ್ಕುಡನನ್ನು ಬೆದರಿಸುವ ನಿಲುವು ಗಳಿಸುತ್ತದೆ ಅವನ ಮನಸ್ಸು ಒಮ್ಮೊಮ್ಮೆ. ಆದರೆ ಭೀತಿ ಭೀತಿಯೇ; ಭೀತ ಭೀತನೇ; 'ಹೋಗಲಿ, ನಿನ್ನ ಹಟ, ನಿನ್ನ ಹಸಿವು ಹಿಂಗಲಿ. ನಿನಗೆ ತೃಪ್ತಿಯಾಗುವುದಾದರೆ ನಾನೇ ಬಂದು, ನಿನ್ನ ಗುಡಿಯ ಮುಂದೆ ತಲೆ ಚಚ್ಚಿಕೊಂಡು ನನ್ನ ಜೀವ ಬಲಿಕೊಡುತ್ತೇನೆ. ನಿನಗೆ ತೃಪ್ತಿಯಾಗುತ್ತದೆಂದು ಭರವಸೆಕೊಡು. ಸ್ವಪ್ನದಲ್ಲಿ ಬಂದು ಹೇಳು. ಮಾತು ಕೊಡು. ಅಷ್ಟು ಮಾಡುತ್ತೇನೆ. ಮೊಮ್ಮಗನನ್ನು ಮಾತ್ರ ಉಳಿಸಿಕೊಡು' ಎಂದು ಬೇಡುತ್ತಾನೆ ಇನ್ನೊಮ್ಮೆ. ಬೇಡುತ್ತಲೇ ಕಣ್ಣೀರೂ ಹರಿಯಿತು—ಬಗ್ಗೆಯಾಗಿ.

ಮರುಗಳಿಗೆಗೆ, ಆ ಕೂಸು ಹುಟ್ಟಿದಾಗ ಸುಬ್ರಹ್ಮಣ್ಯದೇವರ ಹೆಸರನ್ನು ನೆನೆದು, ಮಗುವಿಗೆ 'ಸುಬ್ಬ' ಎಂದು ಕರೆದುದರ ನೆನಪಾಯಿತು. ಮನಸ್ಸು ದೈವದ ಕಡೆಗೆ ತುಸು ಬಿರುಸಾಯಿತು. 'ಏನು? ನನ್ನ ಮೊಮ್ಮಗನನ್ನು ಕೊಂಡುಹೋಗುವ ಧೈರ್ಯವೇ ನಿನಗೆ? ನೋಡು, ಅದು ಹುಟ್ಟಿದ ದಿನವೇ ಸುಬ್ರಹ್ಮಣ್ಯನನ್ನು ಬೇಡಿಕೊಂಡಿದ್ದೆ—ಅದನ್ನು ಕಾಯಬೇಕೆಂದು. ನಿನ್ನ ಹಟ, ಸೇಡು ನನಗೆ ಗೊತ್ತು. ತಿಪ್ಪನನ್ನು ಕೊಂಡುಹೋದಾಗಲೇ ಮನಸ್ಸು ಗಟ್ಟಿಮಾಡಿ 'ಕಾಪಾಡು' ಎಂದು ಆ ದೇವರನ್ನು ಬೇಡಿಕೊಂಡಿದ್ದೆ. ಸುಬ್ರಹ್ಮಣ್ಯ ಕೊಟ್ಟಷ್ಟು ಆಯುಷ್ಯ ಅವನಿಗಿದೆ. ನಿನಗೆ ಆ ದೇವರ ಹಂಗು ಇಲ್ಲವಾದರೆ ಬೇಕಾದಂತೆ ಮಾಡು. ದೇವರಿಗೆ ಆ ಮಗುವನ್ನು ಕಾಯುವ

ತ್ರಾಣವಿದ್ದರೆ ಕಾದುಕೊಳ್ಳುತ್ತಾನೆ. ನಾನು ಮುದುಕ. ಹಣ್ಣಾಗಿದೆ ತಲೆ ಕೂದಲು. ನಾನು ಈ ಮಗುವನ್ನು ಕಾಯುವುದು ಅಷ್ಟರಲ್ಲಿಯೇ ಇದೆ. ಕಾಯುವ ಭಾರ ಕುಕ್ಕೆ ಸುಬ್ರಹ್ಮಣ್ಯನದು' ಎಂದುಕೊಂಡ ತನ್ನಷ್ಟಕ್ಕೆ. ಅಷ್ಟರಲ್ಲಿ ಬೇರೊಂದು ಸಂಶಯವೂ ಹೊಳೆಯಿತು—'ನಿಜ, ನಾನು ಮಗು ಹುಟ್ಟಿದ ಮೇಲೆ ಆ ದೇವರ ಮನೆಗೆ ಅವನನ್ನು ಕೊಂಡೊಯ್ದು ತೋರಿಸಿ ಬರಲಿಲ್ಲ. ಈ ವರ್ಷ ಷಷ್ಠಿಯ ದಿನ ಅಷ್ಟು ಮಾಡಿಕೊಂಡು ಬರುತ್ತೇನೆ. ಖಂಡಿತವಾಗಿಮಾಡುತ್ತೇನೆ. ಅವನಬದುಕನ್ನು ಅವನು ಉಳಿಸಿಕೊಂಡಾನು. ನೀನು ಕೊಳ್ಳುವ ಬಲಿ ಹೇಗೂ ಹೇಗೂಕೊಳ್ಳುತ್ತೀಯಾ! ಇನ್ನು ಯಾರನ್ನು ಕೊಳ್ಳುತ್ತೀಯಾ? ನಮ್ಮ ಕುಲಕ್ಕೆ ಉಳಿದವ ನಾನೊಬ್ಬ; ಮುದಿ ಕೊರಡು. ಇಂದು ಹೋದರೂ ಒಂದೇ; ನಾಳೆ ಹೋದರೂ ಒಂದೇ. ಅಯ್ಯೋ, ನನಗೆ ಜೀವದ ಆಸೆ ಉಂಟು—ಎಂದು ತಿಳಿದಿದ್ದೀಯಾ? ಎಂದೇ ಮೈ ನೆತ್ತರೆಲ್ಲ ಒಣಗಿ ಹೋಗಿದೆ. ನನ್ನನ್ನು ಬಲಿಕೊಂಡರೆ ನಾಲ್ಕು ಹನಿ ನೆತ್ತರೂ ನಿನಗೆ ಸಿಗಲಾರದು. ನನ್ನ ಸೊಸೆಯಂತೆ, ಮಗನಂತೆ ತುಂಬಿದ ಹರೆಯ, ತುಂಬಿದ ಮೈ ನನ್ನದಲ್ಲ. ನಾನು ನ್ಯಾಯವಾದುದನ್ನು ಹೇಳಿಕೊಂಡಮೇಲೆಯೂ ನಿನ್ನ ಮನಸ್ಸಿಗೆ ಕರುಣೆ ಬಾರದೆ ಹೋದರೆ, ನಾನೇಕೆ ಬಲಿಕೊಡುತ್ತೇನೆ—ನಾನಾಗಿ. ಕೊಡುವುದು ದೊಡ್ಡ ಕೆಲಸವಲ್ಲ; ಕೊಟ್ಟೇನು. ನೀನು ಬಾಯಿ ಬಿಟ್ಟು ಕೇಳಿದರೆ ಕೊಟ್ಟೇನು. ಆದರೆ ನೋಡು, ಸುಬ್ರಹ್ಮಣ್ಯನಿಗೆ ಒಪ್ಪಿಸಿದ ಈ ಕೂಸನ್ನು ದೊಡ್ಡದು ಮಾಡಿ, ಬುದ್ಧಿ ಬರುವ ತನಕ ಬೆಳೆಯಿಸಿ ಕಾಯ ಬೇಡವೇ ನಾನು? ಬರಿದೆ ಮಗುವನ್ನು ಕೊಟ್ಟೆನೆಂದರೆ ಅವನೂ ಕೇಳ ಲಾರ. ಈ ಮಗುವನ್ನು ಇನ್ನು ಹತ್ತು ವರ್ಷಕಾಲ ಬೆಳೆಯಿಸಿದರೆ, ನಾಳೆ ಅವನು ಕೇರಿಗೆ ಗುರಿಕಾರನಾಗುತ್ತಾನೆ, ಬುದ್ಧಿವಂತನಾಗುತ್ತಾನೆ, ತನ್ನ ಜನ ಗಳನ್ನು ನಡೆಯಿಸಿಕೊಂಡು ಹೋಗುತ್ತಾನೆ. ಅದರ ಮೊದಲು ನಾನು ಅವನ ಕೈಬಿಟ್ಟರೆ, ಮಗು ತಬ್ಬಲಿಯಾಗುತ್ತದೆ. ನಾನು—ಅವನಿಗೂ ಲೋಕಕ್ಕೂ ಅನ್ಯಾಯಮಾಡಿದಂತಾಗುತ್ತದೆ. ಈ ಮಾತೇ ಖಂಡಿತ' ಎಂದು ಏನೋ ಯೋಚನೆ ಹೊಳೆದು ಕುಳಿತಲ್ಲಿಂದ ಎದ್ದುಬಿಟ್ಟ.

ಇದ್ದಕ್ಕಿದ್ದಂತೆಯೇ ಎದ್ದು, ಕರಿಯನನ್ನೆತ್ತಿಕೊಂಡು, ಸೊಂಟಕ್ಕೆ ಕತ್ತಿ ಸಿಕ್ಕಿಸಿಕೊಂಡು, ಗುಡಿಸಲು ಬಿಟ್ಟು ಹೊರಟೇ ಬಿಟ್ಟ, ಬೇಸಿಗೆಯ ದಿನ

ಅದು. ಕೇರಿಯವರು ಹಿಂದಿನ ದಿನ ನಡೆದ ವಿಪತ್ತನ್ನು ನೆನೆದು ಹರಟುತ್ತಾ, ಮೌನವಾಗಿ ಕುಳಿತಿರುವಂತಿಲ್ಲ. ಕುಮರಿ ಬೆಳೆಯುವಲ್ಲಿಗೆ ಹೋಗಬೇಕು. ಆ ಜಾಗ, ಹಿಂದಣ ವರ್ಷ ಕುಮರಿ ಬೆಳೆದ ತಾವಿನಿಂದ ಮೈಲು ದೂರದ ಇನ್ನೊಂದು ಬೆಟ್ಟದಲ್ಲಿದೆ. ಸಾವು ಬಂತೆಂದು, ಸಾಗುವಳಿ ನಿಲ್ಲಿಸಲು ಬರುತ್ತದೆಯೇ? ಗಂಡಸರು, ಹೆಂಗಸರು ಎಲ್ಲರೂ ನಸುಕಿಗೆ ಎದ್ದು, ಕುಮರಿ ಭೂಮಿಗೆ ಹೋಗಿದ್ದಾರೆ. ಕುಮರಿ ಇರುವುದು ಕಿರಿಯ ಮಲೆಯಿಂದ ಕವಲೊಡೆಯುವ ಒಂದು ಬೆಟ್ಟದ ತಪ್ಪಲಲ್ಲಿ. ಕುಡಿಯರೆಲ್ಲರು ಸೇರಿ ಚಳಿಗಾಲ ಕಳೆಯುತ್ತಲೇ, ಅಲ್ಲಿನ ಇಪ್ಪತ್ತು ಎಕ್ರೆ ಕಾಡು, ಪೊದೆಗಳನ್ನು ಸವರಿದ್ದರು. ಒಂದು ತಿಂಗಳ ಕಾಲ ಅದಕ್ಕಾಗಿ ದುಡಿದಿದ್ದರು. ಬೆಂಕಿಯಿಟ್ಟು, ಬಿದ್ದ ಮರ, ಕೊಂಬೆ ಎಲೆಗಳನ್ನೆಲ್ಲ ಸುಟ್ಟು ಬೂದಿಮಾಡಿದ್ದರು. ಇನ್ನು—ಅಷ್ಟೊಂದು ಜಮೀನಿನ ಅಗತೆ ಮಾಡಬೇಕು. ಇಳಿಜಾರಾದ ಬೆಟ್ಟದ ಮೈ; ನೇಗಿಲು ನೊಗಗಳ ಆಟ ನಡೆಯುವ ಸಾಗುವಳಿ ಅದಲ್ಲ. ಅಂಥ ಬೇಸಾಯ ಕಣಿವೆಯ ಕೆಳಗೆ ಹೊಲಗದ್ದೆಗಳನ್ನು ಮಾಡಿಕೊಂಡಿರುವ ಭಟ್ಟರಿಗೆ, ಬಂಟರಿಗೆ, ಗೌಡರುಗಳಿಗೆ. ಅಂತಹ ಬೇಸಾಯ, ಅಂದರೆ ಒಮ್ಮೆ ನಟ್ಟ ನೆಲ್ಲದಲ್ಲೇ ತಿರುತಿರುಗಿ ನಡುವ ಹವ್ಯಾಸ ಕುಡಿಯರಿಗೆ ಎಂದೂ ಇಲ್ಲ, ಇದ್ದಿರಲಿಲ್ಲ. ಅವರು ನೇಗಿಲು ನೊಗ ಕೊಂಡವರಲ್ಲ, ಅದಕ್ಕಾಗಿ ಜಾನುವಾರು ಸಾಕಿದವರಲ್ಲ: ಏನಿದ್ದರೂ ಕೈಗೆಲಸ ಅವರದ್ದು. ಹಿಂದಿನ ಕಾಲದಲ್ಲಿ ಮರದ ಮೊನಚು ಕೋಲುಗಳಿಂದಲೇ ನೆಲ ಕುತ್ತಿ, ಕೆದರಿದವರು. ಈಗ ವರ್ಷದಲ್ಲಿ ಕೆಲವು ತಿಂಗಳು ಮಲೆಯ ಏಲಕ್ಕಿ ತೋಟಗಳಲ್ಲಿ ಕೆಲಸ ಮಾಡುತ್ತಿರುವುದರಿಂದ, ಮಲೆಯ ಧನಿಗಳಿಂದ ಅವರಿಗೆ ಕಬ್ಬಿಣದ ಪಿಕ್ಕಾಸು ದೊರೆಯುತ್ತಿವೆ. ಅವರಲ್ಲಿರುವುದು ನಾಲ್ಕು ಪಿಕ್ಕಾಸುಗಳು ಮಾತ್ರವೆ. ಒಬ್ಬರಿಗಿದ್ದರೆ ಒಬ್ಬರಿಗಿಲ್ಲ. ನಾಲ್ವರನ್ನು ಬಿಟ್ಟು ಉಳಿದವರು ಮೊನಚು ಕೋಲುಗಳಿಂದಲೇ ಅಗತೆ ಮಾಡಬೇಕು, ಇಲ್ಲವೆ ಬೇರೆ ಏನಾದರೂ ಕೆಲಸ ಮಾಡಬೇಕು. ಕಾಡು ಸುಟ್ಟ ಆ ನೆಲದಲ್ಲಿ ಅಗತೆಯಾದ ಬಳಿಕ, ವಿಷುಸಂಕ್ರಾಂತಿ ಕಳೆದಮೇಲೆ ಕುಮರಿ ಬಿತ್ತನ್ನು ಬಿತ್ತುತ್ತಾರೆ. ವಿಷು ಕಳೆದ ತಿಂಗಳೊಳಗಾಗಿ ಆ ಘಟ್ಟದ ಸೆರಗು ಮುಗಿಲು ಮನೆಯಾಗುತ್ತದೆ. ಅಲ್ಲಿಂದ ಹೊಲವನ್ನು ಕಾಯಬೇಕು, ಬೆಳೆವ ಪೈರನ್ನು ಆನೆ ಕಾಟಗಳ ಬಾಯಿಂದ ಉಳಿಸಿಕೊಳ್ಳಬೇಕು. ಅಂದರೆ ಕೇರಿಯಲ್ಲಿ

ಕುಳಿತು ದೂರದಿಂದ ಕಾವಲು ನೋಡುವ ಆಟವೇನೂ ಅಲ್ಲ. ನಿತ್ಯವೂ ಕುಮರಿಭೂಮಿಗೆ ಹೋಗಿಬರುವುದು ಶಕ್ಯವಿದ್ದಿಲ್ಲ. ಮಳೆಯ ನೀರು ಹನಿಯಿತೆಂದರೆ, ಕಾಡಿನ ದಾರಿ ಇಂಬಳಗಳಿಂದ ತುಂಬಿ ನರಕವಾಗುತ್ತದೆ. ಹೆಜ್ಜೆ ಹಾಕುವುದು ಸಾಧ್ಯವಲ್ಲದ ಮಾತು ಕಾಲಿಗೆ ಏನು ಹಚ್ಚಿಕೊಂಡರೂ, ಮಳೆಗಾಲದ ಇಂಬಳಗಳ ಕಡಿತ ತಡೆಯುವುದು ಕಷ್ಟ. ಹಾಗಾಗಿ, ಮಳೆ ಪ್ರಾರಂಭವಾಗುವುದರೊಳಗೆ, ಕೇರಿಯ ಪ್ರತಿಯೊಬ್ಬರೂ ಇಲ್ಲಿನ ಗುಡಿ ಗೂಡಾರಗಳನ್ನು ಕಿತ್ತು ಅಲ್ಲಿ ಹೂಡಬೇಕು. ಅಲ್ಲಿ ಬಿದಿರು, ಹುಲ್ಲುಗಳಿಂದ ಬೇರೆ ಗುಡಿ, ಗೋಪುರ, ಕಾವಲು ಮನೆ—ಪ್ರತಿಯೊಂದೂ ಆಗಬೇಕು. ಇಷ್ಟೆಲ್ಲ ಕೆಲಸವೆಂದರೆ ತಿಂಗಳು ಎರಡು ತಿಂಗಳೇ ಹಿಡಿಯುತ್ತವೆ. ಹಾಗಿರುವುದರಿಂದಲೇ ಕೇರಿಯವರು ಕೆಂಚನನ್ನು ಬಿಟ್ಟು ಅಲ್ಲಿಗೆ ಹೋಗಿದ್ದಾರೆ. ಕರಿಯ ಸಹ ಒಮ್ಮೊಮ್ಮೆ ಅವರೊಂದಿಗೆ ಅಲ್ಲಿಗೆ ಹೋಗುತ್ತಿದ್ದ. ಹೀಗಾಗಿ ಕೆಂಚ ಬದಲು ದಾರಿ ಹಿಡಿದದ್ದು ಕೇರಿಯವರಿಗೂ ಗೊತ್ತಿಲ್ಲ. ಹೊರಟಿದ್ದ ಕೆಂಚನಿಗೇ ಗೊತ್ತು. ಮಗುವನ್ನೆತ್ತಿಕೊಂಡು ಅಂಗಣದಿಂದ ಆತ ಹೊರಬಿದ್ದ. ಏಲಕ್ಕಿ ಮಲೆಯ ನಡುವಣ ಕಾಲುಹಾದಿಯನ್ನು ತುಳಿಯುತ್ತ, ಹಾಗೆಯೇ ಸಾಗಿದ. ಆ ಮುದುಕನಿಗೆ ಎಂಟು ವರ್ಷದ ಮೊಮ್ಮಗನನ್ನು ಹೊರುವ ಕೆಲಸವೂ ಸುಲಭವಾಗಿರಲಿಲ್ಲ. ಅವನ ಹಿಡಿತವಲ್ಲಿ ಕರಿಯನಿಗೂ ಅದು ಸುಖವೆನಿಸಲಿಲ್ಲ. ಆತ "ಅಜ್ಜಾ, ಯಾಕೆ ಎತ್ತಿಕೊಳ್ಳುತ್ತೀ? ನಾನು ನಡೆಯುತ್ತೇನೆ—ಬಿಡು. ಎಲ್ಲಿ ಹೋಗುವುದೆಂದು ಹೇಳು?" ಎಂದು ಕೇಳಿದ. ಮಗುವನ್ನು ಕೆಳಕ್ಕಿರಿಸಿ, ಅದರ ಕೈ ಹಿಡಿದುಕೊಂಡು ಮುದುಕ ಮುಂದೆ ಸಾಗಿದ. ಹುಡುಗ "ಎಲ್ಲಿಗೆ? ಎಲ್ಲಿಗೆ?" ಎಂದು ಒಂದೆರಡು ಬಾರಿ ಕೇಳಿದರೆ "ಕೇಳಬಾರದು ಮಗು, ಯಾವುದಾದರೂ ಕೆಲಸಕ್ಕೆ ಹೋಗುವಾಗ ಎಲ್ಲಿಗೆಂದು ಕೇಳಬಾರದು" ಎಂದು ನುಡಿಯುತ್ತಲೇ ಇದ್ದ.

ಕರಿಯ ಮಾತನಾಡಲಿಲ್ಲ. ಅಜ್ಜನ ಕೈ ಹಿಡಿದುಕೊಂಡು ಮತ್ತೂ ನೂರು ಹೆಜ್ಜೆ ಮುಂದೆ ಸರಿದ. ಕೊನೆಗೆ ಎಡರುತೊಡರುಳ್ಳ ಕಾಲುಹಾದಿಯಲ್ಲಿ, ಅವನ ಮಗ್ಗುಲಿಗೆ ಸಮನಾಗಿ ನಡೆಯಲಾರದೆ, ಅವನಿಂದ ಕೈ ಸಡಲಿಸಿಕೊಂಡು "ನಾನು ಬಂದರಾಯಿತಲ್ಲ. ನಿನ್ನ ಹಿಂದೆಯೇ ಇದ್ದೇನೆ" ಎಂದು ಹಿಂಬಾಲಿಸಿದ. ದಾರಿ ಮಲೆಯಿಂದ ಇಳಿಮುಖವಾಗಿ ಹೋಗುತ್ತ,

ಕೆಳಗಣ ಕಣಿವೆಗೆ ತಿರುಗಿತು. ಆ ಮೂಲೆ ಬರುತ್ತಲೇ ಮುದುಕ ಕೆಳಗಿಳಿಯುವ ಬದಲು ದಾರಿ ಬಿಟ್ಟು, ಬೆಟ್ಟದ ಮೇಲೇರುವ ಯೋಚನೆಮಾಡಿದ. ಕೈಯಲ್ಲಿ ಕತ್ತಿ ಹಿಡಿದು ಬಲ್ಲೆ, ಬೀಳಲು, ಬೆತ್ತದ ಗಿಡಗಳನ್ನು ಸವರುತ್ತ "ಮಗು, ಹೆದರಬೇಡ. ನನ್ನ ಹಿಂದೆಯೇ ಬಾ. ನಿನ್ನನ್ನು ಒಂದು ಕಡೆಗೆ ಕರೆದುಕೊಂಡು ಹೋಗುತ್ತಿದ್ದೇನೆ. ನಮ್ಮ ಕುಲದೈವದ ಮನೆಗೆ. ಕುಲದ ಮನೆಯೂ ಅಹುದು. ನಾನು ಹುಟ್ಟಿದ್ದೇ ಅಲ್ಲಿ. ನಿನಗೆ ತೋರಿಸಲೇ ಇಲ್ಲ ಅದನ್ನು" ಎಂದು ದಾರಿ ಸವರುತ್ತ, ಮಗ್ಗುಲ ಗಿಡಗಳನ್ನು ಆಧಾರವಾಗಿ ಹಿಡಿದುಕೊಳ್ಳುತ್ತ, ಮೊಮ್ಮಗನ ಕಡೆಗೆ ಆಗಾಗ ನೋಡಿ, ಜಾಗ್ರತೆ ಹೇಳುತ್ತ "ನನ್ನ ಹಾಗೆ ಹಿಡಿದುಕೊಂಡು ಬಾ. ಹೆದರಬೇಡ. ಹೋಗುವುದು ಕಷ್ಟ ಅಷ್ಟೆ. ಮತ್ತೇನು ಹೆದರಿಕೆಯಿಲ್ಲ" ಎಂದು ಏನೇನೋ ಅಡ್ಡಮಾತನಾಡುತ್ತ ಸಾಗುತ್ತಿದ್ದ. ಮಗುವಿನ ಮನಸೆಳೆಯುವ ಪ್ರಯತ್ನ ಮಾಡುತ್ತಿದ್ದ. ತುಂಬ ಕಗ್ಗಾದ ದಾರಿ. ಏರುತ್ತ, ಏರುತ್ತ ಹೋಗಬೇಕು. ಮೈ ನುಸುಳಿಸಿ ಸಾಗುವುದಕ್ಕೂ ಬಿಡಲಾರದಷ್ಟು ಸಸ್ಯಗಳ ದಟ್ಟಣೆ. ಅಂಥ ಕಾಡಿನಲ್ಲಿ—ಹುಲಿ, ಚಿರತೆ ಎಲ್ಲೆಲ್ಲಿಯೂ ಮನೆಮಾಡಿಕೊಂಡಿರಬಹುದು. ಅಲ್ಲದೆ—ಆ ಬೆಟ್ಟದಲ್ಲಿ ಕರಡಿಗಳ ಆವಾಸವು ತುಂಬ. ಅದು ಕರಿಯನಿಗೂ ತಿಳಿಯದ ಸಂಗತಿಯಲ್ಲ. ಮಾತನಾಡುವ ಮನ ಕೆಂಚನಿಗಿಲ್ಲದಿದ್ದರೂ, ಮಗುವಿಗೆ ಹೆದರಿಕೆ ಬರಬಾರದೆಂದು, ಅವನ ಸಲುವಾಗಿಯೇ ಏನೇನೋ ಅಡ್ಡಮಾತನಾಡುತ್ತ, ಉಸಿರು ಕಟ್ಟಿ, ಬೆವರು ಸುರಿಸಿ, ಸವರಿ, ಸಿಡಿದು, ದೆವ್ವ ಹಿಡಿದವನಂತೆ ಮುಂದುವರಿಯುತ್ತಲೇ ಇದ್ದ. ಕರಿಯನೂ ಸಾಹಸಿಯು, ಹೇಳದೆ ಕೇಳದೆ ಗೆಳೆಯರ ಕಣ್ಣುತಪ್ಪಿಸಿಕೊಂಡು, ಅವನೇ ಅಂಥ ಕೆಲಸ ಮಾಡಿದವನಾದುದರಿಂದ—ಅವನಿಗೆ ಇಂಥ ಕಾಡನ್ನು ನುಗ್ಗಿನುಸುಳುವುದರಲ್ಲಿ ಅಂಜಿಕೆಯೂ ಇರಲಿಲ್ಲ. "ಅಜ್ಜಾ, ಇಲ್ಲೆಲ್ಲೋ ಮೇಲೆ ಕರಡಿಗುಹೆ ಇದೆ—ಎನ್ನುತ್ತಿದ್ದ ನಮ್ಮ ಕಾಳ. ನೋಡಬೇಕೆಂದು ನನಗೆ ತುಂಬಾ ಮನಸ್ಸು. ಕಾಳನಿಗೂ ಎಲ್ಲಿದೆ ಎಂದು ಸಮನಾಗಿ ಗೊತ್ತಿಲ್ಲವಂತೆ. ನಿನಗೆ ಗೊತ್ತೇ?" ಎಂದು ಕರಿಯ ಮಾತಿಗೆ ತೊಡಗಿದ.

"ಕರಡಿಗುಹೆಯೇ, ಗೊತ್ತು. ಈಗ ಅಲ್ಲಿಗೆ ಬೇಡ. ಇನ್ನೊಮ್ಮೆ ಕರೆದುಕೊಂಡು ಹೋಗುತ್ತೇನೆ. ಕರಡಿ ಇಲ್ಲದ ವೇಳೆ ನೋಡಿ ಅಲ್ಲಿಗೆ

ಹೋಗಬೇಕು” ಎಂದು ಹಾಗೆಯೇ ಮುಂದುವರಿದ. ಅವನ ಅಂತರಂಗಕ್ಕೆ ಗೊತ್ತಿತ್ತು—ಹುಡುಗ ಕೇಳುತ್ತಿದ್ದ ಕರಡಿಮನೆ ಹಿಂದಣ ದಿನಗಳಲ್ಲಿ ಅವನ ನಿವಾಸದ ಮನೆಯೇ ಆಗಿತ್ತು. ಆಗ ಅವನೂ ಅವನ ಕುಲದವರೂ ಅರಣ್ಯ ಮಧ್ಯದ ಈ ಗುಹೆಗಳಲ್ಲಿ ವಾಸವಾಗಿದ್ದರು. ಕೆಂಚ ಹುಟ್ಟಿದ್ದೂ ಅಲ್ಲಿಯೆ; ಬೆಳೆದು ಎರಡು ವರ್ಷದವನಾದದ್ದೂ ಅಲ್ಲಿಯೆ. ಅಷ್ಟೆಲ್ಲ ಸ್ಮರಣೆ ಅವನಿಗೆ ಇದ್ದರೂ, ಅವನಿಗೆ ಚೆನ್ನಾಗಿ ನೆನಪಾಗದ ವಿಚಾರವೆಂದರೆ—ಅವನ ಹಿರಿಯರು ತಮ್ಮ ಅನಾದಿಕಾಲದ ಗವಿಮನೆಗಳನ್ನು ಬಿಟ್ಟು ಹೊರಟು ಬಂದರೇಕೆಂದು. ಪ್ರಾಯಶಃ ಯಾವುದೋ ಸಾವುನೋವುಗಳು ಸಂಭವಿಸಿ, ಅವರನ್ನು ಭೀತಿಗೊಳಿಸಿರಬೇಕು. ಅದರಿಂದ ಆ ಸ್ಥಳವನ್ನು ಬಿಟ್ಟಿದ್ದರು. ಆಮೇಲೆಯೂ ಅವನ ಹಿರಿಯರು ಕೆಲಕಾಲದ ತನಕ ವರ್ಷಕ್ಕೊಮ್ಮೆಯಾದರೂ ಅಲ್ಲಿಗೆ ಹೋಗಿ ಬರುತ್ತಿದ್ದ ನೆನಪು ಅವನಿಗೆ. ಅಲ್ಲಿದ್ದ ದೈವದ ಕಲ್ಲೊಂದರ ಮುಂದೆ ಕೋಳಿ ಬಲಿಕೊಟ್ಟು ಬರುತ್ತಿದ್ದಂತೆ, ಹಣತೆದೀಪ ಉರಿಸುತ್ತಿದ್ದಂತೆ—ನೆನಪು. ಅಲ್ಲಿನ ದೈವ ಅವನ ತಾತ ಮುತ್ತಾತಂದಿರ ಮನೆಯ ದೈವವಾಗಿದ್ದಿರಬೇಕು. ಆ ಮಲೆರಾಯನನ್ನು ಇಂದಿಗೂ ನಂಬಿಬಂದವನು ಅವನು. ಅವನ ಸಮಾಜದ ಜನಗಳ ಪಾಲಿಗೆ ಆ ನೆನಪಾವುದೂ ಉಳಿದು ಬಂದಿಲ್ಲ. ಅವರೆಲ್ಲರು ಮಲೆಯ ಕಲ್ಕುಡನನ್ನು ಕುಲದೈವವೆಂದು ಪೂಜಿಸಿ ಬರುತ್ತಿರುವವರು.

ಬೆಟ್ಟ ಹತ್ತಿ ಹಾದಿ ಸಾಗುತ್ತಿದ್ದಾಗ, ಇವೆಲ್ಲ ಹಳೆಯ ನೆನಪುಗಳು ಕೆಂಚನ ಮನದಲ್ಲಿ ಉಕ್ಕಿ ಹರಿಯುತ್ತಿದ್ದುವು. ಸೊಸೆಯ ಹಚ್ಚಹೊಸ ಸಾವು ದುಃಖಭರದಿಂದ ಅವನ ಎದೆಯನ್ನು ಉಬ್ಬಿಸಿತ್ತು, ಮುಖವನ್ನು ಬಾಡಿಸಿತ್ತು. ಆ ಜತೆಗೆ ಕಾಡು ಸವರಿ, ಬೆಟ್ಟದ ಕಡಿದಾದ ದಾರಿಯನ್ನೇರುವ ಸಾಹಸದ ಕೆಲಸ. ಇದರಿಂದ ಮೈಯ ದಣಿವೂ ಅಧಿಕವಾಗುತ್ತ ಬಂದು, ಮಾತು ಮೂಲೆಗುಂಪಾಯಿತು. ಕರಿಯ ಮಾತ್ರ ಚಿಗರಿಯಂತೆ ಅಜ್ಜನನ್ನು ಹಿಂಬಾಲಿಸುತ್ತಿದ್ದ. ನಡುನಡುವೆ ನಿಂತು, ನಿಟ್ಟುಸಿರು ತೆಗೆಯುವ ಭರದಲ್ಲಿ ಅವನೂ ಬಾಯಿಯನ್ನು ಬಿಗಿಹಿಡಿದ. ಆ ಕಾಡಿನ ಕತ್ತಲಲ್ಲಿ, ಬಂಡೆಗಳ ಏಣಿ ಏರುವುದರಲ್ಲಿ ಮನಸ್ಸೂ ವಿಸ್ಮಯ ತಾಳಿತು. ಕರಡಿಗಳಿರುವ ಗುಹೆ ಕಾಣುವ ಆಸೆ, ಕುತೂಹಲ ಅವನಿಗೆ. ತನ್ನ ಅಜ್ಜನೂ ಅಂಥ ಗುಹೆಯಲ್ಲಿ ಹಿಂದೆ ವಾಸವಾಗಿ

ಪ್ಪನೆಂಬ ಬೆರಗು ಬೇರೆ. ಇವೆಲ್ಲ ಆ ಎಳೆಯನ ಹಿಂದಣ ದಿನದ ಕಡುದಾರುಣ ದುಃಖವನ್ನು ಮರೆಯಿಸಿತು. ಸುಮಾರು ಒಂದೆರಡು ಗಳಿಗೆ ಕಾಲ ಅವರು ಹೀಗೆಯೇ ನಡೆದಿರಬೇಕು; ಬೆಟ್ಟ ಹತ್ತಿ ಹೋಗಿರಬೇಕು. ಮುದುಕ ತೀರ ದಣಿವಿನಿಂದ ಉಸ್ಸೆಂದು ಕುಳಿತ, ಒಂದು ಬಂಡೆಯ ಮೇಲೆ. 'ಇಷ್ಟು ದೂರ ಏರಿದೆಯೇ ಜಾಗ! ಹಿಂದೆಷ್ಟೋ ಬಾರಿ ಬಂದವನಲ್ಲವೇ ನಾನು. ಇತ್ತೀಚೆಗೆ ಬಾರದೆ ಕೆಲವು ವರ್ಷಗಳಾದುವು. ನಿಜ—ಕೊನೆಯ ಬಾರಿ ಬಂದದ್ದೆಂದರೆ ತಿಪ್ಪನನ್ನು ಕರೆದುಕೊಂಡು. ನಿಜ. ಮುಪ್ಪೇರುತ್ತ ಬಂದ ಹಾಗೆ ದಣಿವು, ದೂರ ಎರಡೂ ಹೆಚ್ಚಾಗಿ ಕಾಣುವುದು ಸಹಜ' ಎಂದು ತನ್ನಷ್ಟಕ್ಕೆ ಅಂದು ಕೊಂಡ.

"ಅಜ್ಜ, ಬರಲಿಲ್ಲವೇ ಇನ್ನೂ? ಕೀರ ಬಟ್ಟದ ಕುಡಿಯಲ್ಲೇ ಇದೆಯೆ ಅದು? ಹೇಗಿದೆ ನೋಡಲಿಕ್ಕೆ?" ಎಂದು ಕರಿಯ ಮಾತಿಗೆ ತೊಡಗಿದ.

"ಅಲ್ಲಿಗೇ ಬಂದೆವು. ಇನ್ನೇರುವುದಕ್ಕಿಲ್ಲ; ತುಸು ಇಳಿಯಬೇಕು. ಇನ್ನು ಕಷ್ಟದ ದಾರಿಯೆಂದರೆ ಒಂದು ನಾಲ್ಕು ಮಾರು. ಒಂದು ಬಂಡೆಯ ಅಂಚಿನ ಮೇಲೆ ಆನಿಸಿ ಜಾಗ್ರತೆಯಿಂದ ಹೋಗಬೇಕು. ಆದರೆ ಯಾರ್‍ಯಾರೂ ಬರಲಾರದಂಥ ತಾವು ಅದು. ಆನೆ, ಗೀನೆ ಒಂದೊಂದೂ ಬರಲಾರದು."

"ಕರಡಿ?"

"ಕರಡಿಯೂ ಬರಲಾರದು."

"ಕರಡಿ ಹಾಗಾದರೆ ಈಚಲುಮರ ಹತ್ತಿ, ಅದರ ಹಣ್ಣು ತಿನ್ನುತ್ತ ದಂತಲ್ಲವೇ? ಸುಳ್ಳೆ?—ಕಾಳ ಹೇಳುತ್ತಾನೆ."

"ಕರಡಿ ಮರ ಹತ್ತುತ್ತದೆ ಅನ್ನುತ್ತಾರೆ. ನಾನು ಕಂಡವನಲ್ಲ. ಹತ್ತೀತು. ಅಲ್ಲಿಗೂ ಹೋದೀತು. ಆದರೆ ಅಲ್ಲಿಗೇ ಅದು ಏಕೆ ಹೋಗಬೇಕು. ಈ ಬೆಟ್ಟ ದಲ್ಲಿ ಸುಲಭವಾಗಿ ಸಿಗುವ ನೂರಾರು ಗುಹೆಗಳಿರುವಾಗ" ಎಂದ ಮುದುಕ.

ಅಲ್ಲಿಂದೆದ್ದ—ನೆಟ್ಟಗೆ ಎಡಗಡೆ ತಿರುಗಿ ನಾಲ್ಕು ಹೆಜ್ಜೆ ಇರಿಸಿದ. ಒಂದು ಹಿರಿಯ ಬಂಡೆಯ ಸೆರಗು ಇದಿರಾಯಿತು. ನಾಲ್ವತ್ತು ಐವತ್ತು ಅಡಿ ಎತ್ತರದ ಗೋಡೆಯಂತೆ ಅರ್ಧ ವರ್ತುಲಾಕೃತಿಯಲ್ಲಿ ಬಾಗಿ ನಿಂತಿತ್ತು ಅದರ ಮೈ. ಮೈಗೆ ಅಂಟಿಕೊಂಡು ಹಲವಾರು ಹೆಜ್ಜೇನಿನ ತಟ್ಟೆಗಳು ತೂಗಿ ಕೊಂಡಿದ್ದುವು. ಕರಿಯನ ಗಮನ ಅವುಗಳ ಕಡೆಗೆ ಹರಿಯದಿದ್ದೀತೇ! "ಅಜ್ಜಾ, ಅಲ್ಲಿ ನೋಡು—ಎಂಥೆಂಥಾ ಜೇನುತಟ್ಟೆ" ಎಂದ.

"ಮತ್ತೆ ಕಾಣುವ ಮಗು. ಈಗ ನನ್ನ ಸೆರಗು ಹಿಡಿದು ಬಾ" ಎಂದ ಮುದುಕ. ಆ ಬಂಡೆಯ ಬಿರುಕೊಂದರ ಮೇಲೆ ಮೆಲ್ಲಗೆ ಕಾಲಿರಿಸುತ್ತ ಗೋಡೆಗೆ ಮೈಯೊರಗಿಸಿಕೊಂಡು ಮುಂದುವರಿದ. ಬಿರುಕು ಒಬ್ಬ ಕಾಲಿರಿಸು ವಷ್ಟೇ ಅಗಲವಾಗಿತ್ತು. ಕೆಳಗೂ ಬಂಡೆಯ ಗೋಡೆ, ಮೇಲೂ ಅದೇನೆ. ಇಬ್ಬರೂ ಹೆಜ್ಜೆಯ ಮೇಲೆ ಹೆಜ್ಜೆ ಇಟ್ಟು ಮುಂದುವರಿದರು. ಆ ಬಂಡೆಯ ಮೈಗೆ ಅಂಟಿ ಹಬ್ಬಿದ್ದ ಬೀಳಲು, ಬೇರುಗಳನ್ನು ಹಿಡಿದು ಇಬ್ಬರೂ ಇಪ್ಪತ್ತು ಮೂವತ್ತು ಅಡಿ ಹೋಗುತ್ತಲೇ—ಇದಿರಾದುದೇ ಒಂದು ಹಿರಿಯ ಗುಹೆ. ಅದು ಶಿಲಾಮಯ. ಗುಹೆಯ ಮೇಲು ಭಾಗದಲ್ಲಿ ದೆವ್ವನಂತಹ ಬಂಡೆ ಯೊಂದು ಮಾಡಿನಂತೆ ಮುಂದಕ್ಕೆ ಚಾಚಿತ್ತು. ಅಲ್ಲಿಂದ ಬೆಟ್ಟದ ಜರಿ ಯೊಂದು ಕೆಳಕ್ಕೆ ನೀರನ್ನು ಜಿನುಗುತ್ತಲಿತ್ತು. ಗುಹೆಯ ಆಚೀಚಿನ ಗೋಡೆ ಗಳು ಅಗಾಧ ಬಂಡೆಗಳು. ಕೆಳಕ್ಕೆ ಹಾಸಿದುದೂ ಅದೇನೆ. ಅಲ್ಲಿಂದ ಎದುರಿಗೆ ನೋಡಿದರೆ ಕಡಿದಾದ ಒಂದು ಕೊರಕಲು.

ಸ್ಥಳ ಬಂತೆಂದು ಇಬ್ಬರೂ ಗುಹೆಯ ನೆಲದಲ್ಲಿ ವಿಸ್ಮಯದಿಂದ ನಿಂತರು, ಮಾತನಾಡಿದರು. ಆಡಿದ ಮಾತು 'ಗುಯಿಂ, ಗುಯಿಂ' ಎಂದು ಮರುಕಳಿಸ ತೊಡಗಿತು. ಅವರ ಧ್ವನಿಗೆ, ಗುಹೆಯಲ್ಲಿ ಬಿಡಾರ ಮಾಡಿಕೊಂಡಿದ್ದ ಹಲವಾರು ಬಾವಲಿಗಳು ಹಾರಿಹೋದುವು. ಕರಿಯ ವಿಸ್ಮಯದಿಂದ ಆ ವಿಶಾಲವಾದ ಗುಹೆಯನ್ನೇ ನೋಡುತ್ತ ನಿಂತ. "ಎಷ್ಟು ಚಂದದ ಮನೆ ಇದು! ಕಂಬ ಬೇಡ; ಕಿಟಕಿ ಬೇಡ. ಇಲ್ಲೇ ಇದ್ದರೆ ಎಷ್ಟು ಚಂದ" ಎಂದಂದುಕೊಂಡ. ಕೆಂಚ ಮಗುವಿನ ಕೈ ಹಿಡಿದು, ಗುಹೆಯ ಆಚೆ ಈಚೆ, ಒಳಗು ಹೊರಗುಗಳನ್ನೆಲ್ಲ ತೋರಿಸತೊಡಗಿದ. ಹಳೆಯ ದಿನಗಳಲ್ಲಿ ಒಲೆಗೆ ಹೂಡಿದ್ದ ಕಲ್ಲುಗಳು ಅಲ್ಲೇ ಬಿದ್ದಿದ್ದುವು. ನೆಲ ಕೊರೆದು ಮಾಡಿದ ಒರಳು, ಕಡೆಯುವ ಕಲ್ಲುಗಳು ಕಾಣಿಸಿದುವು. ಒಳಕ್ಕೆ ಹೊಕ್ಕಂತೆ ಗವಿ ಕಿರಿದಾಗುತ್ತ ಬಂದು ಕಗ್ಗತ್ತಲ ಬಾಗಿಲೊಂದು ಕಾಣಿಸುತ್ತದೆ. ಅಲ್ಲಿಂದ ಹೊಕ್ಕು, ಎಡ ಬಲಕ್ಕೆ ತಿರುಗಿದರೆ ತಿರುಗಿ ಚಿಕ್ಕ ಪುಟ್ಟ ಗವಿಗಳು ಸಿಗುತ್ತವೆ. ಕೊರೆದು ಮಾಡಿದ ಗವಿಗಳಲ್ಲ. ಪ್ರಕೃತಿ ರಾಶಿಯೊಡ್ಡಿದ, ಬಿಸಿಲು ಮಳೆ ಒಡೆದಿರಿಸಿದ ಬಂಡೆಗಳ ನಡುವಣ ನೀರಮಣ್ಣನ್ನು ಮಳೆನೀರು ಕೊರೆದು ಸ್ವಾಭಾವಿಕ ವಾಗಿ ಉಂಟಾದ ನಿಸರ್ಗದ ಮನೆಗಳಿವು. ಮಾನವಯುಗ ಬರುವ ಮುನ್ನವೇ ನಿಸರ್ಗ ನಿರ್ಮಿಸಿಕೊಟ್ಟ ಅರಮನೆಗಳು.

ಕೆಂಚ ಆ ಗುಹೆಯ ವೈಭವ ತೋರಿಸುವುದಕ್ಕೆ ಮೊಮ್ಮಗನನ್ನು ಕರೆದು ಕೊಂಡು ಬಂದವನಲ್ಲ. ಆತ ಬಂದುದು—ಕುಲದೈವವಾದ ಮಲೆರಾಯನ ನೆನಪಾಗಿ. ಗವಿಯ ಮುಂಭಾಗದ ಒಂದು ಗೋಡೆಯಲ್ಲಿ ಕೊರೆದ ಕಲ್ಲಿನ ಒಂದು ಅರೆಯಿತ್ತು. ಅರೆಯ ಮೈಯಲ್ಲೇ ಉಬ್ಬಿ ಕಾಣಿಸುವ ಬೆಣಚುಗಲ್ಲಿನ ಒಂದು ಪದರು ಬೆಳಕಿಗೆ ಹೊಳೆಯುತ್ತಿತ್ತು. ಹೊಳೆದು ಮಿನುಗುವ ಆ ಪದರಿಗೆ ವಿಗ್ರಹದ ರೂಪರೇಷೆ ಇಲ್ಲದಿದ್ದರೂ, ಬೆಳಕಿಂದ ಥಳಿಸುವಾಗ ಅದಕ್ಕೊಂದು ರೂಪು ಆಕಾರ ಇರುವಂತೆ ಕಾಣುತಿತ್ತು. ಅದೇ ಅವನು; ಅವನೇ ಮಲೆರಾಯ! ಮುದುಕ ಮಲೆರಾಯನ ಮುಂದೆ ಸಾಷ್ಟಾಂಗವೆರ ಗಿದ. ಮೊಮ್ಮಗನಿಗೂ ಅಡ್ಡಬೀಳಲು ಹೇಳಿದ. ಅನಂತರ ಕಲ್ಲರೆಗೆ ತುಸು ದೂರದಲ್ಲಿ ಒಂದು ದೀಪ ಉರಿಸಿದ. ಯಾವುದೋ ಕಾಯಿಯ ಕೊಬ್ಬು ನಾರುಗಳನ್ನು ಗುದ್ದಿ ಮಾಡಿದ ಮುಂಬತ್ತಿಯನ್ನು ನಟ್ಟು, ಕಡ್ಡಿ ಉರಿಸಿ ಬೆಳಗಿಸಿದ. ಅವನ ಹಿರಿಯರ ದಿನಗಳಲ್ಲಿ ಚಕಮುಕಿ ಕಲ್ಲು ಬಡಿದು ಅದನ್ನು ಹೊತ್ತಿಸುತ್ತಿದ್ದರು. ಈಗ ಏಲಕ್ಕಿ ಮಲೆಯ ಧನಿಗಳ ಸಂಪರ್ಕದಿಂದ ಮಲೆಗೂ ಕಡ್ಡಿಪೆಟ್ಟಿಗೆ ಬಂದಿವೆ. ಪೆಟ್ಟಿಗೆಯಿಂದೊಂದು ಕಡ್ಡಿ ತೆಗೆದು, ನೆಲಕ್ಕೆ ಗೀರುತ್ತಲೇ ಕಡ್ಡಿ ಹೊತ್ತಿ ಉರಿಯಿತು. ದೇವರಿಗೆ ದೂರವಾಗಿ ಉರಿಸಿದ ದೀಪ ಕಂಡು "ಅಜ್ಜಾ, ದೇವರಿಗೆ ಅಷ್ಟು ದೂರದಲ್ಲಿ ಯಾಕೆ ದೀಪ ಉರಿಸುತ್ತೀ? ಸಮೀಪದಲ್ಲಿ ಉರಿಸು" ಎಂದ ಕರಿಯ.

"ಈಗಲ್ಲ, ಈಗಲ್ಲ—ಬರಿದೆ ಬರಬಾರದು ಎಂದು ಅದನ್ನು ತಂದು ಹಚ್ಚಿದೆ. ಹೊಲೆ ಕಳೆದ ಮೇಲೆ ಸಮೀಪ ಬರಬಹುದು, ದೀಪ ಹಚ್ಚಬಹುದು. ಈಗ ಮೈಲಿಗೆಯಲ್ಲವೇ? ಹೊಲೆ ಇರುವಾಗ ದೇವರ ಸಮೀಪ ಹೋಗು ವುದೇ?" ಎಂದ ಮುದುಕ.

"ಅಜ್ಜಾ, ಅಮ್ಮ ಹೇಗೆ ಆ ಗುಂಡಿಗೆ ಬಿದ್ದಳು. ನಿತ್ಯ ಹೋಗುವ ಸ್ಥಳ ಅಲ್ಲವೇ?" ಎಂದ ಕರಿಯ. ಮಗುವಿನ ಮನಸ್ಸು ತಾಯಿಯ ಕಡೆಗೆ ಥಟ್ಟನೆ ತಿರುಗಿದುದನ್ನು ಕಂಡು, ಕೆಂಚಗೆ ದುಃಖ ತುಂಬಿ ಬಂದಿತು. ಅದನ್ನು ತೋರಿಸಿಕೊಳ್ಳಲಾರ; ಮಗುವಿನ ಮಾತನ್ನು ಉತ್ತರಿಸಲಾರ.

"ಹೋಗಲಿ ಮಗು, ಆ ಮಾತನ್ನು ಹೇಳಿ ಫಲವೇನು? ದೈವದ ಮನಸ್ಸನ್ನು ಬಲ್ಲವರಾರು" ಎಂದ ಕೆಂಚ.

"ಯಾವುದು? ಈ ದೈವವೇ! ಮಲೆರಾಯನೇ?"

ಅದನ್ನೂ ಉತ್ತರಿಸುವಂತಿಲ್ಲ ಕೆಂಚ. ಸೊಸೆಯ ಸಾವಿನಿಂದ ಕಲ್ಕುಡನಿಗೆ ಬೆದರಿ ಮನಸ್ಸಿನಲ್ಲಿ ಸುಬ್ರಹ್ಮಣ್ಯನನ್ನು ನೆನೆದು, ಶರಣುಹೋದ. ಹೋದ ಮರುಕ್ಷಣ, ಕುಲದೇವತೆಯಾಗಿದ್ದ ಮಲೆರಾಯನ ನೆನಪಾಯಿತು. ದೈವಕ್ಕೆ ದೈವ ಇದಿರೆಂದು ತಿಳಿದೋ ಏನೋ ಇಲ್ಲಿಗೂ ಬಂದು ಶರಣಾಗತನಾದ. ದುಃಖ ತುಂಬಿದ ಅಜ್ಜನ ಮುಖವೇ ಕರಿಯನನ್ನು ಸುಮ್ಮಗಿರಿಸಿತು. ತನಗಿಂತ ಅಜ್ಜ ಮರುಗಿದ್ದಾನೆ, ನೊಂದಿದ್ದಾನೆ—ಎಂದನಿಸಿತು ಆ ಬಾಲಕನಿಗೆ. ಅಜ್ಜ ದೈವಕ್ಕೆ ಮುಖ ಮಾಡಿ ಮೊರೆಯಿಡುತ್ತಿದ್ದ ವೇಳೆ, ಕರಿಯ ಅವನಿಗಿಂತ ತುಸು ದೂರದಲ್ಲಿ ಕುಳಿತು, ಕಾಲು ಮಡಚಿ, ಕೈ ನೆಲಕ್ಕೂರಿ, ಕತ್ತೆತ್ತಿ ಗುಹೆಯ ನಾಲ್ಕು ಸುತ್ತಲೂ ನೋಡತೊಡಗಿದ. ಹಣತೆಯ ಬೆಳಕು ಮಲೆರಾಯನ ಬೆಣಚುಗಲ್ಲಿನ ಮೈಯ ಮೇಲೆ ಥಳಿಸಿ, ನೀಲಿ, ಹಸುರು, ಕೆಂಪು ಬಣ್ಣ ಮಿಂಚಿಸುತ್ತಿರುವುದನ್ನು ಬೆರಗಿಂದ ನೋಡುತ್ತ ಕುಳಿತ.

ಕೆಂಚ ಇಷ್ಟಿಷ್ಟೂ ಕದಲದೆ ದೈವದ ಮುಂದೆ ದೀನವದನನಾಗಿ ಮೊರೆಯಿಡುತ್ತಲಿದ್ದಾನೆ. ಒಂದೇ ಸವನೆ ಕಂಬನಿ ಮುಸುಕಿದ ಕಣ್ಣುಗಳಿಂದ ಅವನ ವಿಗ್ರಹವನ್ನೇ ನೋಡುತ್ತಿದ್ದು ಬೇಡುತ್ತಲಿದ್ದಾನೆ. "ದೈವವೇ—ಈ ಒಂದು ಬದುಕನ್ನು ಉಳಿಸು; ಕಲ್ಕುಡನ ಸಿಟ್ಟನಿಂದ ಕಾಯು. ನಿನ್ನ ತಾವನ್ನು ಬಿಟ್ಟುಹೋದೆವೆಂದು ನಿನ್ನ ಮಕ್ಕಳ ಮೇಲಿನ ಕರುಣೆ ಕಡಿಮೆ ಮಾಡುತ್ತೀಯಾ? ಇನ್ನು ನಾನಿರುವ ತನಕ, ತಪ್ಪದೆ ವರ್ಷಕ್ಕೊಮ್ಮೆ ಒಂದೊಂದು 'ಹಾರ'ವನ್ನೂ ಚರುವನ್ನೂ ಕೊಡುತ್ತೇನೆ ಇನ್ನಾರಿದ್ದಾರೆ ನನಗೆ? ಈ ಮರಿ ಬೆಳೆಯಲಿ; ದೊಡ್ಡದಾಗಲಿ. ನನ್ನಂತೆ ಅವನೂ ನಿನಗೆ ನಡೆದುಕೊಳ್ಳುತ್ತಾನೆ" ಎಂದು ಬೇಡಿಕೊಂಡ. ಕೊನೆಯ ಮಾತುಗಳು ತುಟಿ ಮೀರಿ ಹೊರಟುವು. ಕರಿಯನಿಗೂ ಅವು ಕೇಳಿಸದೆ ಇರಲಿಲ್ಲ. ತನ್ನನ್ನು ಅಜ್ಜ ಅಲ್ಲಿಗೆ ಕರೆತಂದದ್ದೇಕೆಂದು ಅವನಿಗೂ ಹೊಳೆದಿದೆ. ಅಜ್ಜ ಪ್ರಾರ್ಥನೆ ಮುಗಿಸಿ ಸಾಷ್ಟಾಂಗವೆರಗುವುದನ್ನು ಕಂಡು ಆತನೂ ನೆಲದುದ್ದಕ್ಕೂ ಮಲಗಿ ನಮಸ್ಕರಿಸಿದ.

ಇಷ್ಟೆಲ್ಲ ನಡೆಯುವಾಗ ಹೊತ್ತು ನೆತ್ತಿಗೇರಿರಬೇಕು. ಗವಿಯ ಮುಂಗಡೆ ಒಸರಿ ಬೀಳುತ್ತಿದ್ದ ನೀರಿನ ಧಾರೆಗಳ ಮೇಲೆ ಸೂರ್ಯರಶ್ಮಿ ಬಿದ್ದು

ಬೆಳ್ಳಿಯ ಸರಳಂತೆ ಹೊಳೆಯುತಿತ್ತು. ಎದುರಿನ ಹೊಂಡದಲ್ಲಿನ ನೀರ ಕುಣಿ ಥಳಿಸಿ, ಸೂರ್ಯರಶ್ಮಿ ಗುಹೆಯೊಳಕ್ಕೂ ಬಡಿಯಿತು. ಕೆಂಚನ ಮುಖ ವನ್ನು ಮಿರುಗಿಸಿತು. ಅದನ್ನೆ ನೋಡುತ್ತ ಹುಡುಗ ತುಸು ಹೊತ್ತು ಕಳೆದ. ಹಸಿವಿನಿಂದ ಅವನ ಹೊಟ್ಟೆ ಕಡಿಯಲಾರಂಭಿಸಿತು "ಅಜ್ಜಾ, ನಿನಗೆ ಹಸಿ ವಾಗುವುದಿಲ್ಲವೇ?" ಎಂದು ಕೇಳಿದ ಕರಿಯ. ಮಗುವಿನ ಮಾತು ಕೇಳಿ ಕೆಂಚನ ಮುಖದಲ್ಲಿ ಅನುತಾಪದ ಎಳೆನಗುವೊಂದು ಮೂಡಿತು. "ಇನ್ನು ಹೋಗುವ" ಎಂದ. "ಬೇಡ, ಇವತ್ತು ಇಲ್ಲಿರುವ ಅಜ್ಜ. ಮನೆಯಲ್ಲಿ ಯಾರಿದ್ದಾರೆ ನಮಗೆ? ಹಸಿವಾಯಿತೆಂದು ಹೇಳಿದೆ. ನಿನ್ನ ಕತ್ತಿ ಕೊಡು. ಅಲ್ಲೊಂದು ಬಯನಿ ಗಿಡ ಕಾಣಿಸುತ್ತದಲ್ಲ" ಎಂದ.

"ಬೇಡ ಮಗು, ಮನೆಗೇ ಹೋಗುವ. ಹೋಗದಿದ್ದರೆ ಕೇರಿಯವರು ಗಾಬರಿಗೊಂಡಾರು—ಹೋಗುವ" ಎಂದು ಹೊರಟೇಬಿಟ್ಟ. ಅಲ್ಲಿಂದ ಮನೆಗೆ ಮರಳುವ ಪಯಣ ತೊಡಗಿತು. ಕರಿಯನ ಮನಸ್ಸು ಮಾತ್ರ ಗುಹೆಯಲ್ಲಿ ನಟ್ಟಿತ್ತು. ತಮಗೆ ಆ ಗವಿಯೇ ಮನೆಯಾದರಾಗಬಹುದಲ್ಲ—ಎಂಬ ಆಸೆ ಮೂಡಿತು. ಆದರೆ ಅಜ್ಜನ ಮಾತಿಗೆ ಇದಿರೆನ್ನುವಂತಿಲ್ಲ. ಬಂಡೆಯ ಗೋಡೆ ದಾಟಿ, ಈಚೆಗೆ ಬಂದೊಡನೆಯೆ ಕೆಂಚ ಚಿಕ್ಕ ಬಯನಿ ಗಿಡವೊಂದನ್ನು ಕಡಿದು, ಆದರೊಳಗಿನ ದಿಂಡನ್ನು ಸುಲಿದು ತೆಗೆದು, ಮುರಿದು, ಮಗುವಿಗೆ ಒಂದು ತುಂಡು ಕೊಟ್ಟ. ತಾನೂ ಒಂದು ತುಂಡನ್ನು ತಿಂದ. ಮನಸ್ಸು ಕಲ್ಲಾಬಿಲ್ಲಿಯಾಗಿತ್ತು. ಜೀವ ದಣಿದಿತ್ತು. ಶರೀರ ಹಸಿದಿತ್ತು. ತಿನ್ನಲೇ ಬೇಕಾಯಿತು. ಕರಿಯ ಅದನ್ನು ಕಬ್ಬಿನಂತೆ ಆಗಿದು ತಿಂದು, ಎದ್ದೂ ಆಯಿತು. ಸವರಿ ಬಂದ ಕಾಡಿನ ಜಾಡಿನಲ್ಲಿ, ಮಿಗದಂತೆ ನೆಗೆದು, ಜಿಗಿದು ನಡೆಯ ತೊಡಗಿದ. ಅಜ್ಜನೇ ಹಿಂದೆ; ಇವನೇ ಮುಂದೆ.

ಎಷ್ಟು ಹಿಗ್ಗೀಗ ಕೆಂಚನಿಗೆ—ತನ್ನ ಮೊಮ್ಮಗನ ನಡಿಗೆ, ಹೆಜ್ಜೆ, ಧೈರ್ಯ ನೋಡಿ. 'ಅಯ್ಯೋ, ಇಂಥ ಮಗುವನ್ನು ಕೇಳುತ್ತಾನಲ್ಲ ಕಲ್ಕುಡ' ಎಂದುಕೊಂಡ. ಬರುವುದಕ್ಕೆ ಹಿಡಿದ ಅರ್ಧದಷ್ಟು ಸಮಯವೂ ಹೋಗಲು ಬೇಕಾಗಲಿಲ್ಲ. ಹೊತ್ತು ತಿರುಗಿ ಬಂದು ಜಾವವೂ ಆಗಿರಲಾರದು—ಅವರಿ ಬ್ಬರೂ ಗುಡಿಸಲನ್ನು ಸೇರುವಾಗ. ಮುದುಕ ಬೆಳಗಿನಿಂದ ಕಿಚ್ಚೂ ಹೊತ್ತಿಸಿರಲಿಲ್ಲ ಒಲೆಗೆ. ಕರಿಯ ನೆರೆಮನೆಗೆ ಹೋಗಿ ಉಂಡು ಬಂದಿದ್ದ. ಆ

ದಿನ ಇವರು ಮನೆಗೆ ಮರಳುವಾಗ ಕೇರಿಯ ಜನ ಕುಮರಿಗೆ ಹೋಗಿದ್ದರು. ಮನೆಯ ತುಸು ದೂರದಲ್ಲಿ ಒಬ್ಬಳು ಮುದುಕಿ ಮಾತ್ರ ಉಳಿದಿದ್ದಳು. ಅಲ್ಲಿಗೆಲ್ಲ ಹೋಗುವುದರಲ್ಲಿ ಅರ್ಥವಿಲ್ಲ—ಎಂದು ಕೆಂಚ, ಇಷ್ಟು ಅಂಬಲಿ ಬೇಯಿಸಲು ಒಲೆ ಹೊತ್ತಿಸಿದ. ತಂದಿರಿಸಿದ ತಾಳೆಯ ಹಿಟ್ಟು ಬಿದಿರಿನ ಅಂಡೆಯಲ್ಲಿತ್ತು. ಆದರಿಂದಿಷ್ಟು ಹಿಟ್ಟು ತೆಗೆದು, ಅಂಬಲಿ ಮಾಡುವುದು ಏನು ದೊಡ್ಡ ಕೆಲಸ ಎಂದು ಕೆಂಚ ಮಡಿಕೆಯೊಂದರಲ್ಲಿ ಎಸರಿಟ್ಟ.

ಬೆಟ್ಟ ಹತ್ತಿ, ಇಳಿದು ದಣಿದು ಬಂದಿದ್ದ ಕರಿಯ ಮನೆಯ ಜಗುಲಿಯಲ್ಲಿ ಕುಳಿತ; ಹಾಗೆಯೇ ನೆಲದ ಮೇಲೆ ಒರಗಿದ, ಕಣ್ಣು ಬಾಡಿಸಿದ, ನಿದ್ರೆ ಮಾಡಿಯೂ ಬಿಟ್ಟ.

ಕೇರಿಯ ಕುಡಿಯರು ಕುಮರಿಯಿಂದ ಮರಳುವಾಗ ಬಾನು ಕೆಂಪಡರಿತ್ತು. ಹರಟುತ್ತ, ಹಾಡುತ್ತ ಕೇರಿಗೆ ಮರಳುತ್ತಿದ್ದರು. ಕೇರಿ ಸಮೀಪಿಸುತ್ತಲೇ ಕಾಲು ತಡವರಿಸಿತು. ಕೆಂಚನ ಸೊಸೆಗೆ ಅಪಘಾತ ಸಂಭವಿಸಿದ ತಾವು ಬರುತ್ತಲೇ, ಎಲ್ಲರ ದನಿಗಳೂ ಉಡುಗಿದುವು. ಅಲ್ಲಿಂದ ತುಸು ದೂರ ಬರಲು ಅವರ ಕಲ್ಪವೃಕ್ಷ ಸಂಧಿಸಿತು. ಬಯನಿ ಮರ! ಅವರಲ್ಲೊಬ್ಬ ಸರಸರನೆ ದೆವ್ವದಂಥ ಆ ಮರವನ್ನೇರಿದ. ದಣಿದು ಬಂದ ಕುಡಿಯರು ಎಲೆಗಳನ್ನು ತಂದು, ದೊನ್ನೆ ಸೆಟ್ಟು, ಪಾನಪಾತ್ರೆಗಳನ್ನು ಸಿದ್ಧಗೊಳಿಸಿ, ಮಂಡಲಾಕೃತಿಯಲ್ಲಿ ಕುಳಿತು ನಿರೀಕ್ಷಿಸುವುದರೊಳಗೆ, ಮೇಲಿಂದ ದಣಿದ ಜೀವಕ್ಕೆ ಅಮೃತ ಬಂತೇ ಬಂತು. ಹೆಂಡ ತಂದವ ಎಲ್ಲರ ದೊನ್ನೆಗೂ ಆದನ್ನೆರೆದ. ಆ ಎಲ್ಲರಲ್ಲಿ ತುಕ್ರನೂ ಒಬ್ಬ. ಅವನ ಕೈಯಲ್ಲೂ ದೊನ್ನೆ ಇತ್ತು. ಅವನು ಮಾಡಿದ ದೊನ್ನೆಯಲ್ಲ; ಗೆಳೆಯನೊಬ್ಬ ಸೆಟ್ಟುಕೊಟ್ಟ ದೊನ್ನೆ. ಆ ಪಾತ್ರೆಗೆ ಹೆಂಡ ಎರೆಯಲು ಬರುತ್ತಲೇ "ಬೇಡ, ಇಂದು ಬೇಡ" ಎಂದ ತುಕ್ರ.

ಆಚೀಚಿನವರಿಗೆ ಆಶ್ಚರ್ಯವಾಯಿತು. ಒಂದು ದಿನವಾದರೂ ತುಕ್ರ, ಧೀರರಲ್ಲಿ ಧೀರ, ಬಯನಿ ಹೆಂಡ ಬೇಡ ಎಂದವನಲ್ಲ, ಇಂದು 'ಬೇಡ' ಅನ್ನುತ್ತಿದ್ದಾನೆ. ಆದರೆ ಆ ದಿನದ ಅವನ ಮನೋಧರ್ಮ ನೋಡಿದವರು ಅವನನ್ನು ಒತ್ತಾಯಿಸಲಿಲ್ಲ. ಉಳಿದವರು 'ಕುಡಿಯುವ' ಎಂದು ನುಡಿದು ಪಾನಪಾತ್ರೆ ಬರಿದು ಮಾಡಿದರು. ಬಿದಿರ ಅಂಡೆಯಲ್ಲಿ ಇನ್ನೂ ಹೆಂಡ

ಉಳಿದಿತ್ತು. ತಂದಿದ್ದ ಹುಡುಗ, ಅದನ್ನು ಕೆಂಚ ಗುರಿಕಾರನಿಗೆ ಒಪ್ಪಿಸುವ ಸಲುವಾಗಿ ಹೊರಟ. ಕೇರಿ ಬಂದಿತು; ಕೆಂಚನ ಗುಡಿಸಲೂ ಸಮೀಪಿಸಿತು. ಯಾರೊಬ್ಬರ ಗಂಟಲಿನಿಂದಲೂ ಮಾತು ಹೊರಡಲಿಲ್ಲ. ಅವರವರು ತಮ್ಮ ತಮ್ಮ ಮನೆಗಳನ್ನು ಸೇರಿದರು. ತುಕ್ರನ ಇಬ್ಬರು ಮಡದಿಯರು ತಮ್ಮ ಗುಡಿಸಲಿಗೆ ಹೋದರು. ತುಕ್ರ ಹಾಗೆ ಮಾಡದೆ, ಮಡದಿಯರೊಡನೆ "ನೀವು ಹೋಗಿ. ಪಾಪ, ಕೆಂಚಜ್ಜ ಒಬ್ಬರೇ ಕುಳಿತಿರುತ್ತಾರೆ. ನಾವು ಅವರನ್ನು ಬಿಟ್ಟು ಬಂದುದೇ ತಪ್ಪು, ಹೋಗಿ ನೋಡಿ ಬರುತ್ತೇನೆ—" ಎಂದು ಅಲ್ಲಿಗೇ ಹೊರಟ. ಅವನ ಬೆನ್ನಿಗೆ ಮತ್ತು ನಾಲ್ವರು ಬಂದರು.

"ಅಜ್ಜ" ಎಂದು ತುಕ್ರ ಕರೆದಾಗ, ಕೆಂಚ ಅಂಬಲಿ ಬೇಯಿಸಿ ಕೆಳಕ್ಕಿರಿಸಿ, ಒಲೆಯ ಕೆಂಡ ನಂದಿಸಿ, ಈಚೆ ಬರುವುದರಲ್ಲಿದ್ದ. ಅಷ್ಟಕ್ಕೆ ತುಕ್ರನ ಸ್ವರ ಕೇಳಿಸಿತು. "ಬಾ ಮಗು" ಎಂದು ಕರೆದ. ಹೊರಗಿದ್ದ ಅವರು ಚಾವಡಿಗೆ ಬಂದು ಕುಳಿತರು. ಚಾವಡಿಯ ಮಗ್ಗುಲೊಂದರಲ್ಲಿ ಕರಿಯ ಇನ್ನೂ ಮಲಗಿಕೊಂಡಿದ್ದ.

ಕೆಂಚನೇ ಮಾತು ತೊಡಗಿದ. "ನೋಡು ತುಕ್ರ, ಇನ್ನು ನನ್ನ ಆಟ ಮುಗಿದ ಹಾಗೆ. ಈ ಮಗು ದೊಡ್ಡವನಾಗಿ ಬೆಳೆಯುವ ತನಕ ನನ್ನಿಂದ ಆಗುವ ಕೆಲಸ ಅಷ್ಟಕ್ಕಷ್ಟೆ. ಹೆಚ್ಚುಕಡಿಮೆ ಆಗದಂತೆ ಎಲ್ಲವನ್ನೂ ಸುಧಾರಿಸಿ ಕೊಂಡು ಹೋಗಬೇಕು—ತುಕ್ರ, ನಿನಗೆ ಹೇಳುತ್ತಿರುವುದು ನಾನು" ಎಂದು ಮುಂದಿನ ಕೆಲಸ ಹೇಳಿದ. ತನ್ನ ಸೊಸೆಯ ಬೊಜ್ಜಕ್ಕೆ ಬೇಕಾದ ಏರ್ಪಾಡು, ದೈವದ ಕೋಲಕ್ಕೆ ಆಗಬೇಕಾದ ಏರ್ಪಾಡು—ಎಲ್ಲವನ್ನೂ ವಿವರಿಸಿ ಹೇಳಿದ. ತುಕ್ರ 'ಹೂಂ'ಗುಡುತ್ತಿದ್ದ—ಎಲ್ಲವನ್ನೂ ಕೇಳಿ. ಆದರೆ ನಿಜಕ್ಕೂ ಮನಸ್ಸು ಮಾತ್ರ ವಿಚಿತ್ರವಾದೊಂದು ನರಕದಲ್ಲಿ ನರಳಾಡುತಿತ್ತು.

ಹೀಗೆ ಮುಂದಿನ ಏರ್ಪಾಟುಗಳನ್ನು ಹೇಳುತ್ತಿದ್ದ ಕೆಂಚನ ಮನಸ್ಸೂ ನಿಶ್ಚಲವಾಗಿರಲಿಲ್ಲ. ಕಲ್ಕುಡನ ಕೋಲದ ವಿಚಾರ ಹೇಳುತ್ತಿದ್ದಾಗಲೇ, ಮನಸ್ಸು ಜಿಗಿದು ಇನ್ನೆಲ್ಲಿಗೋ ಓಡಲು ಹಂಬಲಿಸುತಿತ್ತು. ಕುಕ್ಕೆ ಸುಬ್ರಹ್ಮಣ್ಯನನ್ನು ಕಾಣುವ ಆತುರ ಅದಕ್ಕೆ. ಸೊಸೆಯ ಬೊಜ್ಜ ಮುಗಿದ ಮರುದಿನವೇ ಓಡಿಹೋಗಿ, ತನ್ನ ಮೊಮ್ಮಗನನ್ನು ದೇವರ ಹೊಸ್ತಿಲಿನಲ್ಲಿ ಅಡ್ಡಗೆಡವಿ ಬರುವ ತನಕ ಅವನ ಜೀವಕ್ಕೆ ಇಷ್ಟಿಷ್ಟೂ ನೆಮ್ಮದಿಯಿಲ್ಲ.

ಅಲ್ಲಿಯು ತನಕ ಕರಿಯುನ ಪ್ರಾಣ ಕಲ್ಕುಡನ ಮುಷ್ಟಿಯಲ್ಲಿ—ಎಂಬ ಭೀತಿ ಅವನದು. ಮಲೆರಾಯನಿಗೆ ಹೇಳಿ ಬಂದರೂ ಕಲ್ಕುಡನ ಭೀತಿ ಅವನ ಎದೆಯುನ್ನು ತಲ್ಲಣಿಸುತಿತ್ತು.

ಕೆಂಚನಿಗೆ ಕಡಿಮೆಯಲ್ಲದ ಭೀತಿ, ತಳಮಳಗಳು ತುಕ್ರನವು. ಅದನ್ನು ಅವನು ಬೇರೆ ಯಾರಿಗೂ ಹೇಳುವಂತೆ ಇರಲಿಲ್ಲ; ಒಬ್ಬನೇ ಅನುಭವಿಸು ವಂತೆಯೂ ಇರಲಿಲ್ಲ.

## ಅಧ್ಯಾಯ ೨

ತುಕ್ರನ ಚಿಂತೆಯ ಕಾರಣವೇ ಬೇರೆ; ಅದನ್ನು ಅವನೊಬ್ಬನೇ ತಿಳಿಯ ಬಲ್ಲ. ಇನ್ನೊಬ್ಬರಿಗೂ ಹೇಳಲಾರ. ಆತಗೀಗ ಬರಿಯ ನಾಲ್ವತ್ತು ನಾಲ್ವತ್ತೈದು ವಯಸ್ಸು. ಗಟ್ಟಿಮುಟ್ಟಾದ ದೇಹ; ಸಾಮಾನ್ಯವಾದ ಗಾತ್ರ; ದುಂಡು ದುಂಡಾಗಿ ಕಾಣಿಸುವ ಕಂದು ಬಣ್ಣದ ಶರೀರ. ಒಳಗಿನ ಸ್ವಭಾವ ಮಾತ್ರ ಒರಟು. ಈಚಲು ಮರ ಹತ್ತುವುದರಲ್ಲಿ, ಬೇಟೆಯಾಡುವುದರಲ್ಲಿ, ಅಗತೆಯಲ್ಲಿ, ಮರ ಕಡಿಯುವುದರಲ್ಲಿ ಆತ ತುಂಬ ನಿಪುಣ. ಆ ನೈಪುಣ್ಯವೆಲ್ಲ ಮೈಯ ಮಾಂಸಖಂಡಗಳಲ್ಲಿ ಎದ್ದುಮೂಡಿದೆ. ಆನೆಮರಿ ನಡೆದಂತೆಯೆ ಅವನ ನಡಿಗೆ. ನಡುವಿಗೆ ಒಂದು ಅಗಲ ಕಿರಿದಾದ ಪಂಚೆ ಬಿಗಿದು, ಅದರ ಮೇಲೆ ಬೆತ್ತದ ದಟ್ಟಿ ಬಿಗಿದು, ಹಿಮ್ಮಗ್ಗುಲಿಗೆ ಭಾರವಾದ ಕತ್ತಿಯನ್ನು ಸಿಕ್ಕಿಸಿಕೊಂಡು ಹೊರಟನೆಂದರೆ—ಹತ್ತು ಆಳುಗಳಿಗೆ ಅವನೊಬ್ಬ ಇದಿರಾಳಿ. 'ಕರಡಿ ತುಕ್ರ' ಎಂದು ಆತ ಬರಿದೆ ಬಿರುದು ಗಳಿಸಿದವನಲ್ಲ. ಇಪ್ಪತ್ತೈದು ವರ್ಷವಿದ್ದಾಗ ಆತನ ಮೊದಲ ಮದುವೆಯಾಯಿತು. ಹಿರಿಯ ಮಲೆಯಿಂದ ಹೆಣ್ಣು ತಂದುಕೊಂಡ. ಆಗವನ ಹೆಂಡತಿ ಚಿನ್ನಿಗೆ ಹದಿನೆಂಟು ಇಪ್ಪತ್ತು ವರ್ಷ ಇರಬಹುದು. ಆ ಗಂಡಹೆಂಡಿರು ಹೊರಟರೆಂದರೆ—ನಿತ್ಯ ಮದುವಣಿಗ ಮದುಣಗಿತ್ತಿಯರೇ ಹೊರಟಂತೆ ಕಾಣಿಸಬೇಕು. ಮದುವೆಯ ಹೊಸತಿನ ವೇಳೆ, ಒಂದು ದಿನ ಆತ ಹೆಂಡತಿಯ ಮನೆಗೆ ಹೋಗಿ ಮರಳಿ ಬರುತ್ತಿದ್ದ. ಬೆಟ್ಟದ ಸ್ವಾಭಾವಿಕವಾದ, ಏರು ತಗ್ಗಿನ ದಾರಿಯದು. ಅಲ್ಲಲ್ಲಿ

ಸ್ವಲ್ಪ ಸ್ವಲ್ಪ ಸ್ಥಳಗಳಲ್ಲಿ ಕಾಡಿನ ಬದಲು ಆಳೆತ್ತರದ ಹುಲ್ಲು ಬೆಳೆದು ಬೆಟ್ಟದ ಅಂಚಿನಿಂದ ನೋಡುವವರಿಗೆ ದೂರದ ಕಣಿವೆ ಮತ್ತು ಇತರ ಗುಡ್ಡಗಳ ನೋಟ ಕಾಣಸಿಗುತ್ತದೆ. ತುಕ್ರ ಚಿನ್ನಿಸಹಿತನಾಗಿ ಅಂಥದೊಂದು ಸ್ಥಳಕ್ಕೆ ಬಂದ. ತುಕ್ರ ನಿಂತು ಆಚೀಚೆ ನೋಡಿದ. ಅದೇ ಬೆಟ್ಟದ ಸೆರಗಿನಲ್ಲಿ, ಅನತಿ ದೂರದಲ್ಲಿ, ಹಸುರು ಹುಲ್ಲಿನ ಎಡೆಯಿಂದ ತಲೆ ಎತ್ತಿನಿಂತ ಬಂಡೆಯೊಂದು ಕಾಣಿಸಿತು. ಬಂಡೆ ಅರ್ಧ ಮಾಲಿಕೊಂಡು, ಈಗ ಕೆಳಕ್ಕುರುಳೀತೋ ಎಂದು ಭೀತಿ ಹುಟ್ಟಿಸುವ ದೆವ್ವದ ಆಕೃತಿಯಲ್ಲಿ ನಿಂತಿತ್ತು—ಎತ್ತರವಾಗಿ. ಆಚೆಗಿನ ಬಾನಿನ ನೀಲ ಬಣ್ಣ ಅದಕ್ಕೆ ಹಿನ್ನೆಲೆಯಾಗಿತ್ತು. ಅದರ ಮುಂದೆ ಬಂಡೆಯ ಆಗಾಧ ಶರೀರ ಹೊಡೆದುಕಾಣಿಸುತಿತ್ತು. ಯಾರ ಮನಸ್ಸನ್ನೂ ಸೆಳೆಯುವ ನೋಟ ಅದು. ದೊಡ್ಡವರಿಗೆ ದೊಡ್ಡ ವಸ್ತು ಕಾಣಿಸುವಂತೆ, ಬಲ, ತಾರುಣ್ಯಗಳಿಂದ ಕೂಡಿದ ತುಕ್ರನಿಗೆ ಆ ಬಂಡೆ ಕಾಣಿಸಿತು. ಅದರ ಮೇಲ್ಮೈ ಇಳಿಜಾರಾಗಿ ಮಾಲಿಕೊಂಡಿತ್ತು. ಅದನ್ನು ನೋಡಿ "ಚಿನ್ನಿ, ಪಾರೆಯನ್ನು ಹತ್ತಿ ಅದರ ಮೇಲೆ ಹೋಗಿ ನಿಂತರೆ, ಎಷ್ಟು ಚೆನ್ನಾಗಿ ಕಾಣುತ್ತದೋ ಸುತ್ತಲೆಲ್ಲ" ಎಂದ ಹೆಂಡತಿಯೊಡನೆ.

"ಹೂಂ, ಭೂತದ ಹಾಗೆ ನಿಂತಿದೆ. ದೊಡ್ಡ ಬಂಡೆ! ಎಷ್ಟೋ ಸಾರಿ ಈ ಕಡೆಗೆ ಬರುವಾಗ ಅದನ್ನು ನೋಡಿ, ನಿಜಕ್ಕೂ ಅದು ಭೂತವೇ ಎಂಬ ಹೆದರಿಕೆ ಉಂಟಾಗಿತ್ತು."

"ಹಾಗಾದರೆ ನಿನ್ನ ಹೆದರಿಕೆ ಬಿಡಿಸುವುದಕ್ಕೂ ಆಯಿತು; ಅದರ ತುದಿಯ ಮೇಲೆ ಹೋದ ಹಾಗೂ ಆಯಿತು. ಬಾ, ಹೋಗುವ. ಹುಲ್ಲಿನ ಧಾರೆಗೆ ಮೈ ಸವರದ ಹಾಗೆ ನೋಡಿಕೊ. ಏನಾಗಬೇಕು—ಹೋಗಿ ಬರಲಿಕ್ಕೆ" ಎಂದು ಹೊರಟೇ ಬಿಟ್ಟ.

ಚಿನ್ನಿ 'ಹೂಂ' ಅನ್ನಲೂ ಇಲ್ಲ; 'ಹಾಂ' ಎನ್ನಲೂ ಇಲ್ಲ. ಬಂಡೆಯನ್ನೇ ನೋಡುತ್ತ ನಿಂತಳು. ಅವಳ ಕಣ್ಣಿಗೆ ಆ ಬಂಡೆಯ ಬಾಗಿದ ಮೈಗೆ ತೂಗಿಕೊಂಡ ನಾಲ್ಕಾರು ಹೆಜ್ಜೇನು ತಟ್ಟೆಗಳು—ಜೋತು ಬಿದ್ದ ಬಾವಲಿಗಳಂತೆ, ಸ್ಪಷ್ಟವಾಗಿ ಕಾಣಿಸಿದುವು. "ಅದು ಜೇನುಗೂಡಲ್ಲವೇ?" ಎಂದಳು ಅವಳು—ಆ ತಟ್ಟೆಗಳನ್ನು ತೋರಿಸುತ್ತ.

ಶುಕ್ರನೂ ನೋಡಿದ. ಗೂಡು ಗೂಡೇ! ಆ ಮೂರು ತಟ್ಟೆಗಳನ್ನು ಹಿಸಿದು ತೆಗೆದರೆ ಒಂದು ಗಡಿಗೆಯಷ್ಟು ಜೇನು ಸಿಕ್ಕೀತು—ಎಂಬ ಆಸೆ ಮೂಡಿತು. ಆದರೆ ತಟ್ಟೆ ಅಂಟಿಕೊಂಡದ್ದು ನಾಲ್ಕೆಂಟು ಆಳು ಎತ್ತರದಲ್ಲಿ—ಅದೂ ಇಲ್ಲಿಂದ ಕಾಣುವಾಗ. ಅಲ್ಲಿಗೆ ಹೋಗಿ ನೋಡಿದರೆ, ಎಷ್ಟು ಎತ್ತರಕ್ಕಿರುವುದೋ. ಅದನ್ನು ಕೆಳಗಡೆಯಿಂದ ಏರಿ ತೆಗೆಯುವ ಹಾಗಿಲ್ಲ. ಬಿದಿರಿನ ಎಟುಕಿಗೂ ಸಿಗುತ್ತದೋ ಇಲ್ಲವೋ. ತೆಗೆದರೆ ಬಂಡೆಯೇರಿ, ಮೇಲಿಂದ ಹಗ್ಗ ಇಳಿಸಿ, ಹಗ್ಗದಲ್ಲಿ ಇಳಿದು ತೂಗಿಕೊಂಡು, ತೆಗೆಯುವುದು ಸಾಧ್ಯ. ಬರಿಯ ಒಬ್ಬನಿಂದಲೇ ಆ ಕೆಲಸ ಆಗುತ್ತದೋ ಇಲ್ಲವೋ ಎಂದೇನೇನೋ ಯೋಚಿಸಿಕೊಂಡ. ಹಾಗೆಂದು ಬೇರೊಬ್ಬರ ನೆರವನ್ನು ಕೊಳ್ಳುವುದಕ್ಕೂ ಇಷ್ಟವಾಗಲಿಲ್ಲ. ಅವರಲ್ಲಿ ಸಿಕ್ಕಿದ ಬೇಟೆ, ಹಾಕಿದ ಹೊಂಚು, ಇರಿಸಿದ ಉರುಳು—ಒಬ್ಬರಿಗೊಬ್ಬರು ಮುಂಚಿತವಾಗಿ ತಿಳಿಸುವ ವಾಡಿಕೆ ಇಲ್ಲ. ಇಂಥ ಒಂದು ಜೇನಿನ ಕೊಳ್ಳೆಯನ್ನು ತಿಳಿಸುವ ಮಾತೆಲ್ಲಿಂದ ಬಂತು! ಹೇಗಾದರು ಮಾಡಿ ತಾನೊಬ್ಬನೇ ಅದನ್ನು ತೆಗೆಯಬೇಕೆಂಬ ಚಪಲ ಮೂಡಿತು—ಶುಕ್ರನ ಮನಸ್ಸಿನಲ್ಲಿ. "ಬಾ, ಅಲ್ಲಿಗೆ ಹೋಗುವ. ಏನೆಂದು ನೋಡಿಯಾದರೂ ಬರುವ" ಎಂದು ಹೆಂಡತಿಯನ್ನು ಅಲ್ಲಿಗೆ ಕರೆದುಕೊಂಡು ಹೊರಟ. ಅವಳ ಅಂತರಂಗದಲ್ಲಿ—ಅಂಥ ಅಗಾಧವಾದ ಬಂಡೆ, ಹೀಗೆ ಮಾಲಿಕೊಂಡು, ಕೆಳಕ್ಕೆ ಉರುಳದೆಯೆ ನಿಂತಿರಬೇಕಾದರೆ ದೆವ್ವದ ಶಕ್ತಿಯೇ ಅದರಲ್ಲಿಬೇಕು—ಎಂಬ ಭಾವನೆ ಅವಳಿಗಾಯಿತು. ಆದರೆ ನಿತ್ಯವೂ ತನ್ನ ಸಾಹಸ, ಹೆಮ್ಮೆಗಳನ್ನು ಕೊಚ್ಚಿಕೊಳ್ಳುತ್ತಿದ್ದ ಗಂಡನ ಮುಂದೆ, ತನ್ನ ಈ ಅಳುಕನ್ನು ತೋರಿಸಿಕೊಳ್ಳಲಾರದೆ ಮುಂದುವರಿದಳು. ಇಬ್ಬರೂ ಬೆಟ್ಟದ ಒರಟು ಹಸಿ ಹುಲ್ಲುಗಳನ್ನು, ಎರಡೂ ಕೈಗಳಿಂದ ಆಚೀಚೆ ಸರಿಸುತ್ತ ಸಾಗಿದರು. ಬಲಿತ ಕಾಟಿಯ ಮರಿಗಳು ಹೊಲವೊಂದನ್ನು ಹೊಕ್ಕಂತೆ ಕಾಣಬೇಕು ಆ ನೋಟ. ಬಂಡೆ ಕಾಣಿಸಿದ್ದೇನೋ ಸಮೀಪಕ್ಕೆ. ಆದರೂ ಅದು ಅವರೆಣಿಸಿದಷ್ಟು ಸಮೀಪದಲ್ಲಿರಲಿಲ್ಲ. ಹುಲ್ಲಿನೆಡೆಯಲ್ಲಿ ದಾರಿಮಾಡಿಕೊಂಡು, ಅದನ್ನು ಸಮೀಪಿಸುವಾಗ ಸಾಕಷ್ಟು ದಣಿವಾಗಿತ್ತು. ಇಬ್ಬರೂ ಬಂಡೆಯ ಬುಡಕ್ಕೆ ತುಸು ದೂರದಲ್ಲಿ ಹೋಗಿ ನಿಂತರು. ಅದನ್ನೇ ದಿಟ್ಟಿಸಿ ನೋಡಿದರು. ದೂರದಲ್ಲಿ ನಿಂತು ನೋಡಿದಾಗ ಕಾಣಿಸಿದ ಗಾತ್ರದ ನಾಲ್ಕಡಿಯಷ್ಟಿತ್ತು ಅದರ ನಿಜ

ವಾದ ಗಾತ್ರ. ಆ ಜೇನುತಟ್ಟೆಗಳು ತೂಗುತ್ತಿದ್ದ ಸ್ಥಳ, ನಿಜಕ್ಕೂ ಹೆಬ್ಬಿದಿರಿನ ಎಟುಕಿಗೂ ಸಿಗದಷ್ಟು ಎತ್ತರವಾಗಿತ್ತು. ಒಂದೆರಡು ತಟ್ಟೆಗಳಿದ್ದಿರಲಿಲ್ಲ! ನಾಲ್ಕೆಂಟು ತಟ್ಟೆಗಳು, ಆನೆಯ ಕಿವಿಗಳಂತೆ ಬಂಡೆಯ ಸೆರಗಿಗೆ ಅಲಂಕಾರವಾಗಿ ತೂಗಿಕೊಂಡಿದ್ದುವು. ಕೆಲವು ವಸತಿಯಿಲ್ಲದ ಹಳೆಯ ತಟ್ಟೆಗಳು. ಇನ್ನು ಕೆಲವು ಜೇನ್ನೊಣ ತುಂಬಿದುವು. ಬಾಯಿ ನೀರೂರಿತು—ತುಕ್ರನಿಗೆ. "ನೀನು ನಿಂತಿರು. ನೋಡುವ, ಬಂಡೆ ಹೇಗಿದೆಯೆಂದು" ಎಂದು ಹೊರಟ. ಅದರ ಹಿಂದುಗಡೆ ಹೋಗಿ, ಬಳಿಯ ಮರವೊಂದನ್ನು ಏರಿ, ಆ ಬಂಡೆಯ ಮೇಲೆ ಕುಪ್ಪಳಿಸಿದ. ಕಪ್ಪೆಯ ಬೆನ್ನ ಮೇಲೆ ನೊಣ ಹರಿದಾಡುವಂತೆ ಕೈಕಾಲುಗಳನ್ನೂರಿಕೊಂಡು ಅದರ ತುದಿಯ ತನಕ ಹೋದ. ಅದರ ತುದಿಯಲ್ಲಿ ನಿಂತ. ನಾಲ್ಕು ಸುತ್ತಿನ ಪ್ರಪಂಚವನ್ನು ನಿಟ್ಟಿಸಿ ನೋಡಿದ. ಬೀಸುವ ಗಾಳಿಗೆ ಅವನ ತಲೆಯ ಮುಂಗುರುಳು ಚೆಲ್ಲಾಡುತಿತ್ತು. ಮನದಲ್ಲಿ ಹುಮ್ಮಸು ತುಂಬಿ ಹೊರಸೂಸುತಿತ್ತು. ಹಾಗೆಯೇ ಕುಳಿತ; ಮಂಡಿಯೂರಿದ. ಕೆಳಗಡೆ ಇಣಿಕಿ ನೋಡಿದ. ನೋಟ ಕಾಣಸಿಗದ್ದಕ್ಕೆ, ಕವುಚಿ ಮಲಗಿಕೊಂಡು, ಹಲ್ಲಿಯಂತೆ ಅಂಗುಲ ಅಂಗುಲವಾಗಿ ಮೈಯ್ಯೂರಿಕೊಂಡು ಸಾಗಿದ. ಸಾಗುತ್ತ ಸಾಗುತ್ತ, ಬಂಡೆಯ ಮೈ ತಟ್ಟಾಗಿರುವ ಬದಲು, ಕೆಳಕ್ಕೆ ಇಳಿಯತೊಡಗಿತು. ಇನ್ನೂ ನಾಲ್ಕಡಿ ಮುಂದು ಸರಿದ ಮೇಲೆ, ದೃಷ್ಟಿಯನ್ನು ನೆಟ್ಟಗೆ ಕೆಳಕ್ಕೆ ಚಾಚುವುದು ಸಾಧ್ಯವಾಯಿತು. ಆದರೆ—ಒಳಮಗ್ಗುಲಿಗೆ ತಾಗಿದ್ದ ಒಂದು ಜೇನುತಟ್ಟೆಯನ್ನು ಬಿಟ್ಟರೆ, ಉಳಿದುದೇನೂ ಅವನ ನೋಟಕ್ಕೆ ಸಿಗಲಿಲ್ಲ. ಆ ತಟ್ಟೆಯನ್ನು ತೆಗೆಯುವುದಾದರೆ ತಾನು ಎಣಿಸಿದ ಉಪಾಯವೇ ಸರಿ. ನೀಳವಾದ ಬೆತ್ತದ ಬೀಳಲನ್ನು ತಂದು, ಅದನ್ನು ಬಂಡೆಯ ಮೇಲೆ ಹಾಸಿ, ತಾನಿರುವಲ್ಲಿಯ ತನಕ ಎಳೆದುಕೊಂಡು ಬಂದು, ಕೆಳಕ್ಕೆ ಇಳಿಯಬಿಟ್ಟು, ಅನಂತರ ಅದನ್ನು ಹಿಡಿದುಕೊಂಡು ಇಳಿದರೆ—ಆ ಎಣಿಸಿದ ಕೆಲಸ ಸಾಧ್ಯ ಎಂದು ತೋರಿತು. ಅಷ್ಟು ಮಾಡಿಯೇ ಮನೆಗೆ ಮರಳಬೇಕು ಎಂಬ ಹಟ ಉಂಟಾಯಿತು. ಹಾಗೆಂದು ಶರೀರವನ್ನು ಹಿಂದಕ್ಕೆಳೆದುಕೊಂಡು ಬಂದ, ಅನಂತರ ಬಂಡೆಯ ಮೇಲೆ ಕುಳಿತುಕೊಂಡ.

ಇಷ್ಟೆಲ್ಲ ಆಗುವಾಗ ಚಿನ್ನಿ ನಿಂತಲ್ಲೇ ನಿಂತು, ನೋಡಿ, ಬೇಸರ ಬಂದು, ಬಂಡೆಯ ಕೆಳಗಡೆ ಹೋಗಿ, ಅಲ್ಲಿ ಎಷ್ಟೆಲ್ಲ ತಟ್ಟೆಗಳಿವೆ ಎಂದು ಎಣಿಕೆ

ಹಾಕಲು ನಿರ್ಧರಿಸಿ, ಮೆಲ್ಲಮೆಲ್ಲಗೆ ಹೆಜ್ಜೆ ಹಾಕಿದಳು. ಹುಲ್ಲು ಬೆಳೆದ ಜಾಗ ಕಳೆದು ಬಂಡೆಯ ಕೆಳಭಾಗ ಬಂದಿತು. ಅಲ್ಲಿಂದ ಕತ್ತೆತ್ತಿ ಜೇನುತಟ್ಟೆಗಳನ್ನು ಕಂಡಳು. ಬಾಯಿನೀರು ಬಿಟ್ಟಳು—ಒಂದು ಕ್ಷಣ. ಎರಡನೆಯ ಕ್ಷಣಕ್ಕೆ 'ಅಯ್ಯೋ' ಎಂದು ಕಿರಿಚಿ ನೆಲಕ್ಕೆ ಧೊಪ್ಪಳಿಸಿದಳು. ಆ ಕೂಗನ್ನು ಕೇಳಿ ಬಂಡೆಯ ಮೇಲಿದ್ದ ತುಕ್ರ, ಒಂದೇ ನೆಗೆತಕ್ಕೆ ಕೆಳಕ್ಕೆ ಹಾರಿ, ಹುಲ್ಲಿನ ಎಡೆಯಿಂದ ಕುಪ್ಪಳಿಸಿ, ಸ್ವರ ಕೇಳಿದ ಸ್ಥಳಕ್ಕೆ ಓಡಿಹೋದ. ನೋಡುವಾಗ, ನೆಲದಲ್ಲಿ ಉರುಳಿ ಬಿದ್ದಿದ್ದಾಳೆ ಚಿನ್ನಿ. ಕವುಚಿಬಿದ್ದ ಅವಳ ಬೆನ್ನನ್ನು ಒಂದು ಕರಡಿ ಮರ್ದಿಸುತಿತ್ತು. ಯಾರೂ ಬರಲಾರರೆಂಬ ನಂಬಿಕೆಯಿಂದ ಆ ಕರಡಿ ಆ ಬಂಡೆಯ ಬುಡದ ಮಣ್ಣಿನ ಪೊಟರೆಯಲ್ಲಿ ತನ್ನ ಸಂಸಾರ ಹೂಡಿತ್ತು. ಗಂಡು ಅಲೆದಾಡಲು ಹೋಗಿರಬೇಕು. ಹೆಣ್ಣು ಕರಡಿ ಮರಿಗಳಿಗೆ ಹಾಲು ಕೊಡುತ್ತ ಮಲಗಿತ್ತು. ಅಂಥಲ್ಲಿಗೂ ಮನುಷ್ಯ ಬಂದರೆ—ಅದರ ಸಿಟ್ಟು ಕೇಳಬೇಕೇ? ಜಿಗಿದು, ಹಾರಿ, ಚಿನ್ನಿಯ ಬೆನ್ನ ಮೇಲೆಯೇ ಎರಗಿತು. ಚಿನ್ನಿ ಉರುಳಿ ಬಿದ್ದಳು. ಬಿದ್ದಲ್ಲಿಂದ ತಲೆ ಎತ್ತುವ ತ್ರಾಣ, ಮೈ ತಿರುಗಿಸುವ ತ್ರಾಣ ಆಕೆಗೆಲ್ಲಿಂದ ಬಂದೀತು? ಎತ್ತಿದರೆ ಮತ್ತೂ ಹಾನಿ. ನೆಲಕ್ಕೆ ಅವುಕಿದ ಮುಖದಿಂದ, ಉಸಿರು ಹೊರಡಿಸುವುದೇ ಕಷ್ಟವಾಗಿತ್ತು. ಮೊದಲಿನ ಕೂಗೇ ಕೂಗು! ಅರೆಕ್ಷಣದಲ್ಲಿ ಅಲ್ಲಿಗೆ ಬಂದ ತುಕ್ರ ಸೊಂಟದ ಕತ್ತಿಯನ್ನು ಹಿಡಿದುಕೊಂಡು 'ಹೋ, ಹೋ' ಎಂದು ಆರ್ಭಟಿಸಿದ. ಚಿನ್ನಿಯ ರಕ್ಷಣೆಗೆ ಧಾವಿಸಿದ. ಇವನ ಆರ್ಭಟೆಗೆ ಕರಡಿಯ ಗಮನ ತಿರುಗಿತು. ಚಿನ್ನಿಯನ್ನು ಬಿಟ್ಟು ಇವನನ್ನೆದುರಿಸಲು ಬಂತು. ಕತ್ತಿ ಹಿಡಿದ ತುಕ್ರನ ಜತೆಯಲ್ಲಿ ಕರಡಿ ನಿಂತು ಕಾದಾಡತೊಡಗಿತು. ಕತ್ತಿ ಇಲ್ಲದಿದ್ದರೆ ಆ ಮಾತು ಬೇರೆ, ಅದರ ಮುಂಗಾಲಿನ ಬಡಿತಕ್ಕೆ ತುಕ್ರನ ಎದೆ ಗಾಯಗೊಂಡಿತಾದರೂ, ಕತ್ತಿಯನ್ನು ಬಿಡಲಿಲ್ಲ. ಕರಡಿಯ ಆಟ ಮುಗಿಯುವ ತನಕ ಆತ ಕಾದಾಟವನ್ನೂ ನಿಲ್ಲಿಸಲಿಲ್ಲ. ಆ ಕರಡಿ ಉರುಳಿದ್ದೇ ತಡ, ಅದರ ಜತೆಗಾರ ಕರಡಿ ಬಳಿಯಲ್ಲಿರಬಹುದೆಂದು ಬೆದರಿ, ಬೇಗನೆ ಪಾರಾಗುವ ಎಣಿಕೆ ಮಾಡಿ, ಚಿನ್ನಿಯ ಬಳಿಗೆ ಓಡಿದ. ಆಕೆಯ ಬೆನ್ನಿನ ಮಾಂಸಖಂಡಗಳು ಅಲ್ಲಲ್ಲಿ ಹರಿದು ಹಿಸಿದಿದ್ದುವು. ಅವಳನ್ನೆತ್ತಿದ. ಜೀವ ಉಳಿದಿತ್ತು! ಬೆದರಿಕೆ ಮಾತ್ರ ತುಂಬಿತ್ತು. ಇಬ್ಬರ ಮೈಯಿಂದಲೂ ರಕ್ತ ಸೋರುತಿತ್ತು. ಕುಳಿತು ಯೋಚಿ

ಸಲು ಸಮಯವಿಲ್ಲವೆಂದು ತಿಳಿದ ತುಕ್ರ, ಚಿನ್ನಿಯನ್ನು ಬೆನ್ನ ಮೇಲೆ ಹಾಕಿಕೊಂಡು, ಒಂದೇ ಓಟ ಹೂಡಿದ ಕೇರಿಯ ತನಕ. ಗಂಡು ಕರಡಿ ಹಿಂಬಾಲಿಸಿ ಬಂದೀತು ಎಂಬ ಭೀತಿ! ಅವರನ್ನು ಕಂಡು ಕೇರಿಯವರೆಲ್ಲ ಕೂಡಿದರು, ಮೊದಲು ಗಾಬರಿಗೊಂಡರು. ಬಳಿಕ ಇಬ್ಬರೂ ಬದುಕಿ ಉಳಿದದ್ದನ್ನು ಕಂಡು ಸಂತಸಗೊಂಡರು. ಅವರ ಗಾಯಗಳಿಗೆ ಉಪಚಾರ ಮಾಡಿದರು. ಪ್ರಾಣಾಪಾಯದ ಭೀತಿ ಇಲ್ಲವೆಂದು ಹರ್ಷತಾಳಿದರು. ತುಕ್ರ ತನ್ನ ವಿಕ್ರಮವನ್ನೆಲ್ಲ ಬಣ್ಣಿಸಿದ. ಬೇಡವೆಂದರೂ, ಗೆಳೆಯರನ್ನು ಕೂಡಿಕೊಂಡು, ಕೊಂದ ಕರಡಿಯನ್ನು ತೋರಿಸುವುದಕ್ಕೆ ಆಗಲೇ ಹೊರಟ. ನೀಳವಾದ ಮೊನಚು ಈಟಿಗಳನ್ನು, ಕತ್ತಿಗಳನ್ನು ಹಿಡಿದುಕೊಂಡು ಹತ್ತೆಂಟು ಮಂದಿ ಕುಡಿಯರು ಜತೆಗೆ ಹೊರಟರು. ಇಷ್ಟೆಲ್ಲ ಜನ ಅಲ್ಲಿಗೆ ಸದ್ದು ಮಾಡದೆ ಹೋಗಿ, ಆ ಬಂಡೆಯನ್ನು ಸುತ್ತುವರಿದು ನಿಂತರು. ಒಮ್ಮೆಗೇ 'ಹಾಹಾಕಾರ' ಎಬ್ಬಿಸಿದರು. ಯಾವ ಕರಡಿಯೂ ಹೊರಬೀಳಲಿಲ್ಲ. ಕರಡಿಯ ಮರಿಗಳೂ ಕಾಣಿಸಲಿಲ್ಲ. ಬಲು ಹೊತ್ತು ಬೊಬ್ಬಿರಿದು, ನಿರಾಶರಾಗಿ, ಮೆಲ್ಲಗೆ ತಮ್ಮ ಪಡೆಯನ್ನು ಸಮೀಪಗೊಳಿಸುತ್ತ, ಬಂಡೆಯ ಬುಡದ ಪೊಟರೆಗೆ ಬಂದರು. ಕರಡಿಮರಿಗಳ ಹೆಜ್ಜೆಯೂ ದೊಡ್ಡ ಕರಡಿಯ ಹೆಜ್ಜೆಯ ಗುರುತೂ ಕಾಣಸಿಕ್ಕಿತು. ತುಕ್ರ," ಹೋ, ಗಂಡು ಕರಡಿ ಬಂದು ಮರಿಗಳನ್ನು ಕರೆದುಕೊಂಡು ಹೋಗಿರಬೇಕು. ಬೆಳಿಗ್ಗೆ ಅಲ್ಲಿ ಏನೋ ಮಸುಕುಮುಸುಕಾಗಿ ನನಗೆ ಕಾಣಿಸಿತ್ತು. ಕರಡಿಮರಿಗಳೇ ಇರಬೇಕು. ಎಂದುಕೊಂಡಿದ್ದೆ "—ಎಂದು ನಿರಾಶೆ ತಾಳಿದ. ಆ ಬಳಿಕ ಸತ್ತ ಜಾಂಬವಂತನ ಹೆಣವನ್ನು—ಅಡ್ಡೆಹಾಕಿ ಕೇರಿಗೆ ಹೊತ್ತುಕೊಂಡು ಬಂದರು. ಆ ಗಾತ್ರವೂ, ಬಲಿಷ್ಠವೂ ಆದ ಕರಡಿಯನ್ನು ನೋಡಿ ಕೇರಿಗೆ ಕೇರಿಯೇ ಆನಂದಿಸಿತು ಆ ದಿನ. ಜನ ತುಕ್ರನನ್ನು ಕೊಂಡಾಡಿದ್ದು ಅಷ್ಟಿಷ್ಟಲ್ಲ 'ಎಂಟು ಜನ ಹೂರಲಾರದ ಈ ದಾಂಡಿಗ ಕರಡಿಯನ್ನು ನೀನೊಬ್ಬ ಹೇಗೆ ಎದುರಿಸಿದೆ ಮಹಾರಾಯ!' ಎಂದು ಬೆರಗಾದರು ಅವರೆಲ್ಲ. ಎಲ್ಲರೂ ಅವನ ಪರಾಕ್ರಮವನ್ನು ಕೊಂಡಾಡುವವರೇ. ಇಂಥ ಪ್ರಥಮ ಪ್ರಕರಣದಿಂದ ತುಕ್ರನ ಕೀರ್ತಿಯ ಬಾಳು ತೊಡಗಿದುದು.

ಅವನ ರೂಪು, ಕೆಚ್ಚು, ಸಾಹಸಗಳನ್ನು ಕೇಳಿದ—ಕುಡಿಯರ ಯೌವನೆಯರು, ಚಿನ್ನಿಯ ವಿಚಾರದಲ್ಲಿ ಅಸೂಯೆ ತಾಳುವ ಕಾಲವೂ

ಬಂದಿತ್ತು. ‘ ಮದುವೆಯಾದರೆ ತುಕ್ರನನ್ನು ಮದುವೆಯಾಗಬೇಕು ’ ಎಂಬ ಆಸೆಯೂ ಮೂಡಿತು ಕೆಲವರಲ್ಲಿ. ಆ ಆಸೆಯನ್ನು ಧೈರ್ಯವಾಗಿ ಪ್ರಕಟಿಸಿ, ತುಕ್ರ ಅಚೀಚೆ ಹೋಗುವ ಗಳಿಗೆಯನ್ನು ಸಾಧಿಸಿಕೊಂಡು, ಕಣ್ಣು ಹೊರಳಿಸಿದರು. ಚೆಲುವೆಯೊಬ್ಬಳಿದ್ದರೆ ಆಕೆ ಕೆಂಪಿ. ಆ ಕೇರಿಗಾಗಿ ಅವಳಂಥ ಚೆಲುವೆ ಇಲ್ಲ ಅನ್ನುತ್ತಾರೆ. ಎಳೆ ಪ್ರಾಯ; ತುಂಬಿದ ಮೈ; ಬೊಗಸೆಗಣ್ಣುಗಳು. ನಡುವಿಗೆ ಬಿಳಿಯ ಸೀರೆ ಸುತ್ತಿ, ಕೊರಳ ಸರಕ್ಕೆ ಮೇಲುದೆ ಸಿಕ್ಕಿಸಿ, ಒನಪು ಮಾಡುತ್ತ ಅಚೀಚೆ ಸರಿದಳೆಂದರೆ, ಕೇರಿಯ ಹತ್ತೆಂಟು ಗಂಡುಗಳಲ್ಲಿ ಆಸೆ ಕೆರಳುತ್ತದೆ; ಅಸೂಯೆಯೂ ಕೆರಳುತ್ತದೆ—ಅವಳಿಗಾಗಿ, ಅವಳ ತಂದೆಯನ್ನು ಅವಳಿಗಾಗಿ ಕೇಳಿದವರುಂಟು. ಪ್ರತಿಯೊಬ್ಬರನ್ನು ಕಂಡು ‘ಅವನೇ ಅವನೇ ’ ಎಂದು ಮೂದಲಿಸಿದ ಅವಳೇ, ಚಿನ್ನಿಯನ್ನು ಮದುವೆಯಾಗಿ ಬಂದ ತುಕ್ರನನ್ನು ಕೂಡ ಸಾಮಾನ್ಯನೆಂದು ತಿಳಿದ ಅವಳೇ, ಈಗ ತಾನಾಗಿ ಅವನಿಗಾಗಿ ಮನಸೋತಳು. ಕಿರಿ ಮಲೆಯ ಬಂಧುಗಳ ಮನೆಗೆ ಬಂದ ಅವಳು ತಿಂಗಳಕಾಲ ಅಲ್ಲಿಯೇ ನಿಂತಳು. ಅವನ ಕಡೆಗೆ ಕಣ್ಣು ಮಿಟುಕಿಸುವ ಅವಕಾಶಕ್ಕೆಲ್ಲ ಹೊಂಚು ಹಾಕಿದಳು. ಹೊಲಕ್ಕೆ ಹೋಗುವಾಗ, ನೀರಿಗೆ ಹೋಗುವಾಗ, ಎಲಕ್ಕಿ ಹೆಕ್ಕಲು ಹೋಗುವಾಗ ತುಕ್ರ ಇರುವ ಕಡೆಗೆ ಹೋಗಿ ನಿಲ್ಲುತ್ತಾಳೆ, ಗಟ್ಟಿಯಾಗಿ ಮಾತನಾಡುತ್ತಾಳೆ, ‘ನಿನಗೆ ನಾನು ತಕ್ಕವಳು ’ ಎಂದು ತನ್ನ ಕುಡಿ ನಗುವಿನ ಅಭಿನಯದಿಂದಲೇ ಸಾರುತ್ತಾಳೆ. ತುಕ್ರನಲ್ಲಿಯೂ ಹೆಮ್ಮೆಗೆ ಕೊರತೆ ಇದ್ದಿಲ್ಲ; ತಾರುಣ್ಯದ ಉಕ್ಕಿಗೂ ಕೊರತೆ ಇದ್ದಿಲ್ಲ; ಮಾಂಸದ ಬಯಕೆಗೂ ಕೊರತೆ ಇದ್ದಿಲ್ಲ. ಅವನಿಗಿರುವ ಅಳುಕು ಒಂದೇನೆ. ತನ್ನ ಬಳಗದಲ್ಲಿ ಒಬ್ಬೊಬ್ಬರ ಪಾಲಿಗೆ ಒಂದೊಂದು ಮಡದಿಯ ಭಾಗ್ಯ ದೊರೆಯುವುದೇ ಕಠಿಣವಾಗಿ ಬಂದಿರುವಾಗ ತಾನು ಇಬ್ಬಿಬ್ಬರು ಹೆಂಡಿರ ಗಂಡನಾಗಲು ಬಯಸಿದರೆ, ಕೇರಿಯ ದ್ವೇಷಕ್ಕೆ ಗುರಿಯಾದೆನೇ—ಎಂಬ ಒಂದೇ ಹೆದರಿಕೆಯಲ್ಲದೆ ಇನ್ನೇನಿಲ್ಲ. ‘ ಚಿನ್ನಿ ಏನು ಎಂದಾಳು ’ ಎಂಬ ಹೆದರಿಕೆ ಸಾಮಾನ್ಯವಾದದ್ದು. ಎರಡು ಹೆಣ್ಣುಗಳನ್ನು ತಂದುಕೊಳ್ಳಬಾರದೆಂದು ಕುಲಾಚಾರ ಏನೂ ಹೇಳುವಂತಿರಲಿಲ್ಲ. ಮದುವೆಯಾದ ಹೆಣ್ಣಿನ ಅಧಿಕಾರ ಗಂಡನ ಮೇಲೆ ಅಷ್ಟು ಮೀರಿಹೋಗಿಲ್ಲ. ಆದರೆ ಚಿನ್ನಿಗೂ ಈ ಹೊಸ ಪ್ರಮೇಯ ಸಮಸ್ಯೆಯಾಗಿ ಪರಿಣಮಿಸಿತು, ಅಸೂಯೆ

ಯನ್ನು ಹುಟ್ಟಿಸಿತು. ಆ ಅಸೂಯೆಯ ಫಲವಾಗಿ ಮಾತುಗಳು ನಂಜಿನ ರೂಪ ತಾಳಿ, ಗಂಡನನ್ನು ಚುಚ್ಚಿ ನುಡಿಯುವುದಕ್ಕೂ ಮುಂದುವರಿದಳು. ಸ್ವಾಭಾವಿಕವಾಗಿ ದೊರೆತ ಸಂದರ್ಭದೊಡನೆ, ಚಿನ್ನಿಯ ತಿಳಿಗೇಡಿತನವೂ ಸೇರಿಕೊಂಡು, ತುಕ್ರನ ದ್ವಿತೀಯ ದಾಂಪತ್ಯದಲ್ಲಿ ಪರಿಣಮಿಸಿಯೇ ಬಿಟ್ಟಿತು. ಹಿರಿ ಮಲೆಯ ಚೆಲುವೆಯಾದ ಕೆಂಪಿ, ಕಿರಿಮಲೆಗೆ ಒಂದು ತುಕ್ರನ ಪಟ್ಟದ ಅರಸಿಯಾದಳು. ಆ ಮದುವೆಗೆ ಒಂದು ದಿನ ಮೊದಲು ಕೆಂಚ 'ಹಾಗೆ ಮಾಡಬಾರ'ದೆಂದು ತುಕ್ರನಿಗೆ ಹಿತೋಪದೇಶವನ್ನು ಮಾಡಿದ್ದ. ಆದರೂ ಆ ಲಗ್ನವಾಯಿತು. ಆದ ಬಳಿಕ ಕೇರಿಯ ನಾಲ್ಕೆಂಟು ತರುಣರಲ್ಲಿ ಪ್ರಬಲವಾದ ಅಸೂಯೆ ಮೂಡಿಯೇ ಬಿಟ್ಟಿತು. ಅವರಲ್ಲಿ ಇಂದಿಗೂ ಮದುವೆಯಾಗದೆ ಉಳಿದವರು ತಿಮ್ಮ ಮತ್ತು ಬೂದರು. ಅವರು ಇಬ್ಬರೂ ಪ್ರಥಮದಲ್ಲಿ ಕೆಂಪಿಗಾಗಿ ಹಾರೈಸಿದವರು. ಹಾರೈಸಿ, ಅವಳ ತಂದೆಯ ಮನೆಗೆ ಎಳ್ಳೆಣ್ಣೆಯನ್ನು ಕೊಂಡುಹೋದವರು. ಅದು ಸ್ವೀಕೃತ ವಾಗದೆ ನಿರಾಶೆಯಿಂದ ಮನೆಗೆ ಬಂದವರು. ಆಮೇಲೆ ಮನದ ಅತೃಪ್ತಿ ಯನ್ನು ಅವಕಾಶ ಬಂದಾಗಲೆಲ್ಲ ತುಕ್ರನ ವಿಷಯದಲ್ಲಿ ತೋಡಿಕೊಂಡರು. ಅಂತು ಈ ಅಸೂಯೆ, ಜಗಳಗಳು ಕಿರಿ ಮಲೆಯಿಂದ ಹೊರಟು, ಅವರವರ ಸಂಬಂಧಿಗಳ ಮೂಲಕ ಹಿರಿಯ ಮಲೆಗೂ ಹಬ್ಬಿ, ಎರಡೂ ಬಣಗಳೊಳಗೆ ಸಾಕಷ್ಟು ಕ್ಲೇಶ, ಮಾತ್ಸರ್ಯ, ಕೋಪ ಅಸಮಾಧಾನಗಳ ಬೆಳೆಯನ್ನು ಬಿತ್ತಿತು. ಅದಕ್ಕೆ ತುಕ್ರನೂ ಕಾರಣನಿರಬಹುದು, ಉಳಿದವರೂ ಅಷ್ಟೇ ಕಾರಣರಿರಬಹುದು. 'ಅವುಗಳ ಫಲಪ್ರಾಪ್ತಿಯಾದದ್ದು ತನಗೆ. ದಂಡ ತೆರ ಬೇಕಾದವನು, ತೆತ್ತವನು ತಾನು'—ಎಂದು ಬಹು ದಿನಗಳಿಂದ ತಿಳಿದು ಕೊಂಡು ಬಂದವನು ಮಾತ್ರ ಕೆಂಚ.

ಕಿರಿ ಮಲೆಯ ಕುಡಿಯರ ಜೀವನದಲ್ಲಿ ಸ್ವಾಭಾವಿಕವಾಗಿ ಬೆಳೆದುಬರ ಬಹುದಾದ ಇಂಥ ವಿಷಮ ಸಮಸ್ಯೆ ಇರುವಾಗಲೇನೆ, ಇನ್ನಿತರ ವರ್ಚಸ್ಸು ಗಳೂ ತಮ್ಮ ಪ್ರಭಾವ ತೋರುತ್ತಲಿದ್ದುವು. ಆ ಮಲೆ ಸುಮಾರು ನೂರು ವರ್ಷಗಳಿಂದೀಚೆ, ಅಥವಾ ಅದರ ಹಿಂದಿನಿಂದಲೋ ಕನ್ನಡ ಜಿಲ್ಲೆಯ ಒಂದು ಜೈನ ಮನೆತನಕ್ಕೆ ಸೇರಿತ್ತು. ಆ ಜೈನರ ಬೀಡು ಹತ್ತಿಯಡ್ಕ ಎಂಬಲ್ಲಿಗೆ ಸಮೀಪವಾಗಿದ್ದ ಮೂಲೆಗುಂಪು ಎಂಬಲ್ಲಿದೆ. ಮೂಲೆಗುಂಪು ಅರಣ್ಯ

ಪ್ರವೇಶ, ಕಾಡಿಂದ ತುಂಬಿದ ಭೂಮಿ. 'ಗುಂಪು', 'ಗುಪ್ಪೆ' ಎನಿಸಿಕೊಂಡಿತ್ತು—ಒಂದು ಕಾಲದಲ್ಲಿ. ಗುಪ್ಪೆ ಜೈನರ ಬೀಡಿನ ಹಿಂದಕ್ಕಿರುವ ಉನ್ನತವಾದ ಒಂದು ಬೆಟ್ಟದ ಹೆಸರು. ಗುಪ್ಪೆ ಗುಂಪು ಆದಂತೆಯೇ ಮೂಲೆ ಗುಂಪಿನ ಬೀಡಿನ ಮನೆ, ಹಿಂದಣ ದಿನಗಳಲ್ಲಿ ಅದಕ್ಕಿದ್ದ ಕೀರ್ತಿವೈಭವಗಳೂ ಕಾಲಕ್ರಮೇಣ ಹೆಸರಿಗೆ ಅನ್ವರ್ಥವಾಗಿ ಮೂಲೆಗುಂಪೂ ಆದುವು. ಆ ಮನೆಯ ಮುಂಗಡೆ ಎರಡು ಮೈಲುದ್ದದ ಸುಂದರವಾದೊಂದು ಕಣಿವೆಯಿದೆ. ಕಣಿವೆಯೆಲ್ಲವೂ ಭತ್ತದ ಪೈರುಗಳಿಂದ ಸೊಗಯಿಸುವ ಹಸುರು ಭೂಮಿ. ಅಲ್ಲಿನ ಗದ್ದೆಯ ಅಂಚುಗಳಲ್ಲಿ ಸಾಲುಸಾಲಾಗಿ ಕಂಗೊಳಿಸುವ ತೆಂಗಿನ ಮರಗಳ ಸೊಬಗನ್ನು ಹೇಳತೀರದು. ಜಲಸಮೃದ್ಧಿ ಅನರ್ಘವಾಗಿತ್ತು. ಬೀಡಿನ ಮುಂದಿನ ಬಯಲು ಭೂಮಿಯನ್ನು ದಾಟಿದರೆ ಸಿಗುವುದೇ ಕಿರಿ ಮಲೆ. ಮಲೆ ಕಿರಿದಾದದ್ದು, ಅದು ಅಂಟಿಕೊಂಡ ಸಹ್ಯಾದ್ರಿ ಪರ್ವತಾವಳಿಯ ಹಿರಿತನ ಭವ್ಯತೆಗಳಿಂದಲೇ ಹೊರತು, ಮಲೆ ಚಿಕ್ಕದೆಂಬುದರಿಂದಲ್ಲ. ಅದು ನಾಲ್ಕಾರು ಮೈಲಿ ಉದ್ದವಾಗಿದ್ದು, ಎರಡು ಸಾವಿರ ಅಡಿಗಳಿಗಿಂತಲೂ ಉನ್ನತವಾಗಿದೆ. ಇಕ್ಕಡೆಗಳಲ್ಲೂ ದಟ್ಟಣಿಸಿದ ಕಾನನದಿಂದ ತುಂಬಿದ ಆ ಮಲೆ, ಅನಾದಿಕಾಲದಿಂದಲೂ ಮೂಲೆಗುಂಪು ಬೀಡಿಗೆ ಸೇರಿತ್ತು. ಲೆಕ್ಕಕ್ಕೆ, ಆ ಮಲೆಯ ನಿವಾಸಿಗಳಾದ ಕುಡಿಯರೆಲ್ಲರು ಬೀಡಿನ ಮೂಲದ ಆಳುಗಳಿದ್ದಂತೆ. ಆಳುಗಳೆಂದರೆ ಗುಲಾಮರಲ್ಲ. ಬೀಡಿನ ಇತರ ಒಕ್ಕಲುಗಳಂತೆ ಹೆಚ್ಚಿನ ಕಟ್ಟು ನಿರ್ಬಂಧ ಇದ್ದವರಲ್ಲ. ಅವರೆಲ್ಲ ಬಹು ಕಾಲದಿಂದ ಬೀಡಿನ ಬಲ್ಲಾಳರ ಒಡೆತನ ಒಪ್ಪಿ ಬಂದವರಷ್ಟೆ. ಪೂರ್ವಕಾಲದಲ್ಲಿ, ಅಂದರೆ ಕೆಂಚನ ತಾತ, ಮುತ್ತಾತಂದರ ಕಾಲದಲ್ಲಿ ಆ ಜನ, ವರ್ಷಕ್ಕೊಮ್ಮೆ ಅದೂ ವಿಷುಸಂಕ್ರಾಂತಿಯ ಸಮಯ, ಬೀಡಿಗೆ ಕಪ್ಪ ಕಾಣಿಕೆ ಹೊತ್ತು ಸಲಿಸಿ ಬರುತ್ತಿದ್ದರು. ಅರಣ್ಯದಲ್ಲಿ—ಎಲ್ಲಿ ಕಂಡರಲ್ಲಿ ತನ್ನಷ್ಟಕ್ಕೆ ಹುಟ್ಟಿ ಬೆಳೆಯುತ್ತಿದ್ದ ಏಲಕ್ಕಿಯನ್ನು ಹೆಕ್ಕಿ ಅವರಾದರೂ ಏನು ಮಾಡಬೇಕು? ಅದಾದರೂ ನಿತ್ಯ ತಿನ್ನುವ ಅನ್ನವಲ್ಲ. ಬದಲು ಬೀಡಿನಿಂದ, ಅವರಿಗೆ ಪ್ರತಿ ಮನ್ನಣೆ ಸಲುತ್ತದೆ. ಪ್ರತಿಯೊಬ್ಬ ಕುಡಿಯ ಕುಡಿಯಿತಿಗೂ ಒಂದೊಂದು ಬಿಳಿಯ ಹಚ್ಚಡದ, ಅಪೂರ್ವಕ್ಕೆ ಒಂದೊಂದು ಕಂಬಳಿಯ ಉಡುಗೊರೆ ದೊರೆಯುತಿತ್ತು. ಜನತೆಗೆ ಅವರಿಗೆ ಬೇಕಾಗುವ ಚೀಲ, ನಾಲ್ಕು ಚೀಲ ಉಪ್ಪನ್ನೂ ತರಿಸಿ

ಕೊಡುತ್ತಿದ್ದರು. ಆ ಮೂಲೆಯಲ್ಲಿದ್ದ ಅವರಿಗೆ ಉಪ್ಪು ಬಟ್ಟೆಗಳೆರಡೇ ಅನ್ಯರಿಂದ ಬೇಕಾದ ಪದಾರ್ಥಗಳು. ಹಾಗೆಯೇ, ಧನಿಯರ ಮನೆಗೆ ಬಂದವರು, ಅಲ್ಲೇ ಸಮೀಪದ ಈಶ್ವರ ದೇವಾಲಯದ ಜಾತ್ರೆಯೊಂದಕ್ಕೆ ಹೋಗುತ್ತಾರೆ. ಈ ಹಬ್ಬದ ತೇರು, ಮೆರವಣಿಗೆಗಳ ಚೆಲುವನ್ನು ಅನುಭವಿಸುವುದು ವಾಡಿಕೆಯಾಗಿತ್ತು. ಕಾಲಗತಿ ಬದಲಿಸಿದಂತೆ, ಹಬ್ಬಕ್ಕೆ ಬರುತ್ತಿದ್ದ ಮಣಿಸರಕಿನ ಮೇಲೂ ಹಸರದ, ಇನ್ನಿತರ ಒಡವೆಗಳ ಮೇಲೂ ಅವರಿಗೆ ಮೋಹ ಬೆಳೆಯಿತು. ಮಲೆಯಿಂದ ಬರುವಾಗ ಜೇನು, ಸೀಗೆ ಮೊದಲಾದುವನ್ನು ಹೊತ್ತು ತಂದು ಜಾತ್ರೆಯಲ್ಲಿ ವಿಕ್ರಯಿಸುತ್ತಾರೆ. ದೊರೆತ ಹಣದ ಬೆಲೆ ಅರಿಯದ ಅವರು, ಅದಕ್ಕೆ ಪ್ರತಿಯಾಗಿ, ಮಣಿಸರಕಿನಲ್ಲಿ ದೊರೆಯುತ್ತಿದ್ದ ಕನ್ನಡಿ, ಕಾಜು, ಕರಿಮಣಿ, ಕಬ್ಬಿಣದ ಬಳೆ, ಸೂಜಿ—ಮೊದಲಾದ ಅರ್ವಾಚೀನ ಯುಗದ ವಸ್ತುಗಳನ್ನು ಕೊಂಡು ಮಲೆಗೆ ಮರಳುತ್ತಾರೆ. ಹಬ್ಬಕ್ಕೆ ವಿಲಾಯತಿಯ ಚೂರಿ ಬರತೊಡಗಿತು. ಬಟ್ಟೆ ಬೆಳ್ಳಗೆ ಮಾಡುವ ಸಬಕಾರ ಬರತೊಡಗಿತು. ಉರಿಸುವ ಬೆಂಕಿಪೆಟ್ಟಿಗೆಯೂ ಬರತೊಡಗಿತು. ಹೀಗೆ ನಾಲ್ಕೆಂಟು ವಿಚಿತ್ರ ಸಾಮಾನುಗಳ ಪರಿಚಯ ಮಾಡಿಕೊಂಡರೂ ಅವರ ಜೀವನದಲ್ಲಿ ಆಧುನಿಕ ನಾಗರಿಕತೆಯ ಹೆಚ್ಚಿನ ಪ್ರಭಾವ ಉಂಟಾಗಲಿಲ್ಲ. ಅವರ ಬದುಕಿಗೆ ಬೇಕಾದ ಪ್ರತಿಯೊಂದನ್ನೂ ಸ್ವಂತ ದುಡಿಮೆಯಿಂದ, ಬೇಟೆಯಿಂದ, ಬೇಸಾಯದಿಂದ ಅವರೇ ದೊರಕಿಸಿಕೊಳ್ಳುತ್ತಿದ್ದಾಗ ಹೆಚ್ಚಿನ ಹಂಗು ಯಾರದ್ದೂ ಇಲ್ಲ. ಬೀಡಿನ ಒಡೆಯರು, ಮಲೆ ತಮ್ಮದು ಎಂದುಕೊಳ್ಳುತ್ತಿದ್ದರೂ, ಮಲೆಗೆ ಹೋಗಿ ನಾಲ್ಕು ದಿನ ನಿಂತು—ಎಷ್ಟು ಏಲಕ್ಕಿಯಾಗುತ್ತದೆ, ಏನು ಬೆಳೆಯಿಸಬಹುದು—ಎಂದು ತಿಳಿದುಬರುವ ವಾಡಿಕೆಯೂ ಇದ್ದಿಲ್ಲ. ಹಿಂದೆ ಹಿರಿಯ ಬಲ್ಲಾಳರು ಮಲೆಗೆ ಹೋಗಿ ಕುಡಿಯರ ಸಹಾಯದಿಂದ, ಕರ್ಪು ತೆಗೆದು ಆನೆ ಬೀಳಿಸಿ, ಪಳಗಿಸಿ, ತಂದು ತಮ್ಮ ಅರಮನೆಯ ಮುಂದೆ ಕಟ್ಟಿದ್ದುಂಟಂತೆ. ಅದೀಗ ಕತೆಯ ಮಾತಾಗಿದೆ. ಬೀಡಿನ ಮುಂದಣ ಆನೆಲಾಯದ ಪಂಚಾಂಗವೂ ಈಗ ಅಳಿದುಹೋಗಿದೆ. ಈಗಿನ ಬಲ್ಲಾಳರು ಆನೆ ಸಾಕುವ ಮಾತಂತಿರಲಿ, ತಾನೇ ಸಂಸಾರ ನೋಡಿಕೊಂಡಿದ್ದರೆ ಸಾಕಿತ್ತು. ಅಷ್ಟೊಂದು ಸೋತ ಕಾಲ ಅದು.

ಬೀಡಿಗೆ ಸಾಲವಾಯಿತು. ವರ್ಷಾನುವರ್ಷ ಈ ಸಾಲ ಹೆಚ್ಚಿತು. ಅದ

ರಿಂದ ಆಸ್ತಿ ಅಡವಾಯಿತು; ಜತೆಗೆ ಈ ಮಲೆಯೂ ಅಡವಾಯಿತು. ಸಾಲದ ಬಡ್ಡಿಯ ಹಣಕ್ಕೆ ಮಲೆಯ ಏಲಕ್ಕಿ ಹುಟ್ಟುವಳಿ ಗಂಟುಬಿತ್ತು. ದೇಶದಲ್ಲಿ ಏಲಕ್ಕಿಯ ಹಿರಿಮೆ ಹೆಚ್ಚಿತೋ ಏನೋ—ಅದರ ಬೆಲೆ ಏರುತ್ತ ಹೋಗಿ, ಅನೇಕ ಕಡೆಗಳಲ್ಲಿ ಏಲಕ್ಕಿಯನ್ನು ವ್ಯವಸಾಯವಾಗಿ ಬೆಳೆಯಿಸುವ ಕ್ರಮವೂ ರೂಢಿಗೆ ಬಂದಿತು.

ಏಲಕ್ಕಿಗೆ ಬಾಯ್ಬಿಟ್ಟು, ಅಡವುದಾರರು ತಮ್ಮ ದೂತರನ್ನಟ್ಟಿ, ಮಲೆಗೆ ಹೋಗಿ, ಫಸಲಿನ ಕಾಲದಲ್ಲಿ ನಿಂತು, ಕುಡಿಯರು ಫಸಲನ್ನು ವಂಚಿಸಿ ಯಾರು—ಎಂಬ ಅವಿಶ್ವಾಸದಿಂದ, ಅದನ್ನು ತಾವೇ ಹೊರಿಸಿಕೊಂಡು ಬರುವ ಕಾಲವೂ ಬಂದಿತು. ಈ ಕಾಲದ ಜತೆಗೆ, ಗವಿಮನುಷ್ಯರಾಗಿ ಬಾಳುತ್ತಿದ್ದ ಕುಡಿಯ ಮನೆತನಗಳು, ಊರು ಕೇರಿ ಮಾಡಿಕೊಂಡು, ಬೇಸಾಯಕ್ಕೆ ಇನ್ನಷ್ಟು ಅನುಕೂಲವಾಗಲೆಂದೋ ಏನೋ, ಈಗಿರುವ ತಾವಿಗೆ ಬಂದು ನೆಲೆಸಿದರು. ಇಂದು ಹತ್ತು ಮೂವತ್ತು ಮನೆಗಳಾಗಿವೆ ಅಲ್ಲಿ. ಇತ್ತ ಬಲ್ಲಾಳರ ವಂಶದ ಸಾಲದ ಹೊರೆಯೂ ಬಲವಾಗಿ, ಕೊನೆಗೆ ಅವರು ಯಾವುದೋ ತಿರುಮಲಭಟ್ಟರೆಂಬವರಿಗೆ ಮಲೆಯನ್ನು ವಹಿಸಿಕೊಟ್ಟು, ಸಾಲದಿಂದ ಋಣಮುಕ್ತರಾದರು. ತಿರುಮಲಭಟ್ಟರು ಕೊಟ್ಟ ಸಾಲ, ಮೂರು ಸಾವಿರವೋ ಸಾವಿರ ಸಾವಿರವೋ ರೂಪಾಯಿಗಳಷ್ಟೆ. ಆದರೂ ಅವರು 'ನನ್ನ ಹಣಕ್ಕೆಯಾಕೂ ಬೇಡದ ಗೊಂಡಾರಣ್ಯಕೊರಳಿಗೆ ಬಿತ್ತು' ಎಂಬ ಮಾತನ್ನು ಹತ್ತು ಜನರ ಕಿವಿಗೆ ಹಾಕಿಸಿದರು. ಆದರೆ ಅಂತರಂಗದಲ್ಲಿ ತಾವು ದೊರಕಿಸಿಕೊಂಡದ್ದು ಗೊಂಡಾರಣ್ಯವಲ್ಲ—'ನಂದನವನ' ಎಂಬ ಅಭಿಪ್ರಾಯ ಇದ್ದೇ ಇತ್ತು.

ವಿಟ್ಲಸೀಮೆಯಲ್ಲಿದೆ ಅವರ ಮನೆ. ತಾಲೂಕಿನಲ್ಲೆಲ್ಲ ಅವರು ಮಾತು ಭಾರರೆನಿಸಿಕೊಂಡಿದ್ದಾರೆ. ಅವರಿಗೆ ತೆಂಗಿನ ತೋಟಗಳಿವೆ; ಭತ್ತದ ಹೊಲಗಳಿವೆ. ಆದರೂ ವಿಶೇಷ ಬೆಲೆಯಿಲ್ಲದ ಅವುಗಳಿಗಾಗಿ ಆ ದಿನಗಳಲ್ಲಿ ಅವರು ಮನಸೋಲಲಿಲ್ಲ. ತಿರುಗಾಟದ ಹುಚ್ಚು, ಸಾಹಸದ ಹುಚ್ಚು ಅವರದ್ದು. ಹೀಗಾಗಿ ಕೊಡಗು ಸೀಮೆಯ ಬೆಟ್ಟಗಳ ಇಳಕಲುಗಳಲ್ಲಿ ಪರೀಕ್ಷಾರ್ಥವಾಗಿ ನೂರಿನ್ನೂರು ಎಕ್ರೆ ಏಲಕ್ಕಿ ತೋಟ ಮಾಡಿಕೊಂಡರು. ಅಲ್ಲಿಯೇ ಅದರ ಬೆಳೆ, ಬಿತ್ತನೆ, ನೆರಳಿನ ಹಂಚಿಕೆ, ಸಾಗಾಟ, ಮಾರಾಟ ಮೊದಲಾದ ವಿದ್ಯೆ

ಕಲಿತುಕೊಂಡರು. ವ್ಯಾಪಾರದ ಕೆಲಸ ಆಗಿನ ದಿನಗಳಲ್ಲೂ, ಜುಗಾರಿಯ ಸೊಕ್ಕನ್ನೆಲ್ಲ ಅಳವಡಿಸಿಕೊಂಡಿತು. ಒಂದೊಂದು ವರ್ಷ ಏಲಕ್ಕಿಗೆ ಏನೇನೂ ಬೆಲೆಯಿರುತ್ತಿರಲಿಲ್ಲ. ತಮ್ಮ ಸೀಮೆಯಿಂದ ಮಳೆಗಾಲದಲ್ಲಿ ಆಳುಗಳ ಪಟಾಲಮು ಕಟ್ಟಿಕೊಂಡು, ಆ ಅರಣ್ಯಕ್ಕೆ ಹೋಗಿ, ಮಳೆಗಾಲವೆಲ್ಲ ಅಲ್ಲಿ ಕಳೆದು, ತುಲಾಸಂಕ್ರಾಂತಿಯ ಕಾಲಕ್ಕೆ ಫಸಲಿಗೆ ಕೈಯಿಕ್ಕಿ, ಅದನ್ನು ತಂದು, ಒಣಗಿಸಿ, ತಲೆಹೊರೆಯಲ್ಲೇ ಸಾಗಿಸಿ, ಮಂಗಳೂರಿಗೆ ಒಯ್ದು ಮಾರುವಾಗ, ಸುರಿದ ಹಣ ಹತ್ತಕ್ಕೆ ಐದಾಗುವುದೂ ಉಂಟು. ಆದರೆ ಒಂದೊಂದು ವರ್ಷ ಏಲಕ್ಕಿ ಬೆಲೆಗೆ ಅಮಲೇರುವುದುಂಟು; ಆಗ ಐದಿದ್ದುದು ಹತ್ತಾಗುತ್ತದೆ. ಪಟ್ಟು ಹಿಡಿದು ಕುಳಿತರೆ ಹದಿನೈದು—ಇಪ್ಪತ್ತು—ಮೂವತ್ತರ ತನಕವೂ ದರ ಏರಿ, ಮೂರು ವರ್ಷಗಳ ನಷ್ಟ ಒಂದೇ ವರ್ಷದಲ್ಲಿ ತುಂಬಿ ಬರುವುದೂ ಉಂಟು. ಅಂಥ ರೀತಿಯಲ್ಲಿ ತಿರುಮಲಭಟ್ಟರಿಗೆ ತುಂಬ ಉತ್ಸಾಹ. ಅವರಿಗೆ ಕಾಡುತ್ತಿದ್ದ ಚಿಂತೆ ಒಂದೇನೆ—ಆಳುಗಳನ್ನು ಪ್ರತಿವರ್ಷವೂ ಆ ಜ್ವರದ ಸೀಮೆಗೆ ಕಟ್ಟಿಕೊಂಡು ಹೋಗುವುದು; ಅವರಿಗೆ ಬೇಕಾದ ಅಕ್ಕಿ, ಉಪ್ಪು, ಮೆಣಸುಗಳನ್ನು ಸಾಗಿಸಿ ಪೂರೈಸುವುದು—ಇವೆಲ್ಲ ಕಷ್ಟದ ಕೆಲಸ. ಚಳಿಜ್ವರದಲ್ಲೇ ಸಾಗಬೇಕಾದ ಆಟ. ಮೇಲೆ ಅವರು ಕೊಂಡ ಜಮೀನು ವಾಯಿದೆಗೇಣಿಯದು. ಏಲಕ್ಕಿಗೆ ಒಳ್ಳೆಯ ಬೆಲೆಯಿರುವಾಗಲೇ ಆ ವಾಯಿದೆಯು ಮುಗಿಯುತ್ತ ಬಂದಿತು. ಈ ಏಲಕ್ಕಿಯಿಂದ ಗಳಿಸಿದ ಲಾಭವನ್ನೇ ಅವರು ಮಂಗಳೂರು ಬಂದರದಲ್ಲಿ ಭೇಟಿಯಾದ ಮೂಲೆಗುಂಪು ಬೀಡಿನ ಬಲ್ಲಾಳರಿಗೆ ಸಾಲವಾಗಿ ಕೊಟ್ಟರು. ಬಡ್ಡಿಗಾಗಿ ಏಲಕ್ಕಿಯನ್ನೂ ಕೊಂಡು ಮಾರಿದರು. ಹಣದ ಸವಿ ಹತ್ತಿತು; ವ್ಯಾಪಾರದ ರುಚಿ ಏರಿತು—ನೆತ್ತರು ಕುಡಿದ ಹುಲಿಯ ಹಾಗೆ ಅವರಿಗೆ ಏಲಕ್ಕಿಯ ಸವಿ ಹತ್ತಿತು. ಆದರೆ ಸುದೈವಕ್ಕೆ ಮಡಿಕೇರಿಯ ಬೆಟ್ಟದ ತಪ್ಪಲಿನ ತೋಟ ಕೈತಪ್ಪಿದ ಸಮಯವೇ ಬೀಡಿನವರಿಗೆ ಸೇರಿದ ಕಿರಿಮನೆ ಅವರಿಗೆ ದೊರೆಯಿತು. 'ಅದರಿಂದ ನನಗೆ ತುಂಬಾ ನಷ್ಟ. ನಿಮ್ಮ ದಾಕ್ಷಿಣ್ಯಕ್ಕಾಗಿ ತೆಗೆದುಕೊಳ್ಳುತ್ತಿದ್ದೇನೆ' ಎಂದು ತಿರುಮಲಭಟ್ಟರೇ ಆ ಭೂಮಿಯನ್ನು ಕೊಂಡ ಎಂಟು ದಿನಗಳೊಳಗೆ ಮನೆಯ ಸಂದರ್ಶನವನ್ನು ಮಾಡಿದರು ಬಲ್ಲಾಳರು ಆಗಲೇನೆ ಪ್ರಥಮ ಬಾರಿಗೆ ತಿರುಮಲಭಟ್ಟರೊಡನೆ ಹೋಗಿ ತಮ್ಮ ಮನೆಯ ಪರಿಚಯ ಮಾಡಿ

ಕೊಂಡದ್ದೆನ್ನಬೇಕು. ಆ ಮೊದಲೂ ಹೋದವರಲ್ಲ; ಅನಂತರ ಹೋಗ ಬೇಕಾಗಿರಲೂ ಇರಲಿಲ್ಲ.

'ಆ ಮಲೆ ಎಂಥದು; ಈ ಮಲೆ ಎಂಥದು?' ಅನಿಸಿತು ತಿರುಮಲ ಭಟ್ಟರಿಗೆ. ತಾನೊಬ್ಬ ದೊರೆ. ಐನೂರು ಎಕ್ರೆಗೂ ಮಿಕ್ಕಿದ ಕಾಡು, ಏಲಕ್ಕಿ ಗಿಡಗಳ ಹಸುರಿಂದ ಕವಿದಿತ್ತು. ಅದನ್ನು ಊರ್ಜಿತಕ್ಕೆ ತರುವ ಕೆಲಸವೂ ಸುಲಭದ್ದು. ಕಾಡು ದಟ್ಟಣಿಸಿದಲ್ಲಿ, ಕೆಲವು ಮರಗಳನ್ನು ಕಡಿದ ರಾಯಿತು. ನೆಲ ಬರಿದಾದಲ್ಲಿ, ಈಚೆ ಹುಟ್ಟಿದ ಏಲಕ್ಕಿ ಸಸಿಗಳನ್ನು ಕಿತ್ತು ಆಚೆ ನೆಟ್ಟರಾಯಿತು. ಆರೈಕೆ ಬೇಸಾಯಗಳನ್ನು ಕಾಣದ ತೋಟ; ಅದ ರಲ್ಲಿನ ಬಲ್ಲೆಗಳನ್ನು ಸವರಿ, ಏಲಕ್ಕಿ ಗಿಡಗಳಿಗೆ ಸಮನಾದ ಇಂಬು ಮಾಡಿ ಕೊಟ್ಟರೆ—ಫಸಲು ಚೆನ್ನಾಗಿ ಬಂದೀತು. ಅದೊಂದು ಲಾಭವಲ್ಲ ದುಡಿವ ಜನಗಳು—ಅಲ್ಲಿಯೇ ನೆಲೆ ನಿಂತ ಕುಡಿಯರು ಬಿಟ್ಟದಿಂದ ಆಳುಗಳನ್ನು ಸಾಗಿಸಬೇಕಾಗಿಲ್ಲ, ಅವರಿಗೆ ಅಕ್ಕಿಯನ್ನೂ ಒದಗಿಸಬೇಕಾಗಿಲ್ಲ. ಕುಮರಿ ಬೆಳೆಯುವವರು ಕುಡಿಯರು, ಬೇಕಾದರೆ ನಾಲ್ಕು ಚೀಲ ಬತ್ತ ಅವ ರಿಂದಲೇ ತರಬಹುದು. ಮಲೆಯೋ! ಆ ಬೆಟ್ಟದ ಸೆರಗಿಂದ ಆ ಕಡೆ ಈ ಕಡೆ ನೋಡಿದರೆ ಸಹ್ಯಾದ್ರಿಯ ಮೂಲೆಯ ತನಕ ಚಾಚಿದ ಬೆಟ್ಟದ ಸೆರಗೆಲ್ಲ ತಮ್ಮದೇ. ಹಣವಿದ್ದರೆ, ಸಾಹಸವಿದ್ದರೆ ತಾನೊಂದು ಆಧಿಪತ್ಯವನ್ನೇ ಅಲ್ಲಿ ಸ್ಥಾಪಿಸಬಹುದು—ಎಂದೂ ಅನಿಸಿತು. ಆದರೂ ಮುಖಚರ್ಯೆಯಿಂದ ಬಲ್ಲಾಳರೆದುರಿಗೆ ತೋರಿಸಿಕೊಳ್ಳಲಿಲ್ಲ. ಅಸಮಾಧಾನದ ಬಣ್ಣ ಹಾಕಿ ಕೊಂಡೇ ಬೆಟ್ಟ ಇಳಿದರು ಅವರ ಜತೆಗೆ. ಬಲ್ಲಾಳರು ಕೆಂಚ, ಬೂದ, ತಿಮ್ಮ ಒಬ್ಬೊಬ್ಬರನ್ನೇ ಮಾತನಾಡಿಸಿ, ತಮಗೆ ಸಲುವ ಗೌರವ ನಾಳಿನಿಂದ ಈ ಹೊಸ ಧನಿಯರಿಗೆ ಸಲಬೇಕೆಂದು ಹೇಳಿದ ಮೇಲೆಯೇ ಇಳಿದರು—ಭಾರ ವಾದ ಮನಸ್ಸಿನಿಂದ. ವಯಸ್ಸಾಗಿತ್ತು ಅವರಿಗೆ. ತಮ್ಮ ಮುಂದಿನ ಹಕ್ಕು ದಾರನಾದ ಅವರ ಅಳಿಯ, ಅವರ ಮೆಚ್ಚಿಗೆಗೆ ಬಾರದವನಾಗಿದ್ದ. ಹೀಗಾಗಿ 'ಏನಾದರೇನು?' ಎಂದುಕೊಂಡು ಅವರು ತಮ್ಮ ಮನೆಯನ್ನು ಸೇರಿದರು.

ಮಲೆಯನ್ನು ಪಡೆದ ಆ ತಿಂಗಳಿನಲ್ಲಿ ತಿರುಮಲಭಟ್ಟರ ಕಾರುಭಾರು ಗಳು ತೊಡಗಿದುವು. ಊರಿನ ಆಳುಗಳನ್ನು ತಂದರು. ಕುಡಿಯರನ್ನು ಕರೆಯಿ ಸಿದರು. ಹತ್ತಿಯಡ್ಕದಿಂದ ಪರಿವಾರ ಸಮೇತರಾಗಿ ಕಾನನ ಹೊಕ್ಕರು.

ಬಡಗಿ, ಓಡಾರಿಗಳನ್ನು ಕಟ್ಟಿಕೊಂಡೇ ಮಲೆಯ ಮಧ್ಯದಲ್ಲಿ ಕುಡಿಯರ ಕೇರಿಗೆ ಸಮೀಪದಲ್ಲಿ, ನೀರಿನ ದಂಬೆಯೊಂದು ಹರಿಯುವಲ್ಲಿ, ಪಡುವಣ ಬಾನು ತೆರವಾಗಿ ಕಾಣಿಸುವಲ್ಲಿ ನೆಲ ಸವರಿಸಿದರು. ತಮ್ಮ ಮನೆಗೆ ಅಸ್ತಿವಾರ ಹಾಕಿಸಿದರು. ಮಣ್ಣಿನ ಕಲಸ, ಮರಗೆಲಸ ತೊಡಗಿತು. ಮೂರು ತಿಂಗಳ ಅಧಿಯಲ್ಲಿ ಚೆಲುವಿನ ಮಣ್ಣಿನ ದಪ್ಪನಾದ ಗೋಡೆಯುಳ್ಳ ಮನೆಯೊಂದು ಮೇಲಕ್ಕೆದ್ದಿತು. ಮುಗ್ಗಲಿಗೆ ಒಂದು ಹಟ್ಟಿಯೂ, ಬಚ್ಚಲೂ ನಿರ್ಮಾಣವಾದುವು. ಅದನ್ನು ಕಂಡು ಕುಡಿಯರಿಗೆ ಹಿಡಿಸಲಾರದ ಆಶ್ಚರ್ಯ ಸಂತೋಷ! ಹೊಸ ಧನಿಗಳು ತಮ್ಮ ಎಡೆಯಲ್ಲೇ ವಾಸವಾಗಿರಲು ಆ ಮನೆ ಕಟ್ಟಿಸಿದ್ದನ್ನು ಕಂಡು ಅವರಿಗೂ ಧೈರ್ಯ. ಧನಿಗಳು ಮಲೆಗೆ ಬಂದು ಹೋಗುವಾಗಲೆಲ್ಲ ಗುಂಡುಹಾರಿಸುವ ತುಪಾಕಿ ತರುತ್ತಿದ್ದರು; ಕುಡಿಯರು ತುಪಾಕಿ ಕಂಡುದೇ ಅದು ಮೊದಲು. ಆಳುಗಳಿಂದ ಒಡಗೂಡಿ, ದೊರೆಯ ಮಗನಂತೆ ಬರುತ್ತಿದ್ದರು; ಜತೆಗೆ ತೈನಾತಿಯೊಬ್ಬ. ನಾಲ್ಕು ಮೈಲಿನ ಕಾಡಿನ ದಾರಿ ಸವರಿ, ಸಜ್ಜಾಗಿ ಮಾಡಿಸಿದರು. ಒಂದು ದಿನ ಸಾಮಾನ್ಯಮಾದೊಂದು ಕೆಂಪು ಕುದುರೆಯನ್ನು ಏರಿಕೊಂಡು ಬಂದರು. ಮಡಿಕೇರಿಯ ಮಲೆಯಲ್ಲಿ ತಟ್ಟು, ಟಾಕಣ ಏರಲು ಕಲಿತ ಅವರು, ಅಶ್ವಾರೋಹಿಗಳಾಗಿ, ಬೆಟ್ಟದ ದೊರೆಯಂತೆ ಬಂದರು; ಮೊದಲ ಮಳೆಗಾಲದಲ್ಲಿಯೇ ಬಿಡಾರವನ್ನೆಸಗಿದರು. ಕಣಿವೆಯ ಕೆಳಗಿನ ಒಬ್ಬ ಆಳು, ಒಬ್ಬ ಅಡುಗೆಯವ, ಕರೆಯುವ ದನ, ಎಮ್ಮೆಗಳ ಸಹಿತವಾಗಿ ಬಂದು ಅಲ್ಲಿ ಬಿಡಾರ ಹೂಡಿದರು. ಧನಿಗಳು ಬಂದಮೇಲೆ— ಕುಡಿಯರ ಜೀವನ ಒಂದು ವಿಧದಿಂದ ಹಸನುಗೊಂಡಿತೆನ್ನಬಹುದು. ಅವರ ಮೇಲ್ಪಂಕ್ತಿಯಿಂದ, ಚಿಮಣಿ ಎಣ್ಣೆಯ ದೀಪ ಉರಿಸಲು ಕಲಿತರು ಮಳೆಗಾಲದ ಒಂದೆರಡು ತಿಂಗಳು ಧನಿಯರು ಅಲ್ಲೇ ಬಿಡಾರ ಹೂಡುವುದಲ್ಲದೆ ವ್ಯವಸ್ಥಿತವಾದ ಏಲಕ್ಕಿ ಬೇಸಾಯವನ್ನು ತಾವೇ ನಿಂತು ಅವರಿಗೆ ಹೇಳಿಕೊಡುತ್ತಿದ್ದರು. ಏಲಕ್ಕಿ ಗಿಡಗಳ ಎಡೆಯಲ್ಲಿ ಬಿತ್ತ ಬೀಳಲು, ಮತ್ತೊಂದು ಬೆಳೆಯದಂತೆ ಸವರುವ ಕೆಲಸ ಜನರಿಂದ ಮಾಡಿಸುತ್ತಿದ್ದರು.

ಈ ಮಳೆಗಾಲದ ವೇಳೆ ಕುಡಿಯರಿರುವುದು ಕೇರಿಯಲ್ಲಲ್ಲ; ತಮ್ಮ ಹೊಲಗಳ ಬಳಿಯಲ್ಲಿ. ಅಲ್ಲಿಂದ ಕೆಲವರು ಮಾತ್ರ ಈ ಕೆಲಸಕ್ಕೆ ಬಂದು ಹೋಗಬೇಕಾಗುತ್ತಿದ್ದರೂ ಅವರು ಬಿಟ್ಟಿಯ ಸೇವೆ ಮಾಡಬೇಕಾಗಿರಲಿಲ್ಲ.

ಕಾಸನ್ನೋ ಹೊಗೆಸೊಪ್ಪನ್ನೋ ಇನ್ನೇನಾದರು ಒಡವೆ ವಸ್ತುಗಳನ್ನೋ ಕೊಟ್ಟೋ ಕೆಲಸ ಮಾಡಿಸುತ್ತಿದ್ದರು. ಹೀಗೆ ಜನಗಳ ವಿಶ್ವಾಸವನ್ನೂ ದೊರಕಿಸಿಕೊಳ್ಳುತ್ತಿದ್ದರು.

ಏಲಕ್ಕಿ ಹೆಕ್ಕುವ ವೇಳೆಗೆ, ಅದನ್ನು ಒಣಗಿಸುವ ವೇಳಗೆ ಕುಡಿಯರೆಲ್ಲರು ಭಟ್ಟರ ಮನೆಯ ಸಮೀಪದ ಕೇರಿಗೆ ಬಂದೇ ವಾಸ ಮಾಡುತ್ತಾರೆ. ಧನಿಯರ ಮನೆಗೆ ಹೋಗಿ, ಒಂದು ತುಂಡು ಹೊಗೆಸೊಪ್ಪು ಬೇಡುವುದರಲ್ಲಿ, ಆ ಗಂಡಸು, ಹೆಂಗಸರಿಗೊಂದು ಚಪಲ, ಹಿಗ್ಗಿನಿಂದ ಕೊಡುವುದರಲ್ಲಿ ಧನಿಗೂ ಒಂದು ಉತ್ಸಾಹ. ಅಷ್ಟು ಮಾತ್ರವಲ್ಲ—ಉತ್ಸಾಹಿಗಳಾದ ತರುಣರಿಗೆ ಅವರು ಕೋವಿ ಹಿಡಿಯುವುದನ್ನು ಕಲಿಸಿದರು. 'ನಿಮ್ಮ ಪಗರಿ, ಬಿಲ್ಲುಗಳನ್ನು ಒಲೆಗೆ ಹಾಕಿ ಇದರ ಮುಂದೆ' ಎಂದು ಪರಿಹಾಸ್ಯ ಮಾಡುತ್ತಿದ್ದರು. ಅವರ ಕುಮರಿ ಬೆಳೆಗೆ ಆನೆಗಳ ಹಿಂಡು ಬಂದು ಹಾನಿ ಮಾಡಿದಾಗ ಕರ್ಪುತೋಡಿಸಿ, ಒಂದಾನೆಯನ್ನು ಹಿಡಿಸಿಯೂಬಿಟ್ಟರು. ಆದರೆ ಮುಂದಿನ ದಾರಿ ಕಾಣದೆ ಹಿಡಿದ ಆ ಆನೆಯನ್ನು ಬಿಡಲೂಬೇಕಾಯಿತು. ಕೇರಳಕ್ಕೆ ಹೋಗಿ ಮಾವುತನೊಬ್ಬನನ್ನು ಕರೆದುತಂದು, 'ಆನೆ ಪಳಗಿಸುವ ವಿದ್ಯೆ ನಿಮಗೆಲ್ಲ ಕಲಿಸುತ್ತೇನೆ' ಎಂದು ಅಂದರು. ಇಂಥ ಧನಿಯ ವಿಚಾರದಲ್ಲಿ, ಮೊದಲು ಮೊದಲು ಆತ್ಯಾದರ ಪ್ರಾಪ್ತವಾಯಿತು—ಕುಡಿಯರೆಲ್ಲರಿಗೆ

ವರ್ಷಂಪ್ರತಿ ಬೇಸಿಗೆಯಲ್ಲಿಯೂ ಒಂದು ನಾಲ್ಕು ದಿನ ಇದ್ದು ಹೋಗತೊಡಗಿದರು ಅವರು. ಅವರ ಮೆಚ್ಚಿನ ಜನಗಳಲ್ಲಿ ಕರಡಿ ತುಕ್ರ ಒಬ್ಬನೆನಿಸಿದ. ಆಪ್ತಾಲೋಚನೆಗಳಲ್ಲೂ, ಬೆಳೆಯ ಸುಖದುಃಖಗಳನ್ನು ಚರ್ಚಿಸುವುದರಲ್ಲೂ ತುಕ್ರನನ್ನು ಅವರು ಕೇಳುತ್ತಿದ್ದರು. ಈ ಗೆಳೆತನ ಕ್ರಮೇಣ—ಅವರ ಕೆಲವೊಂದು ಲಾಲಸೆಗಳ ತೃಪ್ತಿಗೂ ಅನುಕೂಲವಾಯಿತು. ಕುಡಿಯ ತುಕ್ರ ಎಷ್ಟೋ ಬಾರಿ ವಿಟ್ಲದಲ್ಲಿರುವ ಧನಿಗಳ ಮನೆಯ ತನಕ ಹೋಗಿ ಬಂದಿದ್ದ. ವಿಟ್ಲದಲ್ಲಿರುವ ಧನಿಯ ಪ್ರೇಯಸಿಯ ಮನೆಗೆ ಅವರ ಜತೆಗೆ ಹೋಗಿಬಂದುದೂ ಉಂಟು. ಈ ಪರಿಚಯದ ಫಲವಾಗಿಯೋ ಏನೋ, ಧನಿಗಳು ಮಲೆಗೆ ಬಂದಾಗ ಅವರ ಮಾನಸಿಕ ಬಯಕೆಗಳಿಗೆ ಆತ ನೆರವಾಗತೊಡಗಿದ. ಬೂದ, ತಿಮ್ಮ ಅನ್ನುತ್ತಾರೆ 'ತುಕ್ರ—ಧನಿಗಳಿಗೆ ಹೆಣ್ಣು ಒದಗಿಸುವ ಜನ' ಎಂದು. ಕೆಂಚ ಇಂಥ ಮಾತುಗಳನ್ನು ಎಂದೂ ನಂಬಿದವನಲ್ಲ.

ಕಾಲಕ್ರಮದಲ್ಲಿ ತುಕ್ರನ ವಿಲಾಸ ಲಹರಿಗಳಿಗೆ ಬಲಿಯಾದವರಲ್ಲಿ, ಕೆಂಚನ ಸೊಸೆ; ಪತಿವಿಯೋಗಗೊಂಡ ಚಿಕ್ಕಿಯೂ ಒಬ್ಬಳು. ಕೆಂಚನಿಗೆ ತುಕ್ರನನ್ನು ಕಂಡರೆ ಅಷ್ಟೊಂದು ಸ್ನೇಹವೆಂದಲ್ಲ. ಆದರೆ ಅವನು ಬಲಿಷ್ಠನೆಂಬುದರಿಂದ ಅವನೊಡನೆ ಪ್ರತ್ಯಕ್ಷ ವೈರಕ್ಕೆ ಎಂದೂ ಎಡೆಕೊಟ್ಟವನಲ್ಲ. ಚಿಕ್ಕಿ-ತುಕ್ರರ ಸ್ನೇಹಮಯ ಜೀವನದ ಸಂಗತಿ ಅವನಿಗೆ ತಿಳಿದಿರಲೂ ಇಲ್ಲ. ತುಕ್ರನ ಮನಸ್ಸಿನಲ್ಲಿ—ಚಿಕ್ಕಿಯನ್ನು ತಾನು ಮದುವೆಯಾಗಬೇಕೆಂಬ ಹಂಬಲವೂ ಉದಯಿಸಿತ್ತು. ಅವಕ್ಕೆ ಒಪ್ಪಲಾರದ ಹೊರೆ ಎನಿಸಿದ್ದು ಅವಳ ಹುಡುಗ ಕರಿಯ. ಅಲ್ಲದೆ ಕೆಂಚನ ಭೀತಿಯೂ ಅದರ ಜತೆಗೆ ಸೇರಿತ್ತು. ಹೀಗಾಗಿ ಗುಪ್ತ ಪ್ರಣಯದಲ್ಲೇ ಆತ ತೃಪ್ತಿಪಡಬೇಕಾಯಿತು. ಅದೊಂದು ದಿನ ಚಿಕ್ಕಿ ಅವನನ್ನು ಬಲವಂತಮಾಡಿದಳು. 'ಮಾನ ಕಳೆದುಕೊಂಡಿರಲಾರೆ, ಮದುವೆಯಾಗುವುದಾದರೆ ಒಡನೆಯೇ ಆಗಬೇಕೆಂದು' ಬಾಯಿಬಿಟ್ಟು ಬೇಡಿದಳು! ಅಕೆ ಗರ್ಭಿಣಿಯಾಗಿದ್ದಾಳೆ; ಆ ವಿಚಾರವನ್ನು ತಿಳಿದ ತುಕ್ರ ಕಡು ಚಿಂತೆಗೆ ಗುರಿಯಾಗಿರುವಾಗಲೇ, ಕೆಂಚ ಅವನನ್ನು ಕರೆದು, ತನಗಾದೊಂದು ಸ್ವಪ್ನದ ಭೀತಿಯನ್ನು ತಿಳಿಸಿದ.

ಆ ಭೀತಿ, ತುಕ್ರನ ಅಂತರಂಗದ ಭೀತಿಯೂ ಆಗಿ ಪರಿಣಮಿಸಿತು. ಇವರು ಕುಳಿತು ಚರ್ಚಿಸುತ್ತಿದ್ದ 'ಗುಸುಗುಸು' ಮಾತುಗಳು ಚಿಕ್ಕಿಯ ಕಿವಿಗೂ ಬಿದ್ದುದರಿಂದ, ಕೆಂಚನಿಲ್ಲದಾಗ, ಮಾವ ಅಂದುದೇನೆಂದು ತಿಳಿಯಲು ಹಂಬಲಿಸಿದಳು; ಸಮಯ ಸಾಧಿಸಿ ತುಕ್ರನನ್ನು ಆ ವಿಷಯವಾಗಿ ಕೇಳಿಯೂ ಕೇಳಿದಳು. ತನ್ನ ಮಾತಿನ ಪರಿಣಾಮ ಏನಾದೀತೆಂದು ತಿಳಿಯಲಾರದ ತುಕ್ರ ಅದನ್ನು ಹೇಳಿದ. ಕೆಂಚನಿಂದ ಬಂದ ಕಲ್ಕುಡನ ಭೀತಿ ತುಕ್ರನನ್ನು ಬೆದರಿಸಿತು; ಅಲ್ಲಿಂದ ಹೆಂಗಸಾದ ಚಿಕ್ಕಿಯ ಮನಸ್ಸನ್ನು ಅದು ಹೊಕ್ಕಮೇಲೆ ಕೇಳಬೇಕೇನು? ಕ್ಷಣದಲ್ಲಿ ಭೂತಾಕಾರವನ್ನೇ ತಾಳಿತು ಅದು! ಮನೆಗೆ ಮರಳಿದಳು. ಥರಥರಿಸತೊಡಗಿದಳು ಯಾವಜ್ಜೀವ! ತನ್ನ ಒಂದೇ ಒಂದು ಮಗುವನ್ನು—ಮುದ್ದಿನ ಕರಿಯನನ್ನು ಬಲಿ ಕೇಳುವ ಕಲ್ಕುಡನ ಭಯಾನಕ ರೂಪು ಕಣ್ಣೆದುರಿಗೆ ನಿಂತಂತೆ ಕಾಣಿಸಿತು ಅವಳಿಗೆ. ಆ ದಿನ ಅವಳು ಕೆಲಸಕ್ಕೇ ಹೋಗಲಿಲ್ಲ. ಕೆಂಚ ಕೇರಿಯ ಜನಗಳ ಜತೆಗೆ ಕುಮರಿ ಅಗತೆಗೆ ಹೋಗಿದ್ದ; ಕರಿಯ ಅಜ್ಜನನ್ನು ಹಿಂಬಾಲಿಸಿದ. ನೀರು ತರುವ

ಗಡಿಗೆಯನ್ನು ಹಿಡಿದು ಹೊರಟಳು ಚಿಕ್ಕಿ. ಚಿಂತೆ ಭೀತಿಗಳಿಂದ ತಬ್ಬಿಬ್ಬಾಗಿ ಹೆಜ್ಜೆಹಾಕುತ್ತ, ಕೇರಿಗೆ ಸಮೀಪದ ನೀರಿನ ಚಿಲುಮೆಗೆ ಹೋಗಿ ನಿಂತಳು. ಮೇಲಿಂದ ಸುರಿಯುವ ದಂಬೆ ನೀರಿಗೆ ಗಡಿಗೆ ಇರಿಸಿ, ಅದು ತುಂಬುವ ತನಕ ನಿಂತಿರಲಾರದೆ—ತುಸು ಈ ಕಡೆಗೆ ಸರಿದು ಬಂದಳು. ಇನ್ನೊಂದು ಬಂಡೆಯ ಮೇಲೆ ನಿಂತು ಪಡುವಣಕ್ಕೆ ಮುಖ ಮಾಡಿ ನಿಂತಳು. ಬಾನಿನಿಂದ ಎದುರಿನ ಬೆಟ್ಟಕ್ಕೆ ಕಣ್ಣು ಹಾಯ್ದಿತು. ಅಲ್ಲಿಂದ ಕೆಳಗಿನ ಕೊರಕಲಿಗೂ ಹರಿಯಿತು. ಅದೇ ಕೊರಕಲ ಅಂಚೊಂದರಲ್ಲಿತ್ತು—ಕಲ್ಕುಡನ ಗುಡಿ. ಅದರ ನೆನಪು ಅರಳಿತು. ಗುಡಿ ಕಾಣಸದಿದ್ದರೂ ಗುಡಿಯನ್ನು ಕವಿದ ಸಸ್ಯವೃಂದ ಕಾಣಿಸಿತು. ಅದೇ ಘೋರ ಆಕೃತಿಯೊಂದಾಗಿ ಬೆಳೆಬೆಳೆದು, ತನ್ನನ್ನೇ ಕಲ್ಕುಡ ದಿಟ್ಟಿಸಿ ನೋಡುವಂತೆ ಚಿತ್ರಿಸಿಕೊಂಡಳು ಮನಸ್ಸಿನಲ್ಲಿ. ಎದೆ ಬಡಿಯತೊಡಗಿತು. 'ತನ್ನ ಮಗುವಿನ ಬಲಿಯೇ' ಎಂಬ ಭೀತಿಯಾಯಿತು. ಏನು ಮಾಡಿದಳೋ, ಏನು ಆಯಿತೋ—ಬೆದರಿ ಜಿಗಿದಳು ತನ್ನಷ್ಟಕ್ಕೆ. ನಿಂತ ಕಾಲು ನೀರ ಪಸೆ ಅಂಟಿದ ಬಂಡೆಯ ಪಾಮಾಜಿಯಿಂದಾಗಿ ಜಾರಿತು. ಮೈಯ ತೋಲ ತಪ್ಪಿತು. ಉರುಳಿ ಬಿದ್ದುದೇ ಕೆಳಗಿದ್ದ ಮೂರು ನಾಲ್ಕು ಆಳದ ಕಂತದ ಹೊಂಡಕ್ಕೆ. ಕೆಳಗಣ ಬಂಡೆಯ ತಳಕ್ಕೆ ಅಪ್ಪಳಿಸಿ ಬಿದ್ದವಳು ತಿರುಗಿ ಏಳಲಿಲ್ಲ. ಹಾಗಾಯಿತು ಚಿಕ್ಕಿಯ ಮೃತ್ಯು! ಸಂಜೆಗೆ ಕುಮರಿಗೆ ಹೋದ ಜನರು ಬಂದರು. ಕೇರಿಗೆ ಆ ದಾರಿಯಾಗಿಯೇ ಸರಿದು ಹೋದರು. ನೀರಿಗೂ ಬಂದರು. ಚಿಕ್ಕಿ ಇಟ್ಟ ಗಡಿಗೆ ತುಂಬಿ ತುಳುಕುವುದನ್ನು ಕಂಡರು. ಅವಳನ್ನು ಕೂಗಿದರು, ಕರೆದರು; ಆಚೀಚೆ ಹುಡುಕಿದರು. ಕೆಳಗೂ ಇಣಿಕಿ ನೋಡಿದರು. ಚಿಕ್ಕಿಯ ಶವ ಕಂಡಿತು. ಇಷ್ಟೆಲ್ಲ ಎರಡು ದಿನಗಳ ಹಿಂದಿನ ಕತೆ—ಈಗ ಆ ಶವದ ಸಂಸ್ಕಾರವೂ ಆಯಿತು. ಕೆಂಚನ ಬಾಳಲ್ಲಿ ಸಂಪೂರ್ಣ ಕಗ್ಗತ್ತಲೆಯೂ ತುಂಬಿದ್ದಾಯಿತು! ಕರಿಯ ಮುಕ್ಕಾಲು ಮೂರುವೀಸ ಪಾಲು ಅನಾಥನಾದುದೂ ಆಯಿತು!

ಪ್ರೇಯಸಿಯನ್ನು ಕಳೆದುಕೊಂಡ ನೋವು ತುಕ್ರನಿಗೆಷ್ಟಿತ್ತೋ ಅದರ ನಾಲ್ಮಡಿ ಭೀತಿಯೂ ಎದೆಯಲ್ಲಿ ತುಂಬಿತ್ತು. ಗರ್ಭಿಣಿಯಾದ ಚಿಕ್ಕಿ ಸತ್ತುದರಿಂದ ನಿಜಕ್ಕೂ ಕಲ್ಕುಡ ಕೊಂಡದ್ದು ಒಂದು ಜೀವವನ್ನಲ್ಲ, ಎರಡು ಜೀವಗಳನ್ನು ಎಂದು ಅವನ ಪಾಲಿಗೇನೋ ಅನಿಸುತ್ತದೆ. ಆದರೆ ಅಂಥ ಕಲ್ಕು

ಡನ ಸೇಡನ್ನು ನೆನೆಯುವಾಗ, ನಾಳೆ ಅವನ ವಕ್ರದೃಷ್ಟಿ ತನ್ನ ಮೇಲೂ ಬಿದ್ದೀತು—ಎಂಬ ಭೀತಿ ಉಂಟಾಗಿದೆ. ತುಂಬಿದ ದುಃಖ ಒತ್ತಟ್ಟು; ವಿಸ್ತರಿಸುವ ಭೀತಿ ಒತ್ತಟ್ಟು. ಇವುಗಳಿಂದ ಧೂಳೀಧ್ವಂಸವಾಗಿದೆ—ಅವನ ಎದೆಗಾರಿಕೆ. ಬಾಯಿ ಬಿಡುವುದಕ್ಕಿಲ್ಲ; ಯಾವ ಮಾತನ್ನೂ ಯಾರಲ್ಲೂ ಹೇಳುವುದಕ್ಕಿಲ್ಲ. ಕುಮರಿಯ ಕೆಲಸಕ್ಕೆ ಹೋದರೆ ಕೈಯಿಂದ ಗುದ್ದಲಿ ಕಳಚಿ ಬೀಳುತ್ತದೆ. ಒಂದೇ ಚಿಂತೆ ಅವನಿಗೆ—ಹಿರಿಯ ಮಲೆಗೆ ಹೋಗಿ, ಅಲ್ಲಿನ ಜನರ ಕೈಕಾಲು ಹಿಡಿದಾದರೂ ಆದಷ್ಟು ತೀವ್ರ ಕಲ್ಕುಡನಿಗೆ ತೃಪ್ತಿಯಾಗುವಷ್ಟು ಹರ, ಕೋಳಿ, ಹಂದಿ, ಯಾವುದು ಕೇಳುತ್ತಾನೋ ಅದನ್ನು ಸಲ್ಲಿಸಿ, ತನ್ನ ಜೀವವನ್ನು ಕಾಪಾಡಿಕೊಳ್ಳಬೇಕೆಂಬ ಚಿಂತೆ.

ಚಿಕ್ಕಿಯ ಉತ್ತರಕ್ರಿಯೆಗಳು ಹೇಗೋ ಹೇಗೋ ಮುಗಿದವು. ಕೆಂಚ, ಕರಿಯನಷ್ಟೇ ನಿಸ್ಸಹಾಯನಾಗಿ ಮಗುವಾದ. ಈ ಏಳು ದಿನಗಳಲ್ಲಿ ಹತ್ತು ವರ್ಷಗಳ ಆಯುಷ್ಯವೇ ಅವನಿಂದ ಕರಗಿಹೋದಂತೆ ಕಾಣಿಸುತಿತ್ತು. ಅವನ ಮೈ ಮನಗಳೆರಡೂ ನುಜ್ಜುಗುಜ್ಜಾದುವು. ಆ ನೋವು, ದುಃಖ ಕಟ್ಟಿಕೊಂಡು ಚಿಕ್ಕಿಯ ಬೊಜ್ಜಕ್ಕೆ ಸಾಕ್ಷಿಯಾಗಬೇಕಾಯಿತು ಅವನು. ನೆರೆಯಲ್ಲಿ ಕೇರಿಯ ಜನಗಳಿದ್ದಾರೆ, ಮದುಕದಲ್ಲಿ ಸಮಭಾಗಿಯಾಗಲು ತುಕ್ರನೂ ಇದ್ದಾನೆ. ತುಕ್ರ ಎಷ್ಟು ಎಷ್ಟು ಹೆಚ್ಚಾಗಿ ಅವನ ಮನೆಗೆ ಬಂದು ಹೋಗತೊಡಗಿದನೋ ಅಷ್ಟು ಅಷ್ಟು ಸಲಿಗೆ ಬೆಳೆಯಿತಾದರೂ, ಒಳಗಿಂದೊಳಗೆ ಕೆಂಚನ ಮನಸ್ಸಿನಲ್ಲಿ 'ತುಕ್ರನಿಂದಾಗಿ ಕರಿಯನಿಗೆ ಕ್ಷೇಮವಿಲ್ಲ'—ಎಂದೇ ಕೆಂಚಗೆ ತೋರುತಿತ್ತು. ಕಾರಣವಿಷ್ಟೆ—ಕರಿಯ ಬೆಳೆದು ದೊಡ್ಡವನಾಗಬೇಕಾದರೆ ಇನ್ನೂ ಹತ್ತು ವರ್ಷಗಳಾದರೂ ಸರಿಯಬೇಕು. ಹತ್ತು ದಿನಗಳಲ್ಲಿ ಅಷ್ಟೊಂದು ನುಗ್ಗಾದ ತಾನು, ಇನ್ನು ಹತ್ತು ವರ್ಷಕಾಲ ಬದುಕಿ ಉಳಿದು ತನ್ನ ಗುರಿಕಾರಿಕೆಯ ಪಟ್ಟ ಅವನಿಗೊಪ್ಪಿಸುವುದು ಸಾಧ್ಯವೇ? ಹುಡುಗನಾದ ಕರಿಯನ ಮಾತನ್ನು ಕೇರಿಯವರು ಕೇಳುವುದುಂಟೇ—ಎಂಬ ಭೀತಿ, ಸಂಕೋಚ ಇವೆರಡೂ ಕೆಂಚನಲ್ಲಿ ಉಂಟಾಗತೊಡಗಿತು. ಇಷ್ಟಾಗುವ ಮೊದಲೇ ತಾನು ಸತ್ತರೆ, ಈ ಕೂಸನ್ನು ಯಾರ ಕೈಯಲ್ಲಿ ಇರಿಸಲಿ! ಎಂಬ ಚಿಂತೆಯೂ ಉಂಟಾಯಿತು. ತುಕ್ರ ಬಂದು ತೀರ ಸ್ನೇಹ ನಟಿಸುತ್ತಾನೆ, ನಿಜ. ಸ್ನೇಹದ ಮಾತುಗಳನ್ನು ಆತ ನುಡಿದರೂ ಅವನ ವಿಷಯದಲ್ಲಿ ಅಷ್ಟು ವಿಶ್ವಾಸ ಉಂಟಾ

ಗಲಾರದು. ಕರಿಯು ಹೋದರೆ ಕೇರಿಯ ಪಟ್ಟ ತುಕ್ರನಿಗೇ ಬರಬೇಕಾಗುತ್ತದೆ. ವಯಸ್ಸಿನಲ್ಲಿ ಅವನಿಗೆ ಹಿರಿಯರೂ ಇದ್ದಾರೆ. ಆದರೂ ಜನಗಳ ಬೆಂಬಲ, ಅಧಿಕಾರಕ್ಕೆ ತಕ್ಕ ಧೈರ್ಯ, ಸ್ಥೈರ್ಯ ಇರುವುದು ಅವನೊಬ್ಬನಲ್ಲಿಯೆ. ತನಗೆ ಪ್ರತಿಸ್ಪರ್ಧಿಯಾಗಿ ನಿಲ್ಲುವ ಕರಿಯನನ್ನು ಆತ ಅಕ್ಕರೆಯಿಂದ ಬೆಳೆಯಿಸಿಕೊಂಡು ಬಂದಾನೆಯೇ? ಆ ನಂಬಿಕೆ ಅವನಿಗಿಲ್ಲ. ಅದಕ್ಕಾಗಿಯೇ ಕೇರಿಯನ್ನು ಬಿಟ್ಟು ಘಟ್ಟ ಇಳಿಯುವ ಮೊದಲು, ಬೂದನನ್ನು ಕರೆಯಿಸಿಕೊಂಡ. ಬೂದ ದುಡುಕಿನವ. ಅಷ್ಟೇ ಅವನ ದೋಷ. ಮಾತಿನಲ್ಲಿ ಸಿಡುಕು ಹೆಚ್ಚು. ಆದರೆ ಕಂಡದ್ದನ್ನು ಬಚ್ಚಿಡುವವನಲ್ಲ. ಕಪಟ ಸಾಧಿಸುವವನಲ್ಲ. ವಿಶ್ವಾಸಕ್ಕೆ ತಕ್ಕ ವ್ಯಕ್ತಿ. ಬೂದ–ತುಕ್ರರ ಎಷ್ಟೋ ಕಾಳಗಗಳಲ್ಲಿ, ಬೂದನ ಕೋಪಕ್ಕೆ ತಣ್ಣೀರೆರಚಿ 'ತಾಳಿಕೋ, ತಳೆದುಕೋ, ಸಣ್ಣದನ್ನು ಅಷ್ಟು ದೊಡ್ಡದು ಮಾಡಬಾರದು' ಎಂದು ಬುದ್ಧಿ ಹೇಳುತ್ತಿದ್ದವ ಕೆಂಚನೇ. ಗುರಿಕಾರನ ಮಾತಿಗೆ ತಲೆತಗ್ಗಿಸಿಕೊಂಡು, ಮನಸ್ಸಿಗೆ ಒಪ್ಪದಿದ್ದರೂ, ಅವನ ಹೇಳಿಕೆಯಂತೆ ನಡೆದುಕೊಳ್ಳುತ್ತಿದ್ದವ ಬೂದ. ಈಗ ತಾನು ಸುಬ್ರಹ್ಮಣ್ಯಕ್ಕೆ ಕೂಸನ್ನು ಕರೆದುಕೊಂಡು ಹೋಗುವ ಹಂಬಲ ಉಂಟಾಗಿದೆ. ಹೋಗಬೇಕು ನಿಜ. 'ಹೋಗುತ್ತೇನೆ' ಎಂದು ಬಹಿರಂಗವಾಗಿ ನುಡಿದರೆ ಹೋಗುವ ಕಾರಣವನ್ನು ಕೇರಿಯವರ ಮುಂದೆ ಹೇಳಬೇಕಾಗುತ್ತದೆ. ಕಲ್ಕುಡನ ದ್ವೇಷಕ್ಕೆ ಪರಿಹಾರ ಸಾಧಿಸಲು, ಸುಬ್ರಹ್ಮಣ್ಯಕ್ಕೆ ಹೋಗುತ್ತೇನೆಂದು ಹೇಳಲೇ. ಹೇಳಿದರೆ ಕೇರಿಯವರು ಏನೆಂದಾರು? ಅಭಿಪ್ರಾಯಗಳಲ್ಲಿ ಇಬ್ಬಣವಾದೀತು. ಯಾರ ಒಪ್ಪಿಗೆಯೂ ದೊರೆಯಲಾರದು. ಕಿರಿ ಮುಲೆಯು ಕಲ್ಕುಡ ಕಲ್ಕುಡನೇ. ದಿವನ ಮೇಲೆ ಪ್ರತಿ ಅಸ್ತ್ರ ಹೂಡುವ ಯೋಜನೆಯೇ ಸಲ್ಲದ್ದು. ತಲೆ ಕೊಟ್ಟಾದರೂ ಕಲ್ಕುಡನನ್ನು ಒಲಿಸುವುದೇ ಋಜುವಾದ ಮಾರ್ಗ ಎಂದು ಅವರೆಂದಾರೆಯೇ ವಿನಾ, ಬೇರೆ ದಾರಿಯನ್ನು ಸಮ್ಮತಿಸಲಾರರು. ಇಂಥ ಸಂದಿಗ್ಧದಲ್ಲಿ, ಅವನ ಮನಸ್ಸೂ ಅಳುಕುತ್ತದೆ ತಾನು ದುಡುಕುತ್ತಿದ್ದೇನೆ ಎಂಬ ಅಂಜಿಕೆ ಅವನಿಗೂ ಬರುತ್ತದೆ. ಹೀಗಾಗಿ—ಒಂದು ರಾತ್ರಿ ಬೂದನ ಮನೆಗೆ ಹೋಗಿ ಅವನನ್ನು ಕರೆದುಕೊಂಡು ತನ್ನ ಮನೆಗೆ ಬಂದ. ನಡೆದ ಯಾವತ್ತೂ ಕತೆ ಅವನಿಗೆ ಹೇಳಿದ. ತಿಪ್ಪನ ಮರಣದಿಂದ ತೊಡಗಿ, ಸೊಸೆಯ ದುರ್ಮರಣದವರೆಗಿನ ಕತೆಯನ್ನು ಹೇಳಿದ. ತನ್ನ ಕನಸಿನ ಭೀತಿ

ಯನ್ನು ತೋಡಿಕೊಂಡ. ನಾಳೆ ಗುರಿಕಾರಿಕೆ ಪಟ್ಟ ಕರಿಯನಿಗಾಗಬೇಕಾದರೆ, ಕಲ್ಕುಡನ ಮೂರನೆಯ ನರಬಲಿಯ ಭೀತಿ ತೊಲಗಬೇಕಾದರೆ, ಬೇರೆ ದಾರಿಯಿಲ್ಲವೆಂದೂ ತಿಳಿಸಿದ. ಅಲ್ಲದೆ, ತನಗೆ ತುಕ್ರನಲ್ಲಿರುವ ಅವಿಶ್ವಾಸದ ಸೂಚನೆಯನ್ನೂ ಹೇಳದಿರಲಿಲ್ಲ. "ನೀನೇನೆನ್ನುತ್ತಿ ಹೇಳು. ಈ ಸಂದರ್ಭದಲ್ಲಿ ಯಾರಿಗೂ ಹೇಳದೆ ಹೋಗುವಂತಿಲ್ಲ ನಾನು. ಹೇಳದೆ ಹೋಗುವುದು ಮತ್ತೂ ಕಷ್ಟ. ನಾಳೆ ಹೇಳದೆ ಹೋದರೆ—ಊರವರು, ನಾನೆಲ್ಲಿ ಸತ್ತೆನೋ ಎಂದು ಇನ್ನಷ್ಟು ಹೆದರಬಾರದಲ್ಲ; ನನಗಾಗಿ ಹುಡುಕಾಡಬಾರದಲ್ಲ. ಅದಕ್ಕಾಗಿಯೇ ಎಲ್ಲರಿಗೂ ಅದನ್ನು ಹೇಳುವುದಿಲ್ಲ. ನಾನು ಹೋದ ಮೇಲೆ ಹೇಳಿದರೆ ಸಾಕು. ನಾನು ವಿಟ್ಲದ ತನಕ ಧನಿಯರನ್ನು ನೋಡುವುದಕ್ಕೆ ಹೊರಟಿದ್ದೇನೆ. ಮಗುವನ್ನು ಬಿಡಲಾರದುದಕ್ಕೆ ಜತೆಗೆ ಒಯ್ಯುತ್ತೇನೆ. ಧನಿಯರನ್ನು ಕಂಡು, ಎರಡೂ ಮಲೆಯವರನ್ನು ಕೂಡಿಸಿ, ಬುದ್ಧಿ ಹೇಳಿಸಿ, ಕಲ್ಕುಡನಿಗೆ ಸಲಿಸುವ ಸೇವೆಯ ಏರ್ಪಾಡಿಗೆ ಹೋಗಿದ್ದೇನೆ ಅನ್ನು. ಮಾತು ಸುಳ್ಳಾಗಬಾರದ್ದಕ್ಕೆ—ಸುಬ್ರಹ್ಮಣ್ಯಕ್ಕೆ ಹೋದವನೇ ಬರುವಾಗ ಧನಿಯರ ಮನೆಗೂ ಹೋಗಿಬರುತ್ತೇನೆ. ನನಗೆ ದಾರಿ, ದೂರ ಒಂದೂ ಗೊತ್ತಿಲ್ಲ; ಸಣ್ಣದಿದ್ದಾಗ ಮಾವನೊಂದಿಗೆ ಷಷ್ಠಿಗೆ ಸುಬ್ರಹ್ಮಣ್ಯಕ್ಕೆ ಹೋದದ್ದುಂಟು. ಆಮೇಲೆ ಹೋದವನಲ್ಲ. ಬೆಟ್ಟ ದಾಟಿ, ಬೀಡು ಬಿಟ್ಟು, ಕಾಲಿಟ್ಟವನಲ್ಲ" ಎಂದು ತನ್ನ ಅಂತರಂಗದ ವಿಚಾರಗಳನ್ನೆಲ್ಲ ಅವನ ಮುಂದೆ ತೋಡಿಕೊಂಡ.

ಬೂದನಿಗೆ ಯಾವತ್ತೂ ಸಂಗತಿ ತಿಳಿಯಿತು. ಕೆಂಚನ ಮೇಲಿದ್ದ ಅಭಿಮಾನದೊಂದಿಗೆ ಸಹಾನುಭೂತಿಯೂ ಉಂಟಾಯಿತು. ಗುರಿಕಾರ ಪಟ್ಟ ಕರಿಯನಿಗೆ ಸಲಬೇಕಾದದ್ದು. ಅವನು ಬೆಳೆದು ದೊಡ್ಡದಾಗಿ ಕುಡಿಯರ ಯಜಮಾನನಾಗಬೇಕಾದದ್ದು ತೀರ ಸಮಂಜಸವಾದದ್ದು. ಪರಂಪರೆಯಿಂದ ನಡೆದುಬಂದದ್ದೂ ಅಲ್ಲದೆ, ತುಕ್ರನ ಸೊಕ್ಕು, ಏರಾಟ ಅವನಿಗೆ ಹಿಡಿಸದ ವಿಷಯವಾಗಿತ್ತು. ಕರಿಯನ ಬೆಂಗಾವಲಿಗೆ ತಾನು ಯಾವಜ್ಜೀವ ನಿಲ್ಲುತ್ತೇನೆ—ಎಂಬ ಮಾತನ್ನು ಕೆಂಚನಿಗೆ ಕೊಟ್ಟು, ತನ್ನ ಒಪ್ಪಿಗೆ ಕೊಟ್ಟ. ಕಲ್ಕುಡನಂತಹ ಗಣಗಳಿಗೆ ಕುಮಾರಸ್ವಾಮಿಯೇ ಒಡೆಯ ಎಂಬ ಕತೆಯನ್ನು ಕೇಳಿಯಾದರೂ ಅವನು ಬಲ್ಲ. ಎರಡು ಜೀವಗಳನ್ನು ಕೊಂಡ ಕಲ್ಕುಡ, ಮೂರನೆಯ ಜೀವವನ್ನು ಕೊಳ್ಳದಂತೆ ತಡೆಹಿಡಿಯುವ ಶಕ್ತಿ ಆ ಕುಮಾರ

ಸ್ವಾಮಿಗಲ್ಲದೆ ಇನ್ನಾರಿಗೂ ಇರಲಾರದೆಂದು ಅವನ ನಂಬಿಕೆ. ಅಲ್ಲದೆ ಇಬ್ಬಣ ವಾಗಿ, ಚಿಕ್ಕಪುಟ್ಟ ಮಾತುಗಳನ್ನು ಬೆಳೆಯಿಸಿಕೊಂಡು, ಮುಖ ಮುಖ ನೆಟ್ಟಗೆ ನೋಡಲಾರದ ಕಿರಿ ಮಲೆ, ಹಿರಿ ಮಲೆಯ ಕುಡಿಯರು ಒಂದಾಗಿ, ಆ ಕಲ್ಕುಡನ ಸೇವೆ ಸಲ್ಲಿಸುವ ದಿನ, ಅವನ ರಕ್ತಪಿಪಾಸೆ ಹಿಂಗಿಸುವ ದಿನ ವನ್ನು ಆತನೂ ಸಮೀಪದಲ್ಲಿ ಕಾಣಲಾರ. ಅದನ್ನು—ತಮ್ಮ ಧನಿಯರಿಗೆ ಹೇಳುವ ಕೆಲಸ ದೊಡ್ಡದಲ್ಲ. ಅವರು ಆಗಾಗ ಬಂದು ಹೋಗುವವರು. ಮಳೆ ಬೀಳುವ ಮುಂಚೆ ಒಮ್ಮೆಯಾದರೂ ಬಂದು ಹೋಗಲೇಬೇಕು. ಆದರೆ ಹಿರಿ ಮಲೆ ಕುಡಿಯರಿಗೆ ಯಾರಿಂದ ಬುದ್ಧಿ ಹೇಳಿಸಬೇಕು. ಆ ಮೂಲೆಯ ಒಡೆತನವೂ ಬದಲಾಗಿದೆ. ಈಗ ಏಲಕ್ಕಿ ಬೇಸಾಯ ನಡೆಸುವ ವರು ಯಾರೋ ಪಾದ್ರಿಜನಗಳಂತೆ. ದೇವರು, ದಿಂಡರು, ದೆವ್ವ, ಕಲ್ಕುಡ—ಒಂದನ್ನೂ ನಂಬುವ ಜನರಲ್ಲವಂತೆ. ಅವರಿರುವುದು ಊರ ಸಮೀಪದಲ್ಲೂ ಅಲ್ಲ—ಸಕಲೇಶಪುರದಲ್ಲಿ. ಇವರನ್ನು ಕಂಡು, ಅವರನ್ನು ಕಂಡು, ಮಲೆಯ ವರನ್ನು ಕೂಡಿಸಿ, ಕಲ್ಕುಡನಿಗೆ ಕೋಲ ಎಬ್ಬಿಸುವುದರೊಳಗೆ ಮಳೆಗಾಲವೇ ತೊಡಗುತ್ತದೆ. ಮಳೆಗಾಲ ತೊಡಗಿತೆಂದರೆ, ಕೋಲದ ಮಾತು ಇನ್ನಾರು ತಿಂಗಳಿಗೆ ಮುಂದೆ ಹೋದಂತೆಯೆ. ಆರು ತಿಂಗಳಿಗೆ—ಆತ ಒಂದಲ್ಲ ನಾಲ್ಕು ಬಲಿ ಕೊಂಡಾನು. ಕರಿಯನನ್ನೂ ಕೊಂಡಾನು ; ಅವನ ಅಜ್ಜನನ್ನು ಕೊಳ್ಳು ವುದಂತೂ ಖಂಡಿತವೇ. ಈ ಎಲ್ಲ ಅನುಮಾನಗಳನ್ನು ಬೂದ ಕೆಂಚನಿಗೆ ವಿಸ್ತರಿಸಿ ಹೇಳಿದ. 'ನೀನು ಹಿಡಿದ ದಾರಿಯೇ ಸರಿ'ಯೆಂದು ನುಡಿದ. ರಾತ್ರಿ ಕೆಂಚನ ಮನೆಯಲ್ಲಿಯೇ ಮಲಗಿಕೊಂಡ. ನಡುರಾತ್ರಿ ಎದ್ದು ಅಜ್ಜ, ಮೊಮ್ಮಗನನ್ನು ಸಾಗಿಸಿಕೊಂಡು ಬೆಟ್ಟದ ಕತ್ತಲಲ್ಲಿ ನಡೆಯಿಸಿಕೊಂಡು, ಕಾಡಿನ ಹಾದಿ ಕಳೆದಮೇಲೆ, ಸೂಟೆ ಹಚ್ಚಿಸಿ, ಅದರ ಬೆಳಕಿನಲ್ಲಿ ಮುನ್ನಡೆ ಸಿಕೊಂಡು, ಮೂಲೆಗುಂಪಿನ ಬೀಡಿನ ತನಕ ಬಿಟ್ಟು, ಬೆಳಕು ಹರಿಯುವುದ ರೊಳಗೆ ತನ್ನ ಗುಡಿಯನ್ನು ಸೇರುವ ಸಾಹಸವನ್ನೂ ಮಾಡಿದ.

ಬೆಳಕು ಹರಿಯಿತು. ಕೇರಿಯವರು ತಂತಮ್ಮ ಗುಡಿ ಜೋಪಡಿಗಳಲ್ಲಿ ಅಂಬಲಿ ಕುಡಿದು, ಕುಮರಿ ಹೊಲದ ಸುತ್ತ ಬಿದಿರಿನ ಬೇಲಿ ಹಾಕುವುದಕ್ಕೆ ಹೊರಟರು. ಬೂದನೂ ಹೋದ ಆ ಕೆಲಸಕ್ಕೆ. ಗಂಡು ಹೆಣ್ಣಾಳೆಲ್ಲರೂ ನೆರ ವಾದರು—ಆ ಉದ್ಯೋಗದಲ್ಲಿ. ಆ ದಿನ ಶುಕ್ರ ಬೇಕೋ ಬೇಡವೋ ಎಂಬ

ಮನಸ್ಸಿನಿಂದ, ಬಿದಿರ ಮೆಳೆ ಸವರುತ್ತಿದ್ದ, ಮುಳ್ಳಿನ ಹೊರೆ ಕಟ್ಟುತ್ತಿದ್ದ, ಹೊರೆ ಹೊರುವವರ ತಲೆಗೆ ಅದನ್ನು ಏರಿಸುತ್ತಿದ್ದ. ಸಂಜೆ ಮನೆಗೆ ಬಂದರೆ, ಕೇರಿಯ ಒಬ್ಬರಾದರೂ ಕೆಂಚಜ್ಜ ಏನು ಮಾಡುತ್ತಿದ್ದಾನೆ, ಕರಿಯನು ಕಾಣಲೇ ಇಲ್ಲವಲ್ಲ—ಎಂಬ ವಿಚಾರ ಮಾಡಲೇ ಇಲ್ಲ. ಉಪಚಾರಕ್ಕಾಗಿ—ತುಕ್ರ ಅಲ್ಲಿಗೆ ಹೋಗಿದ್ದರೆ ಹೋಗಬೇಕಿತ್ತು. ಅವನೋ ತನ್ನ ತಲೆ ತುಂಬಿದ ಚಿಂತೆಯನ್ನು ತೊಲಗಿಸುವುದಕ್ಕಾಗಿ ಆ ದಿನ, ಹೆಂಡದ ಗುಡಾಣವೇ ಆಗಿ ಮನೆಗೆ ಬಂದಿದ್ದ. ಚಿಕ್ಕಿ ಸತ್ತ ಮೇಲೆ ತನ್ನಿಬ್ಬರು ಹೆಂಡಿರೊಡನೆಯೂ, ಮಕ್ಕಳೊಡನೆಯೂ, ಸಮನಾಗಿ ಮಾತನಾಡಿದವನಲ್ಲ ಆತ. ಆ ಸಮಯ ಸಾಧಿಸಿ, ಈತ ತುಂಬ ಕುಡಿದಿದ್ದಾನೆಂಬುದನ್ನು ಗಮನಿಸದೆ, ಕೆಂಪಿ, ಅವನ ಅಚ್ಚುಮೆಚ್ಚಿನ ಹೆಂಡತಿ, ತನ್ನ ಸೇಡು ಸಲ್ಲಿಸಿದಳು. "ಏನು, ಮನೆಗೆ ಬಂದರೆ ಒಂದೂ ಮಾತಾಡಬಾರದೇ? ಅವಳೊಬ್ಬಳು ಹೋದರೇನಾಯಿತು? ನಾವಿಬ್ಬರು ಬದುಕಿ ಉಳಿದಿದ್ದೇವಲ್ಲ"—ಎಂದಳು ದಿಟ್ಟತನದಿಂದಲೇ. 'ಹುಂ' ಎಂದು ಹೂಂಕರಿಸಿದ ತುಕ್ರ. 'ಏನೋ, ಏನೋ'—ಅಂದ. ಪ್ರತ್ಯುತ್ತರವಾಗಿ ಕೆಂಪಿ ಬಿಡಿಸಿ ಬಿಡಿಸಿ ಹೇಳಿದಳು—ಕೆಂಪಿ ತನ್ನ ಎದೆಯನ್ನು ಸುಡುತಿದ್ದ ಮಾತುಗಳನ್ನು. ತಾಳಲಾರದ ಕೋಪ ಮತ್ತನಾದ ತುಕ್ರನಿಗೆ ಬರುವುದೊಂದು ಹೆಚ್ಚೇ? ಹತ್ತಿರವಿದ್ದ ಬಡಿಗೆಯೊಂದನ್ನು ಹಿಡಿದು ರಪ್ಪನೆ ಬೀಸಿ, ಎಸೆದೇ ಬಿಟ್ಟ. ಅದನ್ನು ಮುಂಗಾಣದ ಬೆಪ್ಪಿ ಕೆಂಪಿಯಲ್ಲ. ಥಟ್ಟನೆ ಕುಳಿತಳು. ತಲೆ ತಪ್ಪಿಸಿಕೊಂಡಳು. ಬಡಿಗೆ ಗೋಡೆಗೆ ತಗಲಿ ಕೆಳಕ್ಕೆ ಜಿಗಿದು, ಮಲಗಿದ್ದ ಹುಡುಗನೊಬ್ಬನ ಮೇಲೆ ಬಿದ್ದು, ಅವನನ್ನು ಎಚ್ಚರಗೊಳಿಸಿತು. ಹುಡುಗ ಗಾಬರಿಗೊಂಡು ಚೀತ್ಕರಿಸಿದ. ಮೊದಲ ಹೆಂಡತಿಯೂ ಬಂದಳು. ತುಕ್ರ ಹುಲಿಯಂತೆ ಕೆಂಪಿಯ ಮೇಲೆ ಏರಿಹೋದ. ಅವಳೂ ಆಳಿಗೆ ಆಳೇ! ಹುಲಿಗೆ ಹುಲಿಯೇ! ಅವನನ್ನು ತಬ್ಬಿ ಹಿಡಿದು, ಮೈಯನ್ನೆಲ್ಲ ಪರಚಿ, ಕಚ್ಚಿ, ತಾನೇ "ಮಗುವನ್ನು ಕೊಲ್ಲುತ್ತಾರೆ" ಎಂದು ಕಿರಿಚಿ, ಹೊರಗೆ ಓಡಿ ಬಂದಳು. ಕೆಂಚನ ಮನೆಗೆ ಧಾವಿಸಿದಳು. ಕೇರಿಯಲ್ಲಿ ಹಾಹಾಕಾರವೆದ್ದಿತು! ಜನ ಕೂಡಿದರು. ತುಕ್ರನ ಮನೆಗೆ ಬಂದರು. ಕೆಂಪಿಯ ಕೂಗು, ಸಿಟ್ಟು, ಅಳುವಿನ ಮಾತನ್ನೆಲ್ಲ ಕೇಳಿದರು. ಸುದೈವಕ್ಕೆ ಬಡಿಗೆಯ ಎಸೆತದಿಂದ ಯಾರಿಗೂ ಪೆಟ್ಟಾಗಿರಲಿಲ್ಲ. ಮಗುವಿಗೂ ಏನಾಗಿರಲಿಲ್ಲ, ಸತ್ತವರಾರೂ ಇಲ್ಲ.

ಗಾಯಗೊಂಡವರೂ ಇಲ್ಲ. ಬದಲು ತುಕ್ರನ ಎಡತೋಳಿನ ಮೇಲೆ ಕೆಂಪಿಯ ಹಲ್ಲುಗಳೆಲ್ಲ ಮೂಡಿದ್ದುವು. ಅಮಲಿನಿಂದ ಇನ್ನೂ ತೊದಲುತ್ತಿದ್ದ ಆತ. ಬಂದವರು ರೇಗಿದ ಅವನನ್ನೇ ಹಿಡಿದು ಕುಳ್ಳಿರಿಸಿದರು. ಕೆಂಪಿ ಅಳುತ್ತ ತನಗಾದ ಅನ್ಯಾಯವನ್ನು ಜನಗಳ ಎದುರಿಗೆ ಬಣ್ಣಿಸಿ ಹೇಳಿದಳು—ನೆರದವರ ಮುಂದೆ ತುಸು ತುಸು ಗೊತ್ತಿದ್ದ ಸುದ್ದಿಯನ್ನೇ ಬಹಿರಂಗಪಡಿಸಿದಳು. ಅಷ್ಟೇ ಆಗಿದ್ದರೆ ದೊಡ್ಡದಿರಲಿಲ್ಲ. ಇನ್ನೂ ಒಂದು ಹೆಜ್ಜೆ ಮುಂದಕ್ಕೆ ಹೋದಳು. ಆಡಬಾರದ್ದನ್ನೂ ಆಡಿದಳು. "ಚಿಕ್ಕಿಯೊಡನೆ ಪ್ರೇಮ ಬಲಿತು, ಅವಳು ಮದುವೆಯ ಒತ್ತಾಯ ಮಾಡಿದ್ದಕ್ಕೆ ಅವಳನ್ನು ನೂಕಿ, ಕೊಂದವರು ಇವರು. ಇವರಿಗೆ ನಾವು ಬೇಡವಾಗಿದ್ದೇವೆ" ಎಂದು ಹಿಂದು ಮುಂದಿನ ಯೋಚನೆ ಇಲ್ಲದೆಯೂ ಆಡಿದಳು. ಅವಾಕ್ಕಾದರು ಕೇಳಿದವರು! ತುಕ್ರನಿಗೆ ಅಮಲೇರಿತ್ತು ಎಂದು ಬಲ್ಲರು. ಕೆಂಪಿಗೂ ಹುಚ್ಚು ಹಿಡಿದಿದೆ—ಎಂದು ತೀರ್ಮಾನಿಸಿದರು. ಆ ದಿನದ ಗದ್ದಲ ಅಷ್ಟಕ್ಕೇ ಮುಗಿಯಿತು. ಗಂಡ ಹೆಂಡಿರ ಕಾಳಗದಲ್ಲಿ ಉಳಿದವರು ಕೈಹಾಕಲಿಲ್ಲ. ಕೆಂಪಿ ಮಾತ್ರ ರಾತ್ರಿ ಅಲ್ಲಿ ಮಲಗಲಿಲ್ಲ, ನೆರಮನೆಗೆ ಹೋಗಿ ನಡೆದಳು. ಅಮಲಿಳಿಯುತ್ತ ಬಂದಂತೆ ತುಕ್ರ ತಣ್ಣಗಾಗಿ, ಅವಮಾನಿತನಾಗಿ ತಲೆ ತಗ್ಗಿಸಿ, ಮನೆಯಲ್ಲೇ ಮಲಗಿಕೊಂಡ. ಮರುದಿನ ಮುಂಜಾನೆ ಕೆಂಪಿ, ಅಲ್ಲಿಂದ ಹಿರಿ ಮಲೆಗೂ ಓಡಿಹೋಗಿ ತವರನ್ನು ಸೇರಿದಳು.

ಕೇರಿಯ ಗಂಡಸರೆಲ್ಲರಿಗೆ, ನೆರದವರೆಲ್ಲರಿಗೂ ಆ ಸಂದರ್ಭದಲ್ಲಿ ಹುಟ್ಟಿದ ಗಾಬರಿ, ಕಂಡ ಆಶ್ಚರ್ಯವೆಂದರೆ—ಕೆಂಚಣ್ಣ, ಅವನ ಮೊಮ್ಮಗ ಇಬ್ಬರೂ ಕಾಣಿಸದಿದ್ದುದು. ತಮ್ಮ ಮನೆಯಲ್ಲೂ ಇಲ್ಲದಾದುದು. ಒಂದು ಗಲಭೆ ಮುಗಿಯುವಾಗ, ಆ ಗಲಭೆ ತೊಡಗಿತು. ಆದರೆ ಬೂದ ಅವರೆಲ್ಲರಿಗೂ ಸಮಾಧಾನ ಹೇಳಿದ.

## ಅಧ್ಯಾಯ ೩

ಕೆಂಪಿಯ ವರ್ತನೆಯಿಂದ ತುಕ್ರನ ಹೆಮ್ಮೆ ಪ್ರತಿಷ್ಠೆಗಳಿಗೆ ಬಲವಾದೊಂದು ಬರೆಯನ್ನೆಳೆದಂತಾಯಿತು. ಮರುದಿನ ಕೆಲಸಕ್ಕೆ ಆತ ಮುಖವನ್ನೆತ್ತಿಕೊಂಡು ಹೋಗುವ ಹಾಗಿರಲಿಲ್ಲ. ಆಕೆಯ ಮೇಲಿನ ರೋಷ ಎದೆ

ಯಲ್ಲಿ ಕುದಿಯುತ್ತಿತ್ತಾದರೂ, ಆ ವಿಷಯದಲ್ಲಿ ಸೇಡಿನ ದಾರಿ ಒಳಿತಲ್ಲ ವೆಂದು ಹೊಳೆಯಿತು. ಅವಳ ತವರುಮನೆ ಹಿರಿ ಮಲೆಯಲ್ಲಿ. ಅವಳ ತಂದೆ ತೌಡ ಅಲ್ಲಿನ ಕುಡಿಯರಲ್ಲಿ ಗಣ್ಯ ವ್ಯಕ್ತಿ. ತನ್ನ ಮಗಳನ್ನು ಬಡಿಗೆಯಿಂದ ಕೊಲ್ಲಲು ಹೋಗಿದ್ದಾನೆ—ಎಂದು ಆತನಿಗೆ ತಿಳಿದರೆ ಅವನು ಸೇಡಿನ ದಾರಿ ತಂದಾನು. ಹಿಂದಣ ರಾತ್ರಿ ಮನೆ ಬಿಟ್ಟು ಬಳಗದವರಲ್ಲಿ ತನ್ನ ವಿಷಯವಾದ ತಾತ್ಸಾರವನ್ನು ಹುಟ್ಟಿಸಿದವಳನ್ನು, ಮೈ ಕಚ್ಚಿ ಗಾಯಮಾಡಿದವಳನ್ನು ತಿರುಗಿ ಕರೆಯಿಸಿಕೊಳ್ಳುವ ವಿಚಾರದಲ್ಲಿ ಅವನ ಮನಸ್ಸು ಉದಾಸೀನ ವಾಗಿತ್ತು. ನಾಲ್ಕು ಸಮಾಧಾನದ ಮಾತುಗಳನ್ನಾಡಿ, ಅವಳನ್ನು ಒಲಿಸು ವುದು ಅಸಾಧ್ಯವಲ್ಲವೆಂದು ಕಂಡರೂ, ಗಂಡುಸೆನಿಸಿದ ತನ್ನ ಪ್ರತಿಷ್ಠೆಗೆ ಅದು ಕುಂದೆಂದು ಕಂಡಿತು. ಸಾಲದುದಕ್ಕೆ ಆಕೆ ತೋಳನ್ನು ಕಚ್ಚಿ ಮಾಡಿದ ಗಾಯವೂ ಬಲವಾಗಿತ್ತು; ಎರಡೂ ದವಡೆಯ ಹಲ್ಲುಗಳು ಗಾಯದಲ್ಲಿ ಮೂಡಿದ್ದುವು. ಅದು ಶಾರೀರಕ ನೋವನ್ನು ಕೊಡುತಿತ್ತು. ಆತ ಅದಕ್ಕೆ ಲೇಪ ವನ್ನು ಹಚ್ಚಿಕೊಂಡರೂ ತೋಳು ಊದಿಕೊಂಡಿತ್ತು—ಹಲ್ಲುಗಳ ನಂಜು ನಾಟಿ. ರಾತ್ರಿ ಅದನ್ನು ಕಂಡವರಿಲ್ಲ; ಬೆಳಗ್ಗೆ ಅದನ್ನು ಹೊತ್ತುಕೊಂಡು, ಜನಗಳ ಮುಂದೆ ಮೆರವಣಿಗೆ ಮಾಡಿಸುವುದಕ್ಕೆ ಅವನಿಗೂ ಇಷ್ಟವಿರಲಿಲ್ಲ. ಕೆಂಪಿ ಆಚೀಚೆ ಎಲ್ಲಾದರೂ ಹೋಗಿ ಅಡಗಿರಬಹುದು ಅಥವಾ ಕುಮರಿ ಸಾಗುವಳಿಯಾಗುವಲ್ಲಿಗೆ ಹೋಗಿರಬಹುದು. ಒಮ್ಮೆಗೇ ದಿಟ್ಟತನದಿಂದ ತವರುಮನೆಗೆ ಹೋಗಿರಲಾರಳು—ಎಂಬ ನಂಬಿಕೆ ಅವನದು. ಓಡಿಹೋಗಿ ದ್ದರೂ ಅವನೇನು ಮಾಡಬೇಕು? ಬೆಳಕು ಹರಿದ ಮೇಲೆ ಓಡಿಹೋಗ ಬೇಕು. ಅವಳನ್ನು ತಡೆಯುವ ಧೈರ್ಯವೂ ಇಲ್ಲ, ಇಷ್ಟವೂ ಇಲ್ಲ. ಕಚ್ಚಿದ ತೋಳನ್ನು ತೋರಿಸಲಾರದ್ದಕ್ಕೆ, ಅಪಮಾನಿತ ಮುಖವನ್ನು ತೋರಿಸ ಲಾರದ್ದಕ್ಕೆ ಮನೆಯಲ್ಲೇ ಕುಳಿತುಬಿಟ್ಟ. ಜ್ವರ ನಟಿಸಿದ, ಮುಸುಕು ಹಾಕಿ ಕೊಂಡು ಮಲಗಿಕೊಂಡ.

ಹಾಗೆ ಮಲಗಿದ್ದೇನೋ ಸರಿಯೆ. ಈ ಉರಿದ ಬೆಂಕಿಯನ್ನು ನಂದಿಸು ವುದಕ್ಕೆ ಕೆಂಚನಲ್ಲಿಗೆ ದೂರು ಕಳುಹಿಸುವ—ಎಂದು ಯೋಚಿಸಿದ. ಮರು ದಿನ ಕೆಂಚ ಊರಲ್ಲಿಲ್ಲದ ಸುದ್ದಿಯೂ, ಧನಿಯರ ಮನೆಗೆ ಹಿಂದಣ ದಿನವೇ ಆತ ಹೋಗಿದ್ದ ಸುದ್ದಿಯೂ ಮುಟ್ಟಿತು. ಇನ್ನು ಉಳಿದವರ ಸಹಕಾರ

ಪ್ರಯೋಜನವಿಲ್ಲ. ಕೆಂಪಿಯನ್ನು ತವರಿಗೆ ಹೋಗದಂತೆ ಮಾಡಿ, ಅವಳಿಗೆ ಮಿತ್ರರಿಂದ ಹೇಳಿಸಿ, ಸಾಧ್ಯವಾದರೆ ತನ್ನ ಹಿರಿಯ ಹೆಂಡತಿಯಿಂದ ನಾಲ್ಕು ಬುದ್ಧಿಯ ಮಾತು ಹೇಳಿಸಿ, ಅವಳಾಗಿ ಶರಣುಬರುವಂತೆ ಮಾಡುವ ಯೋಚನೆ ಅವನದ್ದು. ಆದರೆ ಬೆಳಗಿನ ಅಂಬಲಿ ತಿಂದುಕೊಂಡು ಅವಳೂ ಹೊಲಕ್ಕೆ ಹೋದಳು. ಯಾರೊಡನೆಯೂ ತುಕ್ರ ತನ್ನ ಗೋಳನ್ನು ಹೇಳು ವುದಕ್ಕಿರಲಿಲ್ಲ. ತುಂಬ ಯೋಚಿಸಿದ; ಮಲಗಿದಲ್ಲಿಯೇ ಹೊರಳಾಡಿದ. ಏನೇನೋ ವಿಚಾರಮಾಡಿದ್ದ. ನಡೆದ ಈ ಘಟನೆ ತನ್ನ ಕ್ಷೇಮಕ್ಕಲ್ಲ ಎಂದೇ ಹೊಳೆಯಿತು. ಭೂತದ ಭೀತಿಯ ಜತೆಗೆ, ಕೆಂಪಿಯ ಹೆದರಿಕೆಯೂ ಅವನ ಎದೆಯನ್ನು ಕೊರೆಯತೊಡಗಿತು. ಒಮ್ಮೊಮ್ಮೆ ಅನಿಸಿತು 'ಛೇ, ಆ ದಿನ ನಾನವಳನ್ನು ಒಲಿದು ಮದುವೆಯಾದುದು ತಪ್ಪು' ಎಂದು. ಅದರ ಬೆನ್ನ ಹಿಂದೆಯೇ ತನ್ನ-ಅವಳ ಯಾವತ್ತು ವಿಲಾಸಜೀವನದ ಸ್ಮರಣೆಗಳು ಕವಿ ದುವು. ಅವಳ ಬೊಗಸೆಗಣ್ಣುಗಳ ಕುಡಿನೋಟವನ್ನು ನೆನೆದರೆ ಈ ಸಿಟ್ಟಿ ನಲ್ಲೂ ಅವನು ಪಶುವಿನಂತಾಗುತ್ತಾನೆ. ಅವಳನ್ನು ಒಂಟಿಯಾಗಿ ಸಂಧಿಸಿ 'ದಮ್ಮಯ್ಯ, ಎಲ್ಲವನ್ನೂ ಮರೆತುಬಿಡು' ಎನ್ನುವಷ್ಟು ನಮ್ರನೂ ಆಗು ತ್ತಾನೆ. ಈ ಎಲ್ಲ ಯೋಚನೆಗಳಿಂದ ಅವನು ಎಷ್ಟು ಸಮಯ ಚಾಪೆಯಲ್ಲಿ ಒರಗಿಕೊಂಡು ಕಳೆದನೋ ಅವನಿಗೇ ಗೊತ್ತು. ತನ್ನ ಪಾಲಿನ ಅಂಬಲಿ ಯನ್ನೂ ಆತ ತಿಂದಿರಲಿಲ್ಲ.

ಕೊನೆಗೆ ಹಾಸಿಗೆಯನ್ನು ಬಿಟ್ಟೆದ್ದ, ಹೊರಕ್ಕೆ ಬಂದ. ತಿರುಗಿ ಒಳಕ್ಕೆ ಹೋದ. ಹೊದೆಯುವ ದುಪ್ಪಟಿಯೊಂದನ್ನು ಮೈಮೇಲೆ ಹಾಕಿಕೊಂಡು, ತೋಳು ಮರೆಯಿಸಿಕೊಂಡು, ಗುಡಿಯಿಂದ ಹೊರಬಿದ್ದ. ಜನರೆಲ್ಲ ಹೊರಟು ಹೋದ ಬಳಿಕ ಕೆಂಚನ ಮನೆಗೆ ಹೋದ. ಕೆಂಚನಿಲ್ಲವೆಂದು ಗೊತ್ತಿದ್ದರೂ ಹೋದ. ಅಲ್ಲಿ ಕೆಂಚನೂ ಇದ್ದಿರಲಿಲ್ಲ, ಕರಿಯನೂ ಇದ್ದಿರಲಿಲ್ಲ. ಹಾಗೆಯೇ ನಿರುದ್ಯೋಗಿಯಂತೆ ಕೇರಿಯೆಲ್ಲ ಸುತ್ತಾಡಿದ. ಕೆಂಪಿಯ ಠಾವುಠಿಕಾಣೆ ಕಾಣಿಸಲಿಲ್ಲ. ಒಂಟಿಯಾಗಿ ಹೊರಟ. ಮನಸ್ಸಿನಲ್ಲಿ 'ನಿನ್ನೆ ರಾತ್ರೆ ಎಲ್ಲಿ ಮಲಗಿದ್ದಳೋ ಅವಳು. ಅವಳಿಗೆ ಯಾರು ಆಶ್ರಯ ಕೊಟ್ಟರೋ. ಇಷ್ಟೆಲ್ಲ ಮಾಡಿದ ಅವಳು ನಗೆ, ನಾಚಿಗೆ ಬಿಟ್ಟು, ತಿರುಗಿ ಹೊಲಕ್ಕೆ ಹೋಗಿರ ಬಹುದೇ?' ಎಂದು ಯೋಚಿಸಿ, ಭಾರವಾದ ಮನಸ್ಸಿನಿಂದ ಕುಮರಿ ಕೆಲಸ

ನಡೆಯುವಲ್ಲಿಗೆ ಹೋದ. ದೂರದಲ್ಲಿ ನಿಂತು ನೋಡಿದ. ಅವರವರು ಅವರವರ ಕೆಲಸ ಮಾಡುತ್ತಿದ್ದರು. ನೆಲಕ್ಕೆ ಮುಳ್ಳು ಕುತ್ತುತ್ತಿದ್ದ ಹೆಂಗಸರ ಗುಂಪಿನಲ್ಲೂ ಕೆಂಪಿ ಕಾಣಿಸಲಿಲ್ಲ. ಮುಳ್ಳಿನ ಹೊರೆ ಹೊರುತ್ತಿದ್ದವರ ಸಾಲಿನಲ್ಲೂ ಅವಳಿರಲಿಲ್ಲ. ಮನಸ್ಸು ತೀರ ಖಿನ್ನವಾಯಿತು. ನೆಟ್ಟಗೆ ಅಲ್ಲಿಂದ ಹೊರಟು ಕೇರಿಗೆ ಬಂದ. ಕೇರಿಯಲ್ಲಿ ಆ ದಿನ ಉಳಿದುಕೊಂಡವರು ಒಬ್ಬಿಬ್ಬರು ಮುದುಕಿಯರು ಮಾತ್ರ. ಅವರ ಸನಿಯಲ್ಲೇ ಅಡ್ಡಾಡಿದ. ಅವರನ್ನು ಮಾತನಾಡಿಸಿದ. ಅಲ್ಲಿಯೂ ಕೆಂಪಿ ಕಾಣಿಸದ್ದಕ್ಕೆ ನೆಟ್ಟಗೆ ಹಿರಿ ಮಲೆಯ ದಾರಿ ಹಿಡಿದ.

ಹಾದಿ ಸಾಗುತ್ತ, ಕಲ್ಕುಡನ ತಾವಿನ ಮುಂದೆ ತುಸು ಕಾಲ ನಿಂತು, ಕಂಬನಿ ಮಿಡಿದು, ಬಿಸುಸುಯ್ದು, 'ತನ್ನ ಮಾನವನ್ನು ಕಾಪಾಡು' ಎಂದು ಬೇಡಿಕೊಂಡು ಮುಂದುವರಿದ. ಎರಡು ತಾಸು ಹಿಡಿಯಿತು—ಹಿರಿ ಮಲೆಗೆ ಹೋಗಿ ತನ್ನ ಮಾವನ ಗುಡಿಸಲನ್ನು ಸೇರುವಾಗ. ಅಲ್ಲೂ ಕೇರಿ ಬರಿದಾಗಿತ್ತು. ಮಾವನ ಮನೆಯಲ್ಲೂ ಯಾರೂ ಇದ್ದಿಲ್ಲ. ಅವರು ಬೇಸಾಯಗಾರರು; ಕುಮರಿಯ ಕೆಲಸಕ್ಕೆ ದೂರ ಹೋಗಿದ್ದರು. ಹಸಿದ ಹೊಟ್ಟೆಯಲ್ಲಿ ಮಾವನ ಮನೆಯ ಚಾವಡಿಯಲ್ಲಿ ಕುಳಿತು ತಪಸ್ಸು ಮಾಡಿದ. ಕತ್ತಲು ಹರಿಯುವಾಗ ಕೇರಿಯವರು ಕುಮರಿ ಹೊಲದಿಂದ ಮನೆಗೆ ಮರಳಿದರು. ತುಕ್ರನ ಮಾವ ಅತ್ತೆಯರಿಬ್ಬರು ಅವನ ಮುಖವನ್ನು ನೋಡಿ ಬೆರಗಾಗಿ, "ಎಂದು ಬಂದೆ? ಎಷ್ಟು ಹೊತ್ತಿಗೆ? ಕೆಂಪಿ ಚೆನ್ನಾಗಿದ್ದಾಳೆಯೋ ?" ಎಂದು ಕೇಳುತ್ತಲೇ ಅವಾಕ್ಕಾದನು ಆತ! 'ಏನಿದು? ಕೆಂಪಿ ಅಲ್ಲೂ ಇಲ್ಲ, ಇಲ್ಲೂ ಇಲ್ಲ. ಇನ್ನೆಲ್ಲಿಗೆ ಹೋದಳು? ತಮ್ಮ ಕೇರಿಯ ಯಾವುದಾದರೊಂದು ಮನೆಯಲ್ಲಿ ಅಡಗಿಕೊಂಡಿರಬಹುದೇ ?' ಎಂದು ಯೋಚಿಸುವುದರಲ್ಲೇ ಮೂಕನಾದ. ಮಾತನಾಡದ ಅಳಿಯನನ್ನು ಕಂಡು "ಏನು ತುಕ್ರ, ಏನಾಯಿತು? ಮಾತನಾಡುವುದೇ ಇಲ್ಲವಲ್ಲ ನೀನು? ಕೆಂಪಿ ಚೆನ್ನಾಗಿಲ್ಲವೇ ? ಯಾಕೋ ಬೇಸರಗೊಂಡಿರುವಂತೆ ಇದೆ ನಿನ್ನ ಮುಖ; ಏನು, ಏನಾಯಿತು ಹೇಳು" ಎಂದು ಅವರು ಉಪಚರಿಸಿದರು. ಅವನ ಮನಸ್ಸಿಗೆ, ಮೊದಲು ದೂರು ಕೊಟ್ಟವರಿಗೆ ನೆರವು ಹೆಚ್ಚು—ಎಂದೆನಿಸಿತು. ಮೈಮೇಲಿನ ಬಟ್ಟೆ ತೆಗೆದ. ತನ್ನ ತೋಳನ್ನು ತೋರಿಸಿದ. ತೋರಿಸುವಾಗ, ಅತ್ತೆ ಮಣೆಯ ಮೇಲೆ

ತುರುಕಲಿನಲ್ಲಿ ಕುಳಿತ ಅವನ ಮುಂದಕ್ಕೆ ವೀಳೆಯದ ತಬಕನ್ನು ತಂದಿರಿಸಿದಳು. ಅವನ ತೋಳಿನ ಗಾಯವನ್ನು ಕಂಡು, ಅದು ಬಾತುಕೊಂಡದ್ದನ್ನೂ ಕಂಡು, "ಏನು, ಏನಾಯಿತು? ಇನ್ನೊಮ್ಮೆ ಕರಡಿ ಗಿರಡಿ ಕಚ್ಚಿತೇ?" ಎಂದು ಕೇಳಿದಳು.

"ನೋಡಿ ಅತ್ತೆ, ಇದು ಕರಡಿಯ ಬಾಯಿಯೇ? ಅಲ್ಲವೆ, ಹುಲಿಯ ಹಲ್ಲೇ ಎಂದು ನೀವೇ ನೋಡಿ."

"ಹುಲಿ ಕಚ್ಚಿತೇ!"

ಮಾವ ಅದನ್ನೇ ದಿಟ್ಟಿಸಿ ನೋಡುತಿದ್ದಾಗ, ಚೆನ್ನಾಗಿ ಊರಿದ್ದ ಮನುಷ್ಯನ ಹಲ್ಲುಗಳ ಗುರುತು ಅವನಿಗೆ ಕಾಣಿಸಲಾರವೇ? ಅವನು ಅದನ್ನು ಕಂಡು ಯೋಚಿಸಿ, ಕಾರಣವನ್ನು ಊಹಿಸಿದವನಂತೆ "ಯಾರು ಕೆಂಪಿಯೇ?" ಎಂದು ಕೇಳಿದ.

"ಹೂಂ."

ಅತ್ತೆ—"ಕೆಂಪಿ ಕಚ್ಚಿದಳೆ ಹೀಗೆ?" ಎಂದಳು ವಿಸ್ಮಯದಿಂದ.

"ನೀನು ಸುಮ್ಮನಿರು. ನಿನ್ನ ಮಗಳಿಗೇನು ಹಲ್ಲಿಲ್ಲವೇ? ಅಥವಾ" ಎಂದು ಅಳಿಯನ ಕಡೆಗೆ ತಿರುಗಿ, "ತುಕ್ರ, ಏನು ಸಂಗತಿ ಇದು? ಏನು ನಡೆದದ್ದು; ಎಲ್ಲವನ್ನು ಹೇಳು. ಗಂಡ ಎಂಬ ಭೀತಿಯಿಲ್ಲದೆ ಹೀಗೆ ಮಾಡಿದಳೆಂದರೆ ನಾನೇನು ಅವಳನ್ನು ಸುಮ್ಮನೆ ಬಿಡುವಹಾಗಿಲ್ಲ, ಚರ್ಮ ಸುಲಿದು ಬಿಡುತ್ತೇನೆ" ಎಂದು ನುಡಿದ. ಅದನ್ನು ಕೇಳಿ ತುಕ್ರನಿಗೆ ಧೈರ್ಯವಾಯಿತು. ನಡೆದ ದುರ್ವಾರ್ತೆಯನ್ನು, ತನ್ನದೇ ಆದ ರೀತಿಯಲ್ಲಿ, ಸ್ವಪಕ್ಷಕ್ಕೆ ಗುಣವಾಗುವ ಬಗೆಯಲ್ಲಿ ಬಣ್ಣಿಸಿದ. ಅದು ಅಪರಾಧಿಗಳ ರೀತಿ. ಅಲ್ಲದೆ ಹೆಚ್ಚು ಕಡಿಮೆ ಎಲ್ಲರ ಸ್ವಭಾವವೂ ಹಾಗೆಯೇ. ಮಾವನಿಗೆ ಏನೊಂದೂ ತೋಚಲಿಲ್ಲ. "ಹೋಗಲಿ, ಊಟ ಮಾಡಿ ಮೆಲ್ಲಗೆ ಮಾತನಾಡುವ. ಇನ್ನು ಕತ್ತಲಾಯಿತು. ಬೆಳಿಗ್ಗೆ ನಾನೂ ಬರುತ್ತೇನೆ, ಜತೆಯಲ್ಲಿ ಹೋಗುವ. ಅವಳಿಗೆ ಬುದ್ಧಿ ಹೇಳುತ್ತೇನೆ. ನೀನು ಗಂಡಸು. ಹೆಚ್ಚಿನ ತಾಳ್ಮೆ ತೆಗೆದುಕೊಳ್ಳಬೇಕು. ಬುದ್ಧಿಯಿಲ್ಲದ ಅವಳನ್ನು ನಡೆಯಿಸಿಕೊಂಡು ಹೋಗಬೇಕು" ಎಂದು ಸಮಾಧಾನ ಹೇಳಿದ. ಅಳಿಯನೊಡನೆ ಕುಳಿತು ಊಟ ಮಾಡಿದ. ಊಟವಾದ ಮೇಲೆ, ಮಾವನ ಮನಸ್ಸನ್ನು ಅದೇ ಅದೇ ವಿಚಾರಕ್ಕೆ

ಹರಿಯಗೊಡಬಾರದೆಂದು ತುಕ್ರ "ನಾನು ಇನ್ನೊಂದು ಸಂಗತಿಗಾಗಿಯೂ ಬಂದಿದ್ದೇನೆ, ನೋಡು ಮಾವ. ಮಲೆಯ ಕಲ್ಕುಡನಿಗೆ ಇಲ್ಲಿಲ್ಲದ ಸಿಟ್ಟು ಬಂದಿದೆ. ಕೆಂಚನಿಗೆ ಸ್ವಪ್ನದಲ್ಲಿ ಕಾಣಿಸಿ ಅವನು ನರಬಲಿ ಬೇಕೆಂದು ಬೆದರಿಸಿದ್ದು ಮಾತ್ರವಲ್ಲ, ಅವನ ಸೊಸೆಯನ್ನು ಬಲಿಕೊಂಡೂ ಆಯಿತು" ಎಂದು ತನಗೆ ತಿಳಿದ ವಾರ್ತೆಗಳನ್ನೆಲ್ಲ ಭೀತಿ ಹುಟ್ಟಿಸುವಂತೆ ಬಣ್ಣಿಸಿದ. ತಿರುಗಿ ಮಾತು ಮುಂದರಿಸುತ್ತ "ಕೆಂಚಣ್ಣ ಹೆದರಿ ಈಗ ಧನಿಗಳಿರುವಲ್ಲಿಗೆ ಓಡಿದ್ದಾನೆ. ಕಲ್ಕುಡನಿಗೆ ಸಲಬೇಕಾದ ನೇಮ, ಈ ಮಳೆ ಬೀಳುವುದರೊಳಗೆ ಸಲದೆಹೋದರೆ, ಮುಂದಿನ ಪರಿಣಾಮ ಒಳ್ಳೆಯದಾಗುವಂತಿಲ್ಲ. ಖಂಡಿತಕ್ಕೂ ಅದರಿಂದ ನಮ್ಮ ಮಲೆಗೂ ಕ್ಷೇಮವಿಲ್ಲ ಸ್ವಲ್ಪ ದಿನಗಳ ಹಿಂದೆ ಕೆಂಚಣ್ಣ ನಿಮ್ಮ ಗುರಿಕಾರನನ್ನು ಕಾಣಲಿಕ್ಕೆ ಬಂದು, ತಲೆಯ ಮೇಲೆ ಕೈಯಿಟ್ಟುಕೊಂಡು ಹೋದರು. ಅವನೆಲ್ಲಿಗೋ ಹೋಗಿದ್ದನಂತೆ. ನಮ್ಮ ನಮ್ಮ ಜಗಳ, ದ್ವೇಷ ಎಷ್ಟಿದ್ದರೂ ದೈವಕ್ಕೆ ಕೊಡುವ ಬಲಿ ಕೊಡದಿದ್ದರೆ, ಸಲಬೇಕಾದ ಕೋಲ ನಡೆಯಿಸದೆ ಇದ್ದರೆ—ಆಗಲಾರದು. ಈ ಒಂದು ಕೆಲಸದ ಮಟ್ಟಿಗೆ ನಮ್ಮ ನಮ್ಮ ಜಗಳಗಳನ್ನು ಮರೆತು, ದೈವದ ಕೆಲಸ ಚಂದವಾಗಿ ನಡೆಯಿಸಿಕೊಡಬೇಕು. ನಿಮ್ಮ ಗುರಿಕಾರನಿಗೆ ಹೇಳಿ, ಅಷ್ಟು ಮಾಡಿಸುವ ಭಾರ ನಿಮ್ಮದು. ದಿನ ದೂಡಿದರೂ ಪ್ರಯೋಜನವಿಲ್ಲ. ಕಣ್ಣು ಮುಚ್ಚಿದರೆ ಬರುವುದು ಮಳೆಗಾಲ" ಎಂದು ಬಿನ್ನವಿಸಿದನು. ಅವನ ಮಾವ ಎಲ್ಲರಂತೆ ಕಲ್ಕುಡನ ಮೇಲೆ ವಿಶ್ವಾಸವುಳ್ಳವ, ದೈವದೊಡನೆ ಹಗೆ ಸಲ್ಲದೆಂದೂ ತಿಳಿದವ. "ಹೌದಪ್ಪ, ನನ್ನ ಮಾತು ಅವ ಕೇಳುತ್ತಾನೆಯೋ. ನೀನೂ ಬಾ, ಹೋಗಿ ಹೇಳುವ. ನಾಳೆ ಕೆಂಚನ ಸಂಸಾರಕ್ಕಾದ ಪಾಡು ನಮಗೂ ಆಗಬಾರದೆಂದಿದ್ದರೆ, ಬೇಗನೆ ನೇಮದ ಏರ್ಪಾಟು ಮಾಡು—ಎಂದು ಹೇಳಿ ಬರುವ" ಎಂದು ಮಾತು ಮುಗಿಸಿದ.

ಕತ್ತಲೆಯಲ್ಲಿ ಸಂಭಾಷಣೆ ಮುಂದುವರಿಸಲಾರದೆ, ಚಾಪೆ ಬಿಡಿಸಿ, ಇಬ್ಬರೂ ಒರಗಿಕೊಂಡರು.

ಅಷ್ಟರಲ್ಲೇ ಕೇಳಿಸಿತು—ಹೊರಗಿನಿಂದ ಬಿದಿರ ತಡಿಕೆಯನ್ನು ಬಡಬಡ ತಟ್ಟಿ 'ಅಪ್ಪ, ಅಪ್ಪ' ಎಂದು ಕರೆಯುವ ಧ್ವನಿ. ತೌಡ, ಹಾಗೆಂದು ತುಕ್ರನ ಮಾವನ ಹೆಸರು, ಎಚ್ಚೆತ್ತು ಮಗಳ ಧ್ವನಿಯನ್ನು ಗುರುತಿಸಿದ.

"ಯಾರು—ಕೆಂಪಿಯೇ? ಈ ಹೊತ್ತಿಗೆ!" ಎಂದು ತಡಿಕೆ ಬಾಗಿಲನ್ನು ತೆಗೆಯಲು ಹೋದ. 'ಕೆಂಪಿ' ಎಂದೊಡನೆಯೇ ಜಿಗಿದು ಕುಳಿತನು ತುಕ್ರ—ಚಾಪೆಯಲ್ಲಿ. ಪುಣ್ಯಕ್ಕೆ ದೀಪವಿರಲಿಲ್ಲ. ಬೆಳಗಿನ ತನಕ ಕೆಂಪಿಯ ಮುಖ ಕಾಣಿಸಲಾರದು—ಎಂಬ ಧೈರ್ಯ ಅವನಿಗೆ. ತೌಡ ಹೊರಕ್ಕೆ ಬಂದು, ನಸು ಬೆಳಕಿನಲ್ಲಿ ಮಗಳನ್ನು ಇದಿರುಗೊಂಡು, "ಏನು ಮಗಳೇ ಇದು. ಏನು ಮಾಡಿದೆ? ಈ ಕತ್ತಲೆಯಲ್ಲಿ ಬಂದೆಯಾ? ನಿನ್ನ ಗಂಡನೂ ಬಂದಿದ್ದಾನೆ—ಒಳಿತಾಯಿತು" ಎಂದು ಬೆನ್ನ ಮೇಲೆ ಕೈಯಿಟ್ಟರೆ, "ಅವರು ಇದ್ದಾರೆಯೇ? ಇರಲಿ. ನಾನು ಹೋಗುತ್ತೇನೆ" ಎಂದು ಗೋಳ್ಗರೆಯ ತೊಡಗಿದಳು. ಮಾತಿನ ಬದಲು ಗದ್ಗದ ಸಂಗೀತ. ಅವಳನ್ನು ಸಮಾಧಾನಪಡಿಸಿ, ಮನೆಯೊಳಕ್ಕೆ ಕರೆದು ತಂದು ಬಿಡಬೇಕಾದರೆ ಅವನಿಗೆ ಸಾಕು ಬೇಕಾಯಿತು. ಗಟ್ಟಿ ಮಾತನಾಡುವುದಕ್ಕಿಲ್ಲ, ನೆರೆಯವರ ಮುಂದೆ ಗುಟ್ಟು ಬಿಚ್ಚುವುದಕ್ಕಿಲ್ಲ. ಮನೆಯಲ್ಲಿ ದೀಪವಿಲ್ಲದ್ದರಿಂದ ಹೊರಗಿಂದ ಅದನ್ನು ತರುವುದಕ್ಕೂ ಇಲ್ಲ. ಕೆಂಪಿ, ತಾಯಿಯಿದ್ದ ಕೊಟಡಿಗೆ ಹೋಗಿ, ತಾಯಿಯೊಡನೆ ಗುಸುಗುಸು ಧ್ವನಿಯಲ್ಲಿ, ತನ್ನ ಗಂಡನ ಪುರಾಣವನ್ನೆಲ್ಲ, ತನ್ನ ಹೊಟ್ಟೆಯ ನೋವುಗಳನ್ನೆಲ್ಲ ಉಪ್ಪು ಕಾರ ಸವರಿ ಬಣ್ಣಿಸ ತೊಡಗಿದಳು.

ಹೊರಗೆ ತೌಡ ಹಾಸಿಗೆಯಲ್ಲಿ ಹೊರಳಾಡುತ್ತಲಿದ್ದ—ನಿದ್ದೆ ಬಾರದೆ. ಆ ಕತ್ತಲಲ್ಲೂ ತಲೆಯ ತನಕ ಮುಸುಕು ಹಾಕಿಕೊಂಡು ಮುಂದಿನ ದಾರಿ ಏನು ಎಂದು ಯೋಚಿಸುತ್ತ ಕೊರಡಾಗಿ ಮಲಗಿದ್ದ. ಬೆಳಕು ಹರಿದ ಮೇಲೆ, ಹೊರಗಿನ ಜಗತ್ತಿಗೆ ಗಂಡಹೆಂಡಿರಲ್ಲಿನ ಈ ಮನಚ್ಛಿದ್ರ ಹೊರಗೆಡವಿ, ಮಾನಕ್ಕೆ ಕುಂದು ತರುವುದರಲ್ಲಿ ತನಗೆ ಭೂಷಣವಿದೆ—ಎಂದು ತಿಳಿಯಲಾರದ ತೌಡ, ಕಟ್ಟಕೊನೆಗೆ ಆ ಕತ್ತಲಲ್ಲೇ ಅನುಸಂಧಾನಕ್ಕೆ ತೊಡಗಿದ. ಅದು ಒಂದಕ್ಕೇನೋ ಒಳಿತಾಯಿತು. ಒಬ್ಬರ ಮುಖವನ್ನು ಒಬ್ಬರು ನೋಡಬೇಕಾಗಿರಲಿಲ್ಲ. ತಮ್ಮ ತಮ್ಮ ಹೇಳಿಕೆಗಳನ್ನು ನಿರ್ಭೀತಿಯಿಂದ ಮುಂದಿರಿಸಲು ಹಗಲಿಗಿಂತ ರಾತ್ರಿಯೇ ಸದವಕಾಶ. "ತುಕ್ರ" ಎಂದು ತೌಡ ಅಳಿಯನನ್ನು ಕರೆದ. "ನಿದ್ದೆ ಹತ್ತಿದೆಯೇ?" ಎಂದು ಕೇಳಿದ. "ಹೂಂ" ಎಂಬ ಮರುಧ್ವನಿ ಬಂದಿತು—ತುಕ್ರನ ಬಾಯಿಂದ. "ಕೆಂಪಿ ಹೇಳುವುದೆಲ್ಲ

ಕೇಳಿಸುತ್ತದೆಯಲ್ಲ ನಿನಗೆ? ಅವಳೆನ್ನುವುದು ನಿಜವೇ? ಅಷ್ಟೆಲ್ಲ ನೀನು ಅವಳನ್ನು ದಣಿಸಿದವನಾದರೆ, ಅವಳು ನಿನ್ನಲ್ಲಿ ಸಿಟ್ಟಾದುದೇನು ತಪ್ಪು? ಹಾಗೆ ಅವಳು ಕಚ್ಚಿದ್ದೇನು ತಪ್ಪು? ಮಗಳ ಪಕ್ಷವನ್ನು ಹಿಡಿದು ಮಾತ ನಾಡುತ್ತೇನೆಂದು ತಿಳಿಯಬೇಡ. ಅವಳು ಕಚ್ಚಿದ್ದೇನೋ ತಪ್ಪು, ನಿಜ. ಆದರೆ ತನ್ನಲ್ಲಿ ಹೊಟ್ಟೆಯುರಿ ಉಂಟಾದಾಗ ಅದನ್ನು ಮನಸ್ಸಿನಲ್ಲಿಡಲಾರದೆ ದುಡುಕಿ ಏನೋ ಹೇಳಿದಳು. ದೊಡ್ಡವ ನೀನು ತಾಳ್ಮೆ ತಂದುಕೊಳ್ಳ ಬೇಕಾದವ ನೀನು. ಬದಲು, ಅವಳೇನೋ ಚುಚ್ಚಿ ನುಡಿದಳೆಂದು, ಬಡಿಗೆ ಹಿಡಿದು ನೀನು ಅವಳ ತಲೆಯೊಡೆಯುವುದಕ್ಕೆ ಹೊರಟರೆ ಹೇಗೆ?" ಎಂದು ಕೇಳಿದ.

ಎಲ್ಲರೂ ಒಂದೇ ಕಡೆಯಲ್ಲಿ ಕಲೆತು ಸಭೆ ಸೇರಿದರು. ಕೆಂಪಿಗೆ ಧೈರ್ಯ—ತನ್ನವರಿಬ್ಬರಿದ್ದಾರೆಂದು. ಗಂಡನ ಮೇಲಿದ್ದ ದೂರನ್ನಿನ್ನಷ್ಟು ಬಣ್ಣ ಬಳಿದು ಹೇಳತೊಡಗಿದಳು. ಅದರಲ್ಲಿ ಚಿಕ್ಕಿಗೂ ಅವನಿಗೂ ಇದ್ದ ಸ್ನೇಹದ ಕತೆಯುನ್ನೂ ಹೇಳಿದಳು. "ನಾನು ಹೆಚ್ಚಾದ ಮೇಲೆ ಅವರೊಂದಿಗೆ ಏಕೆ ಇರಬೇಕು. ಬೇಡವಾದರೆ ಬೇಡ ಎಂದು ಬಿಡಬಹುದಿತ್ತು. ಏನಾದರೂ ಮಾಡಿಕೊಂಡು ದುಡಿದೇನು; ಬದುಕಿಯೇನು. ಆದರೆ ತಲೆಯೊಡೆದು ನನ್ನ ಬಾಯಿ ಮುಚ್ಚಿಸಬೇಕೆಂದು ಅವರು ಹೀಗೆ ಪ್ರಯತ್ನಿಸಿದರೆ ಬಿಟ್ಟೇನೆಯೇ, ನಾನು."

ತುಕ್ರ ಅಪರಾಧಿಯಂತೆ ತೋರಿಸಿಕೊಳ್ಳುವುದಾಗಲೀ, ತನ್ನ ತಪ್ಪನ್ನು ಒಪ್ಪಿಕೊಳ್ಳುವುದಾಗಲೀ ಮನವೊಪ್ಪದ ಕೆಲಸವಾಯಿತು. ಅವನಲ್ಲಿಯೂ ಉಕ್ಕಿದ ರೋಷವಿತ್ತು. ಸ್ವಾಭಿಮಾನಕ್ಕೆ ಕೊರತೆ ಇರಲಿಲ್ಲ. "ಚಿಕ್ಕಿಯ ಹೆಸರು ಹೇಳಿ, ನನ್ನನ್ನು ನೀನು ಹಂಗಿಸುವುದು ಬೇಡ. ಅವಳ ಸ್ನೇಹ ಮಾಡಿಕೊಂಡು ನಿಮ್ಮಿಬ್ಬರನ್ನು ಚೆನ್ನಾಗಿ ನಡಿಸಲಿಲ್ಲಾ ಅಂದರೆ ದೇವರು ಮೆಚ್ಚಲಾರದ ಮಾತು. ನೀನಂದಂಥಾ ಒಂದು ಕೆಟ್ಟ ಮಾತನ್ನೂ ಹಿರಿ ಯವಳು ಅಂದಿಲ್ಲ. ಮನೆಯಲ್ಲಿ ನಿನಗೆ ಯಾವ ಗಳಿಗೆಯಲ್ಲಿ ಯಾವುದಕ್ಕೆ ಕೊರತೆ ಮಾಡಿದ್ದೇನೆ—ಹೇಳು ಯಾವುದಾವದಿದ್ದಿದ್ದರೆ? ಬರಿಯ ಹೊಟ್ಟೆ ಕಿಚ್ಚಿನಿಂದ ಆಡಬೇಡ. ಇಷ್ಟು ಆಡಿದ್ದು ಸಾಲದೆಂದು, ಹತ್ತು ಜನರ ಮುಂದೆಯೂ, ನಾನು ಚಿಕ್ಕಿಯನ್ನು ಹೊಂಡಕ್ಕೆ ದೂಡಿ ಕೊಂದೆನೆಂದು

ಹೇಳಿದೆಯಲ್ಲ. ದೇವರ ಆಣೆಯಾಗಿ ಹೇಳುತ್ತೇನೆ—ನಾನು ಅಂಥ ಕೆಲಸ ಮಾಡಿದವನಲ್ಲ. ಹತ್ತು ಜನರ ಮುಂದೆ ನಿಂತು ನೀನು ಅದು ನಿಜವೆಂದು ಆಣೆಮಾಡಿ ಹೇಳುತ್ತೀಯಾ? ಸುಮ್ಮನೆ ಹೇಳಿದರಾಗಲಿಲ್ಲ. ಈಗ ನಿನ್ನನ್ನು ಕಳುಹಿಸಿಕೊಡಿ ಎಂದು ಬೇಡಲು ಬಂದವನಲ್ಲ ನಾನು. ನೀನು—'ತಪ್ಪಾಯಿತು' ಎಂದು ನಾಲ್ಕು ಮಂದಿಯ ಮುಂದೆ ಹೇಳಿದರೆ ಮಾತ್ರ ಕರೆದುಕೊಂಡು ಹೋಗುತ್ತೇನೆ, ಮೊದಲಿನಂತೆಯೇ ಬಾಳಿಸುತ್ತೇನೆ. ಇದೇ ನನ್ನ ಕೊನೆಯ ಮಾತು" ಎಂದು ತುಕ್ರ ತನ್ನ ಅಭಿಪ್ರಾಯವನ್ನು ಸಿಟ್ಟಿನಿಂದಲೇ ವ್ಯಕ್ತಮಾಡಿದ.

ಹೀಗೆ ನುಡಿದು, ಕೈಕಟ್ಟಿ ಕುಳಿತ ತುಕ್ರ. ಮುಂದೆ ಬೇರೆ ಮಾತಾಡಲಿಲ್ಲ. ವಿನಯಕ್ಕೆ ಹೋಗಲಿಲ್ಲ. ತೌಡ ಮಗಳನ್ನು ಕೇಳಿದ—"ನೀನು ಅಂಥ ಮಾತು ಆಡಿದ್ದು ನಿಜವೇ?" ಎಂದು. ಅದಕ್ಕವಳು "ನಾನು ಆಗ ಸಿಟ್ಟಿನಿಂದ ಏನು ಆಡಿದೆ, ಏನು ಆಡಿಲ್ಲ—ಎಂದು ಈಗ ಹೇಳಲಾರೆ. ನನ್ನ ಮನಸ್ಸಿಗೆ ಹಾಗೆ ಕಂಡದ್ದು ನಿಜ. ಚಿಕ್ಕಿ ಗರ್ಭಿಣಿಯಾಗಿ ಕಾಣಿಸಿದ್ದು ನನಗೊಬ್ಬಳಿಗೇನೇ ಗೊತ್ತಿದ್ದ ಸಂಗತಿಯಲ್ಲ, ಉಳಿದವರಿಗೂ ಅದು ಗೊತ್ತಿದ್ದ ಮಾತು. ನಿತ್ಯ ಹೋಗಿಬರುವ ಸ್ಥಳದಲ್ಲಿ ಅವಳು ಕಾಲು ತಪ್ಪಿ ಆ ಕುಣಿಗೆ ಎಂದೂ ಬಿದ್ದಿರಲಾರಳು. ಅವಳನ್ನು ಯಾರೋ ಕೊಂದುಹಾಕಿದ್ದು ನಿಜ. ಯಾರು ಕೊಂದರೋ ತಿಳಿಯೆ. ಇನ್ನಾರಿಗೆ ಅದರಲ್ಲಿ ಲಾಭವೋ-ನಷ್ಟವೋ-ನಾನೇಕೆ ಹೇಳಲಿ? ನನಗಂತೂ ನಿಮ್ಮೊಡನೆ ಬಾಳ್ವೆ ಮಾಡಿ ಸಾಕಾಗಿದೆ" ಎಂದು ಸೆಟೆದು ನುಡಿದಳು.

ಕಾವು ಏರಿದ ಆ ಗಳಿಗೆಯು, ಶಾಂತಿ ಸಮಾಧಾನಗಳಿಗೆ ತಕ್ಕ ಸಮಯವಲ್ಲವೆಂದು ಎಲ್ಲರೂ ತಿಳಿಯಬೇಕಾಯಿತು. ಇಷ್ಟೆಲ್ಲ ವಾದವಿವಾದ, ತರ್ಕ ಪ್ರತಿತರ್ಕಗಳು ನಡೆಯುವಾಗ ನಸುಕಾಯಿತು; ಬೆಳಗೂ ಆಯಿತು. ಮುಂದೆ ತುಕ್ರ ಉಳಿದ ಕೆಲಸಗಳನ್ನು ಮರೆತುಬಿಟ್ಟು, "ಹೋಗಿಬರುತ್ತೇನೆ ಮಾವ, ನಾನು ಹೇಳಿದ್ದು ನೆನಪಿರಲಿ. ಅವಳಿಗೆ ತಿಳಿದ ಹಾಗೆ ಅವಳು ಮಾಡಲಿ. ನೀವು ಬಲ್ಲವರು" ಎಂದು ನುಡಿದು ಹೊರಟೇಬಿಟ್ಟ. ಕಲ್ಕುಡನ ನೇಮದ ಮಾತು, ಕತೆ ಅಲ್ಲಿಗೇ ನಿಂತುಬಿಟ್ಟಿತು. ಮುಂದೆ ಅದನ್ನು ಮುಂದುವರಿಸಲು ಕೆಂಚನೇ ಬರಬೇಕಾಯಿತು.

ಹುಲಿಯಂತಿದ್ದ ತುಕ್ರ, ಮಾವನ ಮನೆಯಲ್ಲಿ ನೆಮ್ಮದಿಯನ್ನು ಪಡೆಯಲಾರದೆ, ದರ್ಪಭಂಗಿತನಾಗಿ ಕೇರಿಗೆ ಮರಳಿದ. ಮರಳಿದವನು ತಾನಾಗಿಯೇ "ಕೆಂಪಿ ತವರಿಗೆ ಹೋಗಿದ್ದಾಳೆ. ನಾಲ್ಕು ದಿನದ ಮೇಲೆ ನಾಯಿಯಂತೆ ಮನೆಗೆ ಬಂದಾಳು. ಬರಲಿ; ಬಿಡಲಿ. ನಾನಂತೂ ಅವಳ ತಳ್ಳಿಗೆ ಇನ್ನು ಹೋಗುವವನಲ್ಲ" ಎಂದು ಹೇಳತೊಡಗಿದ.

ಕೆಂಪಿ ಸೇರಿದಳು ತವರಿಗೆ; ತುಕ್ರ ಸೇರಿದ ಕೇರಿಗೆ. ಆದರೇನು? ಕೇರಿಯ ಮನಸ್ಸು ಅವರ ಪ್ರಕರಣದಿಂದ ತುಂಬ ಅಸಮಾಧಾನ ತಾಳಿತು. ಕೆಂಪಿ ರೋಷದ ಗಳಿಗೆಯಲ್ಲಿ ಹೊರಿಸಿದ ಅಪವಾದ ತುಕ್ರನ ತಲೆಯನ್ನು ಏರಿಯೇ ಬಿಟ್ಟಿತು. 'ಆತನೇ ಏನೋ ಮಾಡಿದ್ದಾನೆ' ಎಂದು ನಾಲ್ಕು ನಾಲ್ಕು ಸುದ್ದಿಯ ಮಾತುಗಳನ್ನು, ಜನ ಕೂಡಿಸಿ, ಎಂಟು ಮಾಡಿ ಹೇಳ ತೊಡಗಿದರು. ಅವರಲ್ಲಿ ಹಲವರು ಅದನ್ನು ನಂಬಿದರು. ನಂಬಿ, ಆ ವಿಷಯದ ದೂರನ್ನು ಕೆಂಚನ ತನಕ ಮುಟ್ಟಿಸಬೇಕೆಂದು ಎಣಿಸಿದವನು ಬೂದಣ್ಣ. ಕೆಂಚನಿಗಾದ ಈ ಅನ್ಯಾಯವನ್ನು ಅವನಿಗೆ ತಿಳಿಸಬೇಕಾದ್ದು ಅವಶ್ಯ ಎಂದುಕೊಂಡ ಅವನು. ಅಲ್ಲದೆ ತುಕ್ರನ ಮೇಲಿನ ಸೇಡು, ದ್ವೇಷಗಳನ್ನು ತೀರಿಸಲು ಅದೊಂದು ಸದವಕಾಶ. 'ಯಾವುದಕ್ಕೂ ಕೆಂಚ ಬರಲಿ' ಎಂದಂದುಕೊಂಡ. ಕೆಂಚ ಬರುವುದಕ್ಕೆ ದಿನವಾಗುತ್ತವೆಂದು ಗೊತ್ತು. ಆ ವಾರದ ಕೊನೆಯೊಳಗಂತೂ ಬಂದೇ ಬಂದಾನು. ಅಲ್ಲಿಯ ತನಕ ಸುಮ್ಮ ನಿರಬೇಕು ಅಂದುಕೊಂಡ. ಬೇರೆ ಊರಾಗಿದ್ದರೆ, ಬೇರೆ ತಾವಾಗಿದ್ದರೆ ಪೋಲೀಸರು ಬಂದು, ಏನೇನೋ ಗಲಭೆಯಾಗಿ, ಕೊಲೆಯ ವಿಷಯದಲ್ಲಿ ನಿರಪರಾಧಿಯಾದ ತುಕ್ರನೂ ನರಳಬೇಕಾಗಿತ್ತು. ಆದರೆ ಅದು ಮಲೆ; ಹೊರಗಿನ ಮನುಷ್ಯರ ಸುತ್ತುಸುಳಿವಿಲ್ಲದ ಬೀಡು. ಬರಿಯ ದೆವ್ವದ ಶಾಪಕ್ಕೆ ಜನ ಸಾಯುವುದು, ಶವಸಂಸ್ಕಾರ ಮಾಡುವುದು—ಒಂದು ಕಷ್ಟದ ಮಾತಲ್ಲ. ಹಾಗಾಗಿ ಹೊರಗಿನ ಲೋಕದ ಕೈವಾಡ ಇಲ್ಲೇನು ನಡೆಯಲಿಲ್ಲ. ಇದೆಲ್ಲವು ನಡೆದ ಮೂರನೆಯ ದಿನಕ್ಕೆ—ಖುದ್ದ ತಿರುಮಲಭಟ್ಟರೇ ತಮ್ಮ ಅಡುಗೆ ಯವನೊಡನೆ ಮಲೆಯ ದರ್ಶನಕ್ಕೆ ಬಂದರು. ಬಿಡಾರಕ್ಕೆ ಬಂದವರೇ, ಕೆಂಚನಿಗೂ ತುಕ್ರನಿಗೂ ಜನ ಕಳುಹಿಸಿದರು. ತುಕ್ರ ಧಾವಿಸಿ ಬಂದ, ಕೆಂಚ ಬರುವುದಕ್ಕಿದ್ದಿಲ್ಲ. ತುಕ್ರ—ಕೆಂಚ ಅವರನ್ನು ಅರಸಿಕೊಂಡು ಘಟ್ಟಕ್ಕೆ ಹೋದ ವಿಚಾರವನ್ನು ಹೇಳಿದ.

"ಆತ ದಾರಿಯಲ್ಲಿ ಸಿಕ್ಕಿದ ಹಾಗೂ ಇಲ್ಲ. ವಿಟ್ಲಕ್ಕೆ ಬಂದ ಹಾಗೂ ಇಲ್ಲ. ಹೂಂ, ಹೋದರೆ ಬರುತ್ತಾನೆ. ಏನು ಸಮಾಚಾರ, ಹೋದದ್ದು ? ನಾನು ಬರುವವನೇ ಇದ್ದೆನಲ್ಲ—ಎಂದೂ ಮಳೆ ಬಿಟ್ಟು ಹೊರಡುವವನಲ್ಲ ವಲ್ಲ ಕೆಂಚ" ಎಂದರು ಭಟ್ಟರು.

ಧನಿಯಲ್ಲಿ ಸಲುಗೆಯುಳ್ಳ ತುಕ್ರ, ಕಲ್ಕುಡನ ಕೋಪದ ವಿಚಾರವಾಗಿ ಭಯಗೊಂಡು ಹೊರಟುಹೋದ ಕೆಂಚನ ವಾರ್ತೆಯನ್ನು ಹೇಳಿದ. ಚಿಕ್ಕಿಗಾದ ಅಪಘಾತ, ಕೆಂಚ ಕಂಡ ಸ್ವಪ್ನ ಇವುಗಳನ್ನು ಬಣ್ಣಿಸಿ, "ನಿಮ್ಮಿಂದಲಾದರೂ ಎಲ್ಲರಿಗೂ ಹೇಳಿಸಿ, ದೈವಕ್ಕೊಂದು ನೇಮ ಬೇಗನೆ ಮಾಡಿಸಬೇಕೆಂದು ಆತ ಹೋಗಿದ್ದಾನೆ" ಎಂದು ನುಡಿದ. ಆ ಪ್ರಶ್ನೆಗೆ ಪುಷ್ಟಿಯನ್ನು ಕೊಟ್ಟು, ಇದ್ದ ಅವಸರವನ್ನೂ ತಿಳಿಸಿದ.

ತಿರುಮಲಭಟ್ಟರಿಗೆ ದೈವದ ವಿಚಾರ ಅಷ್ಟು ನಂಬಿಕೆಯಿತ್ತೆಂದಲ್ಲ. ನಂಬಿದವರ ವಿಚಾರದಲ್ಲಿ, ಅದು ಏನೆಲ್ಲ ಕೆಲಸಮಾಡೀತೆಂದು ಗೊತ್ತು. ಹಾಗಾಗಿ ಅಂದರು—"ಹೋ, ಹಾಗೋ. ಈಗ ಕೆಂಚನ ಇದ್ದ ಒಬ್ಬಳು ಸೊಸೆ ಈಗ ಸತ್ತಳೇ! ಪಾಪ—ಮುದುಕ. ಇನ್ನು ಇದ್ದೊಬ್ಬ ಮೊಮ್ಮಗನನ್ನು ಸಾಕುವುದೆಂದರೆ ತುಂಬ ಕಷ್ಟ. ಅದಕ್ಕೆ ವಿಟ್ಲದ ತನಕ ಬರಬೇಕಿತ್ತೇ? ಏನು ಬೇಕು—ನಿಮ್ಮ ನೇಮಕ್ಕೆ? ದಿನ ಗೊತ್ತುಮಾಡಿ. ಎಲ್ಲ ತಯಾರು ಮಾಡಿ" ಎಂದರು.

ಪೂಜೆಯ ಪರಿಷ್ಕಾರವನ್ನೆಲ್ಲ ತುಕ್ರ ಬಣ್ಣಿಸಿದ. "ಎರಡು ಕೇರಿಯವರು ಸೇರಿ ನಡೆಯಿಸಬೇಕಾದುದನ್ನು, ನಾವು ಇಷ್ಟೇ ಜನ ಮಾಡುವುದು ಸಾಧ್ಯವಲ್ಲ. ಅದಕ್ಕೇನೆ ನಿಮ್ಮ ಬರ ಹಾರೈಸಿದ್ದೆವು. ಹಂದಿ, ಕೋಳಿ, ಮತ್ತೊಂದು ಎಂದರೆ ಖರ್ಚಿನ ಬಾಬತ್ತು. ಪೂಜಾರಿ ಇರುವುದು ಆ ಮಲೆಯಲ್ಲಿ. ಅವನು ಬಾರದೆ ನಾವು ನಾವೇ ಮಾಡುವ ಕೆಲಸವಲ್ಲ" ಎಂದು ತಿಳಿಸಿದ. ಜನಗಳ ಭೀತಿ ತೊಲಗುವುದಕ್ಕೆ, "ಖರ್ಚು ಎಷ್ಟಿದ್ದರೂ ನಾನು ಮಾಡಿಸುತ್ತೇನೆ" ಎಂದರು ಭಟ್ಟರು. ಮೇಲೆ "ನೀನು ಹೋಗಿ—ನಾನು ಹೇಳಿದ್ದೇನೆಂದು ಹಿರಿ ಮಲೆಯ ಗುರಿಕಾರನನ್ನು ಬರಹೇಳು" ಎಂದು ಅಪ್ಪಣೆ ಕೊಡಿಸಿದರು. ಅದಕ್ಕೆ 'ತನ್ನ ಮಾತು ಕೇಳುವವರಿಲ್ಲ' ಅನ್ನಬೇಕಾ[illegible]ತುಕ್ರ.

ಶುಕ್ರನು ನಿತ್ಯ ಧನಿಗಳ ಬಳಿಗೆ ಬಂದುಹೋಗುತ್ತಿದ್ದ. ಅವರ ಕೈಯಿಂದ ಹೊಗೆಸೊಪ್ಪು, ಎಲೆ ಅಡಿಕೆ ಕೊಂಡು ತಿನ್ನುತಿದ್ದ. ತನ್ನ ಮನಸ್ಸು ನೆಮ್ಮದಿಯಲ್ಲಿರದಿದ್ದರೂ 'ಕೆಂಚಣ್ಣ ಬರಲಿ, ಕೆಂಚಣ್ಣ ಬರಲಿ' ಅನ್ನುತ್ತಿದ್ದ. ಈ ನಡುವೆ ಬೂದ ಸುಮ್ಮನಿರಲಿಲ್ಲ. ತಾನು ಕೇಳಿದ ಸುದ್ದಿಗಳನ್ನು ಧನಿಗಳಿಗೆ ಮುಟ್ಟಿಸಿ, "ದೇವರು, ಯಾರಾದರೂ ಇಂಥ ಅನ್ಯಾಯ ಮಾಡುವುದುಂಟೇ? ಈ ವರೆಗೆ ಈ ಮಲೆಯಲ್ಲಿ ಕೊಲೆಪಾತಕ ನಡೆದದ್ದಿಲ್ಲ. ನೀವು ಶುಕ್ರನನ್ನು ಕಣ್ಣುಮುಚ್ಚಿ ನಂಬುತ್ತೀರಿ. ಅವನು ನಿರ್ದೋಷಿ ಇರಬಹುದು. ಆದರೆ ಅವನ ಹೆಂಡತಿ ಕೆಂಪಿಯ ಬಾಯಿಂದಲೇ ಬಂದ ಮಾತಿದು. ಅದಕ್ಕೆ ನಾವು ಬೆಲೆ ಕೊಡಬೇಡವೇ? ಕೆಂಚನಿಗೆ ಈ ಮಾತನ್ನು ತಿಳಿಸಿ, ಅವನ ಮನಸ್ಸನ್ನು ನೋಯಿಸಬಾರದು. ಅದರ ಮೊದಲು ನೀವೇ ಆ ಗಂಡ ಹೆಂಡಿರನ್ನು ನಾಲ್ಕು ಮಂದಿಯ ಮುಂದೆ ನಿಲ್ಲಿಸಿ, ವಿಚಾರಿಸಿ, ತನಿಖೆ ಮಾಡಿದರಾಗದೆ?" ಎಂದು ಸೂಚಿಸಿದ. ಬೂದನ ಮಾತು ಕೇಳಿ, ಶುಕ್ರನ ವಿಷಯದ ದೂರು ಹೇಳಿ ತೃಪ್ತನಾಗದೆ, 'ಅವ ಹಾಗೆ, ಹೀಗೆ, ಅವನನ್ನು ನಂಬಬೇಡಿ' ಎಂದು ಮೇಲಿಂದಮೇಲೆ ಬೂದ ಅನ್ನುವಾಗಲೂ ತನ್ನ ನೆಚ್ಚಿನ ಸೇವಕನಾದ ಆತನ ಕೈಬಿಡಲಾರರು ಧನಿಗಳು. "ಏನಿದ್ದರೂ ಕೆಂಚ ಬಂದ ಮೇಲೆಯೇ ರೂಬು ರೂಬು ಆಗಿ ವಿಚಾರಿಸುವ. ಬೆನ್ನುಗಡೆ ಯಾವುದೂ ಬೇಡ. ಅವಳನ್ನೂ ಕರೆಸುತ್ತೇನೆ. ಕಲ್ಕುಡನ ನೇಮ ನೋಡಿಕೊಂಡೇ ನಾನು ಊರಿಗೆ ಹೋಗುತ್ತೇನೆ. ಎಷ್ಟೆಂದರೂ ನೀವು ಕೇರಿಯವರೆಲ್ಲರೂ ಒಂದಾಗಿ ಬಾಳಬೇಕು. ಕಿವಿಗೆ ಬಿದ್ದದ್ದನ್ನೆಲ್ಲ ನಂಬಿ, ಇಲ್ಲದ ಮಾತಿಗೆ ಬೆಲೆ ಕೊಡಬಾರದು" ಎಂದು ಬೂದನಿಗೆ ಪ್ರತಿಯಾಗಿ ಉಪದೇಶಿಸಿದರು.

* * * *

ಆ ದಿನ ಹೊರಟ ಕೆಂಚ, ಬೆಳಕಿಗೆ ಮುಂಚೆ ಬಲ್ಲಾಳರ ಬೀಡಿಗೆ ಬಂದ. ಬೆಳಕು ಹರಿವ ತನಕ ಮುಂದೆ ಪಯಣ ಮಾಡುವಂತಿರಲಿಲ್ಲ. ಮುಂದಿನ ದಾರಿ ಅವನಿಗೂ ಚೆನ್ನಾಗಿ ತಿಳಿದಿರಲಿಲ್ಲ. ದಾರಿಯ ಜನಗಳನ್ನು ಕೇಳಿಕೊಂಡು ಹೋಗಬೇಕು. ಹಾಗೆಂದು, ಒಂದು ಮರದ ಕೆಳಗೆ ಒಮ್ಮಗನೊಡನೆ ಮಲಗಿಕೊಂಡು, ಬಿಸಿಲು ಬಿದ್ದೊಡನೆಯೇ ತಿರುಗಿ ಹೊರಟ. ಹಳೆಯ ಕಾಲದ ಧನಿಗಳನ್ನು ಬೆಳಗಾದಮೇಲೆ ಕಂಡ. ಅಲ್ಲಿಯೇ [illegible]

ಗಂಜಿಯನ್ನು ಬೇಡಿ ಕುಡಿದುಕೊಂಡ. ಹತ್ತಿಯಡ್ಕದ ದಾರಿಯಾಗಿ, ಒಳ ದಾರಿಯಲ್ಲಿ ಶಿರಾಡಿಗೆ ಬಂದ. ಮೊಮ್ಮಗನನ್ನು ತುಂಬ ದಣಿಸಿಕೊಂಡು ಹಾದಿ ಸಾಗಬಾರದೆಂದು ಅವನಿಗೆ ಹೇಳಬೇಕೇ? ಆ ರಾತ್ರಿ ಅಲ್ಲಿಯೇ ಮಲಗಿದ. ಮರುದಿನ ತಿರುಗಿ ಜನರನ್ನು ಕೇಳಿ ಕೇಳಿ, ಕಾಡಿನ ದಾರಿಯಲ್ಲಿ ಸುಬ್ರಹ್ಮಣ್ಯಕ್ಕೆ ಹೊರಟ. ಜನರನ್ನು ಕೇಳುವ ಕೆಲಸವೆಂದರೆ—ಆ ಪ್ರಪಂಚ ದಲ್ಲಿ, ದಾರಿಯಲ್ಲಿ ಸಿಕ್ಕಿದ ಜನರನ್ನು ಕೇಳುವುದಲ್ಲ. ಜನರಿರುವ ತಾವಿಗೆ ಹೋಗಿ ಕೇಳಬೇಕಾಗಿತ್ತು. ಅಂದರೆ ಹೋಗುವ ಮಾರ್ಗ ಇನ್ನೂ ಬಳ ಸಾಗುತ್ತದೆ. ಮೈಲು ಎರಡು ಮೈಲಾಗುತ್ತದೆ. ನೇರಾಗಿ ಹೋದರೆ, ಆರು ಹರದಾರಿ ಇರುವ ಸುಬ್ರಹ್ಮಣ್ಯಕ್ಕೆ, ಹೀಗೆ ಕೇಳಿ, ಮಾಡಿ ಹೋಗುವುದಕ್ಕೆ ಎರಡು ದಿನ ಹಿಡಿಯಿತವನಿಗೆ. ಎರಡನೆಯ ದಿನ ಸಂಜೆ ಸುಬ್ರಹ್ಮಣ್ಯ ಸೇರಿ ದೊಡನೆಯೆ ಅವನಿಗೆ ಹೋದ ಜೀವ ಬಂದಹಾಗಾಯಿತು. ಊರು ಮುಟ್ಟಿದ ರಾತ್ರಿ ಅಲ್ಲೊಂದು ಅಂಗಡಿಯ ಮನೆಯ ಮೇಲೆ ಹೋಗಿ ಮಲಗಿಕೊಂಡ. ಮರುದಿನ ಬೆಳಗ್ಗೆ, ಕುಮಾರಧಾರೆ ನದಿಗೆ ಹೋಗಿ, ತಾನು ಮುಳುಗಿ, ಮೊಮ್ಮಗನನ್ನೂ ಮುಳುಗಿಸಿ, ಸ್ನಾನಮಾಡಿಕೊಂಡು—ತುಂಬ ಭಯಭಕ್ತಿ ಗಳಿಂದ ದೇವರ ಗುಡಿಗೆ ಬಂದ. ಎಳೆತನದಲ್ಲಿ ಕಂಡ ಆ ಗುಡಿಯ ನೆನಪು ಅವನಿಗೆಲ್ಲಿ? ದೇವರ ಕೀರ್ತಿಯನ್ನೆಷ್ಟೋ ಕೇಳಿದ್ದಾನೆ. ಈಗ ಗುಡಿಯ ಮುಂದೆ ನಿಂತರೆ—ಭಾರಿಯ ಒಂದು ಸ್ವರ್ಗವಾಗಿ ಕಾಣಿಸಿತು ಆ ನೋಟ. ಕಾಯಿ, ಕರ್ಪೂರ, ಬಾಳೆಹಣ್ಣುಗಳನ್ನು ಕೊಂಡುಕೊಂಡು, ದೇವಾ ಲಯಕ್ಕೆ ಸುತ್ತುಬಂದು, ಹಣ್ಣುಕಾಯಿಗಳನ್ನು ಅರ್ಪಿಸಿ, ದೂರದಲ್ಲಿ ಮೊಣ ಕಾಲೂರಿ ತದೇಕಚಿತ್ತನಾಗಿ ಧ್ಯಾನಿಸಿದ—ದೇವರನ್ನು ಕುರಿತು. ಆತನು ಎರಗಿದ ಸಾಷ್ಟಾಂಗಗಳಿಗೆ ಲೆಕ್ಕವಿಲ್ಲ; ಮಗುವಿನಿಂದ ಮಾಡಿಸಿದ ನಮಸ್ಕಾರ ಗಳಿಗೆ ಕೊನೆಯಿಲ್ಲ. ಒಂದೇ ಬೇಡಿಕೆ ಅವನದು: 'ದೇವರೇ ಈ ಕೂಸನ್ನು ಕಾಯುವ ಭಾರ ನಿನ್ನದು' ಎಂಬ ಒಂದೇ ಪ್ರಾರ್ಥನೆ. ಮಗುವಿನ ಬೊಗ ಸೆಗೆ ತನ್ನ ಕೈಬೊಗಸೆಯನ್ನಿಟ್ಟು, ಅದರಿಂದಲೇ ಪ್ರಸಾದ ಸ್ವೀಕರಿಸುವಾಗ ಆ ಮುದುಕನ ಕಣ್ಣಲ್ಲಿ ಅಪಾರ ವ್ಯಥೆ ಮೂಡಿತ್ತು. ಪೂಜಾರಿ ಆ ನೋಟ ಕಾಣದೆ ಇರಲಿಲ್ಲ. ಅವನಿಗೂ ಮರುಕವಾಯಿತೋ ಏನೋ. "ಮನಸ್ಸಿ ನಲ್ಲಿರುವುದನ್ನು ಕೇಳಿಕೊಂಡಿದ್ದೀಯಲ್ಲ, ದೇವರು ನಡೆಸುತ್ತಾನೆ" ಎಂದ.

ಸಾಕ್ಷಾತ್ ದೇವರ ಬಾಯಿಂದಲೇ ಆ ಮಾತು ಬಂದಿದೆ ಎಂಬ ವಿಶ್ವಾಸ ಕೆಂಚನಿಗುಂಟಾಯಿತು. ಅವನಿಗೆ ಆ ಗಳಿಗೆಯಲ್ಲಾದ ಸಂತೋಷವನ್ನು ಹೇಳುವಂತಿಲ್ಲ. ಎದೆ ಉಬ್ಬಿಬಂತು, ಇನ್ನೊಮ್ಮೆ ಸಾಷ್ಟಾಂಗವೆರಗಿದ. ತನ್ನ ಮೊಮ್ಮಗನಿಂದಲೂ ಸಾಷ್ಟಾಂಗವೆರಗಿಸಿದ. ಅನಂತರ ಗುಡಿಯ ಸುತ್ತಲಿನ ಅಂದಚಂದ ನೋಡುತ್ತ, ಮೊಮ್ಮಗನಿಗೆ ಅದನ್ನು ತೋರಿಸುತ್ತ, ಹೊರಕ್ಕೆ ಬಂದ. ಗುಡಿಯ ಹೊರಭಾಗದಲ್ಲಿ ದೇವಾಲಯದ ಆನೆಯೊಂದು ಬಂದು ನಿಂತು, ಮೊಣಕಾಲೂರಿ ಸೊಂಡಿಲನ್ನು ಮೇಲಕ್ಕೇರಿಸುತಿತ್ತು. ಅದನ್ನು ಕಂಡು ಕರಿಯನಿಗಾದ ಹಿಗ್ಗು ಹೇಳತೀರದು. ಕಾಡಾನೆಯನ್ನು ದೂರದಿಂದ ಲಾದರೂ ಕಂಡಿದ್ದ; ನಾಡಾನೆಯನ್ನು ಕಂಡವನಲ್ಲ. ಅದರ ಈ ಚರ್ಯೆ ತಿಳಿದವನಲ್ಲ. "ಏನು ಮಾಡುತ್ತಿದೆ ಅದು?" ಎಂದು ಕೇಳಿದ ಅಜ್ಜನನ್ನು. ಕೆಂಚನೂ ಅಷ್ಟೇ ಬೆರಗಿನಿಂದ ನೋಡುತ್ತಿದ್ದ ಆನೆಯನ್ನು. "ಅದೇ— ಸ್ವಾಮಿಗೆ ನಮಸ್ಕಾರ ಮಾಡುತ್ತಿದೆ. ಆನೆಯಾದರೂ ಅದಕ್ಕೆ ಎಷ್ಟು ಬುದ್ಧಿ ನೋಡು" ಎಂದು ನುಡಿದ ಕೆಂಚ.

ಕೆಂಚ ಅಷ್ಟೆಲ್ಲ ದೂರ ಬಂದಮೇಲೆ, ಸುಬ್ರಹ್ಮಣ್ಯದ ಬಳಿಯಲ್ಲಿರುವ ತಮ್ಮವರ ಗುಡಿಗುಡಾರಗಳನ್ನು ಕಂಡುಹೋಗಬೇಕೆಂಬ ಆಸೆ ಉಂಟಾಯಿತು. ದೇವಾಲಯಕ್ಕೆ ಬಂದಿದ್ದ ಜನಗಳೊಡನೆ "ಇಲ್ಲಿ ಕುಡಿಯರ ಮನೆಗಳು ಸಮೀಪ ಇಲ್ಲವೇ?" ಎಂದು ಕೇಳಿದ. 'ಹರದಾರಿ ದೂರದಲ್ಲಿವೆ; ದೇವರಿಗೆ ಕುಡಿಯರ ಒಕ್ಕಲುಗಳೆಷ್ಟೋ ಮಂದಿ ಇದ್ದಾರೆ' ಎಂಬ ವಾರ್ತೆ ದೊರೆಯಿತು. ಒಬ್ಬನ ಸ್ನೇಹಮಾಡಿಕೊಂಡು ದಾರಿ ಕೇಳುತ್ತ, ಹರದಾರಿ ದೂರ ನಡೆದುಹೋಗಿ, ಒಂದು ಕುಡಿಯ ಮನೆಯನ್ನು ಸೇರಿದ. ಹೋಗುವಾಗ ದಾರಿಯುದ್ದಕ್ಕೂ ಕರಿಯ, ಆನೆಯ ವಿಚಾರವನ್ನೇ ಮಾತನಾಡುತ್ತಿದ್ದ. "ಅಜ್ಜ, ನಮ್ಮ ಮಲೆಯಲ್ಲಿ ಎಷ್ಟು ಆನೆಗಳಿಲ್ಲ ಒಂದನ್ನು ಹಿಡಿದು ಸಾಕಲಿಕ್ಕೆ ಬರುವುದಿಲ್ಲವೇ? ಹೀಗೆ ಸವಾರಿ ಮಾಡಲಿಕ್ಕಾಗುವುದಿಲ್ಲವೇ?" ಎಂದು ಕೇಳುತ್ತಿದ್ದ. ಕೆಂಚ ಅವನಿಗೆ, ತಮ್ಮ ಧನಿಗಳು ಕರ್ಪಿನಲ್ಲಿ ಆನೆ ಹಿಡಿದ ಕತೆ, ಅದನ್ನು ಪಳಗಿಸದೆ ಬಿಟ್ಟ ಕತೆ ಹೇಳಿದ. ಜಾತಿಯವರ ಮನೆ ಬಂದಾಗಲೇ, ಅವರ ಈ ಸಂಭಾಷಣೆ ಮುಗಿದದ್ದು. ಅಲ್ಲಿಗೆ ಹೋಕ್ಷ ಹರದಾರಿ ದೂರವೆಂದರೆ, ಕುಮಾರ ಪರ್ವತದ ಬಿದಿರ ಮೆಳೆಗಳ ಎಡೆಯಲ್ಲೇ

ಏಣಿಯಂತೆ ಏರಿ ಹೋದದ್ದು. ಮುಂದೆ ಬಂದದ್ದೊಂದು ಹುಲ್ಲುಗಾವಲು, ಅಲ್ಲಿ ನಾಲ್ಕೆಂಟು ಮನೆಗಳು ಮಾತ್ರ ಇದ್ದುವು ಕೆಂಚನ ಕೇರಿಯಲ್ಲಿ ಇಪ್ಪತ್ತು ಮೂವತ್ತರಷ್ಟು ಮನೆಗಳಿದ್ದುವು. ಅದರ ಸುತ್ತ ಏಲಕ್ಕಿಯ ತೋಟ ವಿತ್ತು. ಇಲ್ಲಿ ಅದಾವ ತೋಟವೂ ಇದ್ದಿರಲಿಲ್ಲ. ಕೆಂಚ ಬಂದಾಗ, ಮನೆಯ ನಿವಾಸಿಗಳು ಅಲ್ಲೇ ಇದ್ದರು. "ಯಾರು ನೀನು?" ಎಂದು ವಿಚಾರಿಸಿದರು. ಕಿರಿಮಲೆಯ ಹೆಸರು ಅವರಿಗೂ ಗೊತ್ತಿತ್ತು. ಹೋದವರಲ್ಲ, ಕಂಡವರಲ್ಲ— ಇಷ್ಟೇನೆ. ಹೀಗಾಗಿ ದೂರದ ಪರದೇಶದಿಂದ ಬಂದ ಯಾತ್ರಿಕರನ್ನು ಅವರು ಪ್ರೀತಿ ವಿಶ್ವಾಸಗಳಿಂದ ಬರಮಾಡಿಕೊಂಡರು; ನಾಲ್ಕು ದಿನ ಕುಳ್ಳಿರಿಸಿದರು. ಕೆಂಚ 'ಬೇಡ; ಒಲ್ಲೆ'ನೆಂದರೆ, ಅಪೂರ್ವಕ್ಕೆ ದೂರದ ಊರಿನಿಂದ ಬಂದ ಕುಡಿಯ ಬಂಧುವೊಬ್ಬನನ್ನು ಅವರು ಬಿಟ್ಟುಬಿಡುವ ಹಾಗಿಲ್ಲ. ಅವನಿಗಾಗಿಯೇ ಮೊಲದ ಬೇಟೆಯಾಡಿದರು; ಮೀನಬೇಟೆ ಆಡಿದರು; ಕಾಡುಕೋಳಿ ಹಿಡಿದರು; ಅಮೆ ಇರಿಯುವುದಕ್ಕೆ ಹೋದರು. ಕೆಂಚನಿಗೂ ಕರಿಯನಿಗೂ ತುಂಬ ಸಂತೋಷದ ಸಂಗತಿಯಿದು. ತಮ್ಮವರು ಎಲ್ಲೆಲ್ಲೂ ಇದ್ದಾರೆಂಬ ಅಭಿಮಾನ ಮಾತ್ರವಲ್ಲ—ಅವರೆಲ್ಲರಿಗೆ ಸ್ವಂತ ದೈವವಿದ್ದರೂ ತಮ್ಮಂತೆಯೆ ಅವರು ಕುಮಾರಸ್ವಾಮಿಯ ಭಕ್ತರು, ಆ ಸ್ವಾಮಿಸೇವೆಯಲ್ಲೇ ಬೆಳೆದವರು—ಎಂದು ಕೇಳಿ ಹಿಗ್ಗೂ ಉಂಟಾಯಿತು. ಆ ಹಿಗ್ಗಿನಿಂದ ತಾನು ಅಲ್ಲಿಗೆ ಬಂದ ಗುಟ್ಟನ್ನೂ ತಿಳಿಸಿದ. ಅವರು ಸಹ "ಏನೂ ಹೆದರಬೇಡ ಅಜ್ಜ. ನಮ್ಮ ಸ್ವಾಮಿ, ಬೇರೆ ದೇವರ ಹಾಗಲ್ಲ. ನಂಬಿದವರನ್ನು ಎಂದೂ ಕೈಬಿಡುವವನಲ್ಲ. ಕಲ್ಕುಡನೇ ಆದರೇನು? ಸುಬ್ರಹ್ಮಣ್ಯನ ಮುಂದೆ ಹಟ ಕಟ್ಟಿಯಾನೆಂದು ತಿಳಿಯುತ್ತೀಯಾ. ಎಂದೂ ಇಲ್ಲ" ಎಂದು ಭರವಸೆ ಕೊಟ್ಟರು. ಕೆಂಚ ಅಲ್ಲಿದ್ದಾಗಲೇ ದೇವಾಲಯದಿಂದ ಆ ಕುಡಿಯ ಆಳುಗಳಿಗೆ ಕರೆ ಬಂದಿತು—ಒಂದು ವಿಶೇಷ ಉತ್ಸವದ ಸಲುವಾಗಿ. ಯಾರೋ ಪರ ಊರ ಯಾತ್ರಿಕರು ಬಂದು, ಸುಬ್ರಹ್ಮಣ್ಯನಲ್ಲಿ ವಿಶೇಷ ದೀಪೋತ್ಸವದ ಹರಕೆ ನಡೆಯಬೇಕಿತ್ತಂತೆ. ಆ ಉತ್ಸವ ಕಾಣುವ ಯೋಗವನ್ನು ಕೆಂಚ ಬಿಡಲಿಲ್ಲ. ಮೊಮ್ಮಗನೊಂದಿಗೆ, ಬಳಗದವರೊಂದಿಗೆ ನೋಡಲು ಹೋದ. ಇನ್ನೊಮ್ಮೆ ದೇವರ ಸೇವೆ ಮಾಡಿದ. ಉತ್ಸವಕ್ಕೆ ಚಪ್ಪರ ಕಟ್ಟುವುದರಲ್ಲಿ, ದಳಿ ನಿರ್ಮಿಸುವುದರಲ್ಲಿ, ಹಣತೆಯಿಟ್ಟು ಎಣ್ಣೆ ಸುರಿಯುವುದರಲ್ಲಿ—ಪ್ರತಿ

ಯೊಂದರಲ್ಲಿಯೂ ತನ್ನ ಬಂಧುಗಳಿಗೆ ನೆರವಾದ. ಹಗಲಿನ ತೇರು, ರಾತ್ರಿಯ ದೀಪೋತ್ಸವ, ದೇವರ ಮೆರವಣಿಗೆ, ವಾದ್ಯ ಪ್ರತಿಯೊಂದನ್ನು ಕಂಡು ಹಿಗ್ಗಿದ. ತಾನು ಎಂಥ ಒಳ್ಳೆಯ ಸಮಯಕ್ಕೆ ಬಂದೆ—ಎಂಬ ಆನಂದ ಉಂಟಾಯಿತು ಅವನಿಗೆ.

ಉತ್ಸವ ಕಳೆದಮೇಲೆ, ತನ್ನ ಬಂಧುಗಳನ್ನು ಬೀಳ್ಕೊಟ್ಟು, ಅವರಿಗೂ ತಮ್ಮ ಮಲೆಗೆ ಬರುವಂತೆ ಆಮಂತ್ರಿಸಿ, ಲಘುಮನಸ್ಸಿನಿಂದ ವಿಟ್ಲಕ್ಕೆ ಪಯಣ ಹೊರಟ. ಊರಿನ ರಾಜಧಾನಿಯಾದ ಉಪ್ಪಿನಂಗಡಿಯಲ್ಲೊಂದು ದಿನ ತಂಗಿದ. ಊರ ಮನೆಗಳನ್ನೂ, ಸರಕಾರಿ ಕಚೇರಿಗಳನ್ನೂ ಕಂಡು, ಮುಂದೆ ಒಂದು ಮಜಲಿನಲ್ಲಿ ವಿಟ್ಲಕ್ಕೆ ಸಾಗಿದ. ಧನಿಗಳ ಮನೆಯ ದರ್ಶನ ಮಾತ್ರ ಆಯಿತು. ಅವರು ಮಾತ್ರ ಊರಲ್ಲಿದ್ದಿರಲಿಲ್ಲ. ಆದರೆ ಅವರ ಮನೆಯಲ್ಲಿ ಊಟ ದೊರೆಯಿತು. ಅವರ ಮನೆಯವರೊಡನೆ ಮಾತುಕತೆ ನಡೆಸಿದ. ಅಲ್ಲಿಂದ ಸಂತೃಪ್ತನಾಗಿ ಊರಿಗೆ ಮರಳಿದ ಮೊಮ್ಮಗನನ್ನು ಕರೆದುಕೊಂಡು ಬರುವಾಗ, ಮೂರು ದಿನದ ಪಯಣವಾಯಿತು. ದಾರಿಯುದ್ದಕ್ಕೂ ಅವನ ಒಂದೇ ಒಂದು ಚಿಂತೆಯೆಂದರೆ, ತಾನು ಮಲೆಗೆ ಮರಳುವಾಗ, ಧನಿಗಳು ಹಿಂದಿರುಗಿದರೆ ಏನು ಗತಿ—ಎಂದು. ಅವರನ್ನು ಕಂಡು, ಕೇಳಿ, ಕಲ್ಕುಡನಿಗೆ ಸಲ್ಲಿಸುವ ಕೋಲ ಸಲ್ಲಿಸದೆ ಗತಿಯುಂಟೇ ? ಆ ಯೋಚನೆಯ ಭಾರವೊಂದು ಅವನನ್ನು ಕಾಡುತ್ತಲೇ, ಅಂತು ಇಂತು ಮೂಲೆಗುಂಪನ್ನು ಸೇರಿದ. ಅಲ್ಲಿಷ್ಟು ಬೆಲ್ಲ ನೀರು ಸೇವಿಸಿ, ಮಲೆಯನ್ನೇರಿದ. ಮುಂದಿನ ದಾರಿ, ಮೀನಿಗೆ ನೀರು ಹೊಕ್ಕಂತೆ ಅಜ್ಜನಿಗಿಂತ ಕರಿಯ ಹತ್ತು ಹೆಜ್ಜೆ ಮುಂದಕ್ಕೆ ಹೋಗುತ್ತಿದ್ದ. ಸಂಜೆಯ ಸೂರ್ಯ ಬೆಟ್ಟದ ಎಡೆಯಲ್ಲಿ ಮರೆಯಾಗುವ ಮುನ್ನವೇ, ಕೆಂಚ ತನ್ನ ಗುಡಿಸಲನ್ನು ಸೇರಿದ. ಅವನ ಬರವನ್ನು ಕಂಡ ನಾಲ್ಕಂದಿ ಕೇರಿಯವರು "ಬಂದೆಯಾ ಅಜ್ಜ, ಬಂದೆಯಾ ಅಜ್ಜ" ಎಂದು ಸ್ವಾಗತಿಸಿದರು. "ಮಗುವನ್ನು ಯಾಕೆ ಕರೆದುಕೊಂಡು ಹೋದೆ—ದಣಿಸಲಿಕ್ಕೆ. ನೀನು ಊರಲ್ಲಿಲ್ಲ ಎಂದಮಾತ್ರಕ್ಕೆ, ಅವನನ್ನು ಸಾಕುವ ತ್ರಾಣ ನಮಗಿಲ್ಲವೇ ? ನೋಡು, ನೀನು ಹೋಗುವುದೇ ಬೇಡವಿತ್ತು; ಧನಿಗಳೇ ಬಂದಿದ್ದಾರೆ" ಎಂದು ಕೆಂಚನನ್ನು ಸ್ವಾಗತಿಸಿದರು. ಬೂದನೂ ಬಂದ. ಉಳಿದ ಜನ ತೆರಳುವ ತನಕ ಆತ ಮಾತನಾಡದೆ ಕುಳಿ

ತಿದ್ದರೂ, ಅವರು ಹೊರಟುಹೋದಮೇಲೆ, ಮಾತನಾಡಬೇಕೆಂದು ಬಯಸಿದ. ಬಂದವರಿಗಾಗಿ, ತಾನೇ ಒಳಗೆ ಹೊಕ್ಕು, ಒಲೆಯನ್ನು ಉರಿಸಿದ. ಗಂಜಿ ಬೇಯಿಸಿದ. ಅದೆಲ್ಲ ಕೆಲಸ ಮುಗಿದಮೇಲೆ ಕೆಂಚನೊಬ್ಬನ ಕಿವಿಯಲ್ಲಿ ನಡೆದ ವಾರ್ತೆಯನ್ನು ಹೇಳಬೇಕೆಂದು ಎಣಿಸಿಕೊಂಡಿದ್ದ. ಅಷ್ಟರಲ್ಲಿ ತುಕ್ರ ಅಲ್ಲಿಗೆ ಬರಬೇಕೇ? ಆತ ಬಂದು "ಅಜ್ಜ, ನೀನು ಹೋಗುವುದೇ ಬೇಡವಿತ್ತು. ಧನಿಯರು ಬಂದಿದ್ದಾರೆ. ಒಂದು ವಾರವಾಯಿತು, ಬಾ. ಹೋಗುವ. ನಿನ್ನನ್ನು ಬರಹೇಳಿದ್ದಾರೆ" ಎಂದು ಸುದ್ದಿ ಕೊಟ್ಟ.

ಆ ರಾತ್ರಿ ತುಕ್ರ ಕೆಂಚ ಇಬ್ಬರೂ ಸೇರಿ, ಧನಿಗಳನ್ನು ನೋಡ್ಡುವುದಕ್ಕೆ ಹೋದರು. ಕಲ್ಕುಡನಿಗೆ ಸಲಬೇಕಾದ ಕೋಲದ ವಿಚಾರದಲ್ಲಷ್ಟೆ ಮಾತು ಬಂದು, ಇನ್ನೊಂದು ಮಾಲೆಯವರನ್ನು ಕೆಂಚನೇ ಹೋಗಿ ಮಾತನಾಡಿಸಬೇಕೆಂದೂ, ಖರ್ಚುವೆಚ್ಚಗಳನ್ನೆಲ್ಲ ತಾವೇ ನೋಡಿಕೊಳ್ಳುತ್ತೇವೆಂದೂ—ಧನಿ ಭರವಸೆ ಕೊಟ್ಟರು. ಉಳಿದ ಪ್ರಸ್ತಾಪಗಳಾವುವೂ ಬರಲಿಲ್ಲ. ಬೂದ ಕೆಂಚನ ಮನೆಯಲ್ಲಿ ಕುಳಿತು, ಕರಿಯನ ಬಾಯಿಂದ ಸುಬ್ರಹ್ಮಣ್ಯದ ವೈಭವವನ್ನೆಲ್ಲ ಕೇಳುತ್ತಿದ್ದ. ತಾನೂ ಅದನ್ನು ನೋಡುತ್ತಿದ್ದನೇ—ಎಂಬ ಆಸೆ ಮೂಡಿತು ಅವನಿಗೆ. ಅವನಾದರೂ ಮೂಲೆಗುಂಪು ದಾಟಿಹೋದವನಲ್ಲ. ಹೊರಗಿನ ನಾಗರಿಕ ಜಗತ್ತನ್ನು ಕಂಡವನಲ್ಲ. ಪೇಟೆಯ ಬೆಡಗನ್ನು ಅರಿತವನೂ ಅಲ್ಲ. ಕರಿಯ ಅವನಿಗೆ ಸಮಾಧಾನ ಹೇಳುತ್ತಾನೆ: "ನಾನು ದೊಡ್ಡವನಾದಮೇಲೆ ನಿನ್ನನ್ನು ಕರೆದುಕೊಂಡು ಹೋಗುತ್ತೇನೆ ಮಾವ" ಎಂದು. ಅಜ್ಜ ಬರುವ ತನಕ, ಬೂದ ಕಾದು ಕುಳಿತ. ಈಗ ಅವನನ್ನು ಕಾಡುತ್ತಿರುವ ಒಂದು ಸಂಗತಿಯೆಂದರೆ—ಕೆಂಪಿಯ ಬಾಯಿಂದ ಕೇಳಿದ ಮಾತುಗಳನ್ನು, ಅವನಿಗೆ ತಿಳಿಸಬೇಕೇ ಬೇಡವೇ ಎಂದು. ಕೊನೆಗೆ—ವಿವೇಕ ಹೊಳೆಯಿತು ಅವನಿಗೆ; ಮಡಿದ, ಸೊಸೆಯು ಸತ್ತ ದುಃಖ ಬೇರೆ. ಸತ್ತವಳು ಕೆಟ್ಟವಳೆಂದು ತಾನಾಡಬಹುದಾದ ಮಾತಿನ ನೋವು—ಬೇರೆ. ತಾನೇಕೆ ಅಂಥ ಪಾಪ ಕಟ್ಟಿಕೊಳ್ಳಬೇಕು? ಕೆಂಚನಿಗೆ ಅದೆಲ್ಲ ತಿಳಿಯದಿರುವುದೇ ಒಳಿತು, ಎಂದು ಸುಮ್ಮನಾದ. ಆತ ಮನೆಗೆ ಬಂದಮೇಲೆ, ಆ ಒಂದು ಮಾತನ್ನು ಬಿಟ್ಟು, ಉಳಿದೆಲ್ಲ ಸಂಗತಿಗಳನ್ನು ಹೇಳಿದ. ಅನಂತರ ಮುದುಕನ ಬಾಯಿಂದ ಸುಬ್ರ

ಹ್ಮಣ್ಯದ ಸಂಚಾರದ ವಾರ್ತೆಯನ್ನು, ಅಲ್ಲಿನ ಮಲೆಯಲ್ಲಿ ತಮ್ಮ ಜನ ವಾಸಿಸಿರುವ ವಾರ್ತೆಯನ್ನೂ ಕೇಳಿ ಸಂತೋಷಗೊಂಡ.

ಮರುದಿನ ಧನಿಗಳ ಅಪ್ಪಣೆಯಂತೆ, ಕೆಂಚ ಹಿರಿ ಮಲೆಗೆ ಹೋಗುವಾಗ ಬೂಡನೂ ಜತೆಯಲ್ಲಿದ್ದ. ಇಬ್ಬರೂ ಕಲೆತುಹೋದರು. ದಾರಿಯು ಕಲ್ಕುಡನಿಗೆ ವಂದಿಸಿದರು. ಈ ಬಾರಿಯಾದರೂ ತಾವು ಹೊರಟ ಕೆಲಸ, ಅಂದರೆ ಅವನದೇ ಸೇವೆ, ಕೈಗೂಡಿಸು ಎಂದು ಬೇಡಿಕೊಂಡು ಮುಂದುವರಿದರು. ಹಿಂದಿನ ಬಾರಿ ಬಂದಂತೆ ಬೆಕ್ಕು ಈ ಬಾರಿ ಅಡ್ಡವಾಗಲಿಲ್ಲ. ಅಲ್ಲದೆ ಕೆಂಚನ ಮನದಲ್ಲಿ ಉತ್ಸಾಹ ಉಲ್ಲಾಸಗಳು ತುಂಬಿ ತುಳುಕಾಡುತ್ತಿದ್ದುವು. ಇಬ್ಬರೂ ಮಾತನಾಡುತ್ತ, ನಡೆದು, ಸಾಗಿ, ಹಿರಿ ಮಲೆಗೆ ಹೋದರು. ಮೊದಲು ಭೇಟಿಯಾದದ್ದು ಮಲೆಯ ಗುರಿಕಾರನನ್ನು. ಕೆಂಚ ಸ್ವತಃ ಯಾರಲ್ಲೂ ನಿಷ್ಠುರ ಕಟ್ಟಿಕೊಂಡವನಲ್ಲ. ಅವನ ಸ್ವಭಾವವೇ ಹಾಗೆ. ಉಳಿದವರ ವಿಚಾರದಲ್ಲಿ, ಗುರಿಕಾರ ಮಾದ ಹೇಗೆ ನಡೆದುಕೊಂಡರೂ, ಕೆಂಚನಿಗೆ ಸಲಿಸುವ ಗೌರವ ಸಲಿಸಿ, 'ಖರ್ಚುವೆಚ್ಚ ತಮ್ಮ ಧನಿಗಳು ನೋಡುತ್ತಾರೆ' ಎಂದು ಹೇಳಿದ ಮೇಲೆ, ಅವನೇಕೆ ಅಲ್ಲವೆಂದಾನು? ಕಲ್ಕುಡನ ಭಯ ಅವನಿಗೂ ಇಲ್ಲವೇ? ಕೆಂಚ ಅಲ್ಲಿ ಕುಳಿತು ಮಾತನಾಡುವಾಗ, ಬೂದ ಪೂಜಾರಿಯ ಮನೆಗೆ ಹೋದ. ಪೂಜಾರಿಯೂ ಕುಡಿಯರವನೇ. ಅಲ್ಲಿ ಹೋಗಿ, ಮಲೆಗೆ ಕೆಂಚ ಬಂದ ವಾರ್ತೆಯನ್ನು ಹೇಳಿದ. ಸಾಲದುದಕ್ಕೆ—ಊರ ಕೇರಿಯ ಸುದ್ದಿಗಳನ್ನೂ, ಕೆಂಚನಿಗೆ ದೈವ ಸ್ವಪ್ನದಲ್ಲಿ ಬೆದರಿಸಿದುದನ್ನೂ—ಎಲ್ಲವನ್ನೂ ಹೇಳಿದ ಪೂಜೆ, ಕೋಲ, ನೇಮಗಳೆಂದರೆ ಪೂಜಾರಿಗೆ ಗೌರವ ಸಲ್ಲಬೇಕಾದ ಅವಕಾಶ. ಅದನ್ನು ಆತ ತಪ್ಪಿಸಿಕೊಳ್ಳುತ್ತಾನೆಯೇ? ಬೂದನೊಡನೆ ಆತ ಎಲ್ಲ ಸಂಗತಿಗಳನ್ನೂ ತರ್ಕಿಸಿದ. ಮುಂದಿನ ಸಂಕ್ರಾಂತಿ ಒಳ್ಳೆಯ ದಿನ ಎಂದು ಸೂಚಿಸಿದ. ಅಲ್ಲಿಂದ ಮುಂದೆ ಬೂದ ಪ್ರಯಾಣವೆಸಗಿದ್ದು ಕೆಂಪಿಯ ತಂದೆ ತೌಡನ ಮನೆಗೆ. ಹಾಗೆ ಹೋಗಬೇಕಾದ ಪ್ರಮೇಯವಿದ್ದಿರಲಿಲ್ಲ. ಮೊದಲಿಗೆ ಅವನನ್ನು ನಿರಾಕರಿಸಿದ ಹೆಣ್ಣವಳು. ತುಕ್ರನ ಮೇಲಿನ ದ್ವೇಷವಲ್ಲದಿದ್ದರೆ, ಆತ ಹೋಗುತ್ತಿರಲೂ ಇಲ್ಲ ಒಳಗೊಳಗಿನ ಚಪಲವೆಂದರೆ—ಕೆಂಪಿ ಆಡಿದ ಮಾತುಗಳು ನಿಜವಿರಬಹುದೇ ಎಂದು—ತಿಳಿಯಲು. ಅನಂತರದ ಸಂಗತಿ, ಕೆಂಪಿ ತಿರುಗಿ

ಗಂಡನ ಮುಖ ಕಾಣುವವಳೇ—ಎಂದು ತಿಳಿಯಲು. ಅದಕ್ಕೂ ಮುಂದಿನ ಚಪಲ—ಇನ್ನಾದರೂ ತನ್ನನ್ನು ಮದುವೆಯಾಗಲು ಕೆಂಪಿ ಒಲಿದಾಳೆಯೇ ಎಂದು. ಈ ಮೂರು ಕಾರಣಗಳೂ ಸೇರಿ ಅವನನ್ನು ತಾಡನ ಮನೆಗೆ ಒಯ್ದುವು. ಅಂಗಳದಲ್ಲೇ ಆಯಿತು ಕೆಂಪಿಯ ದರ್ಶನ. ಆಕೆ ಕಣ್ಣು ದೊಡ್ಡದು ಮಾಡಿದಳು; ನಕ್ಕಳು. "ಬೂದಣ್ಣ, ಎಂದು ಬಂದೆ? ಏನು ಬಂದೆ?" ಎಂದೂ ವಿಚಾರಿಸಿದಳು. ಅದಕ್ಕೆ ಬೂದನ ಉತ್ತರ "ಅಪ್ಪ ಇದ್ದಾರೆಯೇ" ಎಂದು.

ತಾಡ ಒಳಗೇನೆ ಇದ್ದ. ಹೊರಕ್ಕೆ ಬಂದು ಅವನನ್ನು ಸ್ವಾಗತಿಸಿ ಕರೆದೊಯ್ದ. ಎಲೆ ಅಡಿಕೆಯ ತಬಕನ್ನು ಮುಂದಿಟ್ಟ. ತಾಡ, ಮಗಳು- ಅಳಿಯಂದಿರೊಂದಿಗೆ ನಡೆದ ಜಗಳದಿಂದಾಗಿ ನೊಂದವ. ಸ್ವಾಭಾವಿಕವಾಗಿ "ಏನಣ್ಣ ನಡೆದದ್ದು? ಆ ದಿನ ನೀನಿದ್ದೆಯಂತಲ್ಲ? ಅವನು ಬಡಿಗೆ ತೆಗೆದು ಕೊಂಡು ಹೊಡೆಯಲು ಬಂದದ್ದು ನಿಜವೇ?" ಎಂದು ಕೇಳಿದ. ಕೆಂಪಿ ಅಲ್ಲೇ ನಿಂತಿದ್ದಳು. ಬೂದ ತುಕ್ರನ ದುಡುಕು ಸ್ವಭಾವವನ್ನು, ಆ ದಿನ ತಾನು ಕಂಡ ಸಂಗತಿಗಳನ್ನು, ಕೆಂಚಣ್ಣ ಇಲ್ಲದೆ ಆ ದಿನವೆಲ್ಲ ಸಂಗತಿ ಬಿಕ್ಕಟ್ಟಿಗೆ ಬಂದದ್ದನ್ನೂ ಚಾಚೂ ತಪ್ಪದೆ ಹೇಳಿದ.

"ಅದಿರಲಿ. ಚಿಕ್ಕಿ ಸತ್ತದ್ದು ಹ್ಯಾಗೆ? ನಿನಗೆ ಗೊತ್ತೇ?" ಎಂದು ಕೇಳಿದ ತಾಡ.

"ನಾನೇನು ಕಂಡಿದ್ದೇನೆಯೇ?"

"ಕಂಡಿಲ್ಲವಾದರೂ ಕೇಳಿರಬಹುದಲ್ಲ; ಕಿವಿ ಇಲ್ಲವೇ? ಕಾಣದಿದ್ದ ರೇನಾಯಿತು."

"ಹಾಗೆ ಹೇಗೆ ಹೇಳುವುದು? ಅಂದರೆ ಒಬ್ಬೊಬ್ಬರು ಒಂದೊಂದು ತೆರನಾಗಿ ಹೇಳುತ್ತಾರೆ. ಆಡಬಹುದೋ, ಆಡಬಾರದೋ—ನನಗೆ ಗೊತ್ತಿಲ್ಲ. ಇವಳ ಗಂಡ ಯೋಗ್ಯನಲ್ಲ ಎಂಬುದು ನನಗೆ ಗೊತ್ತು. ಆದುದರಿಂದ ಚಿಕ್ಕಿ ಕೆಟ್ಟವಳು ಎಂದೇನೆಯೇ ನಾನು? ಅವಳು ಸತ್ತದ್ದು ನಿಜ. ತನ್ನಂತೆ ಬೀಳುವುದಕ್ಕೂ ಕಾರಣವಿಲ್ಲ. ಆದರೆ ಭೂತವೇ ಸ್ವಪ್ನದಲ್ಲಿ ಬಲಿ ಕೇಳುವಾಗ, ಏನಾದೀತು ಏನಾಗಲಿಕ್ಕಿಲ್ಲ! ಹಿಂದೆ ತಿಮ್ಮ ನಮ್ಮ ಕಣ್ಣು ಮುಂದೆಯೇ ಮರದಿಂದ ಉರುಳಿ ಬಿದ್ದು ಸತ್ತನಲ್ಲವೆ....ಹೋಗಲಿ

ಬಿಡಿ, ಆ ಮಾತು. ಸತ್ತವರು ಸತ್ತರು. ಯಾರಾದರು ಅನ್ಯಾಯಮಾಡಿ ಕೊಂದಿದ್ದರೆ ಅವರೇ ಹಾಳಾಗಿ ಹೋಗುತ್ತಾರೆ. ಮೇಲಿನ ದೈವವಿಲ್ಲವೇ ನೋಡುವುದಕ್ಕೆ" ಎಂದು ಮಾತನ್ನು ದೆವ್ವದ ಕೋಲದ ವಿಚಾರದ ಕಡೆಗೆ ಹರಿಸಿದ. "ನೀವೆಲ್ಲ ಬರಬೇಕು" ಎಂದೂ ಆಮಂತ್ರಣ ಸಲ್ಲಿಸಿದ.

ತೌಡ ಎಲ್ಲರಿಗಿಂತ ಹೆಚ್ಚಾಗಿ ಮಗಳ ಭವಿಷ್ಯದ ಚಿಂತನೆಮಾಡ ಬೇಕಾಗಿತ್ತು. ಅವಳಿಗೆ ಮಕ್ಕಳಾಗಿರಲಿಲ್ಲ ನಿಜ—ಇರುವ ಮಕ್ಕಳೆಲ್ಲ ಸವತಿ ಯವು. ಋಣಾನುಬಂಧವಿಲ್ಲದ ಸಿಡುಕಿನ ಕೆಂಪಿ, 'ತಾನಿನ್ನು ಆ ಮಲೆಗೇ ಕಾಲಿಡುವುದಿಲ್ಲ' ಅನ್ನುತ್ತಾಳೆ. ಆದರೆ ಹರೆಯದ ಹುಡುಗಿ; ಎಷ್ಟು ದಿನ ಹಾಗಿರಲು ಬಂದೀತು? ಒಂಮೋ ತಪ್ಪನ್ನೊಪ್ಪಿ ಗಂಡನ ಮನೆಗೆ ಹೋಗ ಬೇಕು; ಇಲ್ಲವೇ ಅವನನ್ನು ಬಿಡಬೇಕು. ಬೂದನ ಮಾತುಗಳನ್ನು ಕೇಳು ವಾಗಲೂ ತಪ್ಪಿತಸ್ಥ ತುಕ್ರನೇ ಎಂದು ಕಾಣುತ್ತದೆ ತೌಡನಿಗೆ. "ನೀನೇ ನನ್ನುತ್ತೀಯಾ? ಕೆಂಪಿ ಅವನನ್ನು ಬಿಡಬೇಕೆನ್ನುತ್ತೀಯಾ?" ಎಂದ ತೌಡ ಅವನೊಡನೆ.

"ಸಂಸಾರ ಮಾಡಿಕೊಂಡಿದ್ದವರು ಅವರು. ನಾನು ಅನ್ನಬೇಕೇನು? ಅವರವರ ಸುಖದುಃಖ ಅವರವರೇ ನಿರ್ಣಯಿಸಬೇಕು ವಿನಾ ನನ್ನನ್ನು ಕೇಳಬಾರದು."

"ಅವಳಿಗೇನು ಇಷ್ಟವಿಲ್ಲ—ಹೋಗಲಿಕ್ಕೆ."

"ಒತ್ತಾಯದಿಂದ ಗಂಡಹೆಂಡಿರ ಬಾಳ್ವೆ ನಡೆಯುತ್ತದೆಯೇ?" ಎಂದ ಬೂದ. ಆ ಮಾತಿನಲ್ಲಿ ಅವನ ಅಂತರಂಗವೆಲ್ಲ ವ್ಯಕ್ತವಾಗಿತ್ತು. ಅಲ್ಲಿಂದ ಹೊರಬೀಳುವಾಗಲೇ ಕೆಂಚನೂ ಕಾಣಿಸಿದ. ಸ್ವಾಭಾವಿಕವಾಗಿ ತೌಡ ಆಗ ಮುಂದೆ ಬಂದ, ಅವನನ್ನು ಕಂಡಮೇಲೆಯೂ ಮಾತನಾಡಿಸದಿರಲಿಕ್ಕಾಗು ತ್ತದೆಯೇ? "ಏನಣ್ಣಾ, ಕೆಂಪಿ ಬಂದುಬಿಟ್ಟಿದ್ದಾಳಂತೆ. ಅವನೇನೊ ತಪ್ಪು ಕೆಲಸ ಮಾಡಿದ. ಆದರೆ ಯಾಕೆಅಷ್ಟೆಲ್ಲ ಉದ್ದಕ್ಕೆ ತೆಗೆದುಕೊಂಡು ಹೋಗ ಬೇಕು. ಇನ್ನು ಏನಾದರೂ ಹಾಗಾದರೆ ಕೇರಿಯ ನಾವೆಲ್ಲ ಇಲ್ಲವೇ? ಆ ದಿನ ನಾನಿದ್ದಿರಲಿಲ್ಲ. ಹೇಳು ನಿನ್ನ ಮಗಳಿಗೆ" ಎಂದು ಕೆಂಚ ಬುದ್ಧಿ ಹೇಳಿ ಹೊರಟ. ಅವರು ಮಲೆ ಇಳಿಯುವ ತನಕ, ವ್ಯಥಿತನಾದ ತೌಡ ಅವನ ಬೆನ್ನಿಗೇನೆ ಬಂದ. ದಾರಿಯುದ್ದಕ್ಕೂ—ಮಗಳ ಬಾಯಿಂದ ಬಂದ ಮಾತುಗಳನ್ನು ಕೆಂಚನ ಕಿವಿಯಲ್ಲಿ ಹಾಕಿದ. ಆದರೂ ಕೆಂಚ ಹೇಳುತ್ತಾನೆ

"ದುಡುಕು, ಸಿಡುಕು—ಎಲ್ಲ ನಿಜ. ಒಂದು ದಿನ ತಲೆ ಕೆಟ್ಟಿತೆಂದರೆ ನಿತ್ಯವೂ ಕೆಡುತ್ತದೆಯೇ? ಅಲ್ಲದೆ ಅವಳೇನು ಮಾಡಬೇಕು? ಮದುವೆ ಮಾಡಿಕೊಂಡ ಹುಡುಗಿ! ಇನ್ನಾದರೂ ಚೆನ್ನಾಗಿ ನೋಡಿಕೊಂಡಾನು. ನೋಡು—ಬುದ್ಧಿ ಹೇಳಿ ಕಳುಹಿಸು. ಒಂದು ಮನೆಯನ್ನು ಒಡೆದರೆ ಚಂದವೇ?" ಎಂದು ಬೋಧಿಸಿ ಬೀಳ್ಕೊಟ್ಟ. ಅವನು ಹೋದಮೇಲೆ, ಬೂದಣ್ಣ ಕೇರಿಗೆ ಬರುವ ತನಕ ಪ್ರತಿವಾದ ಹೂಡುತ್ತಲೇ ಇದ್ದ. "ಅಜ್ಜಾ, ನೀನೇನೂ ಹೇಳು. ಇನ್ನು ಕೆಂಪಿಗೆ ಆವನೊಡನೆ ಕೂಡಿಬರುವುದು ಕಷ್ಟ. ಏನೋ ನಾಲ್ಕು ವರ್ಷಕಾಲ ಗಂಡಹೆಂಡಿರಾಗಿ ಬಾಳಿದರು. ಕೆಂಪಿ ಬಂದಮೇಲೆ, ಮೊದಲ ಹಂಡತಿಗೂ ಸಾಕುಬೇಕಾಯಿತು. ಅವಳಿಗೂ ಇವನ ಗುಣ ಹಿಡಿಸುವ ಹಾಗಿಲ್ಲ. ಅವರಿಗೇನು ಕಣ್ಣಿಲ್ಲವೇ? ಕಿವಿಯಿಲ್ಲವೇ? ಆಚೀಚೆ ನಡೆಯುವ ಬದುಕು ತಿಳಿಯುವುದಿಲ್ಲವೇ? ತುಕ್ರನಿಗೆ ಅವಳೇ ಬೇಕೆಂದೇನಿಲ್ಲ. ಇನ್ನು ಕೆಂಪಿ ಬಂದರೂ ಮೊದಲಿನ ಮಾನ, ಸ್ಥಾನ ಅವಳಿಗೆ ಕೊಟ್ಟಾನೆಯೇ? ಒಡೆದ ಗಡಿಗೆಯನ್ನು ಕೂಡಿಸುವ ಕೆಲಸ ಮಾಡುತ್ತೀ ನೀನು" ಎಂದು ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದ.

ಅಷ್ಟಕ್ಕೆ ಕೇರಿಯೂ ಬಂದಿತು. ಕೇರಿಯವರಿಗೂ, ತನ್ನ ಧನಿಗೂ ಶುಭವಾರ್ತೆಯನ್ನು ಕೊಡಲು ಕೆಂಚ ಹೋದ.

'ಸಂಕ್ರಾಂತಿಗಂತೆ ಕೋಲ' ಎಂಬ ಸುದ್ದಿಯನ್ನು ಕೇಳಿ, ಕೇರಿಯ ಎಲ್ಲ ಜನರೂ ಹಿಗ್ಗು ತಾಳಿದರು. ತಿರುಮಲಭಟ್ಟರು ಆ ಸ್ಥಳದ ಕೋಲವನ್ನು ಈ ತನಕ ನೋಡಿರಲಿಲ್ಲ. 'ನೋಡಿಯೇ ಹೋಗುವ' ಎಂದು ಈ ಬಾರಿ ತೀರ್ಮಾನ ಮಾಡಿದ್ದರು.

## ಅಧ್ಯಾಯ ೪

ಸಂಕ್ರಾಂತಿಯ ದಿನ ಬಂದೊದಗಿದೆ. ಕೇರಿಯವರಿಗೆ, ಅದರಲ್ಲೂ ಕೆಂಚಣ್ಣನಿಗೆ ತುಂಬ ಉತ್ಸಾಹದ ದಿನ; ಲಘುಮನಸ್ಸಿನ ದಿನ. ಕಟ್ಟಕೊನೆಗೆ ಎರಡೂ ಮಲೆಯವರು ಸೇರಿ ಕಲ್ಕುಡನ ಕೋಪ ಬಗೆಹರಿಸಿಕೊಳ್ಳಬಹುದಲ್ಲ ಎಂಬ ನಿರೀಕ್ಷಣೆಯ ದಿನ. ಒಮ್ಮೊಮ್ಮೆ ಮಾತ್ರ, ಮನಸ್ಸಿನಲ್ಲಿ ಆ ದಿನ ದೆವ್ವ ಏನೆಂದು ಅಪ್ಪಣೆ ಕೊಡಿಸುತ್ತದೋ, ತಾನು ಸುಬ್ರಹ್ಮಣ್ಯಕ್ಕೆ

ಹೋದುದಕ್ಕಾಗಿ ನಂಜು ಕಾರುತ್ತದೋ ಕೋಪಗೊಳ್ಳುತ್ತದೋ—ಎಂಬ ಭೀತಿ ಅವನಿಗುಂಟಾಗುತ್ತದೆ. ಅಷ್ಟು ಹಾನಿಗೊಂಡಂದಿನಿಂದ ಅವನಿಗೇಕೋ ಆ ದೆವ್ವದ ಮೇಲೆ ಒಂದು ಬಗೆಯ ಬೇಸರ. ಆದರೆ ದೈವದೊಡನೆ ವೈರ ಕಟ್ಟಿಕೊಂಡು ಆ ಮಲೆಯಲ್ಲಿ ಆತ ವಾಸಿಸಲಿಕ್ಕಿದೆಯೇ? ಹಾಗೂ ಇಲ್ಲ— ಕೆಂಚನಿಗೆ ಕಲ್ಕುಡನೂ ಬೇಕು; ಮಲೆರಾಯನೂ ಬೇಕು. ಆದುದರಿಂದಲೇ ಸದ್ಭಕ್ತನಂತೆ ಕೆಂಚ, ಗಂಡಾಳುಗಳನ್ನು ಕೂಡಿಸಿ, ಬೆಳಗಿನ ನಸುಕಿಗೇನೆ ದೆವ್ವದ ಗುಡಿಯ ಕಡೆಗೆ ಹೊರಟ. ಪ್ರತಿ ಮನೆಯವರೂ ಒಂದೆರಡು ಕೋಳಿಗಳ ಕಾಣಿಕೆ ಹಿಡಿದುಕೊಂಡಿದ್ದರು; ಸಿಂಗಾರ ಹೂ ತಂದಿದ್ದರು; ಕಿಸ್ಗಾರ, ದಾಸವಾಳದ ಹೂಗಳನ್ನು ಒಟ್ಟುಮಾಡಿದ್ದರು. ಕೆಂಚಣ್ಣ—ಕೇರಿಯ ಗುರಿಕಾರ. ಅವನ ಸೇವೆ ಉಳಿದವರಿಗಿಂತ ಕಡಿಮೆಯಾಗಬಾರದಷ್ಟೆ. ಅಲ್ಲದೆ, ತನ್ನ ಸೇಡು ಸಿಟ್ಟುಗಳಿಗೆ ದೆವ್ವ ಅವನನ್ನೇ ಗುರಿಮಾಡಿಕೊಂಡಿದೆ—ಎಂಬ ಭೀತಿಯೂ ಇದ್ದುದರಿಂದ ನಾಲ್ಕು ದಿನಗಳ ಮುಂಚೆ ಮೂಲೆಗುಂಪಿಗೆ ಹೋಗಿ, ಅಲ್ಲಿನ ಗೌಡನೊಬ್ಬನಿಗೆ ಒಂದಿಷ್ಟು ಬತ್ತ ಕೊಟ್ಟು, ಒಂದು ತಂಬಿಗೆ ಜೇನು ಕೊಟ್ಟು, ದಷ್ಟಪುಷ್ಟವಾದ ಹಂದಿಯೊಂದನ್ನು ಕೊಂಡುಬಂದಿದ್ದ. ಇದರ ಮೇಲೆಯೂ ದೆವ್ವಕ್ಕೆ ತೃಪ್ತಿ ಬಾರದೆ ಹೋದರೆ, ಅವನಾದರೂ ಏನು ಮಾಡಿಯಾನು ?

ಕಿರಿ ಮಲೆಗೆ ಸಮೀಪವಾದ ಬೆಟ್ಟದ ಕೊರಕಲಿನಲ್ಲಿ ದೆವ್ವದ ಗುಡಿಯ ಮುಂದೆ ಉತ್ಸವವೇ ಉತ್ಸವ! ಮನೆ ಬಿಡದಂತೆ, ಹಿರಿ ಕಿರಿ ಮಲೆಗಳ ಗಂಡಾಳುಗಳೆಲ್ಲ ಬಂದಿದ್ದರು. ಕೊರಕಲಿನ ಅಬ್ಬಿಯ ನೀರಲ್ಲಿ ಮಿಂದಿದ್ದರು. ಬಂಡೆಗಳ ಮೇಲೆ, ಬಲ್ಲೆಗಳ ಕೆಳಗೆ ಎಲ್ಲೆಲ್ಲಿಯೂ ಕೋಳಿಗಳ ಕಾಣಿಕೆ ಕಟ್ಟಿದ್ದರು. ಹಿರಿ ಮಲೆಯ ಗುರಿಕಾರ—ಎರಡೆರಡು ಹುಂಜಗಳನ್ನು ತಂದಿದ್ದ. ಅವೆಲ್ಲವುಗಳ ಕೂಗಾಟವೇ ದೆವ್ವಕ್ಕೆ ವಾದ್ಯವಾಗಿ ಕಾಣಿಸಬೇಕು. ಸಾಲದೆಂಬುದಕ್ಕೆ—ಕೆಂಚ ಹೊರಿಸಿ ತಂದಿದ್ದ ಭಾರಿಯ ಹಂದಿಯೂ ಬೆಳಗಿನಿಂದ ಚೀತ್ಕಾರವೆಸಗುತಿತ್ತು. ಕಲ್ಕುಡನಿಗೆ ಇಡೀ ದಿನದ ಹಬ್ಬ. ಇಷ್ಟೆಲ್ಲ ಕಪ್ಪ ಕಾಣಿಕೆ ಕಂಡು ಅವನ ಆತ್ಮ ತೃಪ್ತಿ ಆಗಲೇಬೇಕು. ಆ ದಿನ ಎರಡು ಕೇರಿಯವರೂ ನೆರೆದು, ಬಲು ಗೆಳೆತನದಿಂದ ಬೆರೆತು ಮಾತನಾಡುತ್ತಿದ್ದಾರೆ. ಬೆಳಗಿನ ವೇಳೆಯೆಲ್ಲ ಆಚೀಚೆ ಸುತ್ತುವುದರಲ್ಲಿ, ರಾತ್ರಿಯ ಔತಣಕ್ಕೆ ಸಿದ್ಧ

ಪಡಿಸುವುದರಲ್ಲಿ ಕಳೆದಂತೆ ಕಾಣುತ್ತದೆ. ತರುಣರು ಆಚೀಚೆ ಸುತ್ತಿ, ಮರಗಳಿಗೆ, ಬಂಡೆಗಳಿಗೆ ಅಂಟಿಕೊಂಡಿದ್ದ ಹೆಜ್ಜೇನ ತಟ್ಟಿಗಳನ್ನು ಎಣಿಕೆಹಾಕುತ್ತಿದ್ದರು. ಉಳಿದವರು ಕುಳಿತುಕೊಂಡು ಕೇರಿಯ ಸುಖದುಃಖ ಮಾತನಾಡುತ್ತಿದ್ದರು. ಬಾನಲ್ಲಿ ಸೂರ್ಯ ನಡುನೆತ್ತಿಗೆ ಬರುವಾಗ, ಕಲ್ಕುಡನ ಗುಡಿಯ ಮುಂದಿನ ಹತ್ತು ಹೆಜ್ಜೆ ಜಾಗ ಬಿಸಿಲಿಂದ ಬೆಳಗಿತು. ಮಿಂದು ಬಂದ ಪೂಜಾರಿ ಬಿರುಮ, ಬಿಳಿ ಪಂಚೆಯುಟ್ಟು, ಅದರ ಮೇಲೆ ಬೆಳ್ಳಿಯ ಉಡಿದಾರ ಕಾಣುವಂತೆ ಬಿಟ್ಟು, ಎದೆಗೆ ಕೆಂಪು ಅರಿವೆಯನ್ನು ಉತ್ತರೀಯವಾಗಿ ಸುತ್ತಿಕೊಂಡು, ತಲೆ ಕೆದರಿಕೊಂಡು, ಕಲ್ಕುಡನ ವಿಗ್ರಹದ ಮುಂದೆ ನಿಂತ. ನಾಲ್ಕಾರು ಕುಡಿಯ ಬಂಧುಗಳು ತಮಟೆ ವಾದ್ಯಗಳಿಂದ ಧ್ವನಿ ಹೊರಡಿಸಿದರು. ಆ ವಾದ್ಯ ಅವರದೇ. ಅದರ ವಿಚಿತ್ರ ಧ್ವನಿ ನಾಗರಿಕಪ್ರಪಂಚದಲ್ಲಿ ಕಾಣಲಾರದ್ದು. ತಮಟೆ, ಡೋಲುಗಳ ಆರ್ಭಟೆ ಆ ಗುಡ್ಡಗಾಡಿನ ನಾಲ್ದೆಸೆಗಳಲ್ಲೂ ಬಿತ್ತರಿಸಿತ್ತು. ಇನ್ನೇನು ? ಮಲೆಯ ಯಜಮಾನರಾದ ತಿರುಮಲ ಭಟ್ಟರು ಬಂದರೆಂದರೆ, ಪೂಜಾರಿ ಆವೇಶ ತಾಳುವುದೊಂದೇ ಉಳಿದಿದೆ. ತುಕ್ರ ಅವರನ್ನು ಕರೆಯಲು ಹೋದ. ಅವರು ಬೆಳ್ಳಿಯ ಬೆತ್ತ ಹಿಡಿದುಕೊಂಡು, ಇಳಿಜಾರಿನ ಬೆಟ್ಟದ ದಾರಿಯಲ್ಲಿ ಮೆಲ್ಲಗೆ ನಡೆದುಬಂದರು. ತುಕ್ರ ಅವರ ಬೆನ್ನ ಹಿಂದೆಯೇ ಬಂದ. ಕೇರಿಯ ಹಿರಿಯರು, ಕಿರಿಯರು ತಮ್ಮ ಬ್ರಾಹ್ಮಣಧನಿಗಳಿಗೆ ವಂದಿಸಿದರು. ಇನ್ನೊಮ್ಮೆ ಮೊಳಗಿತು ವಾದ್ಯ. ಕೆಂಚ, ಹಿರಿಮಲೆಯ ಗುರಿಕಾರ ಮಾದ ಏನೇನೋ ಹೇಳಿಕೊಂಡ. ಪೂಜಾರಿ ಆವೇಶ ತಾಳಿದ. ಮೈ ತುಂಬಿದ; ದೆವ್ವದಿಂದ ಪ್ರೇರಿತನಾದವನಂತೆ ಕೈಯಲ್ಲಿ ಸಿಂಗಾರ, ಹೂ ಹಿಡಿದು ನಡುಗತೊಡಗಿದ, ಕಣ್ಣರಳಿಸಿದ. ಹೂವನ್ನು ಮುಖಕ್ಕೆ ಬಡಿದುಕೊಂಡ. ಸಿಂಗಾರದ ಅಕ್ಕಿ ಮುಖಕ್ಕೆಲ್ಲ ಅಂಟಿಕೊಂಡು ಪಾತ್ರಿಯ ರೂಪ ಮತ್ತಷ್ಟು ವಿಕಾರವಾಯಿತು. ಕೈಯಲ್ಲಿ ಕೆಂಚ ಕತ್ತಿ ಕೊಡುತ್ತಲೇ—ಆತ ಎಸಗಿದ ಚೀತ್ಕಾರಕ್ಕೆ ಸಹ್ಯಾದ್ರಿಯ ಬೆಟ್ಟದ ಸೆರಗೆಲ್ಲ ನಡುಗಿತು. ಎಷ್ಟು ಹೊತ್ತು ಆವೇಶ ತಾಳಿ ಪಾತ್ರಿ ನಡುಗಿದನೋ, ಬಾಯಲ್ಲಿ ಏನೇನು ಗೊಣಗುಟ್ಟಿದನೊ—ಯಾರಿಗೂ ತಿಳಿಯದು. ಎಲ್ಲರೂ ಅವನನ್ನೇ ತಲ್ಲೀನರಾಗಿ ನೋಡುವವರು. ದೆವ್ವ ಏನಪ್ಪಣೆ ಕೊಡಿಸುತ್ತದೋ—ಎಂದು ನಿರೀಕ್ಷಿಸುವವರು. ದೆವ್ವದ ತೃಪ್ತಿಗಾಗಿ 'ಹಾರ'ದ ಮೇಲೆ 'ಹಾರ'

ಸಂಹಾರವಾಯಿತು. ಗುಡಿಯ ಮುಂದಿನ ಅಂಗಳದಲ್ಲಿ ಕೋಳಿಯ ರುಂಡ ಗಳು ಚೆಂಡಾಡಿದುವು. ಹಂದಿಯ ನೆತ್ತರು ಹೊಳೆಯಂತೆ ಹರಿಯಿತು. ತಿರುಮಲಭಟ್ಟರು ಅದನ್ನೆಲ್ಲ ನೋಡಲಾರದೆ ಆ ಕಡೆ ಕತ್ತು ತಿರುಗಿಸಿ ಕುಳಿತರು. ಮಾದ ಕೆಂಚರಿಬ್ಬರೂ ಅತಿ ವಿನಯದಿಂದ ದೆವ್ವದೊಡನೆ "ಸಮಾಧಾನ ತಾಳಬೇಕು, ಕ್ಷಮಿಸಬೇಕು, ಬಡವರನ್ನೆಲ್ಲ ನಡೆಯಿಸಿಕೊಂಡು ಹೋಗ ಬೇಕು, ಕೋಪಿಸಬಾರದು. ಇನ್ನುಮುಂದೆ ನಿನ್ನ ಪೂಜೆಯನ್ನು ತಪ್ಪದಂತೆ ನಡೆಸುತ್ತೇವೆ" ಎಂದು ಏನೇನೋ ಹೇಳಿಕೊಂಡರು.

ದೆವ್ವ ದೆವ್ವವೇ! 'ಬಗ್ಗಿದವರಿಗೆ ಒಂದು ಗುದ್ದು ಹೆಚ್ಚು.' ಅದು ಬಾಯಿಂದ ಘೂಂಕರಿಸಿತು; ಆರ್ಭಟಿಸಿತು, 'ನಾನು ಬೇಡವಾದೆನಲ್ಲಾ ನಿಮಗೆ' ಎಂದು ಗದರಿಸಿತು. 'ಹಾಗುಂಟೇ, ಎಂದೂ ಹಾಗಿಲ್ಲ' ಎಂದು ಮೇಲಿಂದ ಮೇಲೆ ಅನ್ನುತ್ತಲಿದ್ದ ಕೆಂಚ. ನಿಜಕ್ಕೂ ಒಳಗಿಂದೊಳಗೆ ಭೀತಿ ಅವನಿಗೆ. ಎಲ್ಲಿ ದೆವ್ವವು ತಾನು ಸುಬ್ರಹ್ಮಣ್ಯಕ್ಕೆ ಹೋದ ವಿಚಾರ ಕುಕ್ಕಿ ನುಡಿಯುತ್ತದೋ ಎಂದು. ಆದರೆ ಬೂದನೊಬ್ಬನಿಗೇ ಆ ಗುಟ್ಟು ಗೊತ್ತಿತ್ತು. ಪೂಜಾರಿಗೆ ಗೊತ್ತೇ! ಹಾಗಾಗಿ ಆ ವಿಚಾರದಲ್ಲಿ ದೆವ್ವ ಆ ಮಾತನ್ನೇ ಆಡಲಿಕ್ಕಿಲ್ಲ. ಬದಲು ಯಾವ್ಯಾವ ಮನೆಯವರು ತನಗೆ ಸರಿಯಾಗಿ ನಡೆಯಲಿಲ್ಲ ಎಂದು ಏನೇನೋ ದೂರು ಕೊಟ್ಟಿತು. ಅವರವರು ಸಮಾಧಾನ ಹೇಳಿದರು. ಬಗ್ಗಿ ನುಡಿದರು. ಅನಂತರ ದೆವ್ವದ ಕಣ್ಣಿಗೆ ಬಿದ್ದದ್ದೇ ತುಕ್ರ. 'ನಾನು, ನೀನು' ಎಂದಿತು ದೆವ್ವ. 'ಈ ರೀತಿ ಮಾಡುವುದು ಸಮನಲ್ಲ. ನೀನು ತಪ್ಪಿತಸ್ಥ' ಎಂದು ಅಸ್ಪಷ್ಟವಾಣಿಯಿಂದ, ಅವ್ಯಕ್ತ ವಿಚಾರವನ್ನು ಹೇಳತೊಡಗಿತು. ಅವರವರ ತಪ್ಪನ್ನು ಅವರವರ ಬಾಯಿಂದಲೇ ಹೊರಡಿಸಬೇಕೆಂದೂ ದೆವ್ವದ ಪ್ರಯತ್ನವಿದ್ದಂತೆ ಕಾಣಿಸುತ್ತದೆ. ತುಕ್ರ ಬರಿದೆ, 'ಮಾಡಿದ ತಪ್ಪನ್ನೆಲ್ಲ ಒಪ್ಪುತ್ತೇನೆ. ಮಾಡದಿದ್ದುದನ್ನು ನನ್ನ ಮೇಲೆ ಹೊರಿಸಬೇಡ. ನೀನು ದೊಡ್ಡವ, ಬಡವರನ್ನು ನಡೆಯಿಸಿಕೊಂಡು ಹೋಗಬೇಕಾದವ' ಎಂದು ವಿನಯದಿಂದ ನುಡಿದ. ತಾಡ ಅಳಿಯನನ್ನೇ ನೋಡುತ್ತಿದ್ದ. ಇಷ್ಟರಿಂದಲೇ ತಪ್ಪೆಲ್ಲ ತುಕ್ರನವು ಎಂದು ಅವನಿಗೆ ಖಾತ್ರಿಯಾಯಿತು.

"ಇನ್ನು ಚೆನ್ನಾಗಿ ನಡೆದುಕೊಳ್ಳಿರಿ. ನನ್ನ ಹಾರ ತಪ್ಪಿಸಿದರೆ ನಿಮ್ಮನ್ನು ಬಲಿಕೊಳ್ಳುವುದು ನಿಜ" ಎಂದು ಗದರಿಸಿತು ದೆವ್ವ.

" ಉಂಟೇ, ಉಂಟೇ ? " ಎಂದ ಕೆಂಚ.

ಕೆಂಚನನ್ನೇ ಕೇಳಿತು ದೆವ್ವ—" ಕೆಂಚ, ಹೆದರಬೇಡ. ತೃಪ್ತಿಯಾಗಿದೆ ನನಗೆ. ಅದಿರಲಿ, ನಿನಗೆ ಪ್ರಾಯ ಸಂದಿತಲ್ಲ, ನಾಳೆ ಯಾರು ನಿನ್ನನಂತರ ಗುರಿಕಾರನೆಂದು ಯೋಚಿಸಿದ್ದೀಯಾ ? " ಎಂದು ಅದು ಕೇಳಿತು. ಎಲ್ಲರೂ ಅವನ ಕಡೆಗೇ ಮುಖ ಮಾಡಿದರು.

" ನಾನೇನು ಮಾಡುತ್ತೇನೆ, ನಿನ್ನ ಅಪ್ಪಣೆಯಂತೆ ನಡೆದುಕೊಳ್ಳುವವ ನಾನು."

" ಹಾಗೋ, ಹಾಗೋ, ನಿನ್ನ ಮೊಮ್ಮಗನಿದ್ದಾನಲ್ಲ ; ನೋಡಿಕೋ ಅವನನ್ನು " ಎಂದು ಅಪ್ಪಣೆ ಕೊಡಿಸಿತು. ಮುಂದೆ ಕೂಗಿ, ಕಿರಿಚಿ, ಧ್ವನಿ ಕಡಿಮೆ ಆದುದಕ್ಕೋ ಏನೋ, ದೆವ್ವ ಮಾತು ನಿಲ್ಲಿಸಿತು. ಆ ಕಟ್ಟಕೊನೆಯ ಮಾತಿನಿಂದ ಬೂದಣ್ಣನಿಗೆ ಹೇಳಲಾರದ ಆನಂದವಾಯಿತು. ತುಕ್ರನ ಆಂತರಿಕ ಆಸೆಯೊಂದು ಅದರಿಂದ ಧ್ವಂಸವಾಯಿತು. ಮಾತ್ರವಲ್ಲ ' ದೆವ್ವ ತನ್ನನ್ನೇ ತಪ್ಪಿತಸ್ಥನನ್ನಾಗಿ ಮಾಡಿತಲ್ಲ. ಯಾವ ವಿಷಯದಲ್ಲೆಂದು ಗೊತ್ತೇ ಇದೆ ; ಕೆಂಪಿಯ ವಿಚಾರದಲ್ಲಿ. ಅದು ಬಾಯಿಬಿಟ್ಟು ಹೇಳದಿದ್ದರೂ ಅದಲ್ಲವೆ ಆ ಮಾತಿನ ಅರ್ಥ ' ಎಂದು ಆತ ತನ್ನಷ್ಟಕ್ಕೆ ತಿಳಿದ.

ವಾದ್ಯ ಮೊಳಗಿತು. ಆ ವೇಳೆಗೆ ಸಮನಾಗಿ ಎರಡೂ ಕೇರಿಯ ಹೆಂಗಳೆಯರು ಅಲಂಕರಿಸಿಕೊಂಡು ದೆವ್ವದ ಗುಡಿಗೆ ತುಸು ದೂರದಲ್ಲಿ ಬಂಡೆಯೊಂದರ ಬಳಿ, ಗುಂಪುಕೂಡಿ ನಿಂತಿದ್ದರು. ಕೆಂಪಿಯೂ ಬಂದಿದ್ದಳು. ಉಳಿದವರ ಎಡೆಯಲ್ಲಿ ಕೆಂಪಿಯ ಮುಖ, ಮೈ ಇನ್ನಷ್ಟು ವರ್ಚಸ್ಸಿನಿಂದ ಹೊಳೆಯುತಿತ್ತು. ಬರಿದೆ ಕೆಂಪಿ ಎನಿಸಿದವಳಲ್ಲ ಅವಳು, ಉಳಿದವರಿಗಿಂತ ಬಿಳುಗೆಂಪಾಗಿ ಕಾಣಿಸುತ್ತಿದ್ದಳು.

ಇನ್ನೊಮ್ಮೆ ವಾದ್ಯ ಮೊಳಗಿತು. ಪೂಜಾರಿ ಕೈಯಲ್ಲಿ ಭಾರವಾದ ಖಡ್ಗವನ್ನು ಹಿಡಿದುಕೊಂಡು ಒಂದೇ ಸವನೆ ಓಟ ಹೂಡಿದ. ' ಹಾಂ, ಹೂಂ ' ಎನ್ನುವುದರೊಳಗಾಗಿ ಆ ಬೆಟ್ಟದ ಏರಿನ ಕಿರುದಾರಿಯಲ್ಲಿ, ಹುಲಿಯಂತೆ ಆರ್ಭಟಿಸುತ್ತ ಹೊರಟ. ಎಂಥ ವೇಗ ! ಎಂಥ ಸಾಹಸದ ಕೆಲಸ ಅದು. ತುಸುವೇ ಕಾಲು ಜಾರಿದರೆ ಕೆಳಗಿನ ಕೊರಕಲಿಗೆ ಬಿದ್ದು, ನುಗ್ಗುನುರಿಯಾಗಬೇಕು. ಆದರೆ ಓಡುತ್ತಿರುವವನು ಪೂಜಾರಿಯಲ್ಲ. ಆವೇಶಗೊಂಡ ಕಲ್ಕುಡ

ನಷ್ಟೆ! ಓಡಿ, ಕಾಡಿನ ಸೆರಗಿನಲ್ಲಿ ಆತ ಮರೆಯಾದ. ವಾಡಿಕೆಯಂತೆ ಕಿರಿ ಮಲೆಯ ಕೇರಿಗೆ ಭೇಟಿಕೊಟ್ಟು ಆತ ಮರಳಬೇಕು. ಆ ಸೋಜಿಗವನ್ನು ನೋಡುತ್ತ, ಬೆಟ್ಟದ ಕುಡಿಯ ತನಕ ಕಣ್ಣು ಹೊರಳಿಸಿದರು ತಿರುಮಲ ಭಟ್ಟರು. ಅಲ್ಲಿಂದ ಅವರ ದೃಷ್ಟಿ ಮರಳುವಾಗ ಕೇಂದ್ರೀಕೃತವಾದದ್ದು ಕೆಂಪಿಯ ಮೇಲೆ. ಆಕೆಯೂ ಧನಿಗಳನ್ನು ಜುಳುಜುಳನೆ ನೋಡಿದಳು.

ತುಸುವೇ ಸಮಯದೊಳಗಾಗಿ ವೈಲುದ್ದದ ಓಟ ಮುಗಿಸಿ, ದೈವದ ಪಾತ್ರಿ, ಹೋದಷ್ಟೇ ವೇಗದಿಂದ ಬೆಟ್ಟದ ಇಳಕಲಿನಲ್ಲಿ ಓಡಿಕೊಂಡು ಬಂದ. ಗುಡಿಯ ಅಂಗಣವನ್ನೂ ಸೇರಿದ. ಪೂಜೆ ಹಿರಿಯುವಲ್ಲಾಯಿತು. ಗುಡಿಯ ಹಿಂದಣಕ್ಕಿರಿಸಿದ್ದ ನಾಲ್ಕಾರು ಭಾರವಾದ ಖಡ್ಗಗಳನ್ನು ಹಿಡಿದುಕೊಂಡು ನಾಲ್ವರು ಕುಡಿಯ ತರುಣರು ನರ್ತಿಸತೊಡಗಿದರು. ವೀರ ಯೋದ್ಧರು ಗಳಂತೆ ಅವರು ಕಾಣಿಸಿದರು. ಅವರ ಕುಣಿತ ಕಂಡರೆ ಕಲ್ಕುಡನ ಅಪ್ಪಣೆ ಯಂತೆ ಎಲ್ಲಿಗೋ ಅವರು ಕಾಳಗಕ್ಕೆ ಹೊರಟಂತೆ ಕಾಣುತ್ತಿತ್ತು. ಅಜ್ಜನ ಬೆಂಗಡೆಯಲ್ಲಿ ನಿಂತ ಕರಿಯ ಅವನನ್ನು ತಬ್ಬಿಕೊಂಡು, ವೈಮರೆಯಿಸಿ, ಮುಖವನ್ನೀಚೆ ಮಾಡಿ, 'ತಾನೂ ಕುಣಿದೇನೆಯೋ' ಎಂದು ಹಂಬಲಿಸಿ ನೋಡುತ್ತಿದ್ದ. ಆ ದಿನ ಕುಣಿತದವರಲ್ಲಿ ಬೂದನೂ ಒಬ್ಬ. ಅವನ ಕುಣಿತದ ವೈಖರಿಯೇ ವೈಖರಿ! ಇಷ್ಟಿಷ್ಟೂ ಹೆಜ್ಜೆ ತಪ್ಪದೆ, ಭಾರವಾದ ಖಡ್ಗ ಹಿಡಿದಿದ್ದ. ಕೈ ಇಷ್ಟಿಷ್ಟೂ ದಣಿವು ತೋರಿಸದೆ ಕುಣಿದೇ ಕುಣಿದ. ಆವೇಶ ಭರಿತನಾಗಿ, ರೌದ್ರ ತಾಳಿ, ಉಳಿದ ಕುಣಿತಗಾರರನ್ನು ಸುತ್ತುವರಿಯುತ್ತ, ವಿಚಿತ್ರ ಗತಿಗಳಲ್ಲಿ ಕುಣಿದ. ತಿರುಮಲಭಟ್ಟರು ತಮ್ಮಷ್ಟಕ್ಕೆ 'ಚೆಂತಿಲ್ಲ, ಬೂದ ಸೊಂಪಾಗಿ ಕುಣಿಯುತ್ತಾನೆ. ಮನೆಗೊಮ್ಮೆ ಕರೆಸಿ, ಕುಣಿಸಿ ನೋಡಬೇಕು' ಎಂದಂದುಕೊಂಡರು. ಬಳಿಯಿದ್ದ ಕೆಂಚ "ಹಾಗೆ ಕುಣಿಯುವುದಿಲ್ಲ ದೊರೆಯೆ. ಪೂಜೆಯ ದಿನವೇ ಕುಣಿಯಬೇಕೆಂಬುದು ರಿವಾಜು" ಎಂದ.

ಈ ಕುಣಿತದ ಭವ್ಯನೋಟವನ್ನು ಅಲ್ಲಿ ನಿಂತ ಕುಡಿಯ ಹೆಂಗಳೆಯರು ಕಣ್ತುಂಬ ನೋಡಿ ಆನಂದಿಸಿದರು. ಅವರವರ ಮಡದಿಯರಿಗೆ ಅದರಿಂದಾದ ಆನಂದ ಅಷ್ಟಿಷ್ಟಲ್ಲ. ಕೆಂಪಿ ಅನೇಕಾವೃತ್ತಿ ಇಂಥ ಕುಣಿತ ನೋಡಿದವಳು. ಆದರೆ ತುಕ್ರ ಕುಣಿದುದನ್ನು ಎಂದೂ ಕಂಡಿರಲಿಲ್ಲ. ಇಂದೂ ಆತ ಕುಣಿಯ

ಲಿಲ್ಲ. ಆದರೆ ಬೂದನ ಕುಣಿತ ಮಾತ್ರ ಅವಳ ಮನಕ್ಕೆ ನಾಟಿತು. ಖಡ್ಗ ಹಿಡಿದ ಅವನಂಥ ವೀರ ಎರಡು ಮಲೆಗಳಲ್ಲಿಯೂ ಇರಲಾರರು—ಎಂಬ ಭಾವನೆ ಅವಳಲ್ಲಿ ಮೂಡಿಬಿಟ್ಟಿತು.

ಪೂಜೆ ಮುಗಿಯಿತು. ಇನ್ನು ಎರಡು ಕೇರಿಯವರೂ ಸೇರಿ ವನ ಭೋಜನ ನಡೆಸುವವರು. ಹೆಂಗಸರಿಗೆ ಹೆಚ್ಚಿನ ಕೆಲಸವಿಲ್ಲ; ಗಂಡಸರೆ. ಅಡುಗೆ ಮಾಡುವವರು, ಬಡಿಸುವವರು. ಅನ್ನ, ರೊಟ್ಟಿ, ಮಾಂಸಗಳ ಪಕ್ವಾನ್ನ ತಿಂದು ಜನ ಕೇರಿಗೆ ಮರಳುವಾಗ ಮಧ್ಯರಾತ್ರಿ ಆಗುತ್ತದೇ ಹಾಗೆಂದು ಧನಿಯರನ್ನು ಮನೆಗೆ ಬಿಟ್ಟು ಬರಲು, ತುಕ್ರ ಅವರ ಬೆನ್ನ ಹಿಂದೆಯೇ ಹೊರಟ. ಆತನ ಕಣ್ಣಿಗೂ ಕೆಂಪಿ ಕಾಣಿಸಿದಳು. ಕೆಂಪಿಗೂ ಆತ ಕಾಣಿಸಿದ. ತುಟಿ ಚೂಪುಮಾಡಿ ಕಣ್ಣರಳಿಸಿ, 'ನುಂಗುತ್ತೇನೆ ನಿನ್ನನ್ನು' ಎಂಬ ರೋಷ ತಾಳಿದ ಕೆಂಪಿಯನ್ನು ನೋಡುವ ಸಾಹಸ ಅವನಿಗಾಗಲಿಲ್ಲ. ಅವನ ಬದಲು—ಕತ್ತು ತಿರುಗಿಸಿ, ಅವಳ ಮುಖ ದಿಟ್ಟಿಸುತ್ತ ಬೆಟ್ಟದ ಕುಡಿ ಯಲ್ಲಿ ತಾವು ಕಣ್ಮರೆಯಾಗುವವರೆಗೆ ನೋಡುತ್ತ ಹೋದವರು ತಿರುಮಲ ಭಟ್ಟರು.

ಕೇರಿಯ ಜನಗಳು ರಾತ್ರಿಯ ಭೋಜನ ಮುಗಿಸಿ, ಹಾಡಿ, ಹರಟೆ ಹೊಡೆದು, ಮನೆಗೆ ಮರಳುವಾಗ ಮಧ್ಯರಾತ್ರಿ ಕಳೆದಿತ್ತು. ಅವರು ಮನೆಗೆ ಬಂದು, ಸದ್ದಿಲ್ಲದೆ ಮಲಗಿಕೊಂಡು ನಿದ್ದೆಹೋದರು. ತಮ್ಮ ಮನೆಯಲ್ಲಿ ನಿದ್ದೆಗೆಂದು ಒರಗಿದ ತಿರುಮಲಭಟ್ಟರಿಗೆ ಮಾತ್ರ ನಿದ್ರೆಯ ಸುಳಿವಿರಲಿಲ್ಲ. ಅವರ ಮನವೆಲ್ಲ ಕೆಂಪಿಯ ಮೇಲೆ ನಟ್ಟುಹೋಗಿತ್ತು. ಅವಳ ಮುಖಬಿಂಬ ವನ್ನೇ ನೆನೆಯುತ್ತ ಮಲಗಿದರೆ ನಿದ್ರೆ ಬರಬೇಕಾದರೂ ಹೇಗೆ? ಆಕೆ ಯಾರು, ಏನು? ಎಂದು ತಿಳಿಯುವ ಕುತೂಹಲ. ಹಿಂದೆ ಕಂಡಿರದ ಮುಖವೂ ಅಲ್ಲ; ಕಂಡಿದ್ದರೂ ಅಷ್ಟು ಸೊಬಗಿನಿಂದ ಕೂಡಿದ, ತಾರುಣ್ಯದಿಂದ ತುಂಬಿ ತುಳು ಕುವ ಜೀವ ಬಂದಿತ್ತೇ—ಎಂದು ಅನುಮಾನ. ತನ್ನನ್ನು ಹಿಂಬಾಲಿಸಿದ್ದ ತುಕ್ರನನ್ನು ಒಮ್ಮೆಂದೊಮ್ಮೆಗೇ ಆಕೆ ಯಾರೆಂದು ಕೇಳುವ ಮನವಾಗಿದ್ದರೂ ಕೇಳದೆಯೆ ಕುಳಿತರು. ಮೌನವಾಗಿ ಬರಲಾರದ್ದಕ್ಕೆ "ತುಕ್ರ, ಸಿಟ್ಟು ಗೊಂಡು ಹೋದ ನಿನ್ನ ಹೆಂಡತಿಯನ್ನು ಕರೆದುತರುವ ವಿಷಯ ಏನೆಂದು ಯೋಚಿಸಿದೆ?" ಎಂದು ಕೇಳಿದರು. ತುಕ್ರ ಅದಕ್ಕೆ "ಅವಳು ಹಾಳಾಗಲಿ

ಸ್ವಾಮಿ. ನನಗೇನು ಕಡಿಮೆಯಾಗಿದೆ ಈಗ. ಮೊದಲಿನವಳು ಇದ್ದಾಳೆ. ಮಕ್ಕಳಿವೆ; ಮರಿಗಳಿವೆ. ಅವಳಿಂದಲೇ ನಾನು ಬದುಕಿದ್ದೇನೆಯೋ? ನಿಮಗೆ ಹೇಳಲಿಲ್ಲ ನಾನು—ನೋಡಿ, ನನ್ನ ಈ ತೋಳನ್ನು. ಹುಲಿಯ ಹಾಗೆ ಕಚ್ಚಿದ ಗುರುತು ಇನ್ನೂ ಮಾಸದೆ ಉಳಿದಿದೆ. ಅಂಥವಳನ್ನು ಕಟ್ಟಿಕೊಂಡು, ಅವಳ ಸಿಟ್ಟು ಸೆಡ ಸಹಿಸಿಕೊಂಡು ಇಷ್ಟು ದಿನ ಕಳೆದದ್ದೇ ದೊಡ್ಡದು. ಬಾಳ ಬೇಕೆಂಬ ಆಸೆಯಿದ್ದರೆ ನಾಯಿಯ ಹಾಗೆ ಅವಳಾಗಿ ಬರುತ್ತಾಳೆ. ನಾನು, ಮಾನ ಬಿಟ್ಟು ಅವಳ ಕಾಲ ಬುಡಕ್ಕೆ ಹೋಗಲಾರೆ." ಎಂದು ತನ್ನ ದರ್ಪ ತೋರಿಸಿದ. ಆಕೆ ಕಡಿದು ಆದ ಗುರುತುಳ್ಳ ತೋಳನ್ನು ತೋರಿಸಿದ. ನೋಡಿ ನಕ್ಕರು. "ಅಷ್ಟು ದರ್ಪವುಳ್ಳವಳೇ ಅವಳು?" ಎಂದರು. ಅನಂತರ ಇಬ್ಬರೂ ಮನೆಯನ್ನು ಸೇರಿದರು. ತುಕ್ರ ದೆವ್ವದ ಗುಡಿಗೆ ಮರಳಿದ.

ರಾತ್ರೆ ಭಟ್ಟರ ನಿದ್ರೆ ಅಪೂರ್ಣವಾಗಿಯೇ ಕಳೆಯಿತು, ಬೆಳಗಾಯಿತು. ಅವರು ಬಂದ ಕೆಲಸ ಮುಗಿಯಿತು. ಇನ್ನು ಊರಿಗೆ ಮರಳಬೇಕು. ಹೋಗುವ ಮೊದಲು ಕುಡಿಯರಿಗೆ ಬೇಕಾದ ಚಿವಿಣಿ ಎಣ್ಣೆ, ಉಪ್ಪು, ಹೊಗೆ ಸೊಪ್ಪು, ಮೆಣಸುಗಳನ್ನು ಹಂಚಿಕೊಟ್ಟರೆ, ಮಳೆಗಾಲಕ್ಕೆ ಬರಬೇಕಾಗಿಲ್ಲ. ಏಲಕ್ಕಿ ತೋಟದ ಕೆಲಸವನ್ನು ಅವರಾಗಿ ಮಾಡುತ್ತಾರೆ. ಕೊಯ್ಯುವ ವೇಳೆಗೆ ಸಮನಾಗಿ ಬಂದರಾಯಿತು. ಅಲ್ಲದೆ ಹೋದರೂ, ಇಂಬಳ ತುಂಬಿದ ಕಾಡಿನಲ್ಲಿ ನಡೆದಾಡುವುದೂ ಕಷ್ಟ. ಮುಗಿಲು ತುಂಬಿ, ಸದಾ ಕತ್ತಲು, ಚಳಿಗಳಿಂದ ಆವರಿಸುವ ಬೆಟ್ಟದಲ್ಲಿ ವಾಸಿಸುವುದೂ ಕಷ್ಟ. ಆದರೂ ಹೊರಡುವ ಮುಂಚೆ, ಆ ಬೊಗಸೆಗಣ್ಣಿನ ವಯ್ಯಾರಿ ಯಾರೆಂದು ತಿಳಿಯುವ ಮನಸ್ಸು. ಸುಮ್ಮನೆ ನೋಡಿಕೊಂಡು ಬರುತ್ತೇನೆಂದು ಕೇರಿಯನ್ನು ಸುತ್ತಿದರು. "ಈ ವರ್ಷದ ನಿಮ್ಮ ಕುಮರಿಯ ಜಾಗ ನೋಡುವ" ಎಂದು ತುಕ್ರನನ್ನು ಜತೆಯಲ್ಲಿ ಕರೆದುಕೊಂಡು, ಕುಮರಿ ಬೆಳೆಯುವ ಬೆಟ್ಟಕ್ಕೆ ಹೋದರು. ವಿಶಾಲವಾದ ಬೆಟ್ಟದ ಮೈ ಸವರಿ ಬೋಳಾಗಿತ್ತು. ನೆಲ ಮರಗಳನ್ನು ಸುಟ್ಟ ಬೂದಿಯಿಂದ ಮುಚ್ಚಿತ್ತು. ಅಲ್ಲಲ್ಲಿ ಅಗತೆಯಿಂದ ಮಣ್ಣು ಅಡಿಮೇಲಾಗಿತ್ತು. ಇನ್ನೇನು? ನಾಲ್ಕು ಹನಿ ಮಳೆ ಬಿದ್ದರೆ ಬೀಜ ಬಿತ್ತುವ ದಿನವೇ ಬರುತ್ತದೆ. ಬೇಲಿ ಆಗಿದೆ. ಕುಡಿಯರೆಲ್ಲ ಬಿರುಸಿನಿಂದ ತಂತಮ್ಮ ಮಳೆಗಾಲದ ಗೂಡು

ಗಳನ್ನು ಕಟ್ಟುತ್ತಿದ್ದಾರೆ. ಎತ್ತರದ ಅಟ್ಟಳಿಗೆಯುಳ್ಳ ಕಾವಲಿನ ಮನೆ ನಿರ್ಮಿಸುತ್ತಿದ್ದಾರೆ. ಅದನ್ನೆಲ್ಲ ಕಂಡು, ಆ ಚಳಿ ಮಳೆಗಳಲ್ಲಿ ಕೇರಿ ಬಿಟ್ಟು ಕುಮರಿಯ ಬೆಳೆ ಕಾಯುವ, ಕುಡಿಯರ ಸಾಹಸಕ್ಕೆ 'ಭಲೆ' ಎಂದರು ಅವರು. ಅವನ್ನು ನೋಡುವುದರಲ್ಲಿ ಮನಸ್ಸು ಲೀನವಾಗಿದ್ದರೂ, ಅಲ್ಲಿ-ಇಲ್ಲಿ ದುಡಿಯುತ್ತಿದ್ದ ಜನಗಳ ಎಡೆಯಲ್ಲಿ, ಹಿಂದಣ ದಿನ ಕಂಡ ಚೆಲುವೆ ಇದ್ದಾಳೆಯೋ—ಎಂದು ಅರಸುವ ಕೆಲಸವನ್ನು ಕಣ್ಣು ಮಾಡುತ್ತಿತ್ತು. ಆ ಕೆಲಸ ನಿರಾಶೆಯದಾಯಿತು. ಕೆಂಪಿ ಅಲ್ಲಿರಲಿಲ್ಲ. ತಮ್ಮ ಮಲೆಯವರೊಂದಿಗೆ ಹಿರಿಮಲೆಗೆ ಹೊರಟುಹೋಗಿದ್ದಳು.

ಭಟ್ಟರು ಬರಿದೆ ಮನೆಗೆ ಬಂದರು. ಸಂಜೆ ಕೇರಿಗೆ ಮರಳಿದ ಕೆಂಚನನ್ನು ಕರೆಯಿಸಿಕೊಂಡು, ಮಳೆಗಾಲಕ್ಕೆ ಏನೇನು ಸಾಮಾನುಗಳು ಬೇಕು, ಎಷ್ಟೆಷ್ಟು ಬೇಕು—ಎಂದು ಕೇಳಿದರು. ಬಳಿಯಲ್ಲಿ ತುಕ್ರ ಇಲ್ಲದ್ದನ್ನು ಕಂಡು, "ಹೌದೋ ಕೆಂಚ, ತುಕ್ರನ ಮೇಲೆ ನಿನಗೆ ಬೇಸರ ಇಲ್ಲವಷ್ಟೆ. ಆತ ಒಳ್ಳೇ ನಂಬಿಗಸ್ಥ. ಯಾವ ಕೆಲಸಕ್ಕೂ ಬರುವವನು. ಆ ಗಂಡಹೆಂಡಿರಲ್ಲಿ ಏನೋ ಒಂದು ಕೆಟ್ಟ ಗಳಿಗೆಗೆ ಜಗಳ ಉಂಟಾಯಿತೆಂದರೆ, ಅದನ್ನು ಹಾಗೆಯೇ ಬಿಟ್ಟುಬಿಡುವುದೇ? ನಿನ್ನಂಥ ಹಿರಿಯ ಆ ಹೆಂಗಸನ್ನು ಕರೆದು ಬುದ್ಧಿ ಹೇಳಬೇಕು. ಅವರಲ್ಲಿನ ಒಡಕು ತಪ್ಪಿಸಬೇಕು" ಎಂದು ಉಪದೇಶ ಮಾಡಿದರು.

"ಏನೋ ಬುದ್ಧಿ, ನನಗೂ ಹಾಗೆಯೇ ಕಾಣುತ್ತದೆ. ಕೆಂಪಿ ಕೆಲಸಕ್ಕೂ ಹುಶಾರು. ಅವಳು ಹೋದರೆ ನಮ್ಮ ಕೆಲಸಕ್ಕೆ ಒಬ್ಬಳು ನಷ್ಟ. ಹಾಗೆಂದು ಅವಳ ಅಪ್ಪನಿಗೆ, ನಿನ್ನೆ ರಾತ್ರೆ ಬಹಳವಾಗಿ ಹೇಳಿ ನೋಡಿದೆ. ಅವಳೂ ಬಂದಿದ್ದಳಲ್ಲ—ನಿನ್ನೆ."

"ನಿನ್ನೆ ಬಂದಿದ್ದಳೇ?"

"ಬಂದಿದ್ದಳಲ್ಲ. ಬಂದಿದ್ದಳು. ದೂರದಲ್ಲಿ ಹೆಂಗಸರ ಹಿಂಡಿನಲ್ಲಿ ನಿಂತಿದ್ದಳಲ್ಲ. ನೀವು ಕಂಡಿಲ್ಲಂತ ಕಾಣುತ್ತದೆ. ಕೆಂಪಗಿನ ಸೀರೆ ಉಟ್ಟು, ಇಷ್ಟೂ ಚಿಂತೆಯಿಲ್ಲದ ಹಾಗೆ ನಿಂತಿದ್ದಳಲ್ಲ. ಗಂಡ ಬಿಟ್ಟನೆಂಬ ಬೇಸರವೂ ಅವಳಲ್ಲಿ ಕಾಣಿಸಲಿಲ್ಲ. ಅವಳ ಅಪ್ಪನೂ ಅವಳೂ, ನಾನು ಕೇಳಿದ್ದಕ್ಕೆ 'ಆಗಲಾರದ ಮಾತು' ಅಂದರು. ಅವಳಿಗೆ ಬೇಗ ಇನ್ನೊಂದು ಲಗ್ನ ಮಾಡು

ತ್ತಾರಂತೆ. ಮಾಡಲಿ. ಹಾಗೆಲ್ಲ, ಬಲವಂತದಿಂದ ಅವಳನ್ನು ಎಳೆದುತರಲು ಬರುತ್ತದೆಯೇ? ಅಲ್ಲದೆ ತುಕ್ರಣ್ಣ ಅವಳ ಕಾಲಿಗೆ ಅಡ್ಡಬಿದ್ದು ' ತಪ್ಪಾಯ್ತು, ಬಾ ಮಹಾರಾಯತಿ ಎನ್ನುವುದಕ್ಕೆ ಆಗುತ್ತದೆಯೆ?' "

ಆ ದಿನ ಕೆಂಪನ ಸೀರೆ ಉಟ್ಟವಳು, ನಾಚಿಕೆ ಬಿಟ್ಟು ನಿಂತವಳು, ತನ್ನ ದೃಷ್ಟಿ ನಟ್ಟ ಕನ್ಯೆಯೇ—ಎಂದನಿಸಿತು ಭಟ್ಟರಿಗೆ. ಅನಂತರ ಅವಳು ಕಣ್ಣಿಗೆ ಬೀಳಲಿಲ್ಲ. ತನ್ನ ತವರಿಗೆ ಹೊರಟುಹೋದಳು. ಅದರಿಂದ ಭಟ್ಟರಿಗೆ ಬಲು ನಿರಾಶೆಯೇನೋ ಆಯಿತು. ಆದರೆ ಬುದ್ಧಿ ಹೇಳುವವರಂತೆ ಅವರು " ನೋಡು, ಮಳೆಗಾಲದಲ್ಲಿ ಬಿಡುವು ಮಾಡಿಕೊಂಡು ಇನ್ನೊಮ್ಮೆ ಹೋಗಿ ಹೇಳು. ಇಬ್ಬರೂ ಹಟ ಮಾಡಿದರೆ ಪ್ರಯೋಜನವಿಲ್ಲ. ಒಬ್ಬರಾದರೂ ತಗ್ಗಬೇಕು; ಬಗ್ಗಬೇಕು. ಗಂಡಹೆಂಡಿರಲ್ಲಿ ಯಾರು ತಗ್ಗಿದರೂ ಬಗ್ಗಿದರೂ ಅದು ಹೆಚ್ಚು, ಇದು ಕಡಿಮೆ ಎನ್ನುವಹಾಗಿಲ್ಲ" ಎಂದು ತಿಳಿಸಿದರು.

ಮರುದಿನವೇ ತಿರುಮಲಧನಿಗಳು ಹೊರಟು ಹೋದರು. ಕೆಂಚ ಮೂಲೆಗುಂಪಿನ ತನಕ ಅವರ ಕುದುರೆಗೆ ಬೆಂಗಾವಲಾಗಿ ಹೋಗಿದ್ದ. ಸುದೈವಕ್ಕೆ ಆ ದಿನವೇ ಮೂಲೆಗುಂಪಿಗೆ ಉಪ್ಪು ಮೊದಲಾದ ಸಾಮಾನುಗಳನ್ನು ಹೊತ್ತು ತಂದ ಗಾಡಿಗಳು ಬಂದಿದ್ದವು. ಕೆಂಚ ಕೇರಿಗೆ ಹಿಂದಿರುಗಿದ; ಸಾಮಾನುಗಳನ್ನು ಹೊತ್ತು ತರಲು ಜನ ಕಳುಹಿಸಿ, ತನ್ನ ಪಾಲಿನ ಕೆಲಸ ಮುಗಿಸಿದ. ಭಟ್ಟರು ಬಂದ ಗಾಡಿಯೊಂದರಲ್ಲಿ ಕುಳಿತು, ಆ ದಿನ ಏಟ್ಲಸೀಮೆಗೆ ತೆರಳಿದರು.

ಅವರು ಹೋದ ಎರಡು ಮೂರು ದಿವಸಗಳಲ್ಲೇ ಬೇಸಗೆಯ ಮೊದಲ ಮುಗಿಲುಗಳು, ಬಿಳಿಯ ಬೆಟ್ಟಗಳಂತೆ, ಬಾನಲ್ಲಿ ಕಲೆತು ವಿಸ್ತರಿಸತೊಡಗಿದುವು. ಮಳೆಯಲ್ಲೂ ಸೂರ್ಯನ ಬೇಗೆ ಕಟುವಾಗಿ ಕಾಣಿಸಿತು. ಜನ ಬೀಜ ಬಿತ್ತಿದರು. ಬಿತ್ತನೆಗೆ ಸಮನಾಗಿ ಮುಂಗಾರು ಮಳೆ ಬಡೆಯಿತು, ನಾಲ್ಕಾರು ದಿನಗಳ ಕಾಲ—ಹಿಂದಣ ಪರ್ವತ ಶಿಖರಗಳನ್ನಾಗಲಿ, ಕೆಳಗಿನ ಕಣಿವೆಗಳನ್ನಾಗಲಿ, ಎದುರಿಗಿನ ಬೆಟ್ಟದ ಸಾಲುಗಳನ್ನಾಗಲೀ ಒಬ್ಬರೂ ನೋಡಿರಲಿಕ್ಕಿಲ್ಲ. ದಟ್ಟೈಸಿದ ಕಾರ್ಮುಗಿಲುಗಳೇ ಮುಗಿಲುಗಳು! ಕೊನೆ ಮೊದಲಿಲ್ಲದ ಬಿರುಗಾಳಿಯು ಮುಗಿಲುಗಳ ರಾಶಿಗಳನ್ನು ಅಬ್ಬರದಿಂದ ಬೀಸಿ ತಂದು, ಬೆಟ್ಟ, ಬಂಡೆ, ಕಾಡುಗಳ ಮೇಲೆ ಕವಿಯಿಸುತಿತ್ತು. ಏನು

ಗಾಳಿಯ ಸುಯ್ಲು! ಮರಗಳನ್ನು ತೂಗಿಸಿದ್ದೇ ತೂಗಿಸಿದ್ದು; ಬಿದಿರ ಮೆಳೆಗಳನ್ನು ಚೀರಾಡಿಸಿದ್ದೇ ಚೀರಾಡಿಸಿದ್ದು! ಗುಡುಗು ಮಿಂಚುಗಳಿಂದ ಎಲ್ಲರ ಎದೆಯನ್ನು ನಡುಗಿಸಿದ್ದೇ ನಡುಗಿಸಿದ್ದು! ಮುಂಗಾರು ಮಳೆಯ ರೌದ್ರಾವತಾರ ಕಾಣುವುದಕ್ಕೆ ಇಂಥಾ ಮಲೆಗಳಿಗೇನೇ ಹೋಗಬೇಕು. ನಮ್ಮ ಎಡಬಲಕ್ಕೇನೆ ಮಿಂಚಿನ ಸೆರಗು ನೆಲ ಕುಕ್ಕುವಂತೆ ಕಾಣುತ್ತದೆ. ಬೆಟ್ಟದ ಅಬ್ಬರಗಳೆಲ್ಲವು ಸೊಕ್ಕಿ, ಪ್ರತಿಯೊಂದು ಮೂಲೆಯಿಂದಲೂ ರೌದ್ರ ರೂಪ ತಾಳಿ, ಧುಮುಕಿ, ಬಂಡೆಗಳನ್ನುರುಳಿಸಿ, ಒಂದಕ್ಕೊಂದು ಮಸೆದು, ಆವೇಶದಿಂದ ಕೆಳಕ್ಕೆ ಹಾರುವ ನೋಟ ಅದ್ಭುತವಾದದ್ದು. ದೂರದಿಂದ ಅದನ್ನು ಕಾಣುವುದಕ್ಕೂ ಇಲ್ಲ. ಕಾಡಿನ ಮರಗಳಷ್ಟೇ ಅವಕ್ಕೆ ಅಡ್ಡವಲ್ಲ. ಸದಾ ಕವಿಯುವ ಮುಗಿಲುಗಳು ಈ ಎಲ್ಲ ಘೋರವನ್ನು ಮುಚ್ಚಿಬಿಡುತ್ತವೆ. ಬರಿಯ ನೀರು ಗಾಳಿಗಳ ಅಬ್ಬರವಿಷ್ಟೇ ಕಿವಿಗೆ ಕೇಳುತ್ತದೆ. ಅದರ ಜತೆಗೆ ಆಕಾಶ ಪಾತಾಳಗಳನ್ನು ನುಗ್ಗಾಗಿಸುವ ಸಿಡಿಲು ಬಡಿಯಿತೆಂದರೆ, ಎಲ್ಲರ ಎದೆಯಲ್ಲೂ ತಲ್ಲಣ ಮೂಡುತ್ತದೆ. ಹೀಗೆ ಒಂದೆರಡು ದಿನಗಳು ಇರುವುದಾದರೆ ಸರಿ. ವಾರ, ತಿಂಗಳು, ಮೂರು ತಿಂಗಳು, ಶಿವರಾತ್ರಿ ಕಳೆದ ಮೇಲೂ ಕಿರಿ ಮಲೆ, ಹಿರಿ ಮಲೆಗಳೆರಡೂ ವಿಶ್ವರೂಪ ತಾಳುತ್ತವೆ. ಅಂಥ ಆವರಣದಲ್ಲೇ ಕುಡಿಯರು ಯಾವ ಗಣ್ಯವೂ ಇಲ್ಲದೆ ಬಾಳುತ್ತಾರೆ; ನಿತ್ಯದ ಕೆಲಸ ಸಾಗಿಸುತ್ತಾರೆ.

ಮೊದಲ ಎಂಟು ದಿನದ ಮಳೆ ಬಂದಿತು; ಹೋಯಿತು. ಮುಗಿಲೇನೋ ಕವಿದಿರುತಿತ್ತು. ಇನ್ನೊಂದು ನಾಲ್ಕು ದಿನ ಬಿಸಿಲು ಬಿದ್ದೀತು—ಮೆಲ್ಲನೆ ಬಿಡಾರ ಸಾಗಿಸಬಹುದು—ಎಂದು ಅಂದುಕೊಂಡರು ಕುಡಿಯರು. ಆದರೆ ಆ ವರ್ಷ ಬಿಸಿಲಿಗೆ ತೆರವು ಕೊಟ್ಟವರಾರು? ಚಿತ್ರಾಪೌರ್ಣಿಮೆಯ ವೇಳೆಗೆ ತೊಡಗಿದ ಮಳೆಗಾಲ, ಬಿಡುವು, ಕಡಿತಗಳಿಲ್ಲದೆ, ಒಂದೇ ಸಮನೆ ಮುಂದುವರಿಯಿತು. ಕೇರಿಯವರೆಲ್ಲ ಮಳೆಯಲ್ಲೇ, ಕುಮರಿ ಬೆಳೆಯುವಲ್ಲಿನ ತಾವು ಕಟ್ಟಿದ ಗುಡಿಸಲುಗಳನ್ನು ಸೇರಿದರು. ಮಳೆಯಲ್ಲಿಅಡರು, ಕಟ್ಟಿಗೆ ಮೊದಲಾದುವುಗಳನ್ನು ಜಮಾಯಿಸಿದರು. ತುಸುವೂ ಎಡೆ ಕೊಡದ ಮಳೆಯಲ್ಲೇ ಕಿರಿ ಹಿರಿ ಮಲೆಗಳ ನಡುವೆ ಹರಿಯುವ ಅಬ್ಬಿಗೆ ಅವರೊಂದು ಸೇತುವೆಯನ್ನೂ ಹಾಕಬೇಕಾಯಿತು. ಆ ತೊರೆ ಕುಡಿಯರ ಜೀವನದಲ್ಲಿ

ಮನ್ನಣೆಯ ಸ್ಥಾನ ಪಡೆಯುವಂಥ ನದಿ. ಅದರ ಇಕ್ಕಡೆಗಳಲ್ಲೂ ಆನೆಯಂತಹ ಬಂಡೆಗಳು ನಿಂತಿವೆ. ಹೆಜ್ಜೆ ಹೆಜ್ಜೆಗೂ ತೊರೆ ಧುಮುಕುತ್ತ, ಧುಮುಕುತ್ತ, ನೇತ್ರಾವತಿ ನದಿಗೋ ಹೋಗಿ ಸೇರುತ್ತದೆ. ಬೇಸಗೆಯಲ್ಲಿ ಮೊಳಕಾಲು ಕಂತುವಷ್ಟು ನೀರೂ ಅದರಲ್ಲಿರುವುದಿಲ್ಲ. ಆಗ ನೀರು ಅಲ್ಲಲ್ಲಿ ಕುಣಿಗಳಲ್ಲಿ ನಿಂತು, ಕೊಳೆತ ಎಲೆಗಳ ಮೇಲೆ ಆಟವಾಡುತ್ತ, ಮೆಲ್ಲಗೆ ಹರಿದು, ಜಿನುಗಿ, ಅದೃಶ್ಯವಾಗುವಷ್ಟು ಕ್ಷೀಣವಾಗಿ, ಬಂಡೆಗಳ ಎಡೆಯಿಂದ ತೊಟ್ಟಾಗಿ ಹರಿದು, ಹಿಂದಿನಂತೆಯೇ ಇನ್ನೊಂದು ಕುಣಿ ಸೇರಿ, ಅಲ್ಲಿಂದ ಮುಂದುವರಿಯುತ್ತದೆ. ಈ ನೀರ ಕುಣಿಗಳು ಆಚೀಚಿನ ಕಾಡುಗಳಲ್ಲಿ ವಾಸಿಸಿರುವ ವನ್ಯಮೃಗಗಳ ನೀರಡಿಕೆ ಹಿಂಗಿಸುವ ಕೊಳಗಳಾಗುತ್ತವೆ. ಕಾದು ಕುಳಿತ ಕುಡಿಯನಿಗೆ—ಅಲ್ಲಿ ಕಾಣಸಿಗದ ಮೃಗವೇ ಇಲ್ಲ. ಮಿಗಗಳು, ಕಡವೆಗಳು, ಕಾಟಿಗಳು—ಆಗಾಗ ಬಂದುಹೋಗುತ್ತವೆ. ಅವುಗಳನ್ನು ಹೊಂಚು ಹಾಕಿ ಅಲೆದಾಡುವ ಹುಲಿ ಚಿರತೆಗಳ ನೀರಡಿಕೆಯ ತೃಪ್ತಿಯು ಇಂಥಲ್ಲೇ ಆಗಬೇಕು. ಒಮ್ಮೊಮ್ಮೆ ಆನೆಯ ಹಿಂಡು ಬಂದು ಆ ನೀರಿನ ಹೊಂಡಗಳಲ್ಲಿ ಮಲಗಿ, ಸ್ವೇಚ್ಛೆಯಿಂದ ಸೊಂಡಿಲಿನಿಂದ ನೀರು ಸೀವಿಸಿ, ಅಭಿಷೇಕ ಮಾಡಿಕೊಳ್ಳುವುದನ್ನೂ ಕಾಣಬಹುದು. ಸಮಯ ಸಾಧಿಸಿ, ಮಿಗ, ಕೆಮ್ಮದಂಥ ಪ್ರಾಣಿಗಳಿಗೆ ಉರುಳಿಡಲು ಒಳ್ಳೆಯ ತಾವು ಇದು.

ಮಳೆ ಕಳೆದು, ತೊರೆ ತುಂಬಿ ಹರಿಯುವಾಗಲೂ ಕುಡಿಯರಿಗೆ ಅದರಿಂದ ಲಾಭವಿದೆ. ಯಾವುದೋ ಮದ್ದಿನ ಬೇರನ್ನು ಅರೆದು, ನೀರಲ್ಲಿ ಕಲಸಿ ತೇಲಿಬಿಟ್ಟರಾಯಿತು. ಮುಂದೆ ಹತ್ತುನೂರು ಗಜ ದೂರಗಳಲ್ಲಿ ವಿಷಗೊಂಡ ನೀರಲ್ಲಿ ಬದುಕಲಾರದೆ, ಸಾಯುವ ಮೀನಿನ ಸುಗ್ಗಿ ಅವರಿಗೆ ಹೀಗಾಗಿ ಬೆಟ್ಟದ ತೊರೆ ಅವರ ಅನ್ನದೇವತೆ. ಬೆಟ್ಟದಲ್ಲಿ ಅನ್ನಕ್ಕೆ ಕೊರತೆ ಎಂದಲ್ಲ ಕುಮರಿ ಬೆಳೆಯುತ್ತಾರೆ; ಕುಮರಿಯಲ್ಲಿ ಬತ್ತ, ರಾಗಿ ಎರಡೂ ಸೊಂಪಾಗಿ ಬೆಳೆಯುತ್ತವೆ ಆದರ ಒಮ್ಮೊಮ್ಮೆ—ಸೊಕ್ಕಿದ ಆನೆಯ ಹಿಂಡೋ ಕಾಟಿಯ ಹಿಂಡೋ ಕುಮರಿಯ ಹೊಲಗಳನ್ನು ನುಗ್ಗಿಬಿಟ್ಟರೆ, ಹೊರಗಿನ ಮುಳ್ಳುಬೇಲಿ ಅವಕ್ಕೆ ಈಡಲ್ಲ. ಎಲ್ಲ ಕುಡಿಯರೂ ಸೇರಿ ತಮಟೆ ಬಾರಿಸಿ, ಆರ್ಭಟಿಸಿ, ಕೂಗಿ, ಎಷ್ಟು ಬೆದರಿಸಿದರೂ ಪ್ರಯೋಜನ ಬಾರದ ಗಳಿಗೆ ಉಂಟು. ಅವು ಹಿಂಡಾಗಿ ಬಂದು ಮನುಷ್ಯರನ್ನು ಅಲಕ್ಷಿಸುವುದೂ ಉಂಟು.

ಹಾಗೆಂದು ಮಲೆಗಳಲ್ಲಿ ಹುಲ್ಲಿಗೆ ಅಭಾವವೇ? ಸೊಪ್ಪಿಗೆ ಅಭಾವವೇ? ಸೊಕ್ಕಿದ ವನ್ಯಮೃಗಗಳಿಗೆ ಇದೊಂದು ಚೇಷ್ಟೆ. ಬರುತ್ತವೆ; ಬಂದು ತಿನ್ನುವುದಕ್ಕಿಂತಲೂ ಹೆಚ್ಚಾಗಿ ಹೊಲಗಳಿಗೆ ನುಗ್ಗಿ, ಎರಡು ಗಳಿಗೆಯ ಕಾಲ ಆಟವಾಡಿ, ಹೊರಟುಹೋಗುತ್ತವೆ. ಅಷ್ಟು ಮಾಡಿದುವಾದರೆ ಅವುಗಳ ಕೆಲಸವೇನೋ ಮುಗಿಯಿತು. ಕುಡಿಯರ ಕೆಲಸ—ಕುಂಬಾರಗೆ ವರ್ಷ, ದೊಣ್ಣೆಗೆ ನಿಮಿಷವಾಗುತ್ತದೆ. ಆದುದರಿಂದ ಈ ಮಲೆಯ ಜನ, ಕುಮರಿಯೊಂದನ್ನೇ ಹೊಂದಿಕೊಂಡಿರುವುದಿಲ್ಲ. ತೆರತೆರನ ಬೇಟೆಯಾಡುತ್ತಾರೆ. ಮೇಲೆ, ಯಾವ ಕಾಲದಲ್ಲೂ ಮಲೆಗಳಲ್ಲಿ ಗಡ್ಡೆಗೆಣಸುಗಳಿಗೆ ಅಭಾವವಿಲ್ಲ. ಹುಡುಕಿಹೋದರೆ ಒಬ್ಬನ ತಲೆಹೊರೆಯಾಗುವಂಥ ಹೆಗ್ಗೆಣಸು ಸಿಗುತ್ತದೆ. ತಾಳೆಯ ಮರಗಳಿವೆ, ಬಯನಿಯ ದಿಂಡುಗಳಿವೆ. ಎಲ್ಲವೂ ಅವರ ಆಹಾರವೇ.

ಮಳೆಗಾಲದಲ್ಲಿ ಮಾತ್ರ—ಅವರ ಬೆಟ್ಟದ ತೊರೆ ಹಿರಿ ಕಿರಿಯ ಮಲೆಗಳ ನಡುವಣ ಸಂಬಂಧವನ್ನು ಕಡಿಯುವುದೇ ಹೆಚ್ಚು. ಎಷ್ಟೆಂದರೂ ಮುಗಿಲಿನ ಮುಸುಕಿನಲ್ಲಿ-ಬಾಳಬೇಕಾದ ಜನಕ್ಕೆ, ಬೇಸರ ಎಂಬುದುಂಟಲ್ಲ. ವೇಳೆ ಹೋಗಬೇಕಲ್ಲ! ನಂಟರ ಮನೆ ಅರಸಿಕೊಂಡು ಹೋಗುವುದಕ್ಕೆ ಮಳೆಗಾಲವೇ ಉತ್ತಮ ಸಮಯ. ಅರಸಿಕೊಂಡು ಹೋಗಬೇಕಾದರೆ, ಈ ತೊರೆಯನ್ನು ದಾಟದೆ ಗತ್ಯಂತರವಿಲ್ಲ. ಒಮ್ಮೊಮ್ಮೆ ತೊರೆಯ ನೀರು ನಡುವಿಗೆ ಬರುತ್ತದೆಂದು ಇಳಿದರೆ, ಒಂದು ಕ್ಷಣದಲ್ಲಿ ಮೇಲಿಂದ ಮೊರೆದುಬರುವ ಪ್ರವಾಹ, ಅವನನ್ನು ಕೊಚ್ಚಿಕೊಂಡು ಹೋಗಬಹುದು. ಅದಕ್ಕಾಗಿ ಅಂಜಿ, ತೊರೆಗೆ ಸೇತುವೆ ಹಾಕುತ್ತಾರೆ. ಹಿಂದಣ ವರ್ಷ ತೊರೆ ದಾಟುವ ಜಾಗದಲ್ಲಿ ಹಾಕಿದ್ದ ಸೇತುವೆ, ಅಂದರೆ ನೀಳವಾಗಿ ಅಡ್ಡನೆ ಕೆಡವಿದ ಮರದ ದಿಂಡೇ, ಪ್ರವಾಹಕ್ಕೆ ಬಳಿದುಹೋಗಿತ್ತು. ಹೀಗಾಗಿ, ಈ ವರ್ಷ ಆಚೆ ದಾಟುವುದು ಕಷ್ಟ. ಬೂದನಿಗೆ ಚಪಲ, ಹಿರಿ ಮಲೆಗೆ ಹೋಗಿಬರಬೇಕೆಂದು. "ಅಜ್ಜ, ಮಾಡುವ ಕೆಲಸವೇನಿಲ್ಲ. ಆಚೆ ಎಲ್ಲಾದರೂ ತಿರುಗಾಟಕ್ಕೆ ಹೋಗೋಣ ಎಂದರೆ, ಅಬ್ಬಿಯ ನೀರು, ಕಳೆದ ವರ್ಷದ ಪಾಪನ್ನು ಕೊಚ್ಚಿಕೊಂಡು ಹೋಗಿದೆ. ಬೇಡವೇ ಈ ವರ್ಷ ಅದಕ್ಕೆ ಸೇತುವೆ?" ಎಂದು ಕೆಂಚನನ್ನು ಆಗಾಗ ಕೇಳುತ್ತಾನೆ. ಏಲಕ್ಕಿ ಗಿಡಗಳ ಬುಡವನ್ನು ಬಿಡಿಸಿಕೊಟ್ಟು ಬರುವ

ತನಕ, ಅವನು ಈ ಮಾತಿಗೆ ಕಿವಿಹಾಕಲಿಲ್ಲ. ಮಳೆಗಾಲದ ಒಂದು ತಿಂಗಳು ಕಳೆದಮೇಲೆ, ಇನ್ನೊಮ್ಮೆ ಬೂದ ಅದೇ ಪ್ರಾರ್ಥನೆ ಮಾಡಿದ. ಕೆಂಚನ ಹೇಳಿಕೆ ಹೊರಡುವಾಗಲೇ ತುಕ್ರ ಅನ್ನುತ್ತಾನೆ "ಯಾಕಜ್ಜ, ಸೇತುವೆ, ಪಾಕುವೆ. ಅಲ್ಲಿಂದಿಲ್ಲಿಗೆ ಮಳೆಗಾಲದಲ್ಲಿ ಯಾರು ಬರುತ್ತಾರೆ? ಇಲ್ಲಿಂದಲ್ಲಿಗೆ ಯಾರು ಹೋಗುತ್ತಾರೆ. ಮೊನ್ನೆ ಕೋಲಕ್ಕೆ ಅವರೆಲ್ಲ ಬಂದರು ಎಂಬುದನ್ನು ನೋಡಿ, ಅವರ ಮನಸ್ಸು ತಣ್ಣಗಾಗಿದೆ ಎಂದು ತಿಳಿಯುತ್ತೀಯಾ? ಯಾಕೋ ಆ ಮಲೆಯುವಕ್ಕೆ ನಮ್ಮನ್ನು ನೋಡಿದರಾಗದು. ಅವರು ಅಲ್ಲೇ ಇರಲಿ; ನಾವು ಇಲ್ಲೇ ಇರುವ" ಎಂದು.

ಕೆಲಸಕ್ಕಂತು ಹೊರಟಾಗಿದೆ—ಇನ್ನು ಬೇಡ ಎಂದರೆ ಹೇಗೆ ಎಂದು ಕೊಂಡು ಕೆಂಚ ಮೆಲ್ಲಗೆ ಹಾಸ್ಯ ಮಾಡಿದ. "ಏನಾಗಬೇಕು ತುಕ್ರ. ದೊಡ್ಡ ಕೆಲಸವೇನು ಅದು? ಸಂಕಕ್ಕೆ ಮರ ಕಡಿದರೆ ಚಳಿ ಓಡುತ್ತದೆಂದು ತಿಳಿದುಕೋ. ಒಂದು ದೊಡ್ಡ ಮರ ಕಡಿದುಹಾಕುವ. ಒಪ್ಪೊತ್ತಿನ ಕೆಲಸಕ್ಕೆ ಉದಾಸೀನ ಯಾಕೆ ಮಾಡಬೇಕು. ಹೋಗುವವರು ಹೋಗಲಿ; ಬರುವವರು ಬರಲಿ."

"ಬರುವವರು ಹೋಗುವವರಿಲ್ಲದೆ ಕೆಲಸವನ್ಯಾಕೆ ಮಾಡಬೇಕು ಅಂಪ. ಮಳೆಗಾಲದ ನಾಲ್ಕು ತಿಂಗಳಾದರೂ ನಾವು ಕೇರಿಯಲ್ಲೇ ಇದ್ದು ಸುಖವಾಗಿರಬಹುದಲ್ಲ. ಈಚಿನ ತರಲೆ ಆಚೆಗಿಲ್ಲ; ಆಚೆಗಿನ ತರಲೆ ಈಚೆಗಿಲ್ಲ. ಮೊದಲಿದ್ದ ಸಂಕ ಹೋದದ್ದೇ ಒಂದು ಲೆಕ್ಕಕ್ಕೆ ಒಳ್ಳೆಯದಾಯಿತು."

ಕೆಂಚನೆಂದ "ಒಳ್ಳೆಯ ವೈರಾಗ್ಯ ಬಂದುಬಿಟ್ಟಿದೆ—ತುಕ್ರಣ್ಣಗೆ. ನೋಡು ತುಕ್ರ, ನಾವು ಸೇತುವೆ ಹಾಕಿದ ಮುಹೂರ್ತಕ್ಕೆ ನಿನ್ನ ಕೆಂಪಿಗೆ ಗಂಡನ ಮನೆ ಸೇರುವ ಆಸೆಯಾಗಿ, ಬಂದರೂ ಬಂದಳೇ. ಪಾಪು ಹೋಗಿದೆ. ನಾನು ಹೇಗೆ ಬರಲಿ ಎಂದು ಅವಳು ಅನ್ನಬಾರದಲ್ಲ ನಾಳೆಗೆ."

"ಅವಳು ಬರುವುದೂ ಬೇಡ, ಹೊಳೆ ದಾಟುವುದೂ ಬೇಡ. ಬಂದರೆ ಮನೆ ಹೊಗ್ಗಿಸಿಕೊಳ್ಳುವವರ್ಯಾರೆಂದು ಬೇಡವೇ."

"ನೀನಂತು ಬಹಳ ಬಿಸಿಯಲ್ಲೇ ಇರುವ ಹಾಗೆ ಕಾಣುತ್ತದೆ. ಏನು, ಬೇರೊಂದು ಮದುವೆಯಾಗುತ್ತೀಯಾ?"

"ಯಾಕೆ, ನನಗೆ ಮೊದಲಿನವಳಿಲ್ಲವೇ?"

"ಮೊದಲಿನವಳು ಸಾಲದೆಂದಲ್ಲವೇ ಕೆಂಪಿಯನ್ನು ತಂದದ್ದು ?"

"ಯಾರು ನಿನ್ನನ್ನು ಮಾತನ್ನಲ್ಲಿ ವಿಚಾರಿಸುವುದು! ನನ್ನಿಂದಾಗಿ ಸಂಕದ ಕೆಲಸ ನಿಲ್ಲುವುದು ಬೇಡಪ್ಪ; ಬರುತ್ತೇನೆ. ನಿನ್ನ ಬೆನ್ನಿಗೇ ಬರುತ್ತೇನೆ. ಹೋಗುವ" ಎಂದು ಕೊಡಲಿ ತರಲು ತುಕ್ರ ತನ್ನ ಗುಡಿಸಲಿಗೆ ಹೋದ. ಬೂದ, ಕೆಂಚ, ತಮಾಷೆ ನೋಡುವುದಕ್ಕೆ ಕರಿಯ, ಇನ್ನು ನಾಲ್ಕಾರು ಕುಡಿಯರು ಬೆಟ್ಟ ಇಳಿದು, ತೊರೆಯ ಕಡೆಗೆ ಬಂದರು. ನದಿಯ ಇಕ್ಕಟ್ಟಿನ ಸ್ಥಳವೊಂದನ್ನು ಆರಿಸಿದರು. ಇವರಾರಿಸಿದ ದಡದ ಒಂದು ಕಡೆಯಲ್ಲಿ ಅನುಕೂಲವಾಗಿಯೇ ದೆವ್ವದಂಥ ಒಂದು ಮತ್ತಿಯ ಮರ ಬೆಳೆದು ನಿಂತಿತ್ತು. ನೆಟ್ಟಗೆ ಮುಗಿಲು ಮುಟ್ಟುವ ತನಕ ಹೋಗಿತ್ತು. ಎತ್ತರಕ್ಕೆ ಎತ್ತರ, ದಪ್ಪಕ್ಕೆ ದಪ್ಪವೂ—ಸಮನಾಗಿತ್ತು. ಕಡಿದು ಉರುಳಿಸಿದರೆ ಈಚೆಂದ ಆಚೆಗೆ ಗಟ್ಟಿಮುಟ್ಟಾದ ಸೇತುವೆಯಾಗುತ್ತದೆ. ಹತ್ತು ವರ್ಷಗಳವರೆಗೆ ಯಾವ ಮುಲಾಜೂ ಇಲ್ಲದೆ ನಿಲ್ಲುವಂಥ ಸೇತುವೆ ಆಗುವಂತಿತ್ತು. ಗಟ್ಟಿ ಜಾತಿಯ ಮರವಾದುದರಿಂದ, ಕಡಿಯುವುದು ಮಾತ್ರ ಶ್ರಮದ ಕೆಲಸ. ಅದರ ಬುಡಕ್ಕೆ ಕೊಡಲಿಯ ಪೆಟ್ಟು ಹಾಕತೊಡಗಿಯೂ ಆಯಿತು. ಪೆಟ್ಟಿನ ಮೇಲೆ ಪೆಟ್ಟು ಇಬ್ಬಿಬ್ಬರ ಕೊಡಲಿಗಳಿಂದ ಸರದಿಯಿಂದ ಬೀಳತೊಡಗಿತು. ಪುಟ್ಟ ಪುಟ್ಟ ಚಕ್ಕೆಗಳು ಮಾತ್ರ ಹಾರಿಹೋಗುತ್ತಿದ್ದುವಷ್ಟೆ. ಅಲ್ಲೇ ಸಮೀಪದಲ್ಲಿ ಕರಿಯ, ಒಂದು ನೀಳ ಕೋಲಿನ ತುದಿಗೆ ಬೇರೊಂದು ಮರದ ತುಂಡು ಕಟ್ಟಿ, ಮರದ ಕೊಡಲಿ ಮಾಡಿ, ತಾನೂ ಒಂದು ಗಿಡ ಕಡಿಯುತ್ತ ನಿಂತ. ಅಷ್ಟರಲ್ಲಿ ತುಕ್ರನೂ ಕೆಲಸಕ್ಕೆ ಬಂದು ಸೇರಿದ. ಮರದ ಮೂರನೆಯ ಒಂದಂಶ ಕೊಚ್ಚಿ ತೆಗೆಯುವುದಕ್ಕೇನೆ ಎರಡು ಗಳಿಗೆಯ ಕಾಲ ಹಿಡಿಯಿತು. ಕೆಂಚ ಕೈಕೊಟ್ಟು ದಣಿದ. ತುಕ್ರನೂ ದಣಿದ. ಉಸ್ಸೆಂದು ಎಲ್ಲರೂ ಕುಳಿತರು; ಎಲೆ ಅಡಿಕೆ ಮೆದ್ದರು. ಅದನ್ನು ತಿಂದಾದ ಬಳಿಕ, ಮತ್ತೊಮ್ಮೆ ಕೆಲಸ ಮುಂದುವರಿಸಿದರು. ಮರಕ್ಕೆ ಹಾಕಿದ ಕಚ್ಚು ಅರ್ಧಕ್ಕರ್ಧ ಬಿರಿತು, 'ಈಗ ಬಿದ್ದೀತು, ಇನ್ನರೆಗಳಿಗೆಗೆ ಮರ ಬಿದ್ದೀತು' ಎಂಬ ಧೈರ್ಯತಾಳಿ, ಎಲ್ಲರೂ ಹೋಗಿ ಕುಳಿತರು. ಅದನ್ನು ತಳ್ಳೋಣವೇ ಎಂಬ ಯೋಚನೆ. ಆದರೆ ದೆವ್ವದಂತಹ ಮರಕ್ಕೆ ತಮ್ಮ ತಳ್ಳಾಟ ಏನು ಪ್ರಯೋಜನ ಎಂದೆನಿಸಿತು. ಇನ್ನೂ ಕಡಿತ ಸ್ವಲ್ಪ ಆಳವಾಗಿ ಹೋದರೆ, ಮಗುಚಿ ಬೀಳಬೇಕು ಆ ಮರ. ಅಷ್ಟು

ಮಾಡುವ ಮೊದಲು, ಇನ್ನಷ್ಟು ವೀಳೆಯ ತಿನ್ನುವ ಚಪಲವಾಗಿ ಅದಕ್ಕೆ ಕುಳಿತರು. ಎಲೆ ಅಡಿಕೆ ತಿನ್ನುತ್ತಿರುವಾಗ ಮೆಲ್ಲಗೆ ಗಾಳಿ ಬೀಸತೊಡಗಿತು. ಆ ಗಾಳಿ ಕ್ಷಣಮಾತ್ರದಲ್ಲಿ ಬಿರುಗಾಳಿಯೇ ಆಯಿತು. ಕೆಂಚನೆಂದ " ಗಾಳಿಗೆ ಅದು ನೆಟ್ಟಗೆ ಆ ಕಡೆ ಬೀಳುತ್ತದೆಯೋ, ಸ್ವಲ್ಪ ಮಾಲಿ ಬೀಳುತ್ತದೆಯೋ ಎಂದು ಹೇಳುವುದೂ ಕಷ್ಟ. ದೂರ ಹೋಗಿ ನಿಲ್ಲುವ " ಎಂದು ಎಚ್ಚರವ ನ್ನಿತ್ತ. ಎಲ್ಲರೂ ಆವಸರದಿಂದ ಎದ್ದು ದೂರ ಸರಿದರು. ಮರದ ದಿಂಡಿನಿಂದ 'ನರನರ' ಎಂಬ ಸದ್ದೂ ಕೇಳಿಸಿತು ಕೆಂಚ ಕರಿಯನನ್ನು ಕರೆದುಕೊಂಡು ಮೇಲಕ್ಕೆ ಧಾವಿಸಿದ. ಉಳಿದವರೂ ಧಾವಿಸಿದರು. ಎಲೆ ಅಡಿಕೆಗಳನ್ನು ಬುಟ್ಟಿಗೆ ತುಂಬಿಸುತ್ತ ತುಸು ನಿಧಾನವಾಗಿ ಎದ್ದವನು ತುಕ್ರ. ಆತ ಎಂಟು ಹೆಜ್ಜೆ ಮೇಲೇರುವುದರೊಳಗಾಗಿ, ಮರ ಮುರಿದುಬಿತ್ತು. ಎದುರಿನ ದಡಕ್ಕೆ ಧೊಪ್ಪೆಂದು ಮಗುಚಿ ಬಿದ್ದಾಯಿತು. ಸಿಡಿಲು ಬಡಿದಂತೆ ಸದ್ದೆದ್ದಿತು. ಎಲ್ಲರು ಕಣ್ಣು ತಿರುಗಿಸಿ 'ಎಲ್ಲಿ ಬಿದ್ದಿತು, ಏನಾಯಿತು' ಎಂದು ನೋಡುವುದರೊಳಗೆ ತಮ್ಮ ಸಮೀಪದಲ್ಲಿದ್ದ, ಮರದಿಂದ ಒಂದಡಿ ದೂರವಿದ್ದ, ತುಕ್ರನೂ ಉರುಳಿ ಬಿದ್ದಾಗಿತ್ತು. ಆದರ ದಿಂಡಿಗೆ ಅಜಾಗ್ರತೆಯಿಂದ ಒರಗಿಸಿದ ಕೊಡಲಿಯೊಂದು ಹೇಗೋ ಹಾರಿ ಜಿಗಿದು ಆವನ ಕಾಲಿನ ಮೇಲೆ ಬಿದ್ದಿತ್ತು. ಗಾಯವಾಗ ಲಿಲ್ಲ. ಆದರೆ ಬಿದ್ದದ್ದು ಕಬ್ಬಿಣದ ತುಂಡಲ್ಲವೇ ? ಕಾಲನ್ನು ಜಜ್ಜಿದಂತಾ ಯಿತು. ಮರ ಬೀಳುವ ಭರಕ್ಕೆ ತುಕ್ರನ ಚೀರಾಟ ಕೇಳಿಸಲಿಲ್ಲ ಉಳಿದವ ರಿಗೆ. 'ಏನಾಯಿತು, ಏನಾಯಿತು?' ಎಂದು ಕೇಳುವುದರೊಳಗೆ, ಆತ ಕಾಲು ಮೊಟಕಿಸಿಕೊಂಡು, ಮೇಲಕ್ಕೆದ್ದು ನಿಂತ. 'ಅಯ್ಯೋ' ಎಂದು ಪಾದವನ್ನು ಮುಷ್ಟಿಯಲ್ಲಿ ಹಿಡಿದ. " ಕೊಡಲಿ ಬಿತ್ತೇ ! ಹ್ಯಾಗೆ? ಆಶ್ಚರ್ಯ. ಪುಣ್ಯಕ್ಕೆ ಅದು ಮೈಮೇಲೆ ಬೀಳಲಿಲ್ಲವಲ್ಲ ; ಗಾಯವಾಗಲಿಲ್ಲವಲ್ಲ" ಎಂದರು ಎಲ್ಲರು. ಒಂದು ಅವಘಡ ತಪ್ಪಿದ್ದಕ್ಕಾಗಿ ಎಲ್ಲರಿಗೂ ಸಂತೋಷವಾಯಿತು. ಮರ ಸಮನಾಗಿ ಆಚೀಚಿನ ಎರಡು ಬಂಡೆಗಳ ಮೇಲೆ ಹೋಗಿ ಎರಗಿತ್ತು. ಬೂದನ ಉತ್ಸಾಹವೇ ಉತ್ಸಾಹ ! ಈಚಿನ ಬಂಡೆಯನ್ನು ಏರಿ, ಮರದ ಮೇಲೆ ಕುಪ್ಪಳಿಸಿ, ಹಾರಿ ಆ ತುದಿಯ ತನಕ ಆತ ಹೋಗಿಬಂದೂ ಆಯಿತು. " ಅಜ್ಜ, ಇನ್ನು ಕುಡಿ ಸವರುವುದು ಯಾವಾಗ? ಕೆಲಸ ಮುಗಿ ಸಿಯೇ ಮನೆಗೆ ಹೋಗುವ " ಎಂದು ಕೂಗಿದ ಆ ತುದಿಯಲ್ಲಿರುವಾಗಲೇ.

"ನನಗೆ ಪ್ರಾಣ ಎಳೆಯುತ್ತದೆ; ಇವನು ಅದರ ಕುಡಿ ಸವರುತ್ತಾನಂತೆ" ಎಂದ ತುಕ್ರ. ಕೇರಿಗೆ ಮರಳುವ ಯೋಚನೆ ಎಲ್ಲರಿಗೂ. 'ಅವಸರ ವೇನು? ಉಳಿದ ಕೆಲಸ ನಾಳೆ ಮಾಡಿದರಾಗಬಹುದೋ' ಎಂದು ಯೋಚಿಸಿದರು. ಬೂದಣ್ಣ 'ಇಂದೇ ಆಗಬೇಕು' ಅನ್ನುತ್ತಾನೆ. ತುಕ್ರ "ಬೇಕಾದದ್ದು ಮಾಡಿಕೋ. ನನ್ನ ಕಾಲು ಪಡ್ಚವಾಗಿದೆ. ನಾನು ಮನೆಗೆ ಹೋಗಿ ಏನಾದರೂ ಶಾಖಗೀಖ ಕೊಟ್ಟುಕೊಳ್ಳುತ್ತೇನೆ" ಎಂದು ಮನೆಗೆ ಹೊರಟ; ಜತೆಗೆ ಕೆಂಚನೂ ಹೋದ. ಇನ್ನೊಬ್ಬರಿಬ್ಬರೂ ಹೊರಟರು. ಕರಿಯ "ನಾನು ಮಾವನೊಂದಿಗೆ ಬರುತ್ತೇನೆ" ಎಂದು ಹಟಹಿಡಿದ. ಉಳಿದವರು ಆ ಮರವನ್ನು ಏರಿ, ಅದರ ದಿಂಡಿನ ಮೇಲೆ ನಡೆದುಕೊಂಡು ಹೋಗಿ, ಮರದ ಕುಡಿಗಳನ್ನು ಸವರುತ್ತ ಸಂಜೆಯ ತನಕ ದುಡಿದು, ಆ ಕೆಲಸ ಮುಗಿಸಿ ಬಂದರೇ ಹೊರತು, ಮೊದಲು ಮರಳಲಿಲ್ಲ. ಕರಿಯ ಅವರೊಂದಿಗೇನೆ ಕೇರಿಗೆ ಮರಳಿದ. ಅವನಿಗೆ ಅದೆಲ್ಲವೂ ಆಟವೆನಿಸಿತು.

ಕೊಡಲಿ ಬಿದ್ದ ಪೆಟ್ಟಿನಿಂದ, ತುಕ್ರನ ಕಾಲಿಗೆ ಗಾಯವಾಗದಿದ್ದರೂ ತುಸು ಜಜ್ಜಿದಂತಾಗಿತ್ತು, ಕಾಲು ಬಾತಿಕೊಂಡಿತು. ಆತನ ಹಿರಿಯ ಹೆಂಡತಿ, ಕಾಲಿಗೆ ಎಣ್ಣೆ ಸವರಿ ಶಾಖ ಕೊಡುತ್ತಿದ್ದಾಗಲೆಲ್ಲ ತುಕ್ರ "ಇದೆಲ್ಲ ಅನಿಷ್ಟ—ಬೂದನ ಕೆಲಸ! ಯಾವ ಮಣ್ಣಿಗೆ ಆ ಸಂಕ? ಮಳೆಗಾಲದಲ್ಲಿ ಆ ಮಲೆಗೆ ಯಾರು ಹೋಗುತ್ತಾರಂತೆ. ಇರಬಹುದು—ಅವನಿಗೆ ಏನಾದರೂ ಹೋಗಿ ಚಾಡಿ ಬೆಸೆಯುವ ಕೆಲಸ" ಎನ್ನುತ್ತಲಿದ್ದ.

ಆ ಮಳೆಗಾಲದ ಕುಮರಿಯ ಸಾಗುವಳಿ ಅತ್ಯುತ್ಕೃಷ್ಟವಾಗಿತ್ತು. ಬತ್ತದ ಪೈರು, ಘಟ್ಟದ ಹುಲ್ಲಿಗಿಂತ ಎತ್ತರವಾಗಿ ಬೆಳೆದು, ತೆನೆಗೂಂಡಿತ್ತು. ಗಾಳಿ ಬರುವಾಗ ಪೈರಿಗೆ ಪೈರೇ ಗಾಳಿಯ ಬಲಕ್ಕೆ ಸಮನಾಗಿ, ತೆರೆತೆರೆಗಳಾಗಿ ಗುಡ್ಡದ ಬುಡದಿಂದ ತುದಿಗೆ ತಲೆದೂಗುವ, ಹಸುರಿನ ಸೊಬಗು ನಯನಮನೋಹರವಾಗಿತ್ತು. ಅಲ್ಲೊಂದು ಇಲ್ಲೊಂದು ಮುಸುಕಿನ ಜೋಳದ ಗಿಡಗಳು ಸುತ್ತಲಿನ ನೆಲ್ಲಿಗಿಂತ, ನಾಲ್ಕು ಪಾಲು ಎತ್ತರವಾಗಿ ಬೆಳೆದಿದ್ದುವು; ಒಂದೊಂದೂ ನಾಲ್ಕಾರು ತೆನೆಗಳನ್ನು ಹೊತ್ತು ತಲೆದೂಗುತ್ತಿದ್ದುವು. ಮಳೆ ತೊಡಗಿ ಎರಡು ಮೂರು ತಿಂಗಳಾದರೂ, ಅವರ ಸುದೈವದಿಂದ ಕಾಟೆ, ದುಡ್ಡು, ಆನೆಗಳ ಹಿಂಡು ಕುಮರಿಯ ಬಳಿಯಲ್ಲಿ ಹಾಯ

ಳಿಲ್ಲ. ಕೆಂಚ ವಿಚಾರಿಸುತ್ತಿರುತ್ತಾನೆ, 'ಮೊನ್ನೆ ಯಾರು ಕಂಡದ್ದೆಂಥರು ಆನೆಗಳನ್ನು? ಯಾವ ಗುಡ್ಡದಲ್ಲಿ' ಎಂದು ಆಗಾಗ ಅದನ್ನು ತಿಳಿದುಕೊಂಡು ಎಣಿಕೆಹಾಕುತ್ತಾನೆ—ಆ ಗುಡ್ಡದಿಂದ ಆನೆಗಳ ಪಯಣ ಮುಂದಿನ ಗುಡ್ಡಕ್ಕೆ, ಅಲ್ಲಿಂದ ಇಂಥಲ್ಲಿಗೆ, ಹೀಗೆ ಎಲ್ಲಿಗೆ ಸೇರುವಾಗ ಎಷ್ಟು ದಿನ ಹಿಡಿಯುವುದೆಂದು ಒಂದು ದಿನ ಆನೆಯ ಹಿಂಡೊಂದನ್ನು ಒಬ್ಬ ಕಂಡನೆಂದರೆ, ಇನ್ನೆಷ್ಟನೆಯ ದಿನಕ್ಕೆ ಅದು ಇಂಥಲ್ಲಿಗೆ ಬರುತ್ತದೆ ಎಂದು ಲೆಕ್ಕಾಚಾರದಿಂದಲೇ ಆತ ಹೇಳಬಲ್ಲ. ಕಾಟಿ, ಕಡವೆಗಳ ವಿಚಾರದಲ್ಲಿ ಮಾತ್ರ ಈ ನಿಯಮಿತತೆಯಿಲ್ಲ. ಹಾಗೆ ಭವಿಷ್ಯ ನುಡಿಯುವುದಕ್ಕಿರಲಿಲ್ಲ.

ಕುಮರಿಯ ಕೊಯ್ಲು ಆಗುವುದರೊಳಗೆ, ಬೂದನ ಸವಾರಿ ನಾಲ್ಕೆಂಟು ಬಾರಿ ಹಿರಿ ಮಲೆಗೆ ಹೋಗಿ ಬಂದುದಾಯಿತು. ಕುಮರಿಯ ಬೆಳೆ ಕೈಗೆ ಬಂದಮೇಲೆ, ಕರಿಯ ಸದಾ ಬೂದನ ಬೆನ್ನಿಗೆ ಅಂಟಿಕೊಂಡಿರುತ್ತಿದ್ದ. ಕೆಂಚನೂ ಅವನೊಂದಿಗೇ ಬಿಡಾರಹೂಡಿದ. ಅಟ್ಟು ಬೇಯಿಸುವುದಕ್ಕೆ ಬೂದನ ಮುದಿ ತಾಯಿ ಇದ್ದಳು. ಬೂದನ ತಂಗಿಯ ಮಗ ಕಾಳ, ಕರಿಯನ ಸಮವಯಸ್ಸಿನವ, ಆತನಿಗೆ ಮೆಚ್ಚಿನ ಜತೆಗಾರನಾಗಿದ್ದ. ಹೀಗಾಗಿ ಸೊಸೆಯನ್ನು ಕಳಕೊಂಡ ನೋವು ಅವನಿಗಿತ್ತಾದರೂ ಅಡುಗೆಯ ಕೆಲಸ ಅವನನ್ನು ಚುಚ್ಚಿ, ಅವಳ ಸಾವಿನ ನೆನಪನ್ನು ತಂದುಕೊಡುತ್ತಲಿಲ್ಲ. ಅವನು ಬೇಟಿಗೀಟೆಗೆ ಹೋಗುವವನಲ್ಲ. ಹೆಚ್ಚಿನ ತಿರುಗಾಟ ಅವನಿಗಿಲ್ಲ. ಅದೆಲ್ಲ ಬೂದನಿಗೆ ಒಪ್ಪಿದ ಕೆಲಸ. ಈಗ ಅವನಿಗೆ ಶಿಷ್ಯರಿಬ್ಬರು. ಒಬ್ಬ—ಕರಿಯ; ಮತ್ತೊಬ್ಬ ಕಾಳ. ಇಬ್ಬರೂ 'ಮಾವ' ಎಂದು ಅವನನ್ನು ಅಡಿಗಡಿಗೆ ಸಂಬೋಧಿಸುವವರು. ಅವನ ಬೆನ್ನಹಿಂದೆಯೇ ಕತ್ತಿ, ಕೋಲುಗಳನ್ನು ಹಿಡಿದು ಅವರು ಮಲೆಯನ್ನು ಸುತ್ತಾಡುತ್ತಾರೆ. ಮರದ ಈಟಿಗಳನ್ನು ಹಿಡಿದುಕೊಂಡು, ನೆಲವನ್ನು ಕುಕ್ಕುತ್ತ ಒಂದೊಂದು ದಿನ ಮೂರು ಮಂದಿಯೂ ಸೇರಿ ಆಮೆಯ ಶಿಕಾರಿಗೆ ಹೊರಡುತ್ತಾರೆ. ಎರಡು–ಮೂರು ಆಮೆ ಕಟ್ಟಿಕೊಂಡು ಸಂಜೆಯ ಒಳಗೆ ಮನೆಗೆ ಬಂದೂ ಬರುತ್ತಾರೆ. ಈ ಆಟದಲ್ಲಿ ಕರಿಯನಿಗೂ ಕಾಳನಿಗೂ ತುಂಬ ಹುಮ್ಮಸ. ಇನ್ನೊಮ್ಮೊಮ್ಮೆ, ಕುಮರಿಯ ಹೊಲಕ್ಕೆ ರಾತ್ರಿವೇಳೆ ಕದ್ದು ಬರುವ ಬರ್ಕನ ಶಿಕಾರಿಯ ಕೆಲಸ ಬೂದನಿಗೆ. ಅದರ ಹೆಜ್ಜೆಯ ಜಾಡು ಗುರುತಿಸುತ್ತಾನೆ. ಹುಡುಗರಿಗೂ ತೋರಿಸುತ್ತಾನೆ.

ಅದು ಎಲ್ಲಿಂದ ಬಂದಿತು, ಎಲ್ಲಿಂದ ಹೋಯಿತು—ಎಂದು ಅರಸಿ, ಸುಳಿವು ಹುಡುಕುತ್ತಾ ನಲಿದಾಡುತ್ತಾನೆ. ಅವುಗಳು ಬರುವ ದಾರಿಯಲ್ಲಿ ತಾಳೆ ಸೋಗೆಯ ನಾರಿನಿಂದ ಉರುಳು ಮಾಡಿ ಇರಿಸಿ, ಉರುಳಿಗೆ ಬಳಿಯ ಗಿಡವೊಂದನ್ನು ಬಾಗಿಸಿ, ಕಟ್ಟಿ ಹೋಗುತ್ತಾನೆ. 'ಉರುಳಿಟ್ಟ ಸ್ಥಳವನ್ನು ಯಾರಿಗೂ ಹೇಳಬೇಡಿ' ಎಂದು ಹುಡುಗರಿಗೆ ತಿಳಿಸುತ್ತಾನೆ. ಒಂದು ರಾತ್ರಿ ಅವನಿಟ್ಟ ಉರುಳಿಗೆ ಬರ್ಕ ಬೀಳುವ ಬದಲು, ಕಾಡುಹಂದಿಯ ಮರಿಯೊಂದು ಸಿಕ್ಕಿಕೊಂಡು ಕಿರುಚಾಡುತ್ತಿತ್ತು. ಕೆಂಚಗೆ ಆ ಕೂಗಿನಿಂದಲೇ ಎಚ್ಚರವಾಯಿತು. ಬೂದನಿಗೂ ಎಚ್ಚರವಾಯಿತು. "ಹಂದಿ ಕೂಗುತ್ತದೆ; ಸುಮಾರು ಆ ಹೊದ್ದಿಂದ ಅದರ ಸ್ವರ ಕೇಳಿಸುತ್ತದೆ. ಯಾರೋ ಉರುಳು ಹಾಕಿರಬೇಕು. ಅಲ್ಲವೆ—ಯಾವುದೋ ಹಂದಿಯನ್ನು ಹುಲಿ ಹೆದರಿಸುತ್ತಿದೆಯೋ ಏನೋ" ಎಂದ ಕೆಂಚ. ಬೂದನ ಕಿವಿ ಧ್ವನಿ ಬರುವ ಕಡೆಗೆ ನಾಟಿತು. ತಾನು ಉರುಳಿಟ್ಟ ಕಡೆಯಿಂದಲೇ ಅದು ಬರುತ್ತಿದೆ—ಎಂಬುದು ಗೊತ್ತಾಯಿತು. ಒಂದೇ ಸವನೆ ಹೊರಡುವ ಈ ರಾಗವನ್ನು ಕೇಳಿ "ಹುಲಿಯಲ್ಲ, ಏನೂ ಅಲ್ಲ; ನಾನು ಮಾಡಿಟ್ಟ ಉರುಳಿಗೇ ಹಂದಿ ಸಿಕ್ಕಿದೆ. ಆದರೆ...." ಎಂದುಕೊಂಡ. ಬೆಳಕು ಹರಿಯುವ ಮೊದಲು ಕೇರಿಯವರಿಗೆ ತಿಳಿಯುವ ಮೊದಲೇ, ಅದನ್ನು ಪಾರು ಮಾಡಬೇಕೆಂದು ಎಣಿಕೆಹಾಕಿ ಮಲಗಿದ. ನಿದ್ದೆ ಹತ್ತಬೇಕೇ? ಹಾಗೂ ಹೀಗೂ ಮುಂಜಾನೆಯ ತನಕ ಚಾಪೆಯಲ್ಲಿ ತೊಳಲಾಡಿ, ಕತ್ತಿ, ಮರದ ಮೊನಚು ಈಟಿಗಳನ್ನು ಹಿಡಿದುಕೊಂಡು ಹೊರಟ. ಕೆಂಚನಿಗೆ ನಿದ್ದೆ ಬಂದಿತ್ತು. ಬೂದನೇಳುವಾಗ "ನಾನೂ ಬಂದೆ" ಎಂದು ಕರಿಯ, ಕಾಳರೂ ಹೊರಟರು. ಬೇಡವೆಂದರೆ ಕೇಳುವ ಮಕ್ಕಳು ಅವರಲ್ಲ. ಕರೆದುಕೊಂಡು ಹೊರಟ. ಅರ್ಧ ಹಾದಿ ಹೋಗುವಾಗ ಅಂಜಿಕೆಯಾಯಿತು. ಉರುಳಿಗೆ ಹಂದಿಯೇ ಸಿಕ್ಕಿಕೊಂಡಿರಬಹುದು. ಜತೆಯ ಹಂದಿಯೂ ಎಲ್ಲಾದರೂ ಅದರ ಬಳಿಯಲ್ಲಿದ್ದರೆ ಏನು ಗತಿ—ಎಂಬ ಅಂಜಿಕೆಯೂ ಆಯಿತು. ಅದರಿಂದ ಮಕ್ಕಳನ್ನು ದೂರದಲ್ಲೇ ನಿಲ್ಲಲು ಹೇಳಿ, ತಾನೊಬ್ಬನೇ ಮುಂದುವರಿದ. ಹೋಗುವಾಗ, ಹಂದಿ ಇನ್ನೂ ಕಿರುಚಾಡುತಿತ್ತು. ಎಳೆಯ ಕಾಡುಹಂದಿಯೊಂದು ಉರುಳಿಗೆ ಸಿಕ್ಕಿಕೊಂಡು, ಉರುಳು ಹಿಡಿದ ಗಿಡವೊಂದರಿಂದ ಹಲಸಿನಕಾಯಿ ತೂಗಾಡುವಂತೆ ತೂಗಾಡುತಿತ್ತು. ಕತ್ತಿಯ ಒಂದೇ

ಏಟಿಗೆ ಅದರ ತಲೆ ಸವರಿದ ಬೂದ. ಕಿರುಚುವ ಧ್ವನಿ ನಿಂತಿತು. ಅಲ್ಲಿಂದ ಅದರ ಹೆಣವನ್ನು ಹೊತ್ತುಕೊಂಡು ಮಕ್ಕಳಿರುವಲ್ಲಿಗೆ ಓಡಿದ. ಅದನ್ನಲ್ಲಿ ಕೆಡವಿ, ತಿರುಗಿ ಬಿದ್ದ ತಲೆಯನ್ನು ಹೆಕ್ಕಿಕೊಂಡು ಬರಲು ಇನ್ನೊಮ್ಮೆ ಮರಳಿದ. ಅವೆರಡನ್ನೂ ಮನೆಗೆ ಸಾಗಿಸುವಾಗ ಕೇರಿಯ ಜನರು ಇನ್ನೂ ಮಲಗಿಕೊಂಡೇ ಇದ್ದರು. 'ಸುದ್ದಿ ಸೂರಿಲ್ಲ—ಆ ಜಗತ್ತಿಗೇ!' ಎಂದು ತಿಳಿದುಕೊಂಡ ಬೂದ.

ಆದರೆ ಬೆಳಗಾದಮೇಲೆ 'ರಾತ್ರಿಯೆಲ್ಲ ಒಂದು ಕಿರುಚುತಿತ್ತಲ್ಲ. ಎಲ್ಲಿ, ಏನು?' ಎಂದು ಕಾಡನ್ನೆಲ್ಲ ಅರಸಿದರು ಜನ. ಯಾರಿಗೂ ಅದರ ಸುಳಿವು ಹತ್ತಲಿಲ್ಲ. ಹೂಡಿದ್ದ ಉರುಳೂ ಸಿಗಲಿಲ್ಲ. ಬಿದ್ದ ರಕ್ತವು ಸಹ ಒದ್ದೆ ನೆಲದಲ್ಲಿ ಬೆರೆತು ಕೆಸರಾಗಿತ್ತು. ಕೇರಿಯ ಪ್ರತಿಯೊಬ್ಬರಿಗೂ 'ಹಂದಿ ಕಿರಿಚಿದ್ದು ನಿಜ. ಅದರ ಕೂಗು ಒಮ್ಮೆಗೆ ನಿಂತದ್ದೂ ನಿಜ. ಆದರೆ ಯಾಕೆ ಕೂಗಿತು? ಹುಲಿ ಅಡ್ಡಕಟ್ಟಿರಬಹುದೇ? ಹಾಗೇನಾದರೂ ಆಗಿದ್ದರೆ, ಹಂದಿಯ ಓಡಾಟದ ತಾವಾದರೂ ಕಾಣಿಸಬೇಕಾಗಿತ್ತಲ್ಲ' ಎಂಬ ಊಹೆಯೋ ಊಹೆ. ಕಿವಿಯ ಮೇಲೆ ಬೀಳುತ್ತಿದ್ದ ಈ ಮಾತುಗಳನ್ನು ಕೇಳಿಯೂ ಬೂದ ಪಿಟ್ಟೆನ್ನಲಿಲ್ಲ. ಹೇಳಿದರೆ—ಮಾಂಸದ ತುಂಡಿನಲ್ಲಿ ಪಾಲು ಕೊಡಬೇಡವೇ?—ಸುಮ್ಮನಾದ.

ಆದರೆ ಅವನಷ್ಟು ಸ್ವಾರ್ಥಿಯಲ್ಲ. ಬೆಳಿಗಾದಮೇಲೆ, ಒಂದಿಷ್ಟು ಮಾಂಸವನ್ನು ಗುಟ್ಟಾಗಿ ಕಟ್ಟಿಕೊಂಡು, ತಾಯೊಡನೆ ರಾತ್ರಿಗೆ, ಉಳಿದ ಮಾಂಸದ ಅಡುಗೆ ಮಾಡಲು ಹೇಳಿ, ಮನೆಯಿಂದ ಹೊರಬಿದ್ದ. ಎಲ್ಲಿಗೆ ಏನೆಂದು ಯಾರಿಗೂ ಹೇಳಲಿಲ್ಲ. ಹೊರಟದ್ದು ಹಿರಿ ಮಲೆಗೆ. ಆ ಮತ್ತಿಯ ಮರದ ಸೇತುವೆಯನ್ನು ದಾಟಿ, ಗುಡ್ಡವನ್ನು ಹತ್ತಿ, ಹಿರಿ ಮಲೆಯ ಕುಡಿಯರ ಕೇರಿ ಸುತ್ತಿ, ತಾಡನ ಮನೆಯಲ್ಲಿ ತಂದ ಕಾಣಿಕೆಯನ್ನು ಅಡಗಿಸಿಟ್ಟು, ಆ ಸುವಾರ್ತೆ ಕೊಡುವುದಕ್ಕೆ ಅವರಿರುವ ಕುಮರಿಯ ಹೊಲಕ್ಕೆ ಹೋದನು. ಈ ಮೊದಲೇ ಆರೆಂಟು ಬಾರಿ ಅಲ್ಲಿಗೆ ಆತ ಕದ್ದು ಬಂದಿದ್ದ. ತಾಡನೊಡನೆ, ಕೆಂಪಿಯೊಡನೆ ಮಾತುಕತೆ ನಡೆಸಿದ್ದ. ತಾಡನನ್ನೂ, ಅವಳನ್ನೂ ಒಲಿಸುವ ಪ್ರಯತ್ನ ನಡೆದೇ ಇತ್ತು. ಕುಮರಿಯ ಹೊಲದಲ್ಲಿ ಕೆಂಪಿಯನ್ನು ಸಂಧಿಸಿ, "ನಿಮ್ಮ ಮನೆಯಲ್ಲೇನೋ ತಂದಿಟ್ಟಿದ್ದೇನೆ" ಎಂದು ಸೂಚನೆ ಕೊಟ್ಟ.

ಅನಂತರ ನಾಲ್ಕು ಮಂದಿಯೊಡನೆ ಮಾತನಾಡಿ, ಭಾವೀ ಅತ್ತೆಮಾವಂದಿರನ್ನು ಕರೆದುಕೊಂಡು, ಅವರ ಕೇರಿಗೆ ಮರಳಿದ. ಆ ಮಧ್ಯಾಹ್ನ ಅವರೆಲ್ಲರಿಗೂ ಔತಣ. ಹಂದಿಮಾಂಸದ ಸವಿಯು ಚಪಲ ತೌಡನಿಗೆ ಇದ್ದೇ ಇತ್ತು. ಈಗ ಬೇಟೆಯಲ್ಲಿ ಬೂದ ಬುದ್ಧಿವಂತ—ಎಂಬ ಅಭಿಮಾನವವನವೂ ಉಂಟಾಯಿತು. ಆ ದಿನವೇ 'ನವರಾತ್ರಿ ಕಳೆದಮೇಲೆ ಕೆಂಪಿಯ ಮರುಮದುವೆ ಬೂದನೊಡನೆ' ಎಂಬ ನಿಶ್ಚಯವೂ ಆಯಿತು. ಬೂದನಿಗಿಷ್ಟೇ ಅನುಮಾನ. ಮದುವೆಯಾದಮೇಲೆ ಕೇರಿಯವರಿಗೆ ಆ ಸುದ್ದಿ ತಿಳಿಸುವುದೋ; ಇಲ್ಲವೆ, ಸುದ್ದಿ ತಿಳಿಸಿದಮೇಲೆ ಮದುವೆಯಾಗುವುದೋ—ಎಂದು. ಸಂಜೆಯಾಗುವುದರೊಳಗೆ ಬೂದ, ಕೆಂಪಿಯ ಕುಡಿನೋಟಗಳ ಸವಿಯನ್ನು ಹೀರಿ, ತುಂಬ ಉತ್ಸಾಹದಿಂದ ತನ್ನ ಕೇರಿಗೆ ಮರಳಿಬಂದೂ ಆಯಿತು.

"ಏನೋ—ದಿನವೆಲ್ಲ ಕಾಣೆ?" ಎಂದ ಕೆಂಚ ಅವನನ್ನು ಕಂಡು.

"ಮತ್ತೇನಿಲ್ಲ. ಅಬ್ಬಿಯ ಬುಡದಲ್ಲಿ ಇನ್ನೊಂದು ಉರುಳಿಟ್ಟು ಬಂದಿದ್ದೆ. ಏನೂ ಸಿಗಲಿಲ್ಲ. ಕಾದು ಕಾದು ಸಾಕಾಯಿತು. ಹಾಗೆಯೇ ಬಂದೆ" ಎಂದು ಸುಳ್ಳು ಹೇಳಿದ. ರಾತ್ರಿ ಸಂಭ್ರಮದ ಊಟವಾಯಿತು. ಉಂಡು ಎಲ್ಲರೂ ಮಲಗಿಕೊಂಡರು. ಬೂದನಿಗೆ ಕೆಂಚನೊಡನೆ ತಿಳಿಸದೆ ಯಾವ ವ್ಯವಹಾರವನ್ನು ಮಾಡುವುದೂ ತಪ್ಪೆಂದು ಕಂಡಿತು. ಹಾಗೆಂದು ಮೆಲ್ಲನೆ ಮಾತು ತೆಗೆದ: "ಆ ಮಲೆಗೆ ಹೋಗಿದ್ದೆ. ತೌಡಣ್ಣನನ್ನು ಕಂಡುಬಂದೆ. ನಿನ್ನ ಹತ್ತಿರ ಹೇಳಬಾರದ್ದಾವುದೂ ಇಲ್ಲ—ಹೇಳಲೇ?" ಎಂದ.

"ಹೇಳಲ್ಲ—ಹಾಗಾಗಿ ಇವತ್ತು ಕಾಣೆಯಾದದ್ದೋ! ಮರವನ್ನು ಕಡಿದು ಪಾಪು ಹಾಕಿದಮೇಲೆ, ನಾನು ಒಂದು ಸಾರಿಯೂ ಆಚೆಗೆ ಹೋಗಲಿಲ್ಲ. ಉಳಿದವರೂ ಹೋದದ್ದು—ಗೊತ್ತಿಲ್ಲ. ಈ ಮಳೆಗಾಲಕ್ಕೆ ಹೋದವನು ನೀನೊಬ್ಬನೇ ಎಂದು ಕಾಣುತ್ತದೆ" ಎಂದು ಕೆಂಚ ಪರಿಹಾಸ್ಯ ಮಾಡಿದ.

"ಹೂಂ" ಎಂದು ಬೂದನೂ ನಕ್ಕ. ಅನಂತರ ಮೆಲ್ಲಮೆಲ್ಲಗೆ ಯಾವದ್ ವೃತ್ತಾಂತಗಳನ್ನೂ ಬಿಡಿಸಿ ಹೇಳಿದ. "ಅವರೂ ಒಪ್ಪಿದ್ದಾರೆ. ನೀವೂ ಒಪ್ಪಬೇಕು. ಇದರಲ್ಲಿ ಒಂದೇ ಹೆದರಿಕೆ. ತುಕ್ರ ನನ್ನ ಮೇಲೆ ಸಿಟ್ಟಾಗುತ್ತಾನೆಯೋ ಎಂದು. ಆದರೆ ಹಿಂದಿನ ನೆನಪು ಉಂಟಲ್ಲಾ ನಿಮಗೆ. ನಾನು

ಹೋಗಿ ಕೇಳಲಿಲ್ಲವೇ ಅವನನ್ನು?—ಮಲೆಯಲ್ಲಿ ಮದುವೆಯಾಗುವ ಹೆಣ್ಣು ಸಂತಾನ ಬೆರಳಿನಿಂದೆಣಿಸುವಷ್ಟು ಇಲ್ಲದಿರುವಾಗ, ಇವನು ಆಗ ಎರಡೆರಡು ಮದುವೆ ಮಾಡಿಕೊಂಡದ್ದು ಚಂದವೇ? ಈಗ ಅವನಾಗಿ ಬಿಟ್ಟ ಹೆಣ್ಣದು. ಅವನು ಬಿಟ್ಟದ್ದು—ಎಂದದ್ದರಿಂದ ಅವಳು ಕೆಟ್ಟವಳಾಗಬೇಕಾಗಿಲ್ಲ. ಇಷ್ಟು ದಿನ ಈ ಕೇರಿಯವರು ಯಾರೂ ಅವಳ ವಿಷಯದಲ್ಲಿ ಕೆಟ್ಟ ಮಾತು ಅಂದಿಲ್ಲ" ಎಂದು ವಿಸ್ತಾರವಾಗಿ ಪೀಠಿಕೆ ಹಾಕಿದ.

ಕೆಂಚ 'ವಿಚಾರ ಮಾಡಬೇಕಾದ ಸಂಗತಿಯಿದು. ಬೂದ ಇನ್ನೂ ಎಳೆಯ. ತುಕ್ರನಿಗಿಂತ ಹೆಚ್ಚು ವಯಸ್ಸಾದವನಲ್ಲ. ಅವನ ಮದುವೆ ಎಂದೋ ಆಗಬೇಕಾಗಿತ್ತು, ಆಗಲಿಲ್ಲ. ಆಗುವುದು ಹೇಗೆ? ತಮ್ಮ ಕುಡಿಯರ ಕುಲದಲ್ಲಿ ಹೆಣ್ಣೆಂಬ ವಸ್ತು ಅಪೂರ್ವವಾಗಿದೆ. ಮದುವೆಮಾಡಿಕೊಂಡು ಸಂಸಾರ ಹೂಡಬೇಕು—ಎಂಬ ಬೂದನ ಆಸೆಯಲ್ಲಿ ತಪ್ಪೇನಿಲ್ಲ. ಆದರೆ ತನ್ನ ಧನಿಗಳು ತನಗೆ—ಗಂಡಹೆಂಡಿರಲ್ಲಿ ಹೇಗಾದರೂ ಒಡಂಬಡಿಕೆ ಮಾಡಿಕೊಡು—ಅಂದಿದ್ದಾರೆ. ತಿರುಗಿ ತಾನು ಆ ಪ್ರಯತ್ನ ಮಾಡಿರಲಿಲ್ಲ. ಮಾಡಿದ ಯತ್ನಗಳು ವಿಫಲವಾಗಿದ್ದುವು. ಅದು ಸಫಲವಾಗುವ ತನಕ ಮಾಡಬೇಡವೇ? ಈಗ ತಾನು ಬೂದನೊಡನೆ ವಾಸವಾಗಿದ್ದೇನೆ; ಬೂದ ಅವಳನ್ನು ಲಗ್ನವಾದರೆ, ಅದು ತನ್ನ ಹೇಳಿಕೆಯಿಂದಲೇ ಆಯಿತೆಂಬ ದೂರು ಬರುತ್ತದೆ' ಎಂಬ ಚಿಂತೆಗೊಳಗಾದ. ಕೊನೆಗೆಂದ "ಬೂದ, ಲಗ್ನ ಆಗು, ಬಿಡು. ನಾನೇನೂ ಅನ್ನುವುದಿಲ್ಲ."

"ಆಗಬಾರದೆನ್ನುತ್ತೀಯಾ?"

"ಹಾಗೂ ಅಲ್ಲ. ಕೆಂಪಿ ತುಕ್ರನ ಮನೆಗೆ ಬರುವುದಿಲ್ಲ ಎಂಬುದು ಮೊದಲು ಖಾತ್ರಿಯಾಗಲಿ. ಅಲ್ಲಿಯವರೆಗೆ ಕಾಯಬಾರದೇ."

"ಅಷ್ಟೆಯೋ?"

"ಅಷ್ಟೆಯೇ ಅಂದರೆ? ಸುಲಭವಾಯಿತು ಕೆಲಸ! ಆ ಮತ್ತಿಯ ಮರದ ಸಂಕ ದಾಟಿದ್ದು ನಾನೊಬ್ಬನೇ ಅಲ್ಲ. ಸಂಕ ಕಟ್ಟಿದ ಮೂರು ದಿನಗಳಲ್ಲೇ ಕಾಲು ಕುಂಟಿಸಿಕೊಂಡು, ತುಕ್ರನೂ ಹೋಗಿದ್ದನಂತೆ. ಹೋಗಿ ನಂಟುತನ ಮುರಿದು 'ನನ್ನ ಅವಳ ಋಣ ಕಡಿಯಿತು' ಎಂದು ಅಂದೂ ಬಂದಿದ್ದನಂತೆ. ಅಷ್ಟು ಮಾತ್ರವಲ್ಲ, ಆ ಕೇರಿಯಲ್ಲಿ ಇನ್ಯಾರು ತನಗೆ ಹೆಣ್ಣು ಕೊಟ್ಟಾರು ಎಂದು ಹುಡುಕುತ್ತಲೂ ಇದ್ದಾನೆ" ಎಂದು ತಿಳಿಸಿದ.

"ಇದು ಕೇಳಿದ ಮಾತೇ? ನಿಜವಾಗಿ ನಡೆದ ಸಂಗತಿಯೇ?"

"ಕೇಳಿದ್ದೂ ಹೌದು, ತಿಳಿದದ್ದೂ ಹೌದು. ತಾಡಣ್ಣನೇ ನನಗೆ ಹೇಳಿದ್ದು."

"ಹಾಗಿದ್ದರೆ ಮಾಡಿಕೋ. ಆದರೆ ಅದಕ್ಕೆ ಗದ್ದಲ, ಗುಲ್ಲು ಬೇಡ. ಈ ಸಮಯದಲ್ಲಿ ಕೇರಿಯ ಮನಸ್ಸು ಹ್ಯಾಗೆ ನಿಲ್ಲುತ್ತದೆ—ಎಂದು ಹೇಳಲು ಬಾರದು. ಧನಿಯರು ಬಂದಮೇಲೆ, ಇನ್ನೊಂದೇ ಬುದ್ಧಿ ಬಂದೀತು ತುಕ್ರನಿಗೆ. ಏನು ಮಾಡುವುದಾದರೂ, ಅದರೊಳಗೇನೆ ಆಗಬೇಕು. ಹೋಗಿ ಮದುವೆಯಾಗಿ ಬಂದುಬಿಡು. ನಿನ್ನ ಅಮ್ಮನಿಗೆ ಗೊತ್ತೇ ಈ ಸಮಾಚಾರ?"

"ಗೊತ್ತಿಲ್ಲ, ಇನ್ನು ಹೇಳಬೇಕು."

"ಹೋಗಲಿ. ನಾನು ಹೇಳುತ್ತೇನೆ. ಅವಳು ಒಪ್ಪದೆ ಏನು ಮಾಡುತ್ತಾಳೆ."

ಹೀಗೆ ಅವರೊಳಗೆ ಚರ್ಚೆ ಮುಗಿದು, ಅನಂತರ ಕೆಂಚ ಹೇಳಿದ ಒಳ್ಳೆಯ ದಿನ ನೋಡಿ, ಬೂದ ಹಿರಿ ಮಲೆಗೆ ಹೊರಟ. ಹೋಗಿ, ಮಾವನಿಗೆ ವೀಳೆಯ, ಎಳ್ಳೆಣ್ಣೆ ಒಪ್ಪಿಸಿದ. ಕ್ರಮದಂತೆ ಅವನು ಅದನ್ನು ಸ್ವೀಕರಿಸಿದ. ಲಗ್ನದ ದಿನ ಗೊತ್ತುಮಾಡಿ ಮದುವೆಯಾದ. ಆದರೆ ಕೆಂಪಿಯನ್ನು ಕರೆದು ತಂದದ್ದು, ಕೇರಿಯವರು ಕುಮರಿಯಿಂದ ಕೇರಿಗೆ ಬಂದ ಮೇಲೆ. ಕುಮರಿಯನ್ನು ಪೈರನ್ನು ಕತ್ತರಿಸಿ, ಕೇರಿಗೆ ತಂದು, ಪಾಲುಮಾಡಿಕೊಂಡು, ಅವರವರ ಕಾಳನ್ನು ಅವರವರು ಒಕ್ಕುತ್ತಿದ್ದಾಗ, ಒಂದು ದಿನ ಬೂದನ ಮನೆಯ ಅಂಗಣದಲ್ಲಿ ಕೆಂಪಿಯೂ ಬತ್ತದ ಹುಲ್ಲನ್ನು ಬಡಿಯುತ್ತ, ಕಾಳು ಬೇರೆ ಮಾಡುತ್ತಿದ್ದ ನೋಟ ಒಮ್ಮಿಂದೊಮ್ಮೆಗೇ ಕೇರಿಯವರಿಗೆ ಕಾಣಿಸಿತು. "ಅಬ್ಬಾ, ಈ ಘಟಿಂಗನ ಕೆಲಸವೇ!" ಎಂದು ಚೇಷ್ಟೆ ಮಾಡಿದರು ಬೂದನ ಮಿತ್ರರು. ತುಕ್ರ ಆ ವಾರ್ತೆ ಕೇಳಿ ತನ್ನವರೊಡನೆ "ಸರ್ಪ ಸಾಕಿದವನಿಗೆ ಸುಖವುಂಟೆನ್ನುತ್ತೀರಾ? ನಾನು ಪಾಠ ಕಲಿತ ಹಾಗೇ ಬೂದನೂ ಕಲಿತಾನು. ಈಗ ತಿಳಿಯಲಾರದು. ಆಮೇಲೆ ತಿಳಿದೀತು" ಎಂದ.

ಇತ್ತ, ಕೆಂಪಿಯನ್ನು ನಾಚಿಸುವಂಥ ತರುಣಿಯನ್ನು ತನ್ನ ಮನೆಗೆ ತರುತ್ತೇನೆಂದು ಮಲೆಯಿಂದ ಮಲೆಗೆ ಹುಡುಕಾಡತೊಡಗಿದ ತುಕ್ರ. ಹಿರಿ ಮಲೆಯಲ್ಲಿ ಅವನ ಈ ಆಸೆ ಸಫಲವಾಗಲಿಲ್ಲ. ಹಾಗಾಗಿ, ಧನಿಗಳು ಬರುವ

ಮುಂಚೆ, ಈ ಒಂದು ಕೆಲಸ ಮುಗಿಸುತ್ತೇನೆಂದು, ಯಾರಿಗೂ ಸುದ್ದಿ ಹೇಳದೆ ನೆರೆಯ ಮಲೆಗೆ ಹೋದ. ಅವನ ಹಟ ಬೂದನಿಗಿಂತ ಹೆಚ್ಚಾದುದು. ತಾನು ಚೆಲುವೆಯೊಬ್ಬಳನ್ನು ಲಗ್ನವಾಗಿ, ಕೆಂಪಿಯನ್ನು ಹಂಗಿಸ ಬೇಕೆಂಬುದು ಅವನ ಮನದ ಇಂಗಿತ. ಅವಳು ಇನ್ನೊಬ್ಬ ಗಂಡನನ್ನು ಹುಡುಕಿದಂತೆ, ತಾನೂ ಇನ್ನೊಬ್ಬಳನ್ನು ತಂದೇನು—ಎಂಬ ಹಟ ಸಾಧಿಸು ವುದೇ ಅವನ ಮುಖ್ಯೋದ್ದೇಶವಾಗಿತ್ತು.

## ಅಧ್ಯಾಯ ೫

ಮಳೆಗಾಲದ ದಿನಗಳು ಸರಿದುವು. ನವರಾತ್ರಿಯೂ ಸಮೀಪಿಸುತ್ತ ಬಂದಿತು. ಇನ್ನು ಬಹುಮಟ್ಟಿಗೆ ಮಳೆಯ ಅಬ್ಬರ ಸರಿದಂತೆಯೇ. ಹಿಂಗಾರು ಮಳೆಯ ನಾಲ್ಕು ಹನಿಗಳು ಮಲೆಯ ಮೇಲೆ ಬೀಳಬಹುದಾದರೂ, ತತ್ಕಾ ಲಕ್ಕೆ ಬಿಸಿಲು ಕಿರಿ ಮಲೆಯ ಸುತ್ತುಮುತ್ತು, ಮೇಲೆ ಕೆಳಗೆ, ದಿನವೆಲ್ಲ ಕುಣಿದಾಡುವ ನೋಟ ಬಣ್ಣನೆಗೆ ಮೀರಿದುದು. ನಾಲ್ಕು ತಿಂಗಳಕಾಲ ನಿತ್ಯ ಸ್ನಾನದಿಂದ ತೊಯ್ದು ಶುಚಿಯಾದ ಮರಗಿಡಗಳ ಹಸುರು ಬಣ್ಣ, ದೂರ ದಿಂದ ನೋಡುವವರ ಕಣ್ಣಿಗೆ ಕಡುನೀಲವಾಗಿ ಕಾಣಿಸುತ್ತದೆ. ಮಲೆಯ ಸೆರಗಿನಲ್ಲೇ ನಿಂತು ನೋಡುವವರ ಕಣ್ಣಿಗೆ ತನ್ನೊಂದು ಬೆಟ್ಟ ಕಡುಹಸು ರಾಗಿಯೂ, ಉಳಿದುವೆಲ್ಲ ನೀಲ ಗೋಡೆಗಳಾಗಿಯೂ ಕಾಣಿಸುತ್ತವೆ. ಬಾನಂತು ನೀಲಿಯೇ. ಹವೆಯಲ್ಲಿನ ಧೂಳಿನ ಕಣಗಳು ತೊಯ್ದು ಮಾಯ ವಾಗುವುದರಿಂದ, ಈ ನೀಲಿಮೆಗೆ ತನ್ನದೇ ಆದೊಂದು ತೇಜಸ್ಸು ಬರುತ್ತದೆ. ಹಾಗೆ ಹೊಳೆಯುವ ಬಾನಿನ ಮುಂಗಡೆಯಲ್ಲಿ, ಕಣ್ಣು ಚಾಚುವಷ್ಟು ದೂರದ ತನಕ—ಹಿಂದೆ ಮುಂದೆ, ಎಡಬಲಗಳಲ್ಲಿ ಪರ್ವತಗಳ ಸಾಲೇ ಸಾಲು. ಅವೆಲ್ಲ—ಶಾಪಗ್ರಸ್ತವಾಗಿ ಚಲನಶಕ್ತಿಯನ್ನು ಕಳೆದುಕೊಂಡ ಸಮುದ್ರದ ತೆರೆಗಳಂತೆ ಕಾಣಿಸುತ್ತವೆ. ಕಿರಿ ಮಲೆಯ ಎದುರಿನ ಕಣಿವೆ ದಟ್ಟಣಿಸಿದ ಮರ ಗಳ ಹೊದಿಕೆಯಿಂದ ನೀಲಹಸುರಾಗಿದೆ. ಅದರ ಹಸುರಿನ ಎಡೆ ಎಡೆಗಳಲ್ಲಿ ನಕ್ಕು ಓಡುತ್ತಿರುವ ತೊರೆಯ ಸೌಂದರ್ಯವನ್ನು ಹೇಳತೀರದು. ಕೆಲ ವೊಮ್ಮೆ ಪೊದೆಗಳ ಎಡೆಯಲ್ಲಿ ಹೊಕ್ಕು ಹೊರಡುವ ಹೆಬ್ಬಾವಿನ ಮೈಯಂತೆ ತೊರೆಯ ಮೈ ಥಳಿಸುತ್ತದೆ. ತೊರೆ ಅಲ್ಲಲ್ಲಿ ವಿರಮಿಸಿ, ಬಂಡೆಗಳನ್ನು

ಅಪ್ಪಳಿಸಿ, ತನ್ನ ಉಕ್ಕನ್ನು ತೋರಿಸುವಾಗಲಂತೂ ಯಾರೋ ಕಣಿವೆಯಲ್ಲಿ ಕುಳಿತು ಮಲ್ಲಿಗೆಯ ಹೂವನ್ನು ಹಾರಿಸುವಂತೆ ಕಾಣುತ್ತಿದೆ.

ಕಣಿವೆ ದಾಟಿ, ಅಲ್ಲಿಂದೇರುವ ಮೊದಲ ಬೆಟ್ಟದ ಸಾಲು ಇನ್ನೂ ಮನೋಹರವಾಗಿದೆ. ಈ ಗೋಡೆ ಒಂದೊಂದು ಕಡೆ ಒಂದೊಂದು ಹಸುರಿನ ಛಾಯೆಹೊಂದಿದೆ. ಕಾಡು ದಟ್ಟೈಸಿದಲ್ಲಿ ನಿದ್ದೆ ತೂಗುವ ಕಡುಹಸುರು; ಹುಲ್ಲು ಬೆಳೆದಲ್ಲಿ ನಕ್ಕು ತಲೆದೂಗುವ ಎಳೆಹಸುರು. ಹಾವಸೆಯಂಟಿಕೊಂಡ ಕಡಿದಾದ ಬಂಡೆಗಳ ಮೈ ಕಪ್ಪುಹಸುರು. ಇಂಥ ಗೋಡೆಯ ಸೆರಗಿನಲ್ಲಿ ಅಲ್ಲಲ್ಲಿ ಧುಮುಕುವ ಅಬ್ಬಿಗಳೆಷ್ಟೊ! ಬಿಸಿಲು ಬಿತ್ತೆಂದರೆ—ಯಾರೋ ತೊಯ್ದ ಬಿಳಿ ಬಟ್ಟೆಗಳನ್ನು ಬಿಸಿಲಿಗೆ ಒಣಗಿಸಲು ತೂಗಿರುವಂತೆ ಒಮ್ಮೆ ಕಾಣಿಸುತ್ತದೆ. ಕೆಲವೊಮ್ಮೆ—ಗಾಳಿಗೆ ಬಿಳಿ ಬಟ್ಟೆಗಳನ್ನು ಬಾವುಟವಾಗಿ ಹಿಡಿದಂತೆ ಕಾಣುತ್ತದೆ. ಕೆಲವೊಂದು ತೊರೆಗಳಂತು—ಅದೃಶ್ಯ ವನಕನ್ಯೆಯರು, ಬೊಗಸೆಗಳಿಂದ ಹೂವಿನ ಮಳೆಗರೆಯುತ್ತಿರುವಂತೆ ಕಾಣುತ್ತದೆ. ಇವೇ ಅಬ್ಬಿಗಳ ನೀರು ಕಣಿವೆಯ ತೊರೆಯನ್ನು ತುಂಬುತ್ತವೆ. ಕೆಲವೊಂದು ತಾಣಗಳಲ್ಲಿ, ತೊರೆ ಗಿಡಮರಗಳಿಲ್ಲದ ಬಂಡೆಗಳ ಮೇಲೆ ಸುತ್ತಿಸುಳಿದು ಸರಿಯುವುದುಂಟು. ಶಿವಲಿಂಗದ ಪೀಠವೊಂದರ ಸುತ್ತು, ಕುಂಭಾಭಿಷೇಕದ ನೀರು ಹರಿವಂತೆ ಕಾಣುತ್ತದೆ. ಕೆಲವೊಮ್ಮೆ, ಕಪ್ಪಾದ ಹೆಬ್ಬಂಡೆಯೊಂದರ ಮೇಲೆ ತೊರೆಯ ನೀರು ಆರ್ಭಟಿಸಿ ಇಳಿಯುವಾಗ ಶಿವನ ಜಡೆಯ ಮೇಲೆ ಧುಮುಕಿದ ಜಾಹ್ನವಿಯಾಗುತ್ತಾಳೆ—ಈ ತೊರೆ. ತೊರೆ, ಅಬ್ಬಿಗಳ ಧ್ವನಿಗೆ, ಮೆಲುಗಾಳಿಯ ಸುಯ್ಲಿಗೆ ಈ ಕಣಿವೆ, ಬೆಟ್ಟಗಳೆಲ್ಲ ಸೇರಿ ಹಿರಿಯ ದೇಗುಲವೊಂದರ ಗರ್ಭಗುಡಿಯಂತೆ ಕಾಣಿಸುತ್ತದೆ. ತಪೋಶೀಲರಾದ ಸಹಸ್ರಾರು ಭಕ್ತರು ತಲೆಗೆ ಹಸುರಿನ ಮುಸುಕು ಹಾಕಿಕೊಂಡು, ಮುಕ್ತಕಂಠರಾಗಿ, 'ಓಂ'ಕಾರ ನುಡಿಯುತ್ತಲೋ, 'ಹರಹರ ಮಹಾದೇವ' ಎಂದು ಜಪಿಸುತ್ತಲೋ ಇರುವ ಧ್ವನಿ ಕೇಳುತ್ತದೆ. ನದಿ ನೀರು ತುಂಬಿದಾಗೆಲ್ಲ ಈ ನೈಸರ್ಗಿಕ ದೇಗುಲದಿಂದ ಹೊರಡುವ ಧ್ವನಿ ಇಂಥದೇ. ಮಳೆ ಕಳೆದಮೇಲಷ್ಟೆ—ಈ ಗಾಂಭೀರ್ಯ. ಮಳೆಗಾಲದಲ್ಲೋ—ಬೆಟ್ಟದ ಅಬ್ಬಿಗಳ ಮೊರೆತವೆಲ್ಲ ಸೇರಿ, ಪ್ರಲಯಘರ್ಜನೆಯೇ ಉಂಟಾಗುತ್ತದೆ. ತುಂಬಿ ಹರಿಯುವ ಕೆಳಗಿನ ತೊರೆ, ರೌದ್ರಾವೇಶದಿಂದ ಉಳಿದೆಲ್ಲ ಅಬ್ಬಿಗಳ ಮೊರೆತವನ್ನು ಮೀರಿಸಿ,

ಈ ಬೆಟ್ಟದ ಪ್ರದೇಶವನ್ನೇ ತನ್ನ ಧ್ವನಿಯಿಂದ ರುದ್ರಕುಂಡವನ್ನಾಗಿ ಮಾಡುತ್ತದೆ.

ಈ ವನರಾಜ್ಯದ ಲಲಿತ ಲಾವಣ್ಯ, ವಿಲಾಸಗಳನ್ನು ಕಾಣಬಯಸು ವವಗೆ ಮಳೆಗಾಲ ಕಳೆದ ಬಳಿಕ ಬರುವ ಇಂಥ ಸಮಯವೇ ಲೇಸು. ನದಿ, ವನಗಳ ಸ್ವರ್ಗೋದ್ಯಾನದ ಈ ಸೀಮೆಯಲ್ಲಿ, ದಾರಿತಪ್ಪಿದ ಮುಗಿ ಲೊಂದು ತೇಲಿಬಂತೆಂದರೆ ಅಪ್ಸರೆಯರ ವಿಲಾಸವೆಲ್ಲ ಕಾಣುತ್ತದೆ. ಮಳೆ ಗಾಲದಲ್ಲೊ—ಬೆಟ್ಟವೇ ಕಣ್ಮರೆಯಾಗಿ ಆ ಸೀಮೆ ಮುಗಿಲಿನ ತವರೂರಾಗು ತ್ತದೆ. ಈಗ ಹಾಗಲ್ಲ. ಹೆಚ್ಚಾಗಿ ಸಂಜೆ ಬೆಳಗುಗಳಲ್ಲಿ ಮುಗಿಲುಗಳು ಇಲ್ಲಿಗೆ ತೇಲಿಬರುತ್ತವೆ. ಎಲ್ಲಿಂದ ಬಂದುವು, ಹೇಗೆ ಬಂದುವು—ಎಂದು ತಿಳಿಯ ದಷ್ಟು ಕಳ್ಳಾಟಿಕೆಯಿಂದ ಬರುವುದುಂಟು. ಸಹ್ಯಾದ್ರಿಯ ಬೆಂಗಡೆಯಿಂದ, ಮೂಡಣ ಮಲೆನಾಡಿನಿಂದ ಅವು ಬಂದರೂ ಬಂದುವೇ. ಪಡುವಣ ಕಡಲಿ ನಿಂದ ಬಂದರೂ ಬಂದುವೇ. ಹಾಗೆ ಬಂದರೆ ಆ ಗೋಡೆಯನ್ನೇರಿ, ಇಳಿದು ಕೆಳಗಣ ಕಣಿವೆಯ ಮೇಲೆ ತೇಲಾಡಿ, ಯಾವುದಾದರೊಂದು ಬೆಟ್ಟದ ಕುಡಿಗೆ ಬಡಿದು, ನುಚ್ಚುನುರಿಯಾಗಿ, ಹರಿದು ಚೂರಾಗಿ ಅದೃಶ್ಯವಾಗು ವುದುಂಟು. ಹೀಗೆ ಮಾಯವಾದ ಮುಗಿಲು ಮತ್ತೊಂದು ಕ್ಷಣದಲ್ಲಿ ಒಟ್ಟು ಗೂಡಿ ವೈಶಾಳಿ ಬಾನ ಸರೋವರದಲ್ಲಿ ಈ ದಂಡೆಯಿಂದ ಆ ದಂಡೆಗೆ ಈಜುವ ಜಲಕನ್ಯೆಯಾಗುತ್ತದೆ. ಕರಿಯಗೆ ಇಂಥೆಲ್ಲ ನೋಟ ನೋಡುವ ಹುಚ್ಚು ಬಹಳ. ಮಲೆಯ ಸೆರಗಿನಲ್ಲಿ ಕುಳಿತು ಮುಗಿಲುಗಳ ಚಲನೆ ಹಿಂಬಾಲಿಸಿ, ತಾನೂ ಅವುಗಳೊಡನೆ ತೇಲಿ ಈಜಲೇ—ಎಂಬ ಆಸೆಯಾಗು ತ್ತದೆ. ಈ ಮುಗಿಲ ಅಪ್ಸರೆಯರ ಕ್ರೀಡೆ ಅಷ್ಟು ಸೊಗಸಿನದು!

ಇಲ್ಲಾದರೂ ಗಾಳಿ ಬೀಸತೊಡಗಿತೆಂದರೆ, ಈ ಮುಗಿಲಮೋಹಿನಿಯರು ಮಾಯಾವಿಗಳಾಗುತ್ತಾರೆ. ತೇಲುವ ಜಲಕನ್ಯೆಯರ ರೂಪ ಬಿಟ್ಟು, ಕತ್ತೆತ್ತಿ ಬಾಲದ ಚವರಿ ಹಾರಿಸಿ, ನಾಗಾಲೋಟ ಹೂಡುವ ಬಿಳಿ ಕುದುರೆಗಳಾಗು ತ್ತಾರೆ. ಮುಗಿಲು ಕುದುರೆಗಳ ಹಿಂಡಿಗೆ ಹಿಂಡು, ಹೀಗೆ ಓಡುವಾಗ, ಪಡು ವಣದ ಬೆಟ್ಟದ ಸಾಲು ಹಿರಿಯ ಹುಲ್ಲುಗಾವಲೊಂದರ ಕಲ್ಪನೆ ಕೊಡುತ್ತದೆ.

ಎಳೆಯರಾದ ಕಾಳ, ಕರಿಯರಿಗೆ ಬೆಳಗು ಮುಂಜಾನೆಗಳಲ್ಲಿ ಇದೇ ಕೆಲಸ—ಮುಗಿಲಮಾಯೆಯನ್ನು ಕಾಣುವ ಆಟ. ಕೇರಿಯನ್ನು ಬಿಟ್ಟು

ಪಡುವಣಕ್ಕೆ ಬಂದರೆ ಧನಿಗಳ ಮನೆಯಿದೆ. ಅಲ್ಲಿಂದ ನೂರು ಗಜದ ತನಕ ಹಸುರು ಪೊದೆಗಳಿವೆ. ಅವನ್ನು ಕಳೆದು ಮುಂದೆ ಬಂದರೆ, ಬೆಟ್ಟ ಅಲ್ಲಿಂದಲೇ ಕೆಳಕ್ಕೆ ಕಡಿದಾಗಿ ಇಳಿದು ಕಣಿವೆಯನ್ನು ಸೇರುತ್ತದೆ. ಆ ತುದಿಯಲ್ಲಿ ಹಾಸಿರುವ ಬಂಡೆಗಳ ಮೇಲೆ ಇಬ್ಬರೂ ಬಂದು ಕುಳಿತುಕೊಳ್ಳುತ್ತಾರೆ. ಬಿಸಿಲಿಗೆ ತಮ್ಮ ಬೋಳು ಮೈಗಳನ್ನು ಹಾಯಾಗಿ ಹಿಡಿಯುತ್ತಾರೆ. ಮುಂದೆ ಆ ಸ್ವಪ್ನ ರಾಜ್ಯದ—ಗಾಳಿ, ಮುಗಿಲು, ಬಾನು, ಅರಣ್ಯ, ಬೆಟ್ಟ, ಕಣಿವೆಗಳ ಸೊಬಗನ್ನು ನೋಡುತ್ತ ಕುಳಿತಿರುತ್ತಾರೆ. ಅದರಲ್ಲೂ ಮುಗಿಲುಗಳು ಬಂದು ತೋರುವ ನೂರಾರು ಲೀಲೆ, ವಿಲಾಸಗಳನ್ನು ಅವರಿಗೆ ಕಂಡಷ್ಟು ಸಾಲದು; ಅವುಗಳ ಸವಿ ಉಂಡಷ್ಟು ಸಾಲದು.

ಮಳೆ ಸರಿದು ಚಳಿಗಾಲ ಬರುವಲ್ಲಾಯಿತೆಂದರೆ ಕರಿಯನ ಉತ್ಸಾಹವೇ ಉತ್ಸವ! ಕಾಳನನ್ನು ಕರೆದು 'ಮಂಚದ ಕಲ್ಲಿಗೆ ಹೋಗುವ' ಅನ್ನುತ್ತಾನೆ. ಅಲ್ಲಿ ಮಂಚದಂತೆ ನೆಲದ ಮೇಲೆ ಹಾಸಿದ ಆ ಬಂಡೆಯ ಕಲ್ಲಿಗೆ, ನಾಮಕರಣದ ಕೊರತೆಯಿತ್ತೆಂದು, ಅವನೇ ಈ ಹೆಸರನ್ನು ಪೂರೈಸಿ ಕೊಟ್ಟಿದ್ದಾನೆ. ಕಾಳನ ಜತೆಗೆ ಬೆಳಗಿನ ಚಳಿಗೆ, ಹರಿದ ಪಂಚೆಯೊಂದನ್ನು ನಡುವಿಗೆ ಬಿಗಿದುಕೊಂಡು, ಹರುಕು ಕಂಬಳಿಯೊಂದನ್ನು ಹೊದೆದುಕೊಂಡು ಗಡಗಡ ನಡುಗುತ್ತ, ಅಲ್ಲಿಗೆ ಹೋಗುತ್ತಾನೆ. ಸೂರ್ಯ ಕಾಣಿಸುವ ಮುಂಚೆಯೇ ಅಲ್ಲಿಗೆ ಹೋಗಿ ಕುಳಿತಿರುವುದುಂಟು—ಬಾನಲ್ಲಿ ದೇವರು ಬರುವುದನ್ನು ಕಾಣುವುದಕ್ಕೆ. ಹಾಗೆ ಸೂರ್ಯ ವೇಳೆಗೆ ಸಮನಾಗಿ ಮೂಡಿದರೂ, ಬಹು ಹೊತ್ತಿನ ತನಕ ಅವನು ಕಣ್ಣಿಗೆ ಕಾಣಿಸುವುದಿಲ್ಲ. ಅವನು ಕಣ್ಣಿಗೆ ಕಾಣಿಸುವ ತನಕವೂ ಮಂಜಿನ ತೆರೆಯಲ್ಲೇ ಇಬ್ಬರೂ ಕುಳಿತಿರುತ್ತಾರೆ. ಚಳಿಯಿಂದ ಹಲ್ಲು ಕಡಿಯುತ್ತಿರುತ್ತದೆ. ನೆಲದಲ್ಲಿ ಬೆಳೆದ ಮೊಣಕಾಲೆತ್ತರದ ಹುಲ್ಲನ್ನು ಮೆಟ್ಟುವಾಗಲಂತೂ, ಕರುಳೇ ಕತ್ತರಿಸುತ್ತದೆ. ತಂಡಿಯಿಂದ ಹಿಮ್ಮಡ ಮುದುರಿ ಸೆಳೆಯುತ್ತದೆ. ಆದರೂ ಬಾಲಕರಿಬ್ಬರೂ ನಡೆದುಬಂದು, ಆ ಬಂಡೆಯ ಮೇಲೆ ಮುದುರಿ ಕುಳಿತಿರುತ್ತಾರೆ.

ಮೂಡಣಕ್ಕೆ ಮುಖ ಮಾಡಿ 'ಬಂತು, ಬಂತು, ದೇವರ ಸವಾರಿ ಬಂತು, ಎಂದು ಸೂರ್ಯೋದಯವನ್ನು ನಿರೀಕ್ಷಿಸುತ್ತಾರೆ. ಸೂರ್ಯ ಮೂಡಿದನೆಂದರೆ ತಕ್ಷಣ ಅವನ ಬಿಂಬ ಕಾಣಿಸದೆಹೋದರೂ, ಮಂಜು ಹೊಳೆಯುವ

ಬೆಳ್ಳಿಯ ಬಣ್ಣ ತಾಳುತ್ತದೆ. ಅದೇನೆ ದೇವರು ಬಂದ ಗುರುತು. ಇನ್ನೆರಡು ನಿಮಿಷಕಾಲ ಹೋದರೆ ಪಡುವಣದಲ್ಲಿ ಅವರೆದುರಿಗೆ ಮಂಡಲಾಕಾರದ ಕಾಮನಬಿಲ್ಲು, ಅವರವರ ನೆರಳಿಗೆ ಬರೆದ ಪ್ರಭಾವಳಿಯಂತೆ ಕಾಣಿಸುತ್ತದೆ. ಬಿಸಿಲು ಇನ್ನಷ್ಟು ಪ್ರಬಲಿಸಿದೊಡನೆ ಈ ಪ್ರಭಾವಳಿ ಮಾಯವಾಗಿ ದೂರದ ಬಾನಿನಲ್ಲಿ ಕಾಮನಬಿಲ್ಲು ಮೂಡುತ್ತದೆ. ಒಮ್ಮೊಮ್ಮೆ ಒಂದು, ಎರಡು, ಮೂರರ ತನಕ ಹೀಗೆ ಬಿಲ್ಲುಗಳು ಕಾಣಿಸುವುದುಂಟು.

ಬೆನ್ನಿಗೆ ಸೂರ್ಯನ ಕಾವು ಬಡಿಯುತ್ತಲೇ 'ಅಬ್ಬಾ, ಸಮ ಬೆಳಗಾಯಿತು' ಎಂದು ಹುಡುಗರು ಮೈ ನಿಡಿದು ಹಿಗ್ಗುತ್ತಾರೆ. ಅವರನ್ನು ಅಣಕಿಸಲು, ಹಿಮದ ಗಾಳಿ ಮುಖಕ್ಕೆ ಬಂದು ಅಪ್ಪಳಿಸುವುದುಂಟು. ಕೆಲವು ಕ್ಷಣಗಳಲ್ಲಿ ಅದೇ ಗಾಳಿ ಹಿಮದ ಪರೆಯನ್ನು ಹಾರಿಸಿ, ಎದುರಿನ ದೃಶ್ಯವನ್ನು ಸ್ಪಷ್ಟವಾಗಿ ಕಣ್ಣೆದುರಿಗೆ ಮೂಡಿಸುತ್ತದೆ.

'ಹಾ ಎಷ್ಟು ಚಂದದ ಗೋಡೆ'—ಎಂದು ನುಡಿಯುತ್ತಾನೆ ಕರಿಯ, ಎದುರಿನ ಮಲೆಯ ಬೆಡಗನ್ನು ಕಂಡು. ಪಾಪ—ಸೌಂದರ್ಯ ನೋಡುವ ಕಣ್ಣಿದ್ದರೂ, ಉಣ್ಣುವ ಆಸೆಯಿದ್ದರೂ ಬಾಯಿಗೆ ತಕ್ಕ ಮಾತು ಬರಲೊಲ್ಲದು ದಕ್ಕೆ 'ಚಂದ, ಚಂದ ಚಂದ, ಎಷ್ಟು ಚಂದ' ಎಂಬ ಒಂದೆರಡು ನುಡಿಗಳಲ್ಲೇ ಈ ಬ್ರಹ್ಮಾಂಡ ಸೊಗಸನ್ನು ಚಿತ್ರಿಸಲೆಳಸುತ್ತಾನೆ

ಪಡುವಣ ಬೆಟ್ಟದ ಗೋಡೆಯ ಮೇಲೆ ಬಿಸಿಲಿನ ಹೊಂಬಣ್ಣ ಕೆಂಬಣ್ಣಗಳು ಬೀಳುವ ಚೆಲುವನ್ನು ನೋಡಿ ಕರಿಯ ಮುಗ್ಧನಾಗಿರುವಾಗ, ಅವನ ಗೆಳೆಯ ಕಾಳ "ಕರಿಯ, ಅಲ್ಲಿ ನೋಡು—ಅದನ್ನು ನೋಡು. ನೊರೆ ಹೆಂಡದ ಸಮುದ್ರ" ಎನ್ನುತ್ತಾನೆ ಕೆಳಗಿನ ಕಣಿವೆಯನ್ನು ತೋರಿಸಿ. ಮಂಜು ತುಂಬಿದ ಕೆಳಗಿನ ಕಣಿವೆ, ಇವರ ಪಾಲಿಗೆ—ಮಜ್ಜಿಗೆ, ಹಾಲು, ಮೊಸರುಗಳ ಸಮುದ್ರವಲ್ಲ, ಬದಲು ಬಯನಿ ಹೆಂಡದ ಶರಧಿ. ಆ ಹೆಂಡದ ಪಾತ್ರೆಯಾದರೂ ಎಷ್ಟು ದೊಡ್ಡದು! ಮೂರು ಬೆಟ್ಟದ ಗೋಡೆಗಳಿಂದ ಆವೃತವಾಗಿ, ನಾಲ್ಕನೆಯ ಮೇರೆ ದೂರದ ದಿಗಂತವೇ ಆಗಿರುವ ಮಹಾಸಮುದ್ರ. ಬಿಸಿಲೇರುತ್ತ ಬಂದರೆ, ಕಣಿವೆಯಲ್ಲಿ ತುಂಬಿಕೊಂಡ ಆ ಮಂಜಿನ ಸಮುದ್ರಕ್ಕೂ ಕಾವು ನಾಟುತ್ತದೆ. ಕಾವು ನಾಟಿದ ಒಂದೆರಡು ತಾಸುಗಳ ತನಕ ಏನೇನೋ ವಿಚಿತ್ರ ಆಟಗಳು ನಡೆಯುತ್ತವೆ. ಮಂಜು ಏರುತ್ತದೆ;

ವಿಸ್ತರಿಸುತ್ತದೆ; ಕದಡುತ್ತದೆ, ಕೊಡತ ಮೊಸರಿನಂತೆ ಹೆಂಟೆ ಕಟ್ಟುತ್ತದೆ. ಮುಗಿಲಾಗಿ ಮೇಲಕ್ಕೆ ಬಂದು ಎಲ್ಲೋ ಏನೋ ಎಂಬಷ್ಟು ವೇಗದಿಂದ ಮಾಯವಾಗಿಯೂ ಬಿಡುತ್ತದೆ.

ಆಗ ಕೆಳಗಿನ ಉದ್ಯಾನ ಕಾಣಿಸುತ್ತದೆ. ಕಣಿವೆಯಲ್ಲಿ ಹರಿಯದ ಹರಿಯುವ ತೊರೆಯ ಮೇಲೆ ಬಿಸಿಲು ಕುಣಿದಾಡಿ, ಅದು ಜಳಪಿಸುವುದೂ ಗೋಚರಿಸುತ್ತದೆ. ಅಷ್ಟರಲ್ಲಿ ಅವರ ಹೊಟ್ಟೆಯ ಒಳಗೂ ಹಸಿವಿನ ಕಾವು ಹುಟ್ಟುತ್ತದೆ. "ಹೋಗುವ ಕಾಳ" ಎಂದು ಗೆಳೆಯನನ್ನು ಕರೆದುಕೊಂಡು ಒಂದೇ ಓಟಕ್ಕೆ ಕೇರಿಯ ತನಕ ಓಡುತ್ತಾರೆ. ಬೂದನ ಮನೆಯನ್ನು ಸೇರುತ್ತಾರೆ. ಅಲ್ಲಿ ಅಂಬಲಿಯ ಸಮಾರಾಧನೆ ನಡೆಯುತ್ತದೆ. ಬೂದನ ತಾಯಿಯೋ ಕೆಂಪಿಯೋ ಅವರಿಗೆ ಅಂಬಲಿ ಬಡಿಸುತ್ತಾರೆ. ಇವರು ಬರುವುದು ತಡವಾದರೆ—ಬಚ್ಚಿರಿಸಿದ ಅಂಬಲಿಯನ್ನೋ, ಗಂಜಿಯನ್ನೋ ಅವರೇನೆ ಬಟ್ಟಲಿಗೆ ಸುರಿದುಕೊಂಡು ಉಣ್ಣಬೇಕು. ಅವರ ಪಾಡಿಗೆ ಅವರು ಹಿರಿಯರು ಅವರಿಗಾಗಿ ಕಾದಿರಲಾರರು. ಏಲಕ್ಕಿ ತೋಟಕ್ಕೆ ಹೋಗಿರುತ್ತಾರೆ; ಕಟ್ಟಿಗೆಯನ್ನು ಕಡಿಯುವುದಕ್ಕೆ ಹೋಗಿರುತ್ತಾರೆ. ಏಲಕ್ಕಿ ಕಾಯಿಸುವ ಗೂಡಿಗೆ ಎಷ್ಟು ಕಟ್ಟಿಗೆ ಕೂಡಿಸಿದರೂ ಕಡಮೆಯೆ. ಈ ಕೆಲಸವಿಲ್ಲದಿದ್ದರೆ ಗಡ್ಡೆ ಗೆಣಸು ಹರಡುವುದಕ್ಕೆ ಕಾಡಿಗೆ ಹೋಗಿರುತ್ತಾರೆ.

ಕಾಳ ಮತ್ತು ಕರಯ ತುಂಬ ನಚ್ಚಿನ ಗೆಳೆಯರಾಗಿದ್ದಾರೆ. ಬೂದನ ತಾಯಿ ಮುದುಕಿ ಅವಳಿಗೆ ಈ ಮಕ್ಕಳೆಂದರೆ ತುಂಬ ಇಷ್ಟ. ಕೆಂಪಿ ಮನೆಗೆ ಬಂದಾಗ, ತನ್ನ ಮೊಮ್ಮಗನನ್ನು ಹೇಗೆ ಅವಳು ಕಾಣುತ್ತಾಳೋ, ಎಂಬ ಭೀತಿ ಕೆಂಚನ ಮನದಲ್ಲೂ ಇತ್ತು. ಆದರೆ ಕರಿಯ ನಾಳಿನ ಗುರಿಕಾರನೆಂದೋ, ಆದುದರಿಂದ ತುಕ್ರನ ಪ್ರತಿಸ್ಪರ್ಧಿ ಎಂದೋ, ಅವನ ಮೇಲೆ ಹೆಚ್ಚಿನ ಅಕ್ಕರ ತೋರಿಸ ತೊಡಗಿದ್ದಳು ಕೆಂಪಿ. ತನಗೆ ಸ್ವಂತ ಮಕ್ಕಳಿಲ್ಲವೆಂಬ ಚಿಂತೆ ಅವಳಿಗೆ ಇದ್ದೇ ಇತ್ತು. ತುಕ್ರನ ಮನೆಯಲ್ಲಿ ಬಾಳ್ವೆಮಾಡಿ ಬಾಳ್ವೆ ಮಾಡಿದಾಗ, ಸವತಿಯೊಡನೆ ಕಡಿದಾಡುತಿದ್ದರೂ, ಅವಳ ಮಕ್ಕಳನ್ನು ಪ್ರೀತಿಯಿಂದಲೇ ಕಂಡಿದ್ದಳು. ಆದರೆ ಆ ಮಕ್ಕಳು ತನ್ನ ಮಕ್ಕಳಲ್ಲ ಎಂಬ ಚಿಂತೆ ಅವಳನ್ನು ಸದಾ ಕಾಡುತಿತ್ತು. ಹೊಸ ಗಂಡನನ್ನು ಪಡೆದುದಕ್ಕೆ ಆ ಸೌಭಾಗ್ಯ ತನಗೆ ದೊರೆತೀತೇ—ಎಂದು ಹಂಬಲಿಸುತ್ತಿದ್ದಾಳೆ.

ಅಂಥ ಹಂಬಲವನ್ನು ಕೆಂಚಜ್ಜನ ಮುಂದೆಯೂ ತೋಡಿಕೊಂಡಿದ್ದಾಳೆ. ಅವನೆಂದಿದ್ದ—"ಇಗೋ, ಸುಬ್ರಹ್ಮಣ್ಯಸ್ವಾಮಿಗೆ ಹರಕೆ ಹೇಳಿಕೋ. ನನಗೊಂದು ಗಂಡು ಮಗುವಾದರೆ ನಿನ್ನ ತನಕ ಬಂದು ಅವನ ಚವಲ ಮಾಡಿಸುತ್ತೇನೆ ಎಂದುಕೋ. ಆದೀತು. ಅವನು ಒಲಿದರೆ ಆಗಲಾರದ್ದುಂಟೇ" ಎಂದೂ ಹರಸಿದ್ದ. ಅಲ್ಲಿಯ ತನಕವಾದರೂ ಮನೆಯ ಕೂಸುಗಳಿಬ್ಬರು ಆವಳವೇ.

ಕೆಂಪಿ ಅವರಿಗೆ ಬೆಳಗ್ಗೆ ಗಂಜಿ ಬಡಿಸಿದ ಮೇಲೆ, ತನ್ನ ಕೆಲಸಕ್ಕೆ ಹೊರಟುಹೋದರೆ, ಕರಿಯ ಕಾಳರು ತಮ್ಮ ಕೆಲಸಕ್ಕೆ ಹೊರಡುತ್ತಾರೆ. ಅವರ ಕೆಲಸ ಇದೇನೆ—ಆ ಅರಣ್ಯ ರಾಜ್ಯದಲ್ಲಿ ಕೌಪೀನಧಾರಿಗಳಾಗಿ ನಿಸರ್ಗದ ಶಿಶುಗಳಾಗಿ ಅಲೆದಾಡುವುದೆ ಹಿರಿಯರಿಂದ ಕಲಿತ ಪಾಠಗಳನ್ನು ಅನುಕರಿಸುವುದು ಬೂದಣ್ಣ ಉರುಳಿಡುವುದನ್ನು ಕಲಿಸಿದ್ದಾನೆ—ಹಕ್ಕಿಗೆ ಇರಿಸುವ ಉರುಳು, ಪಸುಬನಿಗೆ ಇರಿಸುವ ಉರುಳು, ಬರ್ಕಕ್ಕೆ ಒಡ್ಡುವ ಉರುಳು, ಕೋತಿಗೆ ಇರಿಸುವ ಉರುಳು—ಇಂಥದೆಲ್ಲ. ಆದರೆ ಅದರ ಜತೆಯಲ್ಲಿ ಎಚ್ಚರವನ್ನೂ ಹೇಳಿದ್ದಾನೆ. "ಮಳೆಗಾಲದಲ್ಲಿ ಮರ ಗಿಡ ಹತ್ತಬೇಡಿ. ನಾನು ಹತ್ತುತ್ತೇನೆಂದು ನೀವು ಹತ್ತಿ ಜಾರಿ ಬಿದ್ದೀರಾ" ಎಂದು.

ಕರಿಯನಿಗೆ—ತಾನು ಅಷ್ಟೊಂದು ಚಿಕ್ಕವನೇ; ಏತಕ್ಕೆ ಮರ ಏರಬಾರದು ಎಂಬ ಯೋಚನೆ. ಹಿರಿಯರಲ್ಲಿ ಮರವನ್ನೇರದ ವ್ಯಕ್ತಿಗಳೇ ಇಲ್ಲ. ಬೂದನಂತಹ ಗಂಡಸರೂ ಏರುತ್ತಾರೆ; ಕೆಂಪಿಯಂಥ ಹೆಂಗಸರೂ ಏರುತ್ತಾರೆ. ರೆಂಬೆ ಕೊಂಬೆಗಳಿಲ್ಲದ ಬಯನಿಮರವನ್ನೇ ಅವರು ಏರುತ್ತಾರೆಂದ ಮೇಲೆ, ತಾನೇತಕ್ಕೆ ಅದನ್ನೇರಬಾರದು. ಎಂಬ ಹಟ ಮೂಡಿತು. ಮನಸ್ಸಿನಲ್ಲಿ. ಒಂದುದಿನ ಕಾಳನನ್ನು ಬಯನಿಮರವೊಂದರ ಬುಡದಲ್ಲಿ ನಿಲ್ಲಿಸಿ ಬೀಳಲಿನ ಗೊಣಸು ಮಾಡಿಯೇ ಕಾಲಿಗೆ ಅದನ್ನು ಸೆಕ್ಕಿಸಿಕೊಂಡು ಆ ಮರವನ್ನು ಏರಿಯೇ ಏರಿದ. ಏರಿದ್ದೂ ಆಯಿತು. ಸರಕ್ಕನೆ ಸರಿದು ಹೊಟ್ಟೆ ಅರಚಿಕೊಂಡು ಕೆಳಕ್ಕೆ ಬಿದ್ದುದೂ ಆಯಿತು. ಪುಣ್ಯಕ್ಕೆ ಪೆಟ್ಟೇನೂ ಆಗಲಿಲ್ಲ. ಏಕೆ ಏರಬಾರದೆಂಬ ಕಾರಣ ಮಾತ್ರ ಚೆನ್ನಾಗಿ ಮನವರಿಕೆಯಾಯಿತು. ಮಳೆಗಾಲದ ಮುಗಿಲಿನ ಪಸಗೆ, ಬೆಟ್ಟದಲ್ಲಿ ಎಲ್ಲೆಂದರಲ್ಲಿ ಪಾಮಾಜಿ ಅಂಟಿಕೊಂಡು ಬೆಳೆಯುತ್ತದೆ. ಬಂಡೆಗಳ ಮೈಯಲ್ಲೂ ಅಂಥ ಗೋಸರು;

ಮರಗಳ ಕಾಂಡಗಳಲ್ಲೂ ಅಂಥ ಗೋಸರು—ಅಂಟಿಕೊಂಡಿರುತ್ತದೆ. ಕೊಂಬೆ ರೆಂಬೆಗಳಲ್ಲಂತೂ ಹಸುರು ಹಾವಸೆಯೇ ತೂಗಿ ಬೆಳೆಯುತ್ತದೆ. ತಾಳೆ, ಬಯನಿ ಮರಗಳು ಇದಕ್ಕೆ ಆಕ್ಷೇಪವಲ್ಲ. ಹೀಗಾಗಿ ಮರವನ್ನೇರಿದ ಕರಿಯ ನಿಗೆ ಕೈಕಾಲುಗಳ ಹಿಡಿತವೆರಡೂ ತಪ್ಪಿ, ನೆಲವನ್ನು ಕಂಡ. ಇಲ್ಲದೆ ಹೋದರೋ—ಬಯನಿಮರ ಹತ್ತಿ, ಹೆಂಡಕ್ಕೆ ಬರುವ ಮುಳ್ಳಿಲಿಗಳನ್ನು ಹಿಡಿದೇನು—ಎಂಬ ಜಂಭ ಅವನಿಗೆ.

ಈ ಪಾತದಿಂದ ಕರಿಯು, ಕಾಳರ ಬೇಟೆಯ ಲವಲವಿಕೆ ನೆಲದಲ್ಲಷ್ಟೇ ನಡೆಯಬೇಕಾಯಿತು. ಹೊತ್ತು ಕಳೆಯುವುದಕ್ಕೆ, ವಿನೋದಕ್ಕೆ, ಎಲ್ಲಿ ಕಂಡ ರಲ್ಲಿ ಉರುಳು ರಚಿಸಿ ಇರಿಸುತ್ತಾರೆ; ಗಳಿಗೆ ಗಳಿಗೆ ಕಾಯುತ್ತಾರೆ. ತಾವಿಟ್ಟ ಉರುಳಿಗೆ ಬರ್ಕ, ಕೆಮ್ಮು, ಕಡವೆ, ಕಾಟಿ—ಏನು ಬಿದ್ದರೂ ಬಿದ್ದೀತು ಎಂದು ಬಯಸುತ್ತಾರೆ. ಆದರೆ ಆಯಕಟ್ಟಿನ ಸ್ಥಳವನ್ನು ಅರಿಸಲಾರದ ಅವರ ಉರುಳಿಗೆ ಏನು ಬಿದ್ದೀತು? ಬೇಸರ ಬಂದು—ಈಟಿ ಹಿಡಿದು ಆವೆ ಕುಕ್ಕುತ್ತೇವೆ—ಎಂದು ಆಟ ತೊಡಗುತ್ತಾರೆ. ಅದೂ ಸಾಧ್ಯವಾಗದೆ ಹೋದರೆ, ತೊರೆಯ ಬಳಿಗೆ ಓಡಿ ಕಲ್ಲುಗಳನ್ನುರುಳಿಸಿ ಅವುಗಳ ಕೆಳಗೆ ಅಡಗಿ ಕುಳಿತ ಏಡಿಗಳನ್ನಾದರೂ ಸಂಪಾದಿಸುತ್ತಾರೆ. ಗಬಕ್ಕನೆ ನೀರಿಗೆ ಕೈಯಿಕ್ಕಿ, ಮೀನೂ ಹಿಡಿಯುವುದೂ ಉಂಟು. ಮೀನಿನ ಬದಲು ಚೊಂದ ಕಪ್ಪೆ ಕೈಗೆ ಬರುವುದೂ ಉಂಟು.

ಕರಿಯ ಹಕ್ಕಿಯ ಉರುಳನ್ನೂ ಹಾಕುತ್ತಾನೆ, ಒಮ್ಮೆ ಆತ ನಿರಿಸಿದ ಉರುಳಿಗೆ ಪಸುಬವೊಂದು ಎರಗಿ ಸಿಲುಕಿ ಕೊಂಡಿತು. ಅದನ್ನು ಹಿಡಿದು ಸಾಕುತ್ತೇನೆ—ಎಂದು ಓಡಿದ. ಅದರ ಕಾಲು ಮುರಿದು ಹೋಗಿತ್ತು. ಕೊನೆಗೂ ಆ ಹಕ್ಕಿಗೆ ಹೊಟ್ಟೆಯೇ ಪಂಜರವಾಯಿತು. ಬಹು ಬಾರಿ ತಿನ್ನಲು ಬರುವ ಹಳ್ಳಿಗಳ ಬದಲು ಬಾರದ ಹಕ್ಕಿಗಳೇ ಸಿಕ್ಕಿದ್ದುಂಟು. ಅಂತು ಈ ಬೇಟೆಯ ನೆವದಿಂದ ಅಲೆದಾಡುವ ಅವನಿಗೆ ಹಕ್ಕಿಯ ಕೂಗು, ಹಾರಾಟ, ಬಣ್ಣ ಬೆಡಗುಗಳನ್ನು ಕಾಣುವ ಲಾಲಸೆ ಅಧಿಕವಾಗಿ ಬೆಳೆಯಿತು. ಪಶು ಪಕ್ಷಿಗಳ ಮೇಲಿನ ಮೋಹ ಇನ್ನಷ್ಟು ಹೆಚ್ಚಿತು. ಇದರಿಂದಾಗಿ ಪ್ರಾಣಿ ಗಳೆಂದರೆ ಅವನಿಗೆ ತುಂಬ ಮುದ್ದು.

ಆತನಿಗೆ ಕೇರಿಯ ನಾಯಿಗಳೆಲ್ಲ ಗೆಳೆಯರೇ. ಯಾರ ಮನೆಯ

ನಾಯಾದರೂ ಸರಿಯೆ, ಎಂಥ ಸೊಣವಾದರೂ ಸರಿಯೆ, 'ದೋ, ದೋ' ಎಂದು ಕರೆಯುವವನೆ. ಬೂದನ ಮನೆಯ ಕಾಟು ನಾಯಿಗೆ ಕರಿಯನ ಚಾಪೆಯಲ್ಲೇ ಪಾಲು. ಬಳಿಯಲ್ಲಿ—ಇತರರಿಲ್ಲದಾಗ ಗಳಿಗೆ ಗಳಿಗೆಗಳ ತನಕ ಆ ಕಾಟುವಿನೊಡನೆ ಸಂಭಾಷಣೆ ನಡೆಯಿಸುತ್ತಾನೆ. ಹೀಗಾಗಿ ಅದರ ನಿಜ ವಾದ ಯಜಮಾನ ಅವನೇ. ಬೂದನ ಹಿಂದೆ ಅದು ಅಲೆದಾಡುವುದಕ್ಕಿಂತ ಹೆಚ್ಚಾಗಿ ಕಾಟು ಕರಿಯನ ಹಿಂದೆ ಅಲೆದಾಡುತ್ತದೆ.

ಒಂದುದಿನ ಕರಿಯ, ಕಾಳರಿಬ್ಬರೂ ನಿತ್ಯದಂತೆ ಶಿಕಾರಿಗೆ ಹೊರಟರು. ದೊರೆಗಳ ಹಿಂದೆ ಉಗ್ರಾಣಿ ಹೊರಡುವಂತೆ, ಕರಿಯನ ಹಿಂದಕ್ಕೆ ಕಾಟುವೂ ಹೊರಟಿತು ಆಮೆ ಹಿಡಿಯುವ ಹುಚ್ಚಿನಿಂದ ಬೆಟ್ಟವೆಲ್ಲ ಅಲೆದರು; ದಣಿದರು, ಒಂದೆಡೆ ಹೋಗಿ ಕುಳಿತರು. ಅಲ್ಲಿಂದ ಕಾಲಿಗೆ ಅಂಟಿದ ಜಿಗಣೆ ಗಳನ್ನು ಒಂದೊಂದಾಗಿ ಎಳೆದು, ಕಿತ್ತು, ಎಸೆದರು. ರಕ್ತ ಸುರಿಯುವ ಗಾಯಕ್ಕೆ ಸೊಪ್ಪಿನ ರಸ ಹಚ್ಚಿದರು "ಹೂಂ, ಈ ಹೊತ್ತು ಎಲ್ಲಿ ಸತ್ತಿ ದ್ದಾವೋ ಕಾಡಿನ ಆಮೆಗಳು" ಎಂದು ನಿರಾಶೆಯಿಂದ ಗೊಣಗಿದರು. ಅವರ ಬೆನ್ನಿಗಿತ್ತು ಕಾಟು. ಅದಕ್ಕೇನೋ ಧ್ವನಿ ಕೇಳಿಸಿರಬೇಕು—ಅದು ಸರ ಕ್ಕನೆ ಸರಿದೋಡಿತು. ಇವರು ಜಿಗಿದೆದ್ದರು. ನಾಯಿ 'ಗೌಗೌ' ಎಂಬಲ್ಲಿಗೆ ಓಡಿಹೋದರು. ಅದೂ ಕಾಣಿಸಿತು. ಇವರು ನೋಡುವಾಗ ಕಾಟು ಡೊಂಬರು ಮಾಡುತ್ತಿತ್ತು. ಕುಪ್ಪಳಿಸಿ ಕುಪ್ಪಳಿಸಿ ಮೇಲಕ್ಕೆ ಜಿಗಿಯು ತ್ತಿತ್ತು. 'ಗೌಗೌ' ಎಂದು ಗವರಿಸುತ್ತಿತ್ತು. ಕರಿಯ ಓಡಿಹೋಗಿ ನೋಡುತ್ತಾನೆ—ಕಾಟುವಿನ ಮೇಲುಗಡೆ ಅಂತರಿಕ್ಷದಲ್ಲಿ ಬಡಪಾಯಿಯಾದ ಹರಿಣವೊಂದು ತೂಗುತ್ತಿತ್ತು. ಅದರ ಭೀತ ನಯನಗಳು ಹೇಳಲಾರದ ಮೊರೆಯಿಡುತ್ತಿದ್ದುವು. ನಾಯಿ ಘರ್ಜನೆಯಿಂದ ಅದರ ಜೀವವೇ ಹಾರಿತು. 'ಕಾಟು, ಕಾಟು' ಎಂದು ಕರಿಯ ಅದನ್ನೆಳೆದು, ಅದರ ಬಾಯಿ ಮುಚ್ಚಿಸಿದ.

"ಕಾಳ, ಎಂಥ ಚಂದದ ಮರಿ! ಹೇಗೆ ಬಿಡಿಸುವುದು ಅದನ್ನು. ಗಿಡ ಕಡಿಯದೆ ಆಗಲಾರದು. ಕತ್ತಿ ತಂದಿಲ್ಲವಲ್ಲ; ತರುತ್ತೀಯೋ ಎಂದ.

ಕಾಳ ಹೊರಟ. ಹತ್ತು ಹೆಜ್ಜೆ ಹೋದವನನ್ನು ಮರಳಿ ಕರೆದು "ಯಾರಿಗೂ ಹೇಳಬೇಡ ಇದು ಸಿಕ್ಕಿ ಬಿದ್ದಿರುವುದನ್ನು" ಎಂದ. 'ಯಾಕೆ

ಹೀಗನ್ನುತ್ತಾನೆ'—ಎಂದು ತಿಳಿಯಲಾರದ ಕಾಳ ಮನೆಗೆ ಓಡಿದ. ಅವನು ಬರುವ ತನಕ, ಕರಿಯನಿಗೆ ಕಾಟುವಿನ ಬಾಯಿಕಟ್ಟುವುದೇ ಕೆಲಸ. ಬಂದ ಮೇಲೆ, ಅವನು ಜಿಂಕೆಮರಿ ತೂಗುತ್ತಿದ್ದ ಮರವನ್ನು ಬಗ್ಗಿಸುವ ಪ್ರಯತ್ನ ಮಾಡಿದ. ಇವರ ತ್ರಾಣಕ್ಕೆ ಅದು ಬಾಗುವ ಗಿಡವಾಗಿರಲಿಲ್ಲ.

ಮೊದಲು ಕಾಟುವನ್ನು ಓಡಿಸಬೇಕು. ತುದಿ ಮೊದಲಿಲ್ಲದೆ ಕೂಗುವ ಕಾಟುವಿಗೆ ಎರಡೇಟು ಕೊಟ್ಟು "ನೋಡಿಕೋ, ಈ ಮರಿಯನ್ನು ಮುಟ್ಟಿದರೆ ನಿನ್ನನ್ನು ಕೊಂದುಬಿಡುತ್ತೇನೆ." ಎಂದು ಗದರಿಸಿದ. ಕರಿಯನ ಕೋಪಕ್ಕೋ, ಬಿದ್ದ ಏಟಿಗೋ ನಾಯಿ ಅಂಜಿ ದೂರ ತೊಲಗಿತು. ಕರಿಯ ಗಿಡವನ್ನು ಹಿಡಿದ ಕಾಳ ಕತ್ತಿಯಿಂದ ಕಡಿದ. ಗಿಡ ಮುರಿಯಿತು, ಹರಿಣ ನೆಲಕ್ಕೆ ಕಾಲು ಊರಿತು. ಅದು ನೆಲದ ಮೇಲೆ ಜಿಗಿದಾಡತೊಡಗಿತು. ಹಾಗೂ ಹೀಗೂ ಇಬ್ಬರೂ ಸೇರಿ, ಅದನ್ನು ತಬ್ಬಿ ಹಿಡಿದು, ಕಾಲುಕಟ್ಟಿ, ಮನೆಗೆ ಎತ್ತಿಕೊಂಡು ಬಂದು, ಮನೆಯಲ್ಲಿ ಕಟ್ಟಿಹಾಕಿದರು. ಅದರ ಎದುರಿಗೆ ಹುಲ್ಲು ಹಾಕಿದರು, ಸೊಪ್ಪು ಚೆಲ್ಲಿದರು, ಮನೆಯ ಕತ್ತಲು ಮೂಲೆಯಲ್ಲಿ ಮರಿ ಮುದ್ದೆಯಾಗಿ ಮುರುಟಿ ಮಲಗಿಕೊಂಡಿತು. ಅವರ ಸಂತೋಷವೇ ಸಂತೋಷ.

"ಅದೆಲ್ಲ ಸಮ. ಉರುಳಿಟ್ಟವರಿಗೆ ಈ ಸಂಗತಿ ತಿಳಿಯದಿದ್ದೀತೇ? ನಮ್ಮ ಕೆಲಸ ಗೊತ್ತಾದರೇನು ಗತಿ?" ಎನ್ನುತ್ತಿದ್ದಾನೆ ಕಾಳ.

"ಗೊತ್ತಾದರೇನಂತೆ. ಇದು ಆ ಉರುಳಿಗೇ ಸಿಕ್ಕಿದ್ದು ಎಂದು ಅವರಿಗೆ ತಿಳಿಯುವುದು ಹೇಗೆ? ಅದಕ್ಕೆ ಬೇರೇನಾದರೂ ಸಿಕ್ಕಿರಬಹುದು; ಇನ್ನೇನಾದರೂ ಆಗಿರಬಹುದು; ಯಾರಾದರೂ ಆ ಗಿಡವನ್ನು ಕಡಿದಿರಬಹುದು. ನಾವೇ ಅದನ್ನು ತೆಗೆದಿದ್ದೇವೆ ಎಂದು ಸ್ಪಷ್ಟವಾಗುತ್ತದೆಯೋ?"

"ನಿನಗೆ ಈ ಮರಿ ಎಲ್ಲಿ ಸಿಕ್ಕಿತು? ಎಂದು ಕೇಳಿದರೆ?"

"ಕಾಟು ಅಟ್ಟಿಕೊಂಡು ಹೋಗುತ್ತಿತ್ತು. ಅದನ್ನು ಬಾಯಿಹಾಕಿ ಹಿಡಿಯಿತು. ತಪ್ಪಿಸಿದೆವು ಅಂದರೆ."

"ಗಾಯ ತೋರಿಸು ಅಂದರೆ."

"ಅದು ಬಂದು ಬಲ್ಲೆಯೊಳಗೋಡಿ ತಪ್ಪಿಸಿಕೊಂಡಿತು. ನಾವಿಬ್ಬರೂ ಹೇಗೋ ಹೇಗೋ ಬಿಡಿಸಿ ತಂದೆವು ಎನ್ನುವ."

ಕೊನೆಗೆ ಕಡೆಯ ಉಪಾಯವೇ ಯೋಗ್ಯವೆಂದು ತೀರ್ಮಾನಿಸುವಾಗ, "ಕಾಳ, ಒಂದು ಮೋಸವಾಯಿತಲ್ಲ. ಕತ್ತಿ ಎಲ್ಲುಂಟು? ಬರುವಾಗ ತರಲಿಲ್ಲ ವಲ್ಲ" ಎಂಬ ಅನುಮಾನ ಹೊಳೆಯಿತು.

"ನೀನು ತರಲಿಲ್ಲವೇ? ನನಗೆ ಕೋಲು ಹಿಡಿದು ಕಾಟುವನ್ನೋಡಿಸುವುದೇ ಕೆಲಸವಾಯಿತು."

"ನನ್ನ ಕೈಯಲ್ಲಿ ಮರಿಯಿತ್ತು. ನೀನು ತರುತ್ತೀ ಎಂದು ನಾನು ಯೋಚಿಸಿದೆ."

"ಹಾಂ, ಮೋಸ ಮಾಡಿದೆ ನೀನು. ಕತ್ತಿ ಸಿಕ್ಕಿದರೆ ಕಳ್ಳರು ಯಾರು ಎಂಬುದು ತನ್ನಂತೆಯೇ ತುಬ್ಬಾಗುತ್ತದೆ."

ಆ ಅನುಮಾನ ಹೊಳೆಯುತ್ತಲೇ ಕರಿಯ ಒಬ್ಬನೇ ಮಿಂಚಿನ ವೇಗದಿಂದ ಓಟ ಹೂಡಿದ. ಕಾಟು 'ಗೌಗೌ' ಎಂದು ಅವನನ್ನು ಹಿಂಬಾಲಿಸಿತು. ಆ ಸ್ಥಳವನ್ನು ಸೇರಿ ಅಲ್ಲಿ ಬಿದ್ದ ಕತ್ತಿಯನ್ನು ಎತ್ತುವವರೆಗೆ, ಅವನಿಗೆ ಜೀವದಲ್ಲಿ ಜೀವವಿರಲಿಲ್ಲ. ಕಾಟು ಆ ಸ್ಥಳಕ್ಕೆ ಬರುತ್ತಲೇ ಅಲ್ಲಿನ ನೆಲ, ಹೊದರುಗಳನ್ನು ಮೂಸಿ 'ಗೌಗೌ' ಎನ್ನತೊಡಗಿತು.

"ಇದೊಂದು ಶನಿ. ಹೋದಲ್ಲಿಗೆ ಬರುತ್ತದೆ. ಯಾರಿಗೂ ಗೊತ್ತಾಗಬಾರದು ಅಂದರೆ, ಇದಕ್ಕೆ ತೆಪ್ಪಗೆ ಬಿದ್ದಿರುವುದಕ್ಕೇ ಬರುವುದಿಲ್ಲ" ಎಂದು ಅದರ ಬೆನ್ನಿಗೊಂದು ಬಡೆದು, ಅಲ್ಲಿಂದ ಮರಳಿದ. ಕತ್ತಿಯನ್ನು ಅಡಗಿಸಿ ಹಿಡಿಯುವುದಕ್ಕೆ ಉಪಾಯವಿಲ್ಲ. ಏಕಾಂಬರಧಾರಿಯಾಗಿ ಬಂದಿದ್ದ. ಆದರೂ ಎದುರಿಗೆ ಬರುವವರ ಕಣ್ಣಿಗೆ ಕತ್ತಿ ಬೀಳಬಾರದೆಂದು, ಬೆನ್ನ ಹಿಂದೆ ಉಡಿದಾರಕ್ಕೆ ಅದನ್ನು ಸಿಕ್ಕಿಸಿಕೊಂಡು, ಕಳ್ಳನಂತೆ ಗುಡಿಸಲನ್ನು ಸೇರಿದ. ಸಂಜೆಯಾಗುವ ತನಕ ಕತ್ತಲು ಕೋಣೆಯಲ್ಲಿ ಕುಳಿತು, ಮೆಲು ಧ್ವನಿಯಲ್ಲೇ ಮಿಗದ ಮರಿಯನ್ನು ಮಾತನಾಡಿಸಿದರು. ಅದರ ಬೆನ್ನು ಸವರಿದರು, ಬಾಯಿಗೆ ಹುಲ್ಲು ತುರುಕಿದರು.

ಸಂಜೆಯಾಗುವಾಗ ಕೆಂಪಿಯೂ ಅವಳ ಅತ್ತೆಯೂ ಮನೆಯ ಕಡೆ ಬರುವುದು ಕಂಡಿತು. ದಾರಿಯಲ್ಲೇ ಕರಿಯ ಕೆಂಪಿಯನ್ನೆದುರಿಸಿ "ಕೆಂಪಕ್ಕ, ಹೀಗೆ ಹೀಗೆ ಮಾಡಿದ್ದೇವೆ" ಎಂದು ಸುದ್ದಿ ತಿಳಿಸಿ, ಮನೆಗೆ ಕರೆದು ತಂದು, ಅಡಗಿಸಿಟ್ಟ ಮರಿಯನ್ನು ತೋರಿಸಿದ. ಕೆಂಪಿಗೆ ಇದೊಂದು ಗಡಿಬಿಡಿಯ

ಪ್ರಕರಣವಾಗುತ್ತದೆ—ಎಂದು ಹೊಳೆಯಿತು. ನಸುಕು ಹರಿಯುವಾಗ ಬೂದ, ಕೆಂಚರಿಬ್ಬರೂ ಮನೆಯನ್ನು ಸೇರಿದರು. ಅವರಿಗೂ ಸಂಗತಿ ತಿಳಿಯಿತು. ಮೊಮ್ಮಗ ಮಾಡಿದ ಕೆಲಸ ಕೆಂಚಗೆ ಅಸಮಾಧಾನ ಹುಟ್ಟಿಸಿತು. "ಅದು ಯಾರದ್ದೆಂದು ಕೇಳಿ ಅವರಿಗೇನೇ ಕೊಡಬೇಕು" ಎಂದ ಆತ. ಆ ಆಜ್ಞೆ ಕೇಳಿ ಕರಿಯನ ಕಣ್ಣುಗಳಿಂದ ಕಂಬನಿ ಸೂಸಿತು. ನಾಲ್ಕು ಗಳಿಗೆಯ ಮಿಗ ಮತ್ತವನ ಸ್ನೇಹ ಕಡಿಯುವ ಸ್ನೇಹವಾಗುತ್ತದೆಂದು ಅನಿಸತೊಡಗಿತು. ಕೆಂಚಜ್ಜನಿಗೆ ಯೋಚನೆ—ತಾನಾಗಿ ಈ ಸಂಗತಿಯನ್ನು ಕೇರಿಯವರಿಗೆ ಹೇಳಬೇಡವೇ ಎಂದು. ಇಲ್ಲವಾದರೆ ತನ್ನ ಪ್ರಾಮಾಣಿಕತೆಗೆ ಏನು ಬೆಲೆ—ಎಂದು ತೋರಿತು. ಆತ ಗುಡಿಸಲು ಬಿಟ್ಟು ಹೊರಟ. 'ಬೇಡ ಬೇಡ' ಎಂದು ಮೊಮ್ಮಗನ ಅಳು ಅವನನ್ನು ಮಾಡಿದ ನಿರ್ಧಾರದಿಂದ ಕದಲಿಸಲಿಲ್ಲ. ಬೂದಗೆ ಮಾತ್ರ ಅಳುವ ಹುಡುಗನಲ್ಲಿ ಮರುಕ ಹುಟ್ಟಿತು. ಮಗುವಿನ ಮನಸ್ಸನ್ನು ನೋಯಿಸಬಾರದೆಂದು 'ಯಾರೇ ಆ ಉರುಳನ್ನು ಒಡ್ಡಿದವರಿರಲಿ. ಅವರನ್ನು ಕೇಳಬೇಡಿ, ಸಮಾಧಾನ ಪಡಿಸುತ್ತೇನೆಂದು' ಬೂದನೂ ಹೊರಟ.

ಕೇರಿಯ ಒಬ್ಬೊಬ್ಬರ ಮುಂದೆಯೂ ಕೆಂಚ ಬೇಸರದಿಂದ "ಹೌದಣ್ಣ, ನಮ್ಮ ಕರಿಯ ಒಂದು ತಪ್ಪು ಕೆಲಸ ಮಾಡಿದ್ದಾನೆ. ಅದು ಯಾರು ಉರುಳಿಟ್ಟವರು! ಆ ಉರುಳಿಗೆ ಮಿಗವೋ ಏನೋ ಸಿಕ್ಕಿಬಿದ್ದಿತ್ತಂತೆ. ಮಿಗವೋ, ಬರ್ಕನೋ, ಕೆಮ್ಮದ ಮರಿಯೋ ನಾನಂತು ಕತ್ತಲಲ್ಲಿ ಅದನ್ನು ಕಾಣಲಿಲ್ಲ. ಏನೂ ಇರಲಿ. ಅದು ಉರುಳಿಟ್ಟವಗದ್ದು. ನನ್ನ ಮೊಮ್ಮಗ ಅದನ್ನು ತರಬಾರದಿತ್ತು" ಎಂದು ಹೇಳತೊಡಗಿದ. 'ತಾನಲ್ಲ, ತಾನಲ್ಲ' ಎಂಬ ಪ್ರತ್ಯುತ್ತರಗಳೇ ದೊರೆತುವು. ಹಾಗೆಯೇ ಕತ್ತಲು ಹಬ್ಬಿತು ಕೇರಿಯಲ್ಲಿ.

ಸಂಜೆಯ ಕೆಲಸ ಬಿಟ್ಟು ಏಲಕ್ಕಿ ತೋಟದಿಂದ ತಾನು ಉರುಳಿಟ್ಟ ಸ್ಥಳಕ್ಕೆ ಹೋಗಿ ನೋಡಿದವನು ತುಕ್ರ. ನಿಜಕ್ಕೂ ಆ ಮರಿ ಸಿಕ್ಕಿದ್ದು ಅವನ ಉರುಳಿಗೆ. ಆ ಸ್ಥಳವನ್ನು ಕಂಡಾಗ ಅವನಿಗಾದ ಆಶ್ಚರ್ಯ, ಸಿಟ್ಟು ಅಷ್ಟಿಷ್ಟಲ್ಲ. ಗಿಡವನ್ನೇ ಕಡಿದು, ಉರುಳಿಸಿ, ಬೇಟೆಯನ್ನು ಬಿಡಿಸಿಕೊಳ್ಳ ಬೇಕಾದರೆ ಬಲಿಷ್ಠವಾದ ಮಿಗವೋ, ಹಂದಿಯೋ ಬಿದ್ದಿರಬೇಕೆಂದು ಆತ

ತರ್ಕಿಸಿದನು. ತಮ್ಮ ಕೇರಿಯವರಲ್ಲಿ ಒಬ್ಬನಿರಿಸಿದ ಉರುಳಿಂದ ಇನ್ನೊಬ್ಬ ಬೇಟೆ ಕದ್ದು ಅಪಹರಿಸುವ ಧೂರ್ತತನ ಬಂದರೆ ಮುಂದೇನಾಗಲಾರದು ಎಂಬ ಕೋಪದಿಂದ ಅವನ ಮನ ಉದ್ವೇಗಗೊಂಡಿತು. ಅಲ್ಲಿಂದಲೇ ಶಾಪ ಕೊಡುತ್ತ ಮನೆಗೆ ಹೊರಟ. "ನನ್ನ ಬೇಟೆ ಕದ್ದು ತಿಂದವರಿಗೆ ಕಲ್ಕುಡನ ಆಣೆಯಿದೆ. ಅವರು ರಾತ್ರಿ ಬೆಳಗಾಗುವುದರೊಳಗೆ ನೆತ್ತರು ಕಕ್ಕಿ ಸಾಯುತ್ತಾರೆ" ಎಂದು ಹುಯಿಲಿಟ್ಟು ಮನೆಗೆ ಮರಳಿದ. ರಾತ್ರಿಯೆಲ್ಲ ಅಸಮಾಧಾನದಿಂದ ಗೊಣಗುತ್ತ ಮಲಗಿದ. ಎಲ್ಲರಿಗೂ ತಿಳಿದ ಸುದ್ದಿ, ತುಕ್ರನ ಪಾಲಿಗೆ ಆ ರಾತ್ರಿ ದೊರೆಯದೆ ಹೋಯಿತು. ಆದರೆ ಮರುದಿನ ಕೇರಿಯ ಜನಗಳ ಬಾಯಿಂದ, ಅವನ ಮಕ್ಕಳ ಕಿವಿಗೆ ಅದು ಬಿದ್ದು ಅವನಿಗೂ ಮುಟ್ಟಿತು.

ಅದನ್ನು ಕೇಳಿದ ತುಕ್ರ ಒಡನೆಯೇ ರೌದ್ರಾವತಾರ ತಾಳಿದ. "ಏನು, ಬೂದ ಮಾಡಿದನೇ ಈ ಕೆಲಸ! ಆ ಕೆಂಪಿ ಅವನಿಂದ ಏನೂ ಮಾಡಿಸಿಯಾಳು" ಎಂದ.

"ಬೂದನಲ್ಲಪ್ಪ. ಕರಿಯ, ಕಾಳ ಸೇರಿ ಅದನ್ನು ತಂದರಂತೆ. ಕೆಂಚಜ್ಜ ನಿನ್ನೆ ರಾತ್ರಿಯೇ ಆಚೀಚೆ ವಿಚಾರಿಸುತ್ತಿದ್ದರಂತೆ. ಯಾರದ್ದೆಂದು ತಿಳಿದರೆ ಅವರಿಗೇ ಕೊಡಬೇಕು—ಎಂದು ಕರಿಯನಿಗೆ ತಾಕೀತು ಮಾಡಿದ್ದರಂತೆ, ನೀನು ಹೋಗಿ ಕೇಳು" ಎಂದು ನುಡಿದರು ಮಕ್ಕಳು.

"ಏನು, ಉರುಳಿಟ್ಟ ನಾನೇ ನನ್ನದನ್ನು ನನಗೆ ಕೊಡಿ ಎಂದು ಕದ್ದ ಈ ಕಳ್ಳರ ಮನೆ ಬಾಗಿಲಿಗೆ ಹೋಗಿ ಬೇಡಬೇಕೇ" ಎಂದು ತುಕ್ರ ಘರ್ಜಿಸಿದ. ಮರುಗಳಿಗೆಗೆ "ಮಕ್ಕಳು ತರುತ್ತಾರಲ್ಲ, ಇನ್ನೇನಲ್ಲವೇ. ಬೂದನ ಕೆಲಸ ಅದು. ಈಗ ಮಕ್ಕಳ ಹೆಳೆ ಹೇಳುತ್ತಾನೆ. ಅವನ ಸೊಕ್ಕಡಗಿಸದೆ ಹೋದರೆ ನಾನೇಕೆ?" ಎಂದು ಹೊರಬಿದ್ದ. ಬೂದನ ಮನೆಗೆ ನೇರಾಗಿ ಹೋಗುವ ಧೈರ್ಯವಿಲ್ಲ. ಹೋದರೆ ಕೆಂಪಿಯಿಂದಲೂ ನಾಲ್ಕು ಮಾತು ಕೇಳಬೇಕಾದೀತು—ಎಂಬ ಅಂಜಿಕೆ ಅವನಿಗೆ. ಆದರೆ ಅಷ್ಟರೊಳಗೆ ಕೆಂಚಗೆ ಸುದ್ದಿ ಸಿಕ್ಕಿ, ಆತ ಮೊಮ್ಮಗನಿಂದ ಮರಿಯನ್ನು ಹೊರಿಸಿಕೊಂಡು ಅಲ್ಲಿಗೇನೇ ಬಂದ.

ಬಂದು ನುಡಿದ, "ತುಕ್ರಣ್ಣ, ನನ್ನ ಮೊಮ್ಮಗ ಒಂದು ಮಾಡಬಾರದ

ಕೆಲಸ ಮಾಡಿದ. ಇನ್ನು ಅಂಥ ತಪ್ಪು ಅವನಿಂದಾಗದು. ಒಂದು ಸಲ ಅವನನ್ನು ಕ್ಷಮಿಸು" ಎಂದ. ಅಷ್ಟು ಮಾತ್ರವಲ್ಲ, ಹುಡುಗರನ್ನು ಸಂಬೋಧಿಸಿ, "ಕರಿಯು, ಕಾಳ ತಪ್ಪು ಮಾಡಿದ್ದೀರಿ. ತುಕ್ರಣ್ಣನ ಕಾಲಿಗೆ ಬಿದ್ದು ತಪ್ಪಾಯಿತು ಅನ್ನಬೇಕು" ಎಂದ. ಆಗ ಕರಿಯನ ಎದೆಯೇ ತಿವಿದಂತಾಯಿತು. ಕಂಬನಿ ಉಕ್ಕಿತು, ತುಟಿ ಗದ್ಗರಿಸಿತು. ಇಬ್ಬರೂ ಅಜ್ಜನ ಆಜ್ಞೆಯಂತೆ ಮರಿಯನ್ನೊಪ್ಪಿಸಿ, ಮೂಕರಾಗಿ ಕಾಲು ಹಿಡಿದು, ತಲೆ ತಗ್ಗಿಸಿಕೊಂಡು ಮನೆಗೆ ಮರಳಿದರು. ಕೆಂಚ ಮಾತ್ರ ಮೊಮ್ಮಗನ ತಪ್ಪು ತನ್ನ ತಪ್ಪೆಂಬಷ್ಟು ನೋವಿನಿಂದ "ಈ ಮಕ್ಕಳು ಮಾಡುವ ಒಂದೊಂದು ಕೆಲಸ ನನ್ನ ಪ್ರಾಣಕ್ಕೆ ಬರುತ್ತದೆ" ಎಂದು ಪಶ್ಚಾತ್ತಾಪ ಪಡುತ್ತ ತುಕ್ರನ ಮನೆಯ ಜಗುಲಿಗೆ ಹೋಗಿ ಕುಳಿತ. ತುಕ್ರಣ್ಣ "ಇದೇನು ದೊಡ್ಡ ತಪ್ಪೆನ್ನುತ್ತೀ ಅಜ್ಜ, ಹೋಗಲಿ. ಅದನ್ನು ಅವನಿಗೆ ಕೊಡು. ಮಕ್ಕಳಲ್ಲವೇ!" ಎಂದು ಸಮಾಧಾನದ ನುಡಿಯನ್ನಾಡಿದರೂ ಕೆಂಚ ಎಂದೂ ಆ ಮರಿಯನ್ನು ಮನೆಗೊಯ್ಯಲು ಒಪ್ಪಲಿಲ್ಲ. ಬದಲು, ಆ ಮರಿ ನಾಲ್ಕು ದಿನ ಕಾಲ ತುಕ್ರನ ಮಕ್ಕಳ ಆಟದ ಒಡನೆಯಾಯಿತು.

ಅಂತು ಕವಿದೊಂದು ಆಪತ್ತು ಅಷ್ಟು ಸುಲಭದಲ್ಲಿ ನಿವಾರಣೆಗೊಂಡುದಕ್ಕೆ ಕೆಂಚ ತೃಪ್ತಿಪಟ್ಟು ಮನೆಗೆ ಮರಳಿದ. ಆದರೆ ಒಂದು ವಾರವೆಲ್ಲ ಕಾಳ, ಕರಿಯರು ಪಟ್ಟ ವ್ಯಥೆ, ದುಃಖ ಸ್ವಲ್ಪವಲ್ಲ. ಮರಿಯೊಂದನ್ನೇ ನೆನೆದು ಆಗಾಗ ಅಳುವ ಮಕ್ಕಳಿಗೆ ಕೆಂಪಿ ಹೇಳಿದ ಸಮಾಧಾನಗಳು ವ್ಯರ್ಥವಾದುವು. ಬೂದ ಹೇಳಿದುವೂ ವ್ಯರ್ಥವೇ. ಸಾಲದುದಕ್ಕೆ ವಾರ ಮುಗಿಯುವುದರೊಳಗೆ ತುಕ್ರನ ಮನೆಯವರು ಅದನ್ನು ಕೊಂದು ತಿಂದರೆಂಬ ಸುದ್ದಿ ಕಿವಿಗೆ ಮುಟ್ಟಿತು.

"ಅಷ್ಟು ಚೆಂದದ ಮರಿ ಕೊಂದು ತಿಂದವರ ಹೊಟ್ಟೆ ಬಿಡೆದೇ ಹೋಗಲಿ" ಎಂದ ಕಾಳ. ಕರಿಯನಿಗೆ ಅಷ್ಟು ಶಪಿಸುವುದಕ್ಕೂ ಬಾಯಿ ಬಾರದು. ಮರಿಯನ್ನು ಕೊಂದು ತಿಂದು ಮುಗಿಸಿದ ತುಕ್ರನ ಮೇಲೆ ಒಂದು ತೆರನಾದ ದ್ವೇಷವೇ ಬೆಳೆಯಿತು—ಕರಿಯನ ಮನಸ್ಸಿನಲ್ಲಿ. ಆತ ತಮ್ಮಂತೆ ಮನುಷ್ಯನಲ್ಲ. ಪಿಶಾಚಿಯ ರೂಪದ ಒಂದು ವ್ಯಕ್ತಿ ಎಂದೇ ತಿಳಿದ.

ಕರಿಯನ ಮನದಲ್ಲಿ ಈ ಒಂದು ಘಟನೆ ವಿಶೇಷವಾದ ಬೇಗುದಿಯನ್ನುಂಟುಮಾಡಿತು. ಕೆಂಚ ಅದನ್ನೆಲ್ಲ ತಿಳಿಯಲಾರ. ಎಳೆಮನಸ್ಸಿನ ಆಸೆ, ರೀತಿಗಳು ಅವನಿಗೆ ತಿಳಿಯವು. ಕೇರಿಯಲ್ಲಿ ನ್ಯಾಯವನ್ನೂ ಮರ್ಯಾದೆಯನ್ನೂ ಕಾದುಕೊಳ್ಳಬೇಕಾದವನು ಅವನು. ತನ್ನ ಮೊಮ್ಮಗ ಮಾಡಿದ ಅಪರಾಧವನ್ನು, ಮೋಹಕ್ಕೆ ಕಟ್ಟುಬಿದ್ದು ಆತ ಬಚ್ಚಿಟ್ಟದ್ದೇ ಆದರೆ, ಬೇಟೆಯೇ ಅರ್ಥಜೀವನವಾಗಿರುವ ಅವರ ಬಳಗದಲ್ಲಿ, ಅದು ವಿಷಮಕ್ಕೆ ಏರೀತು. ಆದುದರಿಂದಲೇ ತುಕ್ರ ಉದಾರಿಯಾಗಿ 'ಹೋಗಲಿ, ಮರಿ ನಿನ್ನ ಮಗುವಿಗಿರಲಿ' ಎಂದು ಅಂದರೂ ಅದನ್ನು ಸ್ವೀಕರಿಸದೇ ಬಂದ.

ಅವನಿಗೆ ಹೊಳೆಯದ ಸಂಗತಿಯೆಂದರೆ—ಸದಾ ಬೇಟೆಯಾಡುವ ಜನ, ಬೇಟೆಯ ವಸ್ತುವಿನ ಮೇಲೆಯೇ ಮಮತೆ ಬೆಳೆಯಿಸಲು ಬಂದೀತೆಂಬುದು. ತಿಂದು ನಾಲಿಗೆಯ ಚಪಲ ತೀರಿಸಿಕೊಳ್ಳುವ ಲವಲವಿಕೆ ಬೆಳೆಯುವ ಮೊದಲೇ ಅಂಥ ಗುಣ ಕರಿಯನಲ್ಲಿ ಬೆಳೆಯಿತು. ಆದರೆ ಚೆಲುವಿನ ಹಕ್ಕಿ, ಮಿಗ ಕಂಡರೆ ಅದನ್ನು ಕಂಡು ಸಂತೋಷಪಡಬೇಕೆಂಬ ಆಸೆ ಮೂಡುತಿತ್ತು. ಈ ಘಟನೆಯಿಂದ ಅವನಲ್ಲೊಂದು ಹಟವೂ ಆಸೆಯೂ ಮೂಡಿತು.—ತಾನು ಬೇಗ ದೊಡ್ಡವನಾಗಬೇಕು. ದೊಡ್ಡವರಂತೆ ಉರುಳು, ಬೋನು ರಚಿಸಲು ಕಲಿಯಬೇಕು. ಮಿಗಗಳನ್ನು ಸಹ ಹಿಡಿಯುವಷ್ಟು ಸಮರ್ಥನಾಗಬೇಕು. ಎಷ್ಟು ಬೇಗ ಆದರೆ ಅಷ್ಟು ಬೇಗ, ಒಂದು ಹರಿಣವನ್ನು ಹಿಡಿಯಲೇಬೇಕು, ತಂದು ಸಾಕಲೇಬೇಕು—ಎಂಬ ಆಸೆ ಒಡಮೂಡಿತು.

ಅಂದಿನಿಂದ ಅವನು ಕೆಂಪಿಯೊಡನಾಗಲೀ ಕಾಳನೊಡನಾಗಲೀ ಆಡುತ್ತಿದ್ದ ಮಾತುಗಳಲ್ಲಿ ಮಿಗ ಹಿಡಿಯುವ ಭ್ರಮೆಯೇ ಹೆಚ್ಚಾಗಿ ಕಾಣುತಿತ್ತು. ಮಗುವಿನ ಮನಸ್ಸಲ್ಲವೇ ಅದು. 'ಅಂಥ ಚೆಂದದ ಮರಿಯನ್ನು ತಿಂದನಲ್ಲ' ಎಂದು ಸ್ಮರಿಸುತ್ತಲೂ ಇದ್ದ. ಕೆಂಪಿಯ ಕಿವಿಗೆ ಅಂಥ ಮಾತು ಬಿತ್ತೆಂದರೆ ತನ್ನ ಪೂರ್ವೇತಿಹಾಸದ ನೆನಪುಗಳೂ ಉಕ್ಕುವುದುಂಟು. ತನ್ನ ಚೆಂದಕ್ಕೊಲಿದ ಆತನೇ ಅದೊಂದು ದಿನ ಬಡಿಗೆ ಹಿಡಿದು ತಲೆ ಒಡೆಯಲು ಬರಲಿಲ್ಲವೇ?—ಎಂದು ತೋರುತ್ತದೆ. "ಅವನು ಮಿಗವನ್ನೂ ತಿಂದಾನು, ಮನೆಗೆ ಬಂದ ಹೆಂಡತಿಯನ್ನೂ ತಿಂದಾನು" ಎಂದು ಕರಿಯನ ಮಾತಿಗೆ ತನ್ನ ಒಗ್ಗರಣೆ ಸೇರಿಸುತ್ತಿದ್ದಳು.

ಮನೆಯಲ್ಲಿ ತುಕ್ರನ ಮಾತು ಬಂದಾಗ ಬೂದ, ಕೆಂಪಿಯರಿಬ್ಬರೂ ಅನಾದರದ, ದ್ವೇಷದ ನುಡಿಗಳನ್ನೇ ಆಡುತಿದ್ದುದರಿಂದ ಸ್ವಾಭಾವಿಕವಾಗಿ ಕಿರಿಯ ಕರಿಯನ ಮನಸ್ಸೂ ದ್ವೇಷಪೂರಿತವಾಯಿತು. ತುಕ್ರನ ವಿಷಯದಲ್ಲಿದ್ದ ಸಿಟ್ಟು ಇದರಿಂದ ಇನ್ನಷ್ಟು ಬೆಳೆಯಿತು. "ನಾನು ದೊಡ್ಡವನಾದರೆ ಏನು ಮಾಡುತ್ತೇನೆ ಗೊತ್ತೇ, ತುಕ್ರಣ್ಣನನ್ನು ಉರುಳು ಹಾಕಿ ಹಿಡಿದೇ ಬಿಡುತ್ತೇನೆ; ಕೊಂದೇ ಬಿಡುತ್ತೇನೆ; ತಿಂದೇ ಬಿಡುತ್ತೇನೆ" ಎಂದು ಕರಿಯ ಅಪಾಲಾಪ ಮಾಡುವುದೂ ಉಂಟು.

ಮಿಗ ಕೈತಪ್ಪಿದಂದಿನಿಂದ ಬೂದನನ್ನೂ ಕರಿಯ ನಿತ್ಯವೂ ಕಾಡುತ್ತಾನೆ. "ನನಗೆ ಮಿಗ ಹಿಡಿಯಲು ಹೇಳಿಕೊಡು. ಮಿಗವೇ ಬೇಕು. ಹಂದಿಗಿಂದಿ ಅಲ್ಲ" ಅನ್ನುವ. ಬೂದ ಆ ಎರಡು ಮಕ್ಕಳನ್ನೂ ಕರೆದುಕೊಂಡು ಕಾಡಿಗೆ ಹೋಗುತ್ತಾನೆ. ಅವರ ಸಮಾಧಾನಕ್ಕೆ ಮಿಗ ಸಂಚರಿಸುವ ಹಾದಿ ತೋರಿಸುತ್ತಾನೆ, ಅದರ ಹೆಜ್ಜೆಯ ಗುರುತು ತೋರಿಸುತ್ತಾನೆ; ಎಂಥಲ್ಲಿ ಉರುಳಿಡಬೇಕೆಂದು ಹೇಳುತ್ತಾನೆ. ಉರುಳಿಟ್ಟು ತೋರಿಸುತ್ತಾನೆ. ಗಟ್ಟಿಯಾದ ಉರುಳು ಆಗುವುದಕ್ಕೆ ಎಂಥ ನಾರು ಬಳಸಬೇಕು, ಬಿದ್ದ ಬೇಟೆ ಉರುಳಿಗೆ ತೂಗಾಡುವುದಕ್ಕೆ ಎಂಥ ಗಿಡಕ್ಕೆ ಕಟ್ಟಬೇಕು, ಎಂದೆಲ್ಲ ಬೋಧಿಸುತ್ತಾನೆ. "ಅದನ್ನೆಲ್ಲ ಸರಿಯಾಗಿ ತಿಳಿದುಕೊಳ್ಳದೆ ಉರುಳಿಟ್ಟರೆ ಮಿಗ, ಕೆಮ್ಮ ಬೀಳುವ ಬದಲು ಹಂದಿ ಬಿದ್ದೀತು, ಉರುಳು ಸಣ್ಣದಾದರೆ ಅದರ ಕತ್ತು ಸಿಕ್ಕೀತು" ಎಂದೂ ಹೇಳುವ.

ಅನಂತರ ಬಲು ದಿನಗಳವರೆಗೆ ಮಿಗದ ಜಾಡು ಹುಡುಕಿ ಅಲೆದಾಡುತ್ತಾರೆ ಹುಡುಗರಿಬ್ಬರು. 'ಎಲ್ಲೆಲ್ಲಿ ಸುತ್ತಾಡಬೇಡಿ. ಕಾಡಿನಲ್ಲಿ ದಾರಿ ತಪ್ಪಿದರೆ ಹಿಂದೆ ಬರಲಾರಿರಿ' ಎಂದು ಬೆದರಿಸಿದರೂ ಅವರ ಅಲೆದಾಟಕ್ಕೆ ಕೊನೆ ಮೊದಲಿಲ್ಲ. ಬೆಟ್ಟದ ಹುಲ್ಲುಗಾವಲನ್ನು ಸುತ್ತುತ್ತಾರೆ. ದೂರದಲ್ಲಿ ಮೇಯುವ ಜಿಂಕೆಗಳ ಹಿಂಡನ್ನು ಕಂಡು, ವೈ ಬಗ್ಗಿಸಿಕೊಂಡು ಹೋಗುತ್ತಾರೆ. ಅಷ್ಟಕ್ಕೆ ಅವುಗಳು ನಾಗಾಲೋಟ ಹೂಡಿ ಕಣ್ಮರೆಯಾಗುತ್ತವೆ. ಇಷ್ಟರಿಂದ ಕರಿಯನಿಗೆ ಮಿಗದ ಬೇಟೆ ಸಾಧ್ಯವಾಗದೆ ಹೋದರೂ ಕಾಡಿನಲ್ಲಿ ಎಲ್ಲಿ ಕಡವೆ ಸುಳಿಯುತ್ತದೆ, ಮಿಗ ಬರುತ್ತದೆ—ಎಂಬ ಲವಲವಿಕೆ, ಜ್ಞಾನ ಬೆಳೆಯಿತು. ಅದರಂತೆ—ಕೆಂಚಳಿಲು, ಮಂಗ, ಮುಸುವ, ಸಿಂಗಲೀಕ ಇಂಥ ಪ್ರಾಣಿಗಳ ಅಲೆ

ದಾಟ್ಟದ ಹೊತ್ತುಗೊತ್ತು, ಹಾರಾಟದ ಬಗೆ ತಿಳಿಯತೊಡಗಿ ತುಂಬ ಉತ್ಸಾಹ ಸಂತೋಷ ಉಂಟಾಗುತ್ತಿತ್ತು.

ವಾರ, ತಿಂಗಳುಗಳು ಸರಿದರೂ ಕರಿಯನ ಮನದ ಮಿಗದ ಹಂಬಲ ಅಳಿಯದ್ದನ್ನು ಕಂಡು, ಬೂದನೊಮ್ಮೆ ಕಾಡಿನಲ್ಲಿ ಮೇಯುತ್ತಿದ್ದ ಕೆಮ್ಮ ಒಂದನ್ನೋಡಿಸಿ, ಅದರ ಮರಿಯನ್ನಟ್ಟಿ, ದಣಿಸಿ, ಹಾಗೂ ಹೀಗೂ ಹಿಡಿದು ಮನೆಗೆ ಹೊತ್ತು ತಂದ. "ಇದೂ ಮಿಗದಷ್ಟೇ ಚೆಂದ" ಎಂದು ಕರಿಯ ಹಿಗ್ಗಿನಿಂದ ಕುಣಿದಾಡಿದ. ದಿನವೆಲ್ಲ ಅದರ ಮುದ್ದಾಟ ಅವನಿಗೆ. ಅದನ್ನು ಅರೈಸುವುದರ ಜತೆಗೆ ಕಾಟುವನ್ನು ಗದರಿಸಿ ಹದ್ದಿನಲ್ಲಿಟ್ಟುಕೊಳ್ಳಬೇಕು. "ನೋಡು, ಅದರ ಮೈ ಮುಟ್ಟಿದರೆ ಸೀಳಿ ಹಾಕುತ್ತೇನೆ ನಿನ್ನನ್ನು" ಎನ್ನುತ್ತಾನೆ.

ಇತ್ತ ತುಕ್ರನ ಸಂಸಾರ ಬೇರೊಂದು ರೀತಿಯಲ್ಲಿ ಸಾಗಿತು. ನವರಾತ್ರಿ ಕಳೆಯುತ್ತಲೇ ಧನಿಯರು ತೋಟದ ಬಂಗಲೆಗೆ ಬಂದು ಬಿಡಾರವೆಸಗಿದರು. ಬಂದ ದಿನವೇ ತುಕ್ರನನ್ನು ಕಂಡು "ಏನಾಯ್ತು ತುಕ್ರ, ಹೆಂಡತಿಯನ್ನು ಕರೆಸಿಕೊಂಡೆಯಾ?" ಎಂದು ಪ್ರಶ್ನಿಸಿದರು. ಆತ "ಅವಳು ಸಾಯಲಿ. ನಾಚಿಕೆ ಇಲ್ಲದ ಅವಳನ್ನು ಯಾರು ಬಾಳಿಸುತ್ತಾರೆಂದು ಬೇಡವೇ" ಎಂದ.
"ಅವಳಾಗಿ ಬರುವುದಿಲ್ಲ ಎಂದಳೇ? ನೀನು ಬೇಡ ಎಂದು ಬಿಟ್ಟೆಯೋ?"
"ನಾನ್ನೇ ಬೇಡವೆಂದೆ. ಅವಳಿಗಿಷ್ಟಿಷ್ಟಾದರೂ ನಾಚಿಕೆ ಉಂಟೆಂದು ತಿಳಿಯುತ್ತೀರಾ? ನಮ್ಮ ಕೇರಿಗೇ ಬಂದಿದ್ದಾಳೆ. ಬೂದನನ್ನು ಮದುವೆಯಾಗಿದ್ದಾಳೆ. ಅವನೊಬ್ಬ ಗಂಡ. ಇವಳೊಬ್ಬಳು ಹೆಂಡತಿ" ಎಂದು ನಂಜಿನ ಮಾತನ್ನಾಡಿದ.

"ಕೇರಿಯಲ್ಲಿ?" ಎಂದರು ಧನಿಗಳು.

ಮುಂದಿನ ದಿನಗಳು ಬಿಡುವಿಲ್ಲದವು. ಏಲಕ್ಕಿ ತೋಟಕ್ಕೆ ಹೋಗಿ ಏಲಕ್ಕಿ ಹೆಕ್ಕಿ ತರುವುದು, ಗೂಡಿನಲ್ಲಿ ಕಾದ ನೆಲದ ಮೇಲೆ ಹರವುವುದು, ಒಣಗಿಸುವುದು ಇಂಥ ಕೆಲಸಗಳು ಕೇರಿಯವರಿಗೆ. ಇಂಥ ಕೆಲಸಗಳಲ್ಲಿ ಯಾರ ಗಣ್ಯವನ್ನೂ ತಂದುಕೊಳ್ಳದೆ, ಅಲೆದಾಡುತ್ತಿದ್ದ ಕೆಂಪಿ ತಿರುಮಲ ಭಟ್ಟರ ದೃಷ್ಟಿಗೆ ಬಿದ್ದುದುಂಟು. ಆದರೂ ಯಾಕೋ ಏನೋ, ಅವಳ ಗಮನ ಮಾತ್ರ ಅವರ ಕಡೆಗೆ ಹರಿದಿರಲಿಲ್ಲ. ರಾಯರ ದೃಷ್ಟಿ ಅವಳ ಕಡೆಗೆ ಹರಿದು

ಇಲ್ಲದ ಆಸೆಯನ್ನೂ ತಾಳಿತ್ತು ಆದರೆ ಮನದ ಇಚ್ಛೆಯನ್ನು ನೆರವೇರಿಸಿ ಕೊಳ್ಳುವ ಯೋಚನೆಗೆ ದಾರಿಗಾಣದಾಗಿದ್ದರು. ಅವರು ಇಂಥ ಆಸೆಗಳಿಗೆ ಹಿಂದೆ ತುಕ್ರ ನೆರವಾಗಿದ್ದನೆಂಬುದೂ ನಿಜವೆ. ಕೆಂಪಿಯ ವಿಷಯ ಬಂದಾಗ ಅವನ ರಾಯಭಾರ ಕಾರ್ಯಗದ್ದಲ್ಲ, ಎಂಬುದರಿಂದ ಧನಿಯ ಬಯಕೆ, ಗೊಡ್ಡು ಬಯಕೆಯಾಗಿ ಉಳಿಯಿತು.

ಇತ್ತ ತುಕ್ರನಿಗೆ ತನ್ನ ಹಟ ಸಾಧಿಸದಿದ್ದ ಬೇಸರ. ಧನಿ ಮಲೆಗೆ ಮರಳುವುದರೊಳಗೆ ಇನ್ನೊಂದು ಮದುವೆಯಾಗಿ ಕೆಂಪಿಯ ಮೂಗು ಕೊಯ್ಯುತ್ತೇನೆ—ಎಂದು ಎಣಿಸಿಕೊಂಡಿದ್ದ. ಆಗದೆ ಹೋದರೆ ತನ್ನ ಮೂಗು ಕೊಯ್ದಂತೆ ಎಂಬ ಛಲ. ಈ ಹಾಳು ಏಲಕ್ಕಿಯ ಕೆಲಸವಲ್ಲದಿದ್ದರೆ ಕುಡಿ ಯರ ಕುಲ ಎಲ್ಲೆಲ್ಲಿ ಹಬ್ಬಿಕೊಂಡಿದೆಯೋ ಅಲ್ಲಿಗೆಲ್ಲ ಹೋಗಿ, ಮಡದಿಯನ್ನು ಸಂಪಾದಿಸುವ ಆಸೆ. 'ಕಿರಿ ಮಲೆಗೆ ನಾಳಿನ ಗುರಿಕಾರ ತಾನು'—ಎಂದು ಹೇಳಿಯಾದರೂ ಪ್ರತಿಷ್ಠೆ ಬೆಳೆಯಿಸಿಕೊಂಡು, ಹೆಣ್ಣು ತರುವ ಇಚ್ಛೆ ಅವ ನದ್ದು. ಯೋಗ್ಯ ಕನ್ಯೆ ದೊರೆಯುವಲ್ಲಿ ಬಳುವಳಿ ಕೊಟ್ಟಾದರೂ, ಬೆಲೆ ಕೊಟ್ಟಾದರೂ ಹೆಣ್ಣು ತರಬೇಕೆಂಬ ಹಟ. ಇಲ್ಲದೆಹೋದರೆ ಬೂದನ ಎದುರು ತನ್ನ ಬೆಲೆ ತಗ್ಗಿದಂತೆ. ಧನಿಯರ ಕಣ್ಣಿನಲ್ಲೂ ತಾನು ಸಣ್ಣವನೆನಿಸುತ್ತೇನೆ— ಎಂಬ ಯೋಚನೆ.

ಮಲೆಗೆ ಬಂದ ಭಟ್ಟರು ಎರಡು ತಿಂಗಳಕಾಲ ಇದ್ದು ಏಲಕ್ಕಿ ಹೊರಿಸಿ ಕೊಂಡು ಹೋದರು. ಮಲೆಯ ಕೆಲಸ ಮುಗಿದ ಹಾಗೆಯೇ. ಇನ್ನು ತುಕ್ರ ನಿಗೂ ತೆರವು. ಎರಡು ಮೂರು ತಿಂಗಳಕಾಲ ಧನಿಗಳು ಮಲೆಗೆ ಬರುವ ಅವಶ್ಯಕತೆ ಇಲ್ಲ. ಬಂದರೆ ಮೂಲೆಗುಂಪಿನ ಜಾತ್ರೆಯ ವೇಳೆಗೆ ಬರಬೇಕು. ಆ ಅವಧಿಯೊಳಗೆ ಹೊಸ ಮದುಮಗನಾಗಿ ಬರಬೇಕು—ಎಂಬ ಹಟ ಅವನ ತಲೆಯನ್ನೆಲ್ಲ ಆವರಿಸಿತು. ಇದರಿಂದ ಮಲೆ ಬಿಟ್ಟು ಅಲೆದಾಡತೊಡಗಿದ. ಈ ಹುಚ್ಚು ತನ್ನ ಗಂಡನಿಗೆ ಹಿಡಿದಿದೆ—ಎಂಬುದು ಮೊದಲ ಹೆಂಡತಿ ಚಿನ್ನಿಗೆ ಗೊತ್ತಾಗದೆ ಹೋಗುವುದುಂಟೇ? ಆದರಿಂದ ಇದ್ದ ಸುಖಕ್ಕೂ ಹಾನಿ ಬಾರದೆ ಹೋಗಲಿಲ್ಲ. ಕೆಂಪಿ ತೊಲಗಿದ ಮೇಲೆ ಚಿನ್ನಿಯನ್ನು ಚೆನ್ನಾಗಿ ನಡೆಯಿಸಿಕೊಂಡು ತೃಪ್ತಜೀವನ ಮಾಡಬಹುದಾಗಿತ್ತು. ಹಾಗೆ ಮಾಡದೆ ಮೂರನೆಯ ಮದುವೆಯ ಯೋಚನೆ ಮಾಡಿದ. ಚಿನ್ನಿ ತಾನು ಕೇಳಿದ

ಸುದ್ದಿಗಳನ್ನೆಲ್ಲ ಕೆಂಚನ ಮುಂದೆ ಹೇಳಿಕೊಂಡಳು. "ನೀವಾದರೂ ಅವರಿಗೆ ಬುದ್ಧಿ ಹೇಳಿ. ನೆರಿಯ ಮಲೆಗೆ ಹೆಣ್ಣು ತರಲು ಹೋಗಿದ್ದಾರಂತೆ. ನಾಲ್ಕು ಮಕ್ಕಳ ತಾಯಿಯಾದ ನಾನು ಅವರಿಗೆ ಏನನ್ಯಾಯ ಮಾಡಿದ್ದೇನೆ ಎಂದು ಹೇಳಲಿ ಅವರು" ಎಂದು ಅವನ ಮುಂದೆ ಕಂಬನಿ ಸೂಸಿದಳು.

ಕೆಂಚಣ್ಣ "ನಾನೇನು ಮಾಡಲು ಬರುತ್ತದೆ. ನನ್ನ ಮಾತನ್ನು ಕೇಳುವವನೇ ಅವನು. ಪ್ರಾಯ ಸಂದ ಅವನಿಗೆ ಹೆಣ್ಣು ಕೊಡುವವರು ಯೋಚಿಸಬೇಕು. ನೆರಿಯ ಮಲೆಗೆ ನಾನು ಗುರಿಕಾರನೇ? ನನ್ನ ಮಾತು ನಡೆಯುತ್ತದೆಯೇ?" ಎಂದ.

ತುಕ್ರ ಮೂರು ನಾಲ್ಕು ಬಾರಿ ನೆರಿಯ ಮಲೆಗೆ ಹೋದ. ಅಲ್ಲಿನ ಗುರಿಕಾರನನ್ನು ಆಶ್ರಯಿಸಿದ. ಗೆಳೆಯರನ್ನು ಸಂಪಾದಿಸಿದ. ಅವರನ್ನು ಕಟ್ಟಿಕೊಂಡು ಬಂದು ತನ್ನ ಮನೆಯಲ್ಲಿ ಊಟ ಔತಣಗಳಿಂದ ಸತ್ಕರಿಸಿದ. ಬೇಟೆ, ಕುಡಿತಗಳಿಂದ ಮೆಚ್ಚಿಸಿದ. ಕೊನೆಗೂ ಹದಿನಾರು ವಯಸ್ಸಿನ ಕನ್ಯೆ ಒಬ್ಬಳನ್ನು ತನ್ನ ರಾಣಿಯನ್ನಾಗಿ ಮಾಡಿಕೊಂಡು ಬಂದೇ ಬಿಟ್ಟ.

"ಹಾಗೆ ಮಾಡದೆ ಹೋಗಿದ್ದರೆ ಕೆಂಪಿಯ ಎದುರು ನಾನು ಪ್ರಾಣ ತೆಗೆದುಕೊಳ್ಳುವುದು ಯೋಗ್ಯವಿತ್ತು. ಈಗೇನು? ಅವಳ ನಾಲ್ಮಡಿ ಚೆಲುವೆಯನ್ನು ಮನೆಗೆ ತಂದಿದ್ದೇನೆ" ಎಂಬ ಹೆಮ್ಮೆಯಿಂದ ದೊರೆಯಂತೆ ಅಲೆದಾಡತೊಡಗಿದ.

## ಅಧ್ಯಾಯ ೬

ಕೆಂಚ ವರ್ಷಕ್ಕೆ ಒಂದೆರಡು ಬಾರಿಯಾದರೂ ತನ್ನ ಮೊಮ್ಮಗನನ್ನು ಕಟ್ಟಿಕೊಂಡು, ಗುಟ್ಟಾಗಿ ಮಲೆರಾಯನ ಗುಹೆಗೆ ಹೋಗಿಬರುತ್ತಿದ್ದನು. ವರ್ಷಕ್ಕೊಮ್ಮೆ ಎರಡೂ ಮಲೆಯವರನ್ನು ಕೂಡಿಸಿ, ಲೆಕ್ಕಾಚಾರ ತಪ್ಪದಂತೆ ಕಲ್ಕುಡನ ಸೇವೆ ಸಲ್ಲಿಸುತ್ತಿದ್ದರೂ ತನ್ನ ಮೂಲದೈವವಾದ ಮಲೆರಾಯನನ್ನು ಆತ ಮರೆಯುವಂತಿಲ್ಲ. ಮೊಮ್ಮಗನೂ ಈ ಮಲೆರಾಯನನ್ನು ಮರೆಯಬಾರದು ಎಂದಾತನ ಇಷ್ಟ. ಹುಡುಗ ದೊಡ್ಡವನಾಗಿ, ತರುಣನಾಗಿ, ಕೇರಿಯ ಗುರಿಕಾರನಾಗಿ ಆದಮೇಲೆಯೂ, ಮಲೆರಾಯನ ಕೃಪೆ ಆತನಿಗೆ ಬೇಕೇಬೇಕು. ಎಷ್ಟೆಂದರೂ ಆತನೇ ತಮ್ಮ ಮೂಲದೈವ ಎಂದು ತಿಳಿದು

ಕೊಂಡಿದ್ದ; ತನ್ನ ಎಳೆತನದಲ್ಲಿ, ತಾವು ಕೇರಿಗೆ ಬಂದು ನೆಲೆಸಿದ ಮೇಲೆ, ಬಹುಕಾಲ ಆ ದೈವವನ್ನು ಅವನೂ, ಅವನ ಹಿರಿಯರೂ ಮರೆತುದುಂಟು; ನಿಜ. ಮಗ ತಿಪ್ಪ, ಎಂದು ದುರ್ದೈವಕ್ಕಾಹುತಿಯಾದನೋ, ಅಂದೇ ಅವನ ಕಣ್ಣು ತೆರೆಯಿತು. ಮುಂದೆ ಹಾಗಾಗಬಾರದೆಂಬ ಆಸೆ ಉದಯಿಸಿತು. ಅಲ್ಲಿಂದ ವರ್ಷಕ್ಕೊಮ್ಮೆಯಾದರೂ ಆತ ಗುಹೆಗೆ ಹೋಗಿಬರುತ್ತಿದ್ದ. ಅನಂತರ ಸುಬ್ರಹ್ಮಣ್ಯನ ಕೃಪೆ ತನ್ನ ಮೇಲಿದೆ ಎಂದು ಊಹಿಸಿದನಾದರೂ, ಮಲೆರಾಯನಿಗೆ ಒಂದು ದೀಪ ಹಚ್ಚಿ, ಹೂ ಇರಿಸಿ, ಕಾಯಿ ಒಡೆದು ಬರುವ ವಾಡಿಕೆ ಇರಿಸಿಕೊಂಡಿದ್ದ. ಹೋಗುವಾಗ ಜತೆಗೆ ಮೊಮ್ಮಗನನ್ನು ಪ್ರತಿ ಬಾರಿಯೂ ಕರೆದೊಯ್ಯುತ್ತಾನೆ. ಆದರೆ ಕರಿಯ ಮಾತ್ರ ಅಜ್ಜನ ಜತೆಗೆ ವರ್ಷಕ್ಕೆ ಒಂದೋ ಎರಡೋ ಬಾರಿ ಹೋಗಿದ್ದರೆ, ಒಂಟಿಯಾಗಿ ಕಾಳನನ್ನು ಕರೆದುಕೊಂಡು ತಿಂಗಳಿಗೊಮ್ಮೆಯಾದರೂ ಹೋಗುವವ. ಮಳೆಗಾಲದಲ್ಲಿ ಆ ಪ್ರದೇಶ ಜಿಗಣೆ, ಬೆತ್ತದ ಬೀಳಲು, ತುರುಚಿ ಗಿಡಗಳಿಂದ ಪ್ರವೇಶಕ್ಕೆ ಅಸಾಧ್ಯವಾಗುತ್ತಿತ್ತು. ಉಳಿದ ವೇಳೆ ಹೇಗಾದರೂ ಅಲ್ಲಿಗೆ ಹೋಗಿಬರ ಬಹುದು. ಹೋಗಿ ಅಲ್ಲಿ ಕುಳಿತು, ಆತ ತಾಸು ತಾಸು ಕಳೆಯುತ್ತಾನೆ. ದೈವದ ಮೇಲೆ ಆ ಎಳೆಯನಿಗೆ ಅಂಥ ಒಂದು ಭಕ್ತಿ ಇತ್ತು—ಎನ್ನುವುದ ಕ್ಕಿಲ್ಲ. ತಂದೆಯ ನಡತೆಯನ್ನು ಅನುಕರಿಸಪ್ಪದೊಂದಷ್ಟೆ ಗೊತ್ತು. ಆದರೆ ಆ ಗುಹೆಯಲ್ಲಿ ಕುಳಿತು ಆಟವಾಡುವುದು, ಅದರ ಒಳಹೊರ ಭಾಗಗಳನ್ನೆಲ್ಲ ಹೊಕ್ಕು ಹೊರಡುವುದು, ಅವನಿಗೆ ತುಂಬ ಮೆಚ್ಚುಗೆಯ ಆಟವಾಗಿತ್ತು. ಸಮವಯಸ್ಸಿನ ಕಾಳ ಈ ಆಟದಲ್ಲಿ ಅವನಿಗೆ ಜತೆಯಾಗುತ್ತಿದ್ದ.

ಒಮ್ಮೆ ಆಟಕ್ಕಿಂತ ಹೆಚ್ಚಿನ ಕುತೂಹಲ ಅವನಲ್ಲಿ ಉಂಟಾಯಿತು. ಅಲ್ಲಿಗೆ ಹೋದಾಗ ಕಾಳನನ್ನುದ್ದೇಶಿಸಿ "ಕರಡಿ ಹ್ಯಾಗಿದೆ ಎಂದು ನೋಡಿ ದ್ದೀಯಾ? ನಾನು ನೋಡಲಿಲ್ಲ. ತುಕ್ರಣ್ಣ ಒಂದು ಕರಡಿಯನ್ನೇ ಕೊಂದು ಬಿಟ್ಟಿದ್ದಾನಂತೆ. ಯಾಕೆ ನಮ್ಮವರು ಅದನ್ನು ಬೇಟೆಯಾಡುವುದಿಲ್ಲ?" ಎಂದ.

"ಯಾಕೋ! ಬಹುಶಃ ಅದರ ಮಾಂಸ ತಿನ್ನಲಿಕ್ಕೆ ಬರುವುದಿಲ್ಲ ಎಂದು ಕಾಣುತ್ತದೆ."

"ಕರಡಿಗೆ ಜೇನೆಂದರೆ ತುಂಬ ಇಷ್ಟವಂತೆ, ಹೌದೇ?"

“ಅನ್ನುತ್ತಾರಪ್ಪ—ಹಾಗೆ. ಹಾಗೆ ಈಚಲು ಹಣ್ಣಾಗುವಾಗ ಅದನ್ನೂ ತಿನ್ನಲಿಕ್ಕೆ ಬರುತ್ತದಂತೆ.”

“ಈ ಮಲೆಯಲ್ಲಿ ಈಚಲು ಮರವನ್ನು ಕಂಡಿಲ್ಲ ನಾನು. ಬಯನಿ ಮರವಾದರೆ ಇದೆ. ನೀನು ಈಚಲು ನೋಡಿದ್ದಿಯಾ?”

“ಈಚಲು ಇರಬೇಕು. ನಾನು ನೋಡಿಲ್ಲ. ಮಾವ ಚಾಪೆ ಮಾಡುವುದಕ್ಕೆ ಅದರ ಗರಿ ಎಲ್ಲಿಂದಲೋ ತರುತ್ತಾನೆ. ಅದರ ಸೋಗೆ ಮುಳ್ಳು ಮುಳ್ಳು.”

“ಮಾವನನ್ನು ಕೇಳು, ಯಾಕೆಂದು ಹೇಳಬೇಡ. ಈಚಲು ಮರ ಎಲ್ಲಿದೆ? ಅದರ ಹಣ್ಣಾಗುವುದು ಯಾವಾಗ?—ಎಂದೆಲ್ಲ ಕೇಳು.”

“ಆಗಲಿ.”

ಇಂಥ ಮಾತುಕತೆ, ಕರಡಿಯ ವಿಚಾರವಾದ ಪ್ರಶ್ನೆ, ಕರಿಯನಿಗೂ ಇಷ್ಟವಾದದ್ದು; ಕಾಳನಿಗೂ ಇಷ್ಟವಾದದ್ದು. ಕರಿಯ ಆಗಾಗ ತನ್ನ ಮನದ ಇಚ್ಛೆಯನ್ನು ತೋರ್ಪಡಿಸಿಕೊಳ್ಳುತ್ತಾನೆ. “ಒಂದು ಕರಡಿಯ ಮರಿಯನ್ನು ಹಿಡಿಯಲೇಬೇಕು; ಸಿಕ್ಕಿದರೆ ಅದನ್ನು ಖಂಡಿತ ಬಿಡುವುದಿಲ್ಲ” ಎನ್ನುತ್ತಾನೆ ಒಮ್ಮೆ. ಇನ್ನೊಮ್ಮೆ “ಆನೆಮರಿ ಹಿಡಿಯಲಿಕ್ಕೆ ಬರುವುದಿಲ್ಲವೇ? ಎದುರಿನ ಮಲೆಯಲ್ಲಿ ಆವು ಹಿಂಡಾಗಿ ಹೋಗುವುದು ಕಾಣುತ್ತದೆ. ಒಂದು ಮರಿ ಸಿಕ್ಕಿದರೆ, ಹಿಡಿಯಬಹುದೋ ಏನೋ” ಎನ್ನುತ್ತಾನೆ.

“ಅದು ಹಾಗೆಲ್ಲ ಸುಲಭವಲ್ಲವಂತೆ. ಅವು ಹಿಂಡಾಗಿ ತಿರುಗುವುದೇ ಹೆಚ್ಚು. ಹಿಂಡಾನೆಯ ತಳ್ಳಿಗೆ ಯಾರೂ ಹೋಗುವುದಿಲ್ಲ.”

“ನಾನು ನೋಡಿದ್ದೇನೆ—ಆನೆಯನ್ನು. ಅದನ್ನು ಹಿಡಿಯುತ್ತಾರೆ, ಸಾಕುತ್ತಾರೆ; ಸಾಕಿ ಸವಾರಿ ಮಾಡುತ್ತಾರೆ. ಆನೆ ನಮಸ್ಕಾರ ಮಾಡುತ್ತದೆ.”

“ಸುಳ್ಳೇ! ಯಾರು ಸಾಕಿದ್ದು ಆನೆಯನ್ನು!”

ತನ್ನ ಆರೆಂಟು ವರ್ಷಗಳ ಹಿಂದಿನ ಅನುಭವ ಹೇಳಿದ ಆಗ ಕರಿಯ. ಅಜ್ಜನೊಡನೆ ತಾನು ಸುಬ್ರಹ್ಮಣ್ಯಕ್ಕೆ ಹೋದದ್ದು, ಅಲ್ಲಿನ ದೇವಾಲಯದ ಆನೆ, ದೇವರ ಮುಂದೆ ಮೊಣಕಾಲೂರಿ ದೇವರಿಗೆ ನಮಸ್ಕರಿಸಿದ್ದು, ಅದರ ಮೇಲೆ ಒಬ್ಬ ಮಾವುತ ಕುಳಿತಿದ್ದು—ಎಲ್ಲವನ್ನೂ ಬಣ್ಣಿಸಿದ. ‘ಯಾವುದಕ್ಕೂ ನಾನು ದೊಡ್ಡವನಾಗಬೇಕು, ಆಮೇಲೆ ಒಂದು ಆನೆಮರಿಯನ್ನು

ಹಿಡಿದು, ಸಾಕಿ, ಅದರ ಮೇಲೆಯೇ ಕುಳಿತು ತಿರುಗಾಡುತ್ತೇನೆ. ಮಲೆಗೆ ಧನಿಗಳು ಕುದುರೆಯ ಮೇಲೆ ಕೂತು ಬಂದ ಹಾಗೆ' ಎಂಬ ಆಸೆಯನ್ನೂ ಹೊರಗೆಡವುತ್ತಾನೆ.

ಇಂಥ ಅನೇಕ ಭಾವೀ ಆಸೆಗಳಲ್ಲಿ ಬಾಲಕರ ಮನಸ್ಸು ಪ್ರಕಟವಾಗುತ್ತದೆ. ಒಮ್ಮೊಮ್ಮೆ 'ಆನೆಯೆಲ್ಲುಂಟು, ಕರಡಿಯೆಲ್ಲುಂಟು—ಎಂದು ತಮ್ಮಷ್ಟಕ್ಕೆ ಗೊತ್ತುಗುರಿ ಇಲ್ಲದೆ ಅಲೆದಾಡಿ, ದಾರಿ ತಪ್ಪಿ, ಕೊನೆಗೆ ಕಣಿವೆ ಇಳಿದು, ಎದುರು ಮಲೆಗೆ ಹೋಗುವ ಸೇತುವೆಯ ತನಕ ನಡೆದು ಬಂದು, ಅಲ್ಲಿಂದ ತಮ್ಮ ಕೇರಿಯ ದಾರಿ ಹಿಡಿದುದುಂಟು.

ಇನ್ನೊಮ್ಮೆ, ಮಲೆರಾಯನ ದರ್ಶನಕ್ಕೆಂದು ಹೋದ ಹುಡುಗರು, ಮಾತಾಡುತ್ತ 'ಅಜ್ಜ ಹೇಳುತ್ತಿದ್ದರು, ಇಂಥ ಗುಹೆಗಳು ಇಲ್ಲಿ ಹತ್ತಾರು ಇವೆಯಂತೆ. ಈ ಗುಹೆಗೆ, ಕರಡಿ ಬಂದುಹೋಗುವುದು ಕಷ್ಟ. ಬೇರೆ ಗುಹೆಯನ್ನು ನೋಡೋಣವೇ?' ಎಂಬ ಆಸೆ ತಳೆದರು. 'ಹೂಂ' ಎಂದರು ಒಬ್ಬರಿಗೊಬ್ಬರು. ಹೊರಟೇಬಿಟ್ಟರು. ಮಲೆರಾಯನ ಗುಹೆ ಇಳಿದು, ಕತ್ತಿಯಿಂದ ಎರಡೆರಡು ನೀಳವಾದ ಕೋಲುಗಳನ್ನು ಕಡಿದುಕೊಂಡು, ಈಟಿಗಳಂತೆ ಮೊನಚು ಮಾಡಿ 'ಈಗ ಎಲ್ಲಿಯಾದರೂ ಕರಡಿ ಅಡ್ಡ ಬರಬೇಕು, ಪಟ್ಟ ಅದರ ಅವಸ್ಥೆ' ಎಂದಂದುಕೊಳ್ಳುತ್ತ, ಗುಹೆ ಇರುವ ಬೆಟ್ಟದ ಸಂಸ್ತರದಲ್ಲಿ ಅಲೆದಾಡತೊಡಗಿದರು. ಬಲ್ಲೆಗಳನ್ನು ಸವರಿದರು. ಅಚೀಚೆ ನೋಡುತ್ತ, ನಾಲ್ಕು ನಾಲ್ಕು ಹೆಜ್ಜೆ ಮುಂದೆ ಹಾಕಿದರು. ಮರದ ಬೀಳಲುಗಳನ್ನು ಹಿಡಿದು, ಬಂಡೆಗಳನ್ನೇರಿದರು; ತಿರುಗಿ ಇಳಿದರು. ವೇಳೆಯ ಎಣಿಕೆ ಇಲ್ಲದೆ, ನೂರಿನ್ನೂರು ಗಜ ಮುಂದುವರಿದು, ಇನ್ನೊಂದು ಬೆಟ್ಟದ ಅಬ್ಬಿಯ ಮುಖಕ್ಕೆ ಬಂದರು. ಅಲ್ಲೂ ದೆವ್ವದಾಕೃತಿಯ ಬಂಡೆಗಳ ರಾಶಿಯೇ ರಾಶಿ! ಅವುಗಳ ಎಡೆಯೆಲ್ಲ ಗುಹಾಲಯಗಳಂತಿದ್ದುವು. ಒಂದೊಂದನ್ನೇ ಹೊಕ್ಕು ನೋಡಿದರು. ತೀರ ಒಳಗೆ ಹೊಗ್ಗುವ ಧೈರ್ಯ ಇಬ್ಬರಿಗೂ ಇರಲಿಲ್ಲ. ಇನ್ನೂ ಮುಂದುವರಿದರು. ಬೇರೊಂದು ಗುಹೆ ಬಂದಿತು. ಆ ಗವಿಯ ತಳದಲ್ಲಿ ಮರಳು ಹಾಸಿತ್ತು. ಆ ಮರಳಿನ ಮೇಲೆ ಉಗುರು ಹೆಜ್ಜೆಗಳ ಗುರುತು ಸ್ಪಷ್ಟವಾಗಿ ನಟ್ಟಿತ್ತು. ಅದನ್ನು ಕಂಡಾಗ ಆದ ಉತ್ಸಾಹ ಅಷ್ಟಿಷ್ಟಲ್ಲ. "ಇದಿರಬೇಕು, ಕರಡಿಯ ಹೆಜ್ಜೆ" ಎಂದ ಕರಿಯ. "ಕರಡಿಯ

ಹೆಜ್ಜೆ ಇರಲೂಬಹುದು. ಹುಲಿಯ ಹೆಜ್ಜೆ ಇರಲೂಬಹುದು" ಎಂದ ಕಾಳ. ಮುಂದೆ ಮಾತಿಲ್ಲ. ಇಬ್ಬರೂ ಮೌನವಾಗಿ ಮೆಲ್ಲಗೆ ಬಗ್ಗಿ ಗುಹೆಯೊಳಗೆ ಕಾಲಿಟ್ಟರು. ತೀರ ಒಳಗಡೆ ಕಗ್ಗತ್ತಲು ತುಂಬಿತ್ತು. ಕರಿಯ ಮುಂದಕ್ಕೆ, ಕಾಳ ಹಿಂದಕ್ಕೆ. ಬಗ್ಗಿ ಕೈಯಲ್ಲಿ ಕೋಲು ಹಿಡಿದು ಇಣಿಕಿ ನೋಡುವಾಗ, ಮಿಂಚಿನ ದೀಪಗಳಂತೆ ಎರಡು ಪಿಳಿ ಪಿಳಿ ಕಣ್ಣುಗಳು ದೂರದ ಮೂಲೆಯಲ್ಲಿ ಕಂಡವು. ಮೊದಲು ಅದನ್ನು ಕಂಡವ ಕಾಳ. ಆಗಲೇ ಕರಿಯನನ್ನು ಹಿಂದಕ್ಕೆ ಜಗ್ಗಿದ. ಎಳೆದುಕೊಂಡೇ ಬಂದ. "ಬೇಡ ಕರಿಯ, ಏನೋ ದೊಡ್ಡ ಕಣ್ಣು ಕಾಣಿಸುತ್ತದೆ. ಹುಲಿಯೋ, ಕರಡಿಯೋ—ಏನೋ. ಇನ್ನೊಮ್ಮೆ ಬರುವ. ನಾವೇ ಮುಂದಕ್ಕೆ ಹೋಗಬಾರದು. ಬೂದಣ್ಣನನ್ನು ಕರೆದುಕೊಂಡು ಬರುವ. ಒಂದು ಹುಲಿಯಿದೆಯೋ, ನಾಲ್ಕು ಇವೆಯೋ ಯಾರಿಗೆ ಗೊತ್ತು? ಇಲ್ಲಿಗೆ ನಾವು ಬಂದದ್ದು ಯಾರಿಗೂ ಗೊತ್ತಿಲ್ಲ. ಮತ್ತೇನಾದರೂ ಆದರೆ?" ಎಂದು ಅಂಜಿಕೆ ಹುಟ್ಟಿಸಿದ. ಕರಿಯನಲ್ಲೂ ವಿವೇಕ ಮೂಡಿತು. ಅವನು ತಿರುಗಿ ಮುಂದೆ ಬಂದು, ಇಣಿಕಿ ನೋಡಿ, ಹೊಳೆಯುವ ಕಣ್ಣುಗಳನ್ನು ನೋಡಿ, "ಸ್ಥಳ ಗೊತ್ತಾಯಿತಲ್ಲ; ಅದನ್ನು ಹಿಡಿಯಬೇಕು" ಎಂದು ಹೊರಗೆ ಬಂದ.

ಗವಿಯಿಂದ ಮರಳಿದರೂ, ಕೇರಿಗೆ ಹಿಂದಿರುಗುವ ಮನಸ್ಸಿಲ್ಲ. ಹೊತ್ತು ನೆತ್ತಿಗೆ ಬಂದಿರಲಿಲ್ಲ. ಇನ್ನೂ ವೇಳೆಯುಂಟು. ಕರಿಯನೆಂದ "ಕರಡಿಯ ಮನೆ ಇಲ್ಲಿದ್ದರೆ ಈಚಲು ಮರವೂ ಇಲ್ಲೆಲ್ಲಿಯಾದರೂ ಇರಬೇಕು."

"ಈಚಲು ಮರ? ಇವೆಯೋ ಏನೋ. ಕರಡಿಗೆ ಅದೊಂದೇ ಆಹಾರವೇ? ಜೇನುತಟ್ಟೆ ನೋಡಿದ್ದೆವಲ್ಲ—ದಾರಿಯಲ್ಲಿ. ಒಂದೊಂದು ಬಂಡೆಗೆ ಅಂಟಿಕೊಂಡಿತ್ತು, ಎಂಥೆಂಥ ದೊಡ್ಡ ತಟ್ಟೆ. ಅದನ್ನು ಕರಡಿ ತಿನ್ನುತ್ತದೆ"—ಎಂದ. ಮರುಕ್ಷಣಕ್ಕೆ ಈಚಲು ಮರದ ವಿಚಾರ ನೆನಪಾಯಿತು. "ಅದೆಲ್ಲಾ ಇರಲಿ. ಮಾವನನ್ನು ಕೇಳಿದೆಯಾ, ಈಚಲು ಮರ ಎಲ್ಲಿದೆ ಎಂದು?" ಎಂದು ಕೇಳಿದ ಕರಿಯ.

"ಮಲೆಯ ತುದಿಯಲ್ಲಿ ಬೇಕೆನ್ನುವಷ್ಟು ಇವೆಯಂತೆ."

"ಹಣ್ಣಾಗುವುದು ಯಾವಾಗ?"

"ಅದು ಮಾತ್ರ ಕೇಳಲಿಲ್ಲ."

"ಇಷ್ಟರವರೆಗೆ ಬಂದಿದ್ದೇವೆ—ಇನ್ನೂ ಹೊತ್ತುಂಟು. ಮಲೆಯ ತುದಿಯವರೆಗೆ ಹೋಗಿ ಬರೋಣವೇ?"

"ಇವತ್ತು ಬೇಡ, ಇನ್ನೊಮ್ಮೆ."

"ಹೆದರಿಕೆಯಾಗುತ್ತದೆಯೇ ನಿನಗೆ?"

ಭಯವಾಗುತ್ತದೆ ಅನ್ನಲಿಕ್ಕೆ ಕಾಳನಿಗೂ ಮನಸ್ಸು ಬಾರದು. "ಆಯಿತು, ಹೋಗುವ" ಎಂದ. ಅಲ್ಲಿಂದ ಹೊರಟದ್ದೇ. ಹೊರಟು, ನೆಟ್ಟಗೆ ಬೆಟ್ಟದ ಗೋಡೆಯನ್ನೇರತೊಡಗಿದರು. ದಾರಿಯಲ್ಲಿನ ಪೊದೆಗಳನ್ನು ಸವರಿ, ಅವುಗಳ ಸೊಪ್ಪನ್ನು ಗುರುತಿಗೆ ಚೆಲ್ಲುತ್ತ ಏರಿದರು. ಮಲೆರಾಯನ ಗುಹೆಯಿಂದ ಬೆಟ್ಟವು ಗೋಡೆಯಂತೆ ನಿಲ್ಲುತ್ತದೆ. ಅದನ್ನು ಏರುವ ಕೆಲಸ ಸಾಹಸದ್ದೇ. ಆದರೆ ಹುಡುಗರದು ಬಿಸಿ ರಕ್ತವಲ್ಲವೇ? ಇಬ್ಬರೂ ಏರತೊಡಗಿದರು. ಬಂಡೆಗಳ ಎಡೆಯಲ್ಲಿ ನಟ್ಟ ಮರದ ಬೀಳಲುಗಳನ್ನು ಹಿಡಿಯುತ್ತ, ಇಲ್ಲವೆ ಪೊದೆಗಳ ಬುಡಕ್ಕೆ ಕೈ ಹಾಕಿ, ಅವುಗಳ ಕಾಂಡಗಳನ್ನು ಹಿಡಿಯುತ್ತ ಏರಿದರು. ಒರಟಾದ ದಾರಿಯಲ್ಲಿ ಏರಿ ಏರಿ ಕಟ್ಟಕೊನೆಗೆ ಬೆಟ್ಟದ ತುದಿಗೆ ಬಂದೇ ಬಂದರು. ಆ ನೋಟವೆಂಥದು! ಮೂಡಣಕ್ಕೆ ಸಹ್ಯಾದ್ರಿಯ ಉನ್ನತ ಪರ್ವತಾವಳಿ ತುಸು ಸಮೀಪದಲ್ಲೇ ಕಾಣಿಸುತಿತ್ತು. ಅದರ ನಟ್ಟನಡುವಣ ಶಿಖರವಾದ 'ಅಮ್ಮೆದಿ ಕಲ್ಲಿನ' ಒಲೆಯುಗುಪ್ಪೆ ಆಕೃತಿಯಲ್ಲಿರುವ ರೂಪ, ಭವ್ಯವಾಗಿ ಕಾಣಿಸುತಿತ್ತು. ಪಡುವಣಕ್ಕೆ ನೋಡಿದರೆ—ಅವರ ಕಾಲ ಬುಡದಲ್ಲಿಯೇ ಸುಮಾರು ಐನೂರು ಅಡಿ ಕೆಳಗಡೆ, ಕುಡಿಯರ ಕೇರಿಯಿತ್ತು; ಅದರಿಂದ ಮುಂದಕ್ಕೇನೆ ಧನಿಗಳ ಮನೆ. ಕೇರಿಯ ಅಂಗಳದಲ್ಲಿ ನಲಿದಾಡುವ ಜನ ಗುಬ್ಬಚ್ಚಿಗಳಂತೆ ಕಾಣಿಸುತ್ತಿದ್ದರು. ಹಿಗ್ಗಿನಿಂದ ಕಾಳ, ಕರಿಯರಿಬ್ಬರೂ ಕಿರಿಚಿದರು; ಕೂಗಿದರು. ಅವರ ಹಿಗ್ಗೇ ಹಿಗ್ಗು! ನಾಲ್ದೆಸೆಗಳಲ್ಲೂ ಸುಂದರವಾದ ಕಣಿವೆ, ಬೆಟ್ಟ, ಪರ್ವತಗಳು. ನಡುನಡುವೆ ಹರಿದೋಡುವ ನದಿಗಳು. ಹಾರಿಬೀಳುವ ಅಬ್ಬಿಗಳು. ಬಾನು ಶುಭ್ರವಾಗಿತ್ತು. ನೀಲಾಕಾಶ ಮೇಘ ಹೀನವಾಗಿ ನಾಲ್ದೆಸೆಯಲ್ಲೂ ಕಾಣಿಸುತಿತ್ತು. ಬೆಟ್ಟದ ಗಾಳಿ, ಹುಡುಗರನ್ನು ತೂರಿಕೊಂಡು ಹೋಗುವಷ್ಟು ಭರದಿಂದ ಶೀತಲವಾಗಿ ಬೀಸುತಿತ್ತು. ಬೆಟ್ಟ ಏರಿ ಬಂದ ಬಿಸಿಗೆ ಅದು ಕಾಣಿಸದೆ ಹೋದರೂ, ತುಸು ಹೊತ್ತಿನಲ್ಲಿ ಮಕ್ಕಳಿಗೆ ಚಳಿಯಾಗತೊಡಗಿತು. ಕೈಗಳನ್ನು ಎದೆ

ಗೊತ್ತಿಕೊಂಡು ‘ ಅಬ್ಬಾ, ಏನು ಯಮುಚಳಿ ಇಲ್ಲಿ! ’ ಎನ್ನುತ್ತಾ ಆಚೀಚೆ ನೋಡಿದರು. ಹಸಿವಾಗಿತ್ತು ತುಂಬ. ಅಲ್ಲಾವ ಗಿಡಮರಗಳಿರಲಿಲ್ಲ. ತಾವು ಅರಸಿಬಂದ ಈಚಲು ಮರದ ನೆನಪಾಯಿತು. “ ಈಚಲು ಮರ ಎಲ್ಲಿಯೂ ಕಾಣಿಸದಲ್ಲ ” ಎಂದ ಕರಿಯ. “ ಮಾವ ಸುಳ್ಳು ಹೇಳುತ್ತಾನೆಯೇ ? ಇರಬೇಕು ಇಲ್ಲೆಲ್ಲೋ ” ಎಂದ ಕಾಳ. ಇಬ್ಬರೂ ಸೇರಿ ಆಚೀಚೆ ಕತ್ತು ಹಣಿಕಿ ನೋಡಿದರು. ಬರಿಯ ಹುಲ್ಲುಗಿಡಗಳಷ್ಟೇ ನಾಲ್ಕು ಸುತ್ತಲೂ ಒಣಗಿ ಬಿದ್ದಿದ್ದುವು. ಅದನ್ನು ನೋಡುತ್ತ, ತುಸು ತಿರುಗಾಡಿದರು. ಇನ್ನೂ ಮುಂದೆ ಬಂದ ಮೇಲೆ ಬೆಟ್ಟದ ಇಳಿಜಾರು ಮೈಯೊಂದರಲ್ಲಿ, ಹತ್ತಾರು ಈಚಲು ಮರಗಳು ಕಾಣಿಸಿದುವು. ಅಷ್ಟೇನು ದೊಡ್ಡ ಮರಗಳಲ್ಲ. ಅಲ್ಲಿಗೆ ಧಾವಿಸಿದ್ದೇ ಧಾವಿಸಿದ್ದು. ಅಲ್ಲಿ ಈಚಲು ಮರವಿತ್ತು ಮಾತ್ರವಲ್ಲ, ಕೆಂದಾಳಿ ಬಣ್ಣದ ಹಣ್ಣಿನ ಗೊಂಚಲನ್ನು ಬಿಟ್ಟಿತ್ತು. ಅದನ್ನು ಕಂಡು ಬಾಯಿ ನೀರೂರಿತು. ಆ ಮರದ ದಿಂಡನ್ನೇರಿ, ತಮ್ಮ ಮೈ ಪರಚಿಸಿಕೊಂಡು, ಒಂದು ಹಣ್ಣಿನ ಗೊಂಚಲನ್ನು ಕೆಳಕ್ಕೆ ಇಳಿಸಿದರು. ಅದರ ಸವಿ ನೋಡಿದರು. ಹಣ್ಣು ಸಾಕಷ್ಟು ರುಚಿಯೂ ಆಗಿತ್ತು. ನಿಂತು ತಿಂದರು; ಆಚೀಚೆ ಅಲೆದಾಡಿ ತಿಂದರು. ‘ ಹಾಗಿದ್ದರೆ ಕರಡಿ ಕಾಣಸಿಗಬೇಕಿತ್ತಲ್ಲ ’ ಅಂದರು. ನೆಲವನ್ನು ಅರಸಿದರು. ಹುಲ್ಲಿಲ್ಲದೆ, ನೀರಪಸೆಯಿರುವ ಜಾಗವನ್ನು ಹುಡುಕಿದರು. ಹೆಜ್ಜೆಯ ಜಾಡು ಅಲ್ಲಾವುದೂ ಕಾಣಿಸಲಿಲ್ಲ. ಆದರೂ ಏನೇನೋ ಕಾಡು ಮೃಗಗಳ ಲದ್ದಿ ಬಿದ್ದುದನ್ನು ಕಂಡು, ‘ ಇದು ನಿಜಕ್ಕೂ ಕರಡಿಯ ಲದ್ದಿಯೇ ’ ಎಂದು ನಿರ್ಧರಿಸಿದರು. ‘ ಹಾಗಿದ್ದರೆ ಕರಡಿ ಕಾಣಸಿಗಬೇಕಿತ್ತಲ್ಲ ’—ಅಂದರು. ನೆಲವನ್ನು ಅರಸಿದರು. ಮತ್ತೇನೋ ಕಾಡುಮೃಗಗಳ ಲದ್ದಿ ಬಿದ್ದುದನ್ನು ಕಂಡು ‘ ಇದು ನಿಜಕ್ಕೂ ಕರಡಿಯ ಲದ್ದಿಯೇ ’ ಎಂದು ನಿರ್ಧರಿಸಿದರು. ಹಾಗಿದ್ದರೆ ‘ ಇಲ್ಲಿಗೆ ಕರಡಿ ಈ ವೇಳೆಗೆ ಬರಲೇಬೇಕು. ಈಗಲ್ಲ ರಾತ್ರಿ, ರಾತ್ರಿ ಅಲ್ಲದಿದ್ದರೆ ಹಗಲು ’ ಎಂದುಕೊಂಡು ‘ ಅದಕ್ಕೆ ಬಗೆ ಮಾಡುವ ’ ಎಂದರು. ಕರಿಯ ತನ್ನದೇ ಆದ ಹಂಚಿಕೆ ತೆಗೆದ. ಮರದ ದಪ್ಪನಾದ ನಾಲ್ಕಾರು ಬೀಳಲುಗಳನ್ನು ಕಡಿದು ತಂದ. ನಾಲ್ಕೆಂಟು ಉರುಳುಗಳನ್ನು ಸಿದ್ಧಪಡಿಸಿದ. ಉರುಳಿನ ಒಂದೊಂದು ಕುಡಿಯನ್ನು ಈಚಲು ಮರಕ್ಕೆ ಬಿಗಿದ. ಒಂದಲ್ಲ ಒಂದು ಉರುಳಿನಲ್ಲಿ ಕರಡಿ ಬಿದ್ದರೆ

ಅದರ ಕಾಲು ಸಿಕ್ಕಿ ಬೀಳಲೇಬೇಕು—ಎಂಬುದು ಅವರ ಯೋಚನೆ. ಅನಂತರ ಒಂದು ಈಚಲು ಹಣ್ಣಿನ ಗೊನೆ ಕಡಿದು, ಉರುಳಿನ ಬಳಿಯಲ್ಲಿ ಇರಿಸಿ, ಉರುಳನ್ನು ಹುಲ್ಲಿನಿಂದ ಮುಚ್ಚಿ ಮರೆಯಿಸಿ, ಮೆಲ್ಲಗೆ ಅಲ್ಲಿಂದ ಹೊರಟರು. ಕೇರಿಗೆ ಹೋಗದೆ ನಿರ್ವಾಹವಿದೆಯೇ ? ಆದರೂ 'ಕರಡಿ ಉರುಳಿಗೆ ಬೀಳುವುದೆಂದೊ! ಅಥವಾ ಬಿದ್ದರೆ ತಮಗೆ ತಿಳಿಯುವುದು ಹೇಗೋ ?' ಎಂಬ ಯೋಚನೆ. ಹೊತ್ತಾದುದರಿಂದ ಮರುದಿನ ಬರುವ ಯೋಚನೆಯಿಂದ ಹೊರಟರು. ಅವರ ಸುದೈವಕ್ಕೆ ಈಚಲು ಮರವೊಂದರ ಬಳಿ, ಅದರ ಹೆಡೆಯನ್ನು ಕಡಿದು ಹಾಕಿದ ಗುರುತು ಕಾಣಸಿಕ್ಕಿತು. ಹಾಗಿದ್ದರೆ, ತಮ್ಮವರಾರೋ ಅಲ್ಲಿಗೆ ಬಂದಿರಬೇಕು—ಎಂದೂ ತೋರಿತು. ಬಂದಿದ್ದರೆ, ಬರುವ ದಾರಿ ಬೇರೆ ಯಾವುದೋ ಸಮೀಪ ಇದ್ದಿರಬೇಕು—ಎಂದು ಯೋಚಿಸಿ, ಆಚೀಚಿನ ನೆಲ ಸುತ್ತಾಡುತ್ತ, ದಾರಿಯನ್ನು ಹುಡುಕಾಡಿದರು. ಸಪುರವಾದ ಹೆಜ್ಜೆಯ ಜಾಡೊಂದು ಕಾಣಸಿಕ್ಕಿತು—ಅದು ಜನ ಚೆನ್ನಾಗಿ ತಿರುಗಾಡಿದ ಕಾಲುದಾರಿ ಎಂಬುದು ಖಾತ್ರಿಯಾಯಿತು. ಅದನ್ನೇ ಹಿಡಿದು ಬೆಟ್ಟವನ್ನು ಇಳಿದರು. ಕಾಡಿನ ಆ ದಾರಿ ಇಳುಕಲಾಗಿತ್ತು. ಮೊದಲು ಬಂದ ದಾರಿಯಷ್ಟು ದುರ್ಗಮವಾಗಿರಲಿಲ್ಲ. ಆ ದಾರಿಯಿಂದ ಇಳಿದು ಒಂದು ಗಳಿಗೆಯೊಳಗೆ ಅವರು ಬಂದು ಸೇರಿದ್ದೇ, ಕೇರಿಯ ನೀರಿನ ಚಿಲುಮೆಯನ್ನು. 'ಇಷ್ಟು ಹತ್ತಿರವಿತ್ತೇ ನಾವು ಹೋದ ಸ್ಥಳ!' ಎಂದು ಆಶ್ಚರ್ಯವಾಯಿತು ಅವರಿಗೆ.

ಆ ರಾತ್ರಿಯೆಲ್ಲವೂ ಕರಿಯ ಕಾಳರಿಗೆ 'ಕರಡಿ ಬಿದ್ದಿರಬಹುದೇ? ಸಿಕ್ಕೀತೇ ತಮಗೆ' ಎಂಬ ಒಂದೇ ಕನಸು. ಬೆಳಗಾಗುವ ತನಕ ನಿದ್ರೆಯಿಲ್ಲ. ಬೆಳಗಾಗಿ ಹೊಟ್ಟೆಗೆ ಅಂಬಲಿ ಬೀಳುತ್ತಲೇ, ಇನ್ನೊಮ್ಮೆ ಬೆಟ್ಟದ ಕುಡಿಗೆ ಓಟ ಹೊಡಿದರು. ತಾವು ಕಂಡುಹಿಡಿದ ಹೊಸ ದಾರಿಯಲ್ಲಿ ಸುಲಭವಾಗಿ ಏರಿಹೋಗಿ ಬೆಟ್ಟದ ಕುಡಿಯನ್ನು ಸೇರಿದರು. ಅಲ್ಲಿನ ಈಚಲು ಮರಕ್ಕೆ ಸುತ್ತುಬಂದರು. ಹಾಕಿದ ಉರುಳುಗಳೆಲ್ಲ ಅಲ್ಲಲ್ಲೇ ಬಿದ್ದಿದ್ದುವು. ನೆಲದಲ್ಲಿ ಇವರು ಕೆಡವಿದ ಈಚಲು ಹಣ್ಣುಗಳಾವುವೂ ಇದ್ದಿರಲಿಲ್ಲ. 'ಅಬ್ಬ, ಕರಡಿಗೆ ಅಷ್ಟು ಬುದ್ಧಿಯುಂಟೇ!' ಎಂದಂದುಕೊಂಡು, ಬಲುಹೊತ್ತು ಅಲ್ಲಿ ಕುಳಿತು, ಬೇರೆ ಉಪಾಯವೇನೆಂದು ಯೋಚಿಸಿದರು. ಕೊನೆಗೆ ಬಗೆಗಾಣದೆ, ಉರು

ಳನ್ನು ಮರದ ಬುಡದಲ್ಲೇ ಇರಿಸಿ, 'ಕರಡಿ ಈಚಲು ಹಣ್ಣಿಗಾಗಿ ಮರವನ್ನು ಏರುವಾಗಲಾದರೂ ಸಿಕ್ಕಿಬೀಳಲಿ' ಎಂದು ಯೋಚಿಸಿ, ಮರಳಿದರು.

ಆ ದಿನ ರಾತ್ರಿಯೆಲ್ಲ ಬೂದನನ್ನು ಕರಿಯ ಕಾಡುತ್ತಲೇ ಇದ್ದ. ಆದರೂ ಕರಡಿ ಹಿಡಿಯುವ ಹಂಚಿಕೆಯನ್ನು ಕುರಿತು ಕೇಳಲಿಲ್ಲ. "ಮಾವ, ಘಟ್ಟದ ಕೆಳಗೆ ಗೂಡಿಟ್ಟು, ಹುಲಿ ಹಿಡಿಯುತ್ತಾರಂತಲ್ಲ. ಅದು ಹ್ಯಾಗೆ? ಆ ಗೂಡು ಮಾಡುವುದು ಹ್ಯಾಗೆ?" ಎಂದು ಸವಾಲು ಹಾಕುತ್ತಿದ್ದ.

"ಮರುಳು ನಿನಗೆ; ಹುಲಿ ತಿನ್ನಲಿಕ್ಕೆ ಆಗುತ್ತದೆಯೆ?"

"ಹುಲಿಯಲ್ಲ, ಇನ್ನೇನಾದರೂ ಹಿಡಿಯಬೇಕಾದರೆ, ಮಿಕ, ಬರ್ಕ, ಎಲ್ಲ ಹಿಡಿಯುವ ಹಾಗೆಯೇ ಅವುಗಳ ದಾರಿಯಲ್ಲಿ ಉರುಳಿಟ್ಟು, ಉಳಿದ ದಾರಿಗಳನ್ನೆಲ್ಲ ಬಂದುಮಾಡಿ ಉರುಳು ಇರಿಸಿದರೆ ಸಾಕೇ?" ಎಂದು ಕೇಳಿದ. ಬೂದ, ಎಲ್ಲೋ ಬಲು ಹಿಂದಕ್ಕೆ, ಮೂಲೆಗುಂಪು ಊರವರು ಬೋನಿನಲ್ಲಿ ಚಿರತೆಯೊಂದನ್ನು ಹಿಡಿದುದನ್ನು ಕಂಡಿದ್ದ. ಹಾಗಾಗಿ ಆ ಕತೆಯನ್ನೆಲ್ಲ ಮಕ್ಕಳ ಮುಂದೆ ಹೇಳಿದ. "ಆದರೆ ಅದಕ್ಕೆ, ಬಲಿಯಾಗಿ ನಾಯಿಯನ್ನೋ ಆಡನ್ನೋ ಕಟ್ಟುತ್ತಾರೆ"—ಎಂದ. ಅಷ್ಟೇ ಸೂಚನೆ ಸಾಕಾಯಿತು ಕರಿಯನಿಗೆ.

ಮರುದಿನ ಆತ ಕಾಳನನ್ನು ಕಟ್ಟಿಕೊಂಡು, ತಿರುಗಿ ಬೆಟ್ಟದ ಕೋಡಿಗೆ ಓಡಿದ. ಒಂದೆರಡು ದಿನ ಕಾಲ ಅವರಿಬ್ಬರು ಅಲ್ಲಿಯೇ ಕುಳಿತು, ನೀಳವಾದ ಗೂಟಗಳನ್ನಾಯ್ದು, ಸವರಿ, ಬೀಳಲುಗಳಿಂದ ಚಿಕ್ಕೊಂದು ಗೂಡನ್ನು ಮಾಡಿದರು. ಅದಕ್ಕೆ ಥಟ್ಟನೆ ಸರಿದು ಬೀಳುವ ಒಂದು ಬಾಗಿಲನ್ನು ರಚಿಸಿದರು. ಅಷ್ಟೆಲ್ಲ ಕೆಲಸ ಮುಗಿದ ಮೇಲೆ, ಜೇನುತಟ್ಟೆಯೊಂದನ್ನು ಸಂಪಾದಿಸಲು ಹೊರಟರು. ಹೊಗೆ ಹಾಕಿ, ಬಂಡೆಗೆ ಅಂಟಿದ್ದ ತಟ್ಟೆಯೊಂದರ ನೊಣಗಳನ್ನು ಓಡಿಸಿ, ತಟ್ಟೆಗೆ ತಟ್ಟೆಯನ್ನೇ ಕಿತ್ತು ತಂದರು. ಮರಗಳ ಎಡೆಯಲ್ಲಿ ಆ ಗೂಡನ್ನಿರಿಸಿ ಭದ್ರವಾಗಿ ಬಿಗಿದರು. ಅದರ ಒಳಕ್ಕೆ ತಟ್ಟೆಯ ಅರ್ಧವನ್ನು ಹಾಕಿದರು. ಉಳಿದ ಅರ್ಧವನ್ನು ಚೂರು ಮಾಡಿ, ಈಚಲು ಮರಗಳಿಂದ ಅಲ್ಲಿಯ ತನಕ ದಾರಿಯುದ್ದಕ್ಕೆ ತುಣುಕು ತುಣುಕಾಗಿ ಕೆಡವಿದರು. 'ತಮ್ಮ ಈ ಒಳಸಂಚು ಖಂಡಿತವಾಗಿಯೂ ನಡೆದೇ ನಡೆಯುತ್ತದೆ' ಎಂದು ನಿಶ್ಚಯಿಸಿಕೊಂಡು ಮನೆಗೆ ಬಂದರು. ಆ ರಾತ್ರಿಯೂ ಮಕ್ಕಳಿಬ್ಬರಿಗೆ ಸಮನಾದ

ನಿದ್ರೆ ಬರಲಿಲ್ಲ. ಕರಡಿಯ ಘರ್ಜನೆಯನ್ನು ಅವರು ಈತನಕ ಕೇಳಿದವರಲ್ಲವಾದರೂ, ಆ ಘರ್ಜನೆಯನ್ನು ತಾವೇ ಊಹಿಸಿ, 'ಅದು ಕೇಳಿಸುತ್ತದೆ' ಎಂಬ ಭ್ರಮೆಯಿಂದ ಮಲಗಿ ನಿದ್ರೆಹೋದರು. ಆ ಬೆಳಗ್ಗೆ, ಅಂಬಲಿ ಉಣ್ಣುವ ತನಕವೂ ಗುಡಿಸಲಲ್ಲಿ ನಿಲ್ಲಲಿಲ್ಲ. ಮುಖ ತೊಳೆಯಲು ನೀರಿನ ದಂಬೆಯ ಸಮೀಪ ಬಂದವರೇನೆ, ಬೆಟ್ಟವನ್ನು ಏರಿದರು. ಕತ್ತಿ, ಕೋಲುಗಳನ್ನು ಹಿಡಿದುಕೊಂಡೇ ಸಾಗಿದರು. ಬೆಟ್ಟವನ್ನೇರಿ, ಕಾಡನ್ನು ಕಳೆದು, ಮೇಲಿನ ತುಣುಕು ಬಯಲುಗಾವಲು ಬಂದಿತು. ಅಲ್ಲಿಂದಲೇ—ಎದುರಿನ ಮರಗಳ ತೋಪಿನ ಕಡೆಗೆ ದಿಟ್ಟಿಸಿದರು. ನಿಜಕ್ಕೂ ದೊಡ್ಡದಾದೊಂದು ಕರಡಿ ಆ ತೋಪಿನ ಬಳಿ ಹುಚ್ಚು ಹಿಡಿದಂತೆ ಅತ್ತಿತ್ತ ಚೀರಾಡುತ್ತ ಅಲೆದಾಡುತ್ತಿತ್ತು. ಆದರ ಹತ್ತಿರ ಹೋಗುವ ಧೈರ್ಯ ಯಾರಿಗೆ? ಕೂಗಿ ಜನಗಳನ್ನು ಕರೆಯುವುದಕ್ಕೂ ಹುಡುಗರಿಗೆ ಧೈರ್ಯವಿಲ್ಲ. ಕೂಗಿದರೆ ಮೈಮೇಲೆ, ಅದು ಬಂದು ಹಾರಿತೆಂಬ ಭಯ ಬೇರೆ.

ಕಿವಿಯಲ್ಲೇ ಅಂದ ಕಾಳ: "ತುಕ್ರಣ್ಣನನ್ನು ಕರೆದುಕೊಂಡು ಬರೋಣವೇ? ಕರಡಿ ಕೊಲ್ಲುತ್ತಾನಂತೆ ಅವ. ಕರಡಿ ಕೊಂದಿದ್ದಾನಂತೆ ಅವನು."

ತುಕ್ರಣ್ಣನ ಹೆಸರು ಕರಿಯನಿಗೆ ಒಪ್ಪಲಿಲ್ಲ. ಕರಿಯನ ಮನಸ್ಸಿಗೆ, ಬೋನಿನೊಳಗೆ ಆದರ ಮರಿ ಸಿಕ್ಕಿಬಿದ್ದಿದೆಯೆಂದೂ, ತಾಯಿ ಕರಡಿ ಅದಕ್ಕಾಗಿ ಬೋನಿನ ಹೊರಗೆ ಗುರುಗುರುಸುತ್ತಿದೆ—ಎಂದೂ ತೋರಿತ್ತು. ಆ ಮರಿ ತಮಗೆ ಸಿಗಲು, ತಾಯಿಯನ್ನು ಬೇಟೆಯಾಡಿ ಕೊಲ್ಲದೆ ತಮ್ಮ ಕೆಲಸ ಸಾಧ್ಯವಾಗದು ಎಂಬುದರಿಂದ, ಇಬ್ಬರೂ ಧಾವಿಸಿ, ಕೇರಿಗೆ ಬಂದರು. ಅಜ್ಜ, ಮಾವ ಇಬ್ಬರೂ ಅಂಬಲಿ ಕುಡಿದು, ಕಟ್ಟಿಗೆ ಕಡಿಯಲು ಹೊರಟು ಹೋಗಿದ್ದರು. ಹುಡುಗರಿಬ್ಬರು ಕೆಲಸ ನಡೆಯುವ ತಾವಿಗೆ ಹೋಗರು. ಹುಡುಗರನ್ನು ಕಂಡು ಕೆಂಚ ರೇಗಿದ. "ಏನು ಕರಿಯ, ಬೆಳಗ್ಗೆ ಅಂಬಲಿ ಸಹ ಉಣ್ಣದೆ ನೀವೆಲ್ಲಿಗೆ ಹೋದದ್ದು?" ಎಂದು ಗದರಿಸಿದ. ಬಳಿಕ "ಎಲ್ಲರಂತೆ ನಿಮ್ಮಿಂದಾದಷ್ಟು ನೀವು ಕಟ್ಟಿಗೆ ಹೊರಬಾರದೇ" ಎಂದ. ಅವನ ದಾಕ್ಷಿಣ್ಯಕ್ಕೆ ಹುಡುಗರು ಕಟ್ಟಿಗೆ ಹೊತ್ತುಕೊಂಡು ಮನೆಗೆ ಮರಳಿದರು. ಮರಳುತ್ತ ಕರಿಯ, ಅಜ್ಜನೊಡನೆ ತಾನು ಮಾಡಿಬಂದ ಕೆಲಸ ಹೇಳಿದ; ಅಷ್ಟರಲ್ಲಿ ಬೂದನೂ ಬಂದ. "ಮಾವ, ನನಗೆ ಆ ಕರಡಿಯ ಮರಿ ಹಿಡಿದು ತಂದು

ಕೊಡಲೇಬೇಕು" ಎಂದ. ಬೂದ, ಕೆಂಚರು ಸೇರಿ ಯೋಚಿಸಿದರು. ಮಕ್ಕಳ ಸಾಹಸಕ್ಕೇನೋ ಹರ್ಷ ತಾಳಿದರು. ಆದರೆ ಕರಡಿಯ ಬೇಟೆ ಅವರಿಗೆ ಸುಲಭ ವಾಗಿ ಕಾಣಿಸಲಿಲ್ಲ. ಬೇರೆ ದಾರಿಯನ್ನು ಕಾಣದೆ—ಬೂದ ಧನಿಗಳಲ್ಲಿಗೆ ಹೋಗಿ, ಕೋವಿಯನ್ನೂ, ಚರೆಮದ್ದನ್ನೂ ಬೇಡಿಕೊಂಡು ಬಂದ. ಅಲ್ಲಿಂದ ನಾಲ್ವರೂ ಕತ್ತಿ, ಈಟಿ ಹಿಡಿದು ಆ ಬೆಟ್ಟವನ್ನು ಏರಿದರು. ಕರಡಿಯೂ ಕಾಣಸಿಕ್ಕಿತು. ಬೂದ ಎಲ್ಲರನ್ನೂ ಮರೆಯಾಗಿರಲು ಹೇಳಿ, ಅಲ್ಲಿನ ದಾರಿ ಬಲ್ಲವನಾದುದರಿಂದ, ಕಾಡನ್ನು ಬಳಸಿ ಸುತ್ತಿಕೊಂಡು, ಬೇರೊಂದು ಮಗ್ಗುಲಿನಿಂದ, ಕರಡಿಗೆ ಆದಷ್ಟು ಸಮೀಪಕ್ಕೆ ಹೋಗಿ, ಅಡಗಿ, ಗುರಿಹಿಡಿದು ಗುಂಡು ಹಾರಿಸಿದ. ಧೊಪ್ಪನೆ ಕರಡಿಯು ಉರುಳಿಬಿತ್ತು. ಗುಂಡಿನ ಧ್ವನಿ ಇವರಿಗೂ ಕೇಳಿಸಿತು. ಆಗ ಈ ಮೂವರು ಮರೆಯಿಂದ ಹೊರಕ್ಕೆ ಬಂದರು. ಹುಡುಗರಂತು ಅಲ್ಲಿಗೆ ಧಾವಿಸುವುದಕ್ಕೆ ಮುಂದಾದರು. ಕೆಂಚ ಅವರನ್ನು ತಡೆದು ಹಿಡಿದ. "ನಿಲ್ಲಿ, ಅವಸರ ಮಾಡಬೇಡಿ. ಒಂದೋ ಎರಡೋ ಇರ ಬಹುದು. ಸ್ವಲ್ಪ ಹೊತ್ತು ಕಾದು ಕುಳಿತರೆ ಇನ್ನೊಂದು ಕರಡಿ ಸಮೀಪ ಇದ್ದರೆ, ಗೊತ್ತಾಗುತ್ತದೆ" ಎಂದ. ತಿರುಗಿ ಮರೆಯಲ್ಲಿ ಅವರು ಅಡಗಿರ ಬೇಕಾಯಿತು. ಬೂದನೂ ಸ್ವಲ್ಪ ಹೊತ್ತು ಅಡಗಿದ್ದು ಇಣಿಕಿ ನೋಡುತ್ತಿದ್ದ. ಬೇರೆ ಕರಡಿಗಳಾವುವೂ ಬರಲಿಲ್ಲ. ಹಾಗೆಂದು ತಾನಿದ್ದಲ್ಲಿಂದ ಕೇಕೆ ಹೊಡೆದ. ಇವರೂ ಕೂಗಿದರು ನೀಳವಾದ ಮೊನಚುಗೋಲುಗಳನ್ನು ಕೈಯಲ್ಲಿ ಹಿಡಿದುಕೊಂಡು, ನಾಲ್ಕು ದಿಕ್ಕುಗಳಲ್ಲಿ ನಿಂತು, ಮುಂದಕ್ಕೆ ಹೆಜ್ಜೆಹಾಕುತ್ತ ಮೆಲ್ಲನೆ ಹೋದರು. ಬಿದ್ದ ಕರಡಿ, ಅರ್ಧ ಗಾಯಗೊಂಡು, ಉಸಿರಾಡು ತಿತ್ತು. ಅದನ್ನು ಇರಿದು, ಪೂರ್ಣ ಕೊಂದಮೇಲೆ ಪೊದೆಯ ಬಳಿಗೆ ಬಂದರು. ಈಟಿಯಿಂದಲೇ ಕರಿಯ ಕಾಳರು ಬೋನನ್ನು ಮರೆಮಾಡಿದ ಸೊಪ್ಪನ್ನು ತೆಗೆದರು. ಕರಿಯನ ಹಿಗ್ಗು ಅಷ್ಟಿಷ್ಟಲ್ಲ! ನಿಜಕ್ಕೂ ಪುಟ್ಟ ಕರಡಿಯ ಮರಿ ಯೊಂದು ಜೇನಿನ ಚಪಲಕ್ಕೆ, ಬಂದು ಆ ಬೋನಿನೊಳಗೆ ಸಿಕ್ಕಿಬಿದ್ದಿತ್ತು. ಬೋನು ಸಾಕಷ್ಟು ಗಟ್ಟಿಮುಟ್ಟಾಗಿದ್ದುದರಿಂದ, ಮರಿ ಪಾರಾಗಲಿಲ್ಲ. ಮರಿ ಯನ್ನು ಉಳಿಸಲು ಹೋದ ತಾಯಿ ಮಾತ್ರ ಜೀವ ಕಳೆದುಕೊಂಡಿತು. ಒಂದು ಗಳಿಗೆಯ ಬಳಿಕ ಕರಿಯನಿಗೂ ಮರುಕವಾಗದೆ ಹೋಗಲಿಲ್ಲ. ಎಲ್ಲರೂ ಸೇರಿ ಬೋನನ್ನು ಹೊತ್ತುಕೊಂಡು ಬಂದರು. ಬೋನಿನ ಸುತ್ತ

ಕೇರಿಗೆ ಕೇರಿಯೇ ಕೂಡಿತು. ಅನಂತರ ಬೂದ, ಕೆಂಚ, ಇನ್ನಿಬ್ಬರು ಆಳು ಗಳನ್ನು ಕಟ್ಟಿಕೊಂಡು, ಸತ್ತ ಕರಡಿಯ ಹೆಣವನ್ನು ಮನೆಗೆ ಹೊತ್ತುತಂದು, ಮೆರವಣಿಗೆ ಮಾಡಿದರು. ಅದರ ತೊಗಲು, ಧನಿಯರ ಮನೆಗೆ ಕಾಣಿಕೆಯಾಗಿ ಹೋಯಿತು.

ಮುಂದೆ ಬೋನಿನಿಂದ ಮರಿ ತೆಗೆದು, ಅದರಿಂದ ಪರಚಿಸಿಕೊಂಡು, ಅದರ ಕೊರಳಿಗೆ ಹಗ್ಗ ಮಾಡಿ ಹಾಕಿ, ಅದನ್ನು ಮನೆಯ ನಾಯಾಗಿ ಮಾಡುವ ಕೆಲಸ ಕರಿಯನಿಗೆ. ಅಷ್ಟು ಮಾಡದೆ ಬಿಡುತ್ತಾನೆಯೇ? ಅದಕ್ಕೂ ಹೆಚ್ಚಿನ ಕೆಲಸ ಅವನದ್ದು. ಕೆಲವೊಂದು ದಿನ ಆ ಮರಿಗಾಗಿ ಜೇನು ಹುಡುಕು ತ್ತಾನೆ, ಈಚಲು ಹಣ್ಣಿನ ಔತಣ ಮಾಡಿಸುತ್ತಾನೆ. ಇತರರನ್ನು ಕೇಳಿ, ತಿಳಿದು, ಬೂದ ಕರಡಿಯ ಮೂಗಿಗೊಂದು ಉಂಗುರ ಮಾಡಿಸಿ ಹಾಕಿದ. ಒಂದೆರಡು ತಿಂಗಳಲ್ಲಿ ಆ ಮರಿ ಪಳಗಿ ಮನೆಯ ನಾಯಿಯೇ ಆಯಿತು. ಹುಡುಗರಿಬ್ಬರು ಕಂಬಳಿ ಹೊದೆದುಕೊಂಡು ಆ ಕರಡಿಯ 'ಅಪ್ಪ', 'ಅಮ್ಮ'ರಾಗಿ ಅದರ ಜತೆಗೆ ಆಡಿದ ಗಳಿಗೆಗಳೆಷ್ಟೊ. ಇದರಿಂದಲೂ ಕರಿ ಯನ ಮನಕ್ಕೆ ತೃಪ್ತಿಯಿಲ್ಲ. 'ಹುಲಿ ಹಿಡಿದರೇನು? ಕಾಟಿ ಹಿಡಿದರೇನು? ಆನೆಯನ್ನೇ ಹಿಡಿದರೇನು?' ಎಂಬುದೇ ಅವನ ಮನದ ಚಪಲ. 'ಹುಲಿ ಯಲ್ಲ—ಇನ್ನೇನಲ್ಲವೇ! ಹಾಗೆಲ್ಲ ಸಾಧ್ಯವಾಗಲಾರದು?' ಎಂದು ಬೆದರಿ ಸಿದ ಕೆಂಚ. 'ಕಾಟಿಯ ಮರಿ ಹಿಡಿದು ತಂದರೆ ಕೇರಿಯವರು ಕದ್ದು ತಿಂದಾರು' ಎಂದು ಪರಿಹಾಸ್ಯಮಾಡಿದ ಬೂದ. ಹಾಗಾಗಿ ಆನೆಯ ಮಾವುತ ನಾಗುವ ಒಂದಾಸೆಯಾದರೂ ಕರಿಯನಲ್ಲಿ ಉಳಿಯಿತು. ಆತನ ಮನಸ್ಸಿಗೆ ಕರಡಿ ಹಿಡಿದ ತಾನು, ಕರಡಿ ಕೊಂದ ತುಕ್ರನಿಗಿಂತ ಒಂದು ಮುಷ್ಟಿ ಹೆಚ್ಚು—ಎಂಬ ಹೆಮ್ಮೆಯೂ ಉಂಟಾಯಿತು.

ಕೆಂಚನಿಗೆ ಈಗ ವಯಸ್ಸು ಎಪ್ಪತ್ತಕ್ಕೆ ಸಮೀಪಿಸಿತು; ತುಸು ಹೆಚ್ಚೇ ಆಗಿದ್ದರೆ ಆಗಿದ್ದಿರಬಹುದು. ಅವರದ್ದೆಲ್ಲ ಅಂದಾಜಿನ ಎಣಿಕೆ. ಹಾಗಿದ್ದ ಮೇಲೆ ಮೊದಲಿನ ದೇಹದಾರ್ಢ್ಯ ಉಳಿಯುವುದಂತು ಶಕ್ಯವಿಲ್ಲ. ಮಳೆಗಾಲ ಬಂತೆಂದರೆ ಕೆಮ್ಮು, ಉಬ್ಬಸ ತೊಡಗುತ್ತದೆ. ಪ್ರತಿಯೊಂದು ಬಾರಿ ಮಳೆ ಗಾಲದಲ್ಲೂ 'ತನಗಿನ್ನು ಆಯುಷ್ಯ ದಿನವೋ, ತಿಂಗಳೋ'—ಎಂದು ಆತ ಎಣಿಕೆ ಹಾಕುವುದುಂಟು. ಮೊಮ್ಮಗನ ಚಿಂತೆ ಅವನಿಗೀಗ ಅಷ್ಟೊಂದು

ಹೆಚ್ಚಾಗಿಲ್ಲ. ಹುಡುಗ ಸೊಗಸಿನ ಸಾಹಸಿಯಾಗಿ, ಮೈತುಂಬಿ ಬೆಳೆದಿದ್ದಾನೆ. ಅವನನ್ನು ಕಂಡರೆ ಸಂತೋಷವಾಗಬೇಕು. ಹೀಗೆಯೇ ಇನ್ನೊಂದೆರಡು ಮಳೆಗಾಲ ಕಳೆದರೆ, ತಾನು ಕಣ್ಮುಚ್ಚಿದರೂ ಚಿಂತೆಯಿಲ್ಲ? ತನ್ನ ಬಳಿಕ ಕರಿಯು ಕೇರಿಗೆ ಗುರಿಕಾರನಾಗುತ್ತಾನೆ—ಎಂಬ ವಿಶ್ವಾಸ ಕೆಂಚನಲ್ಲಿ ಬೆಳೆಯುತ್ತಿದೆ. ಈ ಆಸೆಯ ಜತೆಗೆ ಒಂದು ಬೆದರಿಕೆಯೂ ಉಂಟು. ಹುಡುಗನ ಮನಸ್ಸು ದಿನವೆಲ್ಲ—ಹುಲಿ ಹಿಡಿಯುವ, ಕರಡಿ ಹಿಡಿಯುವ, ಆನೆ ಹಿಡಿಯುವ—ಆಸೆ ಮೂಡುತ್ತಿರುವುದನ್ನು ಕಂಡು. ಎಲ್ಲೆಂದರಲ್ಲಿ ಕಾಡಿನಲ್ಲಿ ಒಂಟಿಯಾಗಿ, ಕೆಲವೊಮ್ಮೆ ಕಾಳನ ಜತೆಯಲ್ಲಿ, ಆತ ಅಲೆದಾಡುತ್ತಿರುವುದನ್ನು ಕಂಡರೆ ಅವನ ಮನಸ್ಸು ಅಳುಕುತ್ತದೆ. ಏನಾದರೊಂದು ಆಪತ್ತಿಗೆ ಗುರಿಯಾದಾನೆಯೇ—ಎಂಬ ಬೆದರಿಕೆ. ಈ ಬೆದರಿಕೆಯಿಂದ ಬೂದನಿಗೆ ಹತ್ತಾರು ಬಾರಿ ಹೀಗೆ ಹೇಳಿದ್ದೂ ಉಂಟು: "ನೋಡಣ್ಣಾ, ಕರಿಯ, ಕಾಳ ಇಬ್ಬರ ವಿಷಯದಲ್ಲಿಯೂ ನೀನು ಸ್ವಲ್ಪ ಹೆಚ್ಚಿಗೆ ನಿಗಾ ಇರಿಸಿಕೊಳ್ಳಬೇಕು." ಅದಕ್ಕೆ ಬೂದ "ಅಂಥದ್ದೇನಿಲ್ಲ ಅಜ್ಜ, ಬುದ್ಧಿ ಉಂಟು ಅವರಿಗೆ. ಆ ದಿವಸ ಕರಡಿಮರಿ ಬೋನಿಗೆ ಸಿಕ್ಕಿದಾಗ ನಮ್ಮನ್ನು ಕರೆಯಲು ಬರಲಿಲ್ಲವೇ?" ಎಂದು ಸಮಾಧಾನ ಹೇಳಿ, ಕೆಂಚನ ಬೆದರಿಕೆ ತಣಿಸುತಿದ್ದ.

ಇಂಥ ವೇಳೆಯಲ್ಲೇ ತಿರುಮಲಭಟ್ಟರಿಗೆ ಹೊಸ ಕನಸುಗಳುಂಟಾಗ ತೊಡಗಿದವು. ಬರಿದೆ ಏಲಕ್ಕಿ ಬೇಸಾಯ ಮಾಡುವುದರ ಜತೆಗೆ, ಮಲೆಯ ನೂರಾರು ಎಕ್ರೆ ವಿಸ್ತೀರ್ಣವಾದ ಕಾಡಿನ ಉಪಯೋಗ ಏತಕ್ಕೆ ಪಡೆಯಬಾರದು. ಬೆಟ್ಟದ ತುದಿಯಿಂದ ಬುಡದ ತನಕ ಮತ್ತಿ, ಜಂಬೆ, ನಂದಿ, ಮೊದಲಾದ ಮೋಪಿಗೆ ಬರುವ ಮರಗಳಿವೆ. ಅವನ್ನೇಕೆ ಕಡಿದು ಸಾಗಿಸಬಾರದು—ಎಂಬ ಆಸೆ ಹುಟ್ಟಿತು. ಆ ಆಸೆಯ ಜತೆಗೆ ನಾಟ ಸಾಗಿಸಲು ಆನೆ ಬೇಡವೇ?—ಎಂದೂ ಹೊಳೆಯಿತು. ಪರ ಊರಿನಿಂದ ಆನೆ ತರಿಸುವ ಬದಲು ತಮ್ಮ ಕಾಡಿನಲ್ಲೇ ಅದನ್ನೇಕೆ ಹಿಡಿದು ಪಳಗಿಸಬಾರದು—ಎಂಬ ಯೋಚನೆಯೂ ಆಯಿತು. ಹಿಂದೊಮ್ಮೆ ಕರ್ಪಿಟ್ಟು ಆನೆ ಹಿಡಿಸಿದ್ದರು; ಅದನ್ನು ಬಿಟ್ಟೂಬಿಟ್ಟಿದ್ದರು. ಈ ಬಾರಿ ಹಿಡಿದು ಸಾಕಬೇಕು—ಎಂಬ ಹಂಬಲವಾಯಿತು. ವ್ಯಾಪಾರದ ಲಾಭವೋ, ಅಥವಾ ಮಲೆಗೆ ಇನ್ನಷ್ಟು ಹೆಚ್ಚಾಗಿ ಬಂದು ಹೋಗುವ ಹವಣಿಕೆಯೋ ಅದಕ್ಕೆ ಕಾರಣವಾಗಿರಬಹುದು.

ಧನಿಗಳು ಆನೆ ಹಿಡಿಯುವ ಹಂಚಿಕೆ ಮಾಡಿದ್ದಾರೆ—ಎಂದು ಕೇಳಿದ ಕರಿಯನಿಗೆ, ಸ್ವರ್ಗವೇ ಕೈಗೆ ಬಂದ ಹಾಗಾಯಿತು. ಅವನ ಹುಮ್ಮಸವೇ ಹುಮ್ಮಸ. ಆನೆ ಹಿಡಿಯುವ ಮೊದಲೇನೆ, ಎಲ್ಲೋ ದೇವಾಲಯದಿಂದ ಸಾಕಿದ ಎರಡು ಆನೆಗಳನ್ನು ತರಿಸಿಕೊಂಡರು. ಕೇರಳದಿಂದ ಪಳಗಿಸುವ ಮಾವುತನೊಬ್ಬನನ್ನು ಕರೆಯಿಸಿಕೊಂಡರು. ಆ ಬಳಿಕ ಅವನನ್ನು, ಜತೆಗೆ ತುಕ್ರನನ್ನೂ ಕರೆದುಕೊಂಡು, ಆನೆಗಳ ಸಂಚಾರದ ಹಾದಿಯನ್ನೆಲ್ಲಾ ನೋಡುತ್ತ ಸುತ್ತಾಡಿದರು. ಮಲೆಯ ತುದಿಯಲ್ಲಿ ಕರ್ಪಿಟ್ಟು ಒದ್ದಾಡು ವುದು ಬೇಡವೆಂದು ಯೋಚಿಸಿ, ಬುಡದ ಕಾಡೊಂದರ ಬಳಿ, ಕರ್ಪಿನ ಏರ್ಪಾಟು ಮಾಡಿದರು.

ಆಳವಾದ ಕುಣಿಯೊಂದನ್ನು ತೆಗೆಯಿಸಿದರು. ಅದನ್ನು ತಟ್ಟಿಗಳಿಂದ ಮುಚ್ಚಿಸಿ, ಬಾಳೆ ಗಿಡಗಳನ್ನು ನಡಿಸಿದರು. ಪಳಗಿಸುವುದಕ್ಕೆ ಬೇಕಾದ ಪಂಜರ ಹೂಡಿದರು. ಆನೆಯ ಬರುವಿಕೆಗಾಗಿ ದಿನ ದಿನ ಹೊಂಚುಹಾಕುತ್ತ ಕುಳಿತರು. ಈ ಕೆಲಸ ತೊಡಗಿದ ಮೇಲೆ ಕರಿಯನ ಜೀವವೆಲ್ಲ ಮಲೆಯ ಬುಡದಲ್ಲೇ. ಕೆಲಸ ನಡೆಯುವಾಗಲೆಲ್ಲ—ಅದನ್ನು ನೋಡುವ ಸಲುವಾಗಿ ಬೆಟ್ಟ ಇಳಿದು ಹೋಗಿ ಬರುತ್ತಿದ್ದ. ಅವನನ್ನೇನೊ ಧನಿಗಳು ಕರೆಯಿಸಿ ಕೊಳ್ಳಲಿಲ್ಲ. ಬದಲು ಬೂದ, ತುಕ್ರ ಮೊದಲಾದ ನಾಲ್ಕೆಂಟು ಮಂದಿ ಹಿರಿಯರನ್ನು ಕರೆದುಕೊಂಡು ಮೂಲೆಗುಂಪಿನಲ್ಲಿ ಹೋಗಿ ಬಿಡಾರ ಮಾಡಿ ದರು. ಒಂದು ರಾತ್ರಿ ಆನೆಗಳ ಹಿಂಡೊಂದು ಆ ದಾರಿಯಾಗಿ ಬಂದಿತು. ಅವು ಗಳಲ್ಲೊಂದು ಕರ್ಪನ್ನು ಸಮೀಪಿಸಿ ಬಾಳೆಯ ಗಿಡಕ್ಕೆ ಸೊಂಡಿಲು ಹಾಕಿ, ಕುಣಿಗೆ ಬಿದ್ದೂಬಿಟ್ಟಿತು! ನಸುಕಿಗೆ ಮುಂಚೆಯೇ ಕೇರಿ ಬಿಟ್ಟು ಅಲ್ಲಿಗೆ ಹೊರಟ ಕರಿಯನ ಕಣ್ಣಿಗೇನೇ ಅದು ಕಾಣಿಸಬೇಕೇ? ಆತ ದೂರ ದಿಂದಲೇ ನೋಡಿದ. ಬಿದ್ದ ಹೆಣ್ಣಾನೆಯನ್ನು ಮೇಲಕ್ಕೆತ್ತಲು ಉಳಿದ ಆನೆಗಳು ಮಾಡುತ್ತಿದ್ದ ಸಾಹಸವನ್ನು ಕಂಡು ಗಾಬರಿಗೊಂಡ. ಅವುಗಳ ಆರ್ಭಟೆ ಯನ್ನೂ ಕೇಳಿದ. ಕಂಡು, ಕಂಗಾಲಾಗಿ ಮೂಲೆಗುಂಪಿಗೆ ಸುದ್ದಿ ಕೊಡಲು ಓಟ ಹೂಡಿದ. ನಾಲ್ಕು ನಾಲ್ಕು ದಿನ ಅಲ್ಲಿಗೆ ಹೋಗಿ ಬಂದು ನಿರಾಶೆ ಗೊಂಡ ಭಟ್ಟರ ಆಳುಗಳು, ಆ ದಿನ ಮಾತ್ರ ಬೆಳಗಾದರೂ ಹೊರಟಿರಲಿಲ್ಲ. ಅವರಿಗೆ ಈ ಸುದ್ದಿ ತಿಳಿಸಿದವ ಕರಿಯ.

"ಒಂದಲ್ಲ, ಎರಡಲ್ಲ, ಏಳೆಂಟು ಆನೆಗಳ ಹಿಂಡನ್ನು ಕಂಡೆ. ಒಂದಂತು ಭಾರಿ ಟೊಣೆಯ. ಒಂದೆರಡು ಮರಿಗಳೂ ಇದ್ದುವು. ಆ ಗದ್ದಲ ಕೇಳಿ ನನ್ನೆದೆಯೇ ನಡುಗಿತು" ಎಂದು ಸುದ್ದಿ ಕೊಟ್ಟ. ಸುದ್ದಿಯನ್ನು ಕೇಳಿಯೇ ಭಟ್ಟರಿಗೆ ಏನು ಮಾಡುವುದೆಂದು ತೋರಲಿಲ್ಲ. ತಮ್ಮ ಜನಗಳನ್ನೂ, ಊರಿನ ಆಳುಗಳನ್ನೂ ಕೂಡಿಸಿಕೊಂಡು, ಬೆಟ್ಟದ ಬುಡದಿಂದಲೇ ಬೊಬ್ಬಿರಿಯುತ್ತ ಹೊರಟರು. ಕರ್ಪು ತೋಡಿದ ಸ್ಥಳ ಬಹು ದೂರ ಇತ್ತಾದರೂ, ಬೊಬ್ಬೆ ಮಾತ್ರ ಬಲು ಮುಂಚೆಯೇ ಪ್ರಾರಂಭವಾಗಿತ್ತು. ಕೈಯಲ್ಲಿ ಬಂದೂಕು ಇತ್ತು. ಕರ್ಪನ್ನು ಸಮೀಪಿಸುವಾಗ ಏನೊಂದೂ ಪ್ರಾಣಿ ಕಾಣಿಸದಿದ್ದುದರಿಂದ "ಅಬ್ಬಾ, ಕರಿಯನೇ ಹಸಿ ಹಸಿ ಸುಳ್ಳು ಹೇಳಿಬಿಟ್ಟ" ಎಂದರು. ಕರಿಯ ತಾನು ಕಣ್ಣಾರೆ ಕಂಡಿದ್ದೇನೆಂದರೂ ನಂಬಲಾರರು ಅವರು. ಸ್ಥಳಕ್ಕೆ ಹೋದರು. ಎಲ್ಲವನ್ನೂ ಕಂಡರು. ಆನೆಯ ಹಿಂಡು ಬಂದದ್ದೂ ಅಹುದು; ಒಂದು ಕುಣಿಗೆ ಬಿದ್ದದ್ದೂ ಅಹುದು. ಉಳಿದವುಗಳು ಸೇರಿ ಕುಣಿಯ ಮಗ್ಗುಲಿನ ಮಣ್ಣನ್ನು ತುಳಿದು, ಜರಿಸಿ, ಬಿದ್ದ ಆನೆಗೆ ಸೊಂಡಿಲೆ ಕೊಟ್ಟು, ಎಳೆದು ಪಾರು ಮಾಡಿಯೂ ಹೋಗಿದ್ದವು. ಆಗ ಅವರಿಗಾದ ಹೊಟ್ಟೆಸಂಕಟವನ್ನು ಹೇಳತೀರದು.

ಇನ್ನೊಮ್ಮೆ ಕುಣಿ ತೋಡಿಸುವುದಾದರೆ, ಬೇರೆಯೇ ತಾವನ್ನು ಆರಸಬೇಕೆಂದು ನಿಶ್ಚಯಿಸಿದರು. ಸುತ್ತಲಿನ ಮಣ್ಣು ಅಷ್ಟು ಸುಲಭದಲ್ಲಿ ಜರಿದು ಹೋಗದಂಥಾ ತಾವನ್ನು ಆರಿಸುವ ನಿಶ್ಚಯ ಮಾಡಿ, ಆನೆಯ ಸಂಚಾರದ ಹಾದಿಯಲ್ಲಿ ಅಂಥ ನೆಲದ ಭಾಗವೊಂದನ್ನು ಆರಿಸಿದರು. ಗಟ್ಟಿಯಾದ ಮುರಕಲ್ಲಿನ ನೆಲದಲ್ಲಿ ಕುಣಿ ತೋಡಿ, ಆ ಮಣ್ಣನ್ನು ದೂರಕ್ಕೆ ಚೆಲ್ಲಿ ಬೇರೊಂದು ಕರ್ಪನ್ನು ಸಿದ್ಧಪಡಿಸಿದರು. ಈ ಬಾರಿಯ ಅವರ ಪ್ರಯತ್ನ ಸಫಲವಾಯಿತು. ಚಿಕ್ಕದೊಂದು ಆನೆ ಕುಣಿಗೆ ಬಿದ್ದಿತು, ಹಿಂಡಿನ ಮಿಕ್ಕಾನೆಗಳು ಅದನ್ನು ಪಾರು ಮಾಡಲಾರದೆ ಮರಳಿ ಹೋದುವು. ಮಲೆಯಾಳಿ ಮಾವುತ ಸಾಧುವಾದ ಆನೆಗಳಿಂದ ಅದನ್ನು ಎತ್ತಿ ತಂದು ಪಳಗಿಸುವ ಪ್ರಯತ್ನವನ್ನೂ ತೊಡಗಿದ. ರಾಯರು ತಮ್ಮ ಉಳಿದ ಆಳುಗಳಿಗೆ ಮಲೆಯ ಬುಡದ ಕಾಡಿನಲ್ಲಿ ನಾಟ ಕಡಿಯುವ ಕೆಲಸ ಒಪ್ಪಿಸಿ, ಊರಿಗೆ ಹೊರಟುಹೋದರು.

ಮಲೆಯು ಬುಡವಲ್ಲವೇ ಅದು? ಮೇಲಿನಂತಲ್ಲ. ತಿಂಗಳು ದುಡಿಯಲು ಬಂದ ಆಳುಗಳು ಹದಿನೈದು ದಿನವೂ ಅಲ್ಲಿರಲಾರದೆ ಹೋದರು. ಕೆಲಸಕ್ಕೆ ನಿಂತರೆ ಮಲೆಜ್ವರ ಅವರನ್ನು ಬಿಡಬೇಕಲ್ಲ. ಮಲೆಯ ಇಳುಕಲಿನಲ್ಲಿ ಈ ಜ್ವರದ ಉಪದ್ರವ ಕಡಿಮೆ; ಇಲ್ಲವೇ ಇಲ್ಲವೆನ್ನಬಹುದು. ಬುಡದ ಪ್ರದೇಶ ಹಾಗಲ್ಲ. ಹೀಗಾಗಿ ಮಾವುತರಾರೂ ಅಲ್ಲಿ ಬಹು ದಿನ ಉಳಿಯಲು ಇಷ್ಟಪಡಲಿಲ್ಲ. ಬಂದಿದ್ದ ಮಲೆಯಾಳಿ ಮಾವುತ—ಆನೆ ಮರಿ ಪಳಗಿಸಿಕೊಟ್ಟು, ಕೆಲವು ದಿನಗಳಲ್ಲೇ ಹೊರಟುಹೋದ. ಮರಿಯನ್ನು ನೋಡಿಕೊಳ್ಳುವ ಕೆಲಸ ತಾನು ಕಲಿಯಬೇಕು—ಎಂಬ ಆಸೆ ಕರಿಯನಿಗಿದ್ದರೂ, ಧನಿ ಅದನ್ನು ತುಕ್ರನಿಗೊಪ್ಪಿಸಿದರು. ಕರಿಯ ನಿರಾಶೆಗೊಳ್ಳಬೇಕಾಯಿತು. ಇತ್ತ ಆಳುಗಳ ಅಭಾವದಿಂದ ನಾಟ ಕಡಿಯುವ ಕೆಲಸವೂ ನಿಂತು ಹೋಯಿತು.

ಇವೆಲ್ಲವುಗಳಿಂದ ಪ್ರಾಪಿಸಿದ ಪ್ರಸಂಗವೆಂದರೆ—ತುಕ್ರ ಮಲೆ ಬಿಟ್ಟು ಆರೇಳು ತಿಂಗಳ ಕಾಲ ಮೂಲೆಗುಂಪಿನಲ್ಲಿ ವಾಸ ಮಾಡಬೇಕಾಗಿ ಬಂದದ್ದು. ಅವನ ಜೀವವೆಲ್ಲ ಕೇರಿಯಲ್ಲಿತ್ತು. ಇಬ್ಬರು ಹೆಂಡಿರನ್ನೂ ಬಿಟ್ಟು, ಅದರಲ್ಲೂ ಹೊಸತಾಗಿ ಮದುವೆಯಾದ ಕಾಳಿಯನ್ನು ಮರೆತು, ಘಟ್ಟದ ಕೆಳಗೆ ಆನೆಯ ಬಾಲ ಹಿಡಿದು, ದಿನ ಕಳೆಯಬೇಕಾಗಿ ಬಂದದ್ದು ತುಂಬ ಬೇಸರಕ್ಕೆ ಕಾರಣವಾಗಿತ್ತು. ಮುಂದೆ ಮಳೆಗಾಲ ಬಂದಿತು. ಅದರ ಬಿರುಸು ತಗ್ಗಿದ ಮೇಲೆ ತಿರುಮಲಭಟ್ಟರು ಮಲೆಗೂ ಬಂದು ಹೋದರು. ಹೊರಡುವಾಗ ತುಕ್ರನ ನಿರಾಶೆಯನ್ನು ಕಂಡು "ನೀನೇನು ಯೋಚನೆ ಮಾಡಬೇಡ. ಎಲ್ಲಾದರೂ ಒಂದು ಗಿರಾಕಿ ಹುಡುಕಿ, ಈ ಮರಿಯನ್ನು ಮಾರಿಬಿಡುತ್ತೇನೆ. ಅಲ್ಲಿಯ ತನಕ ಅದನ್ನು ಸಾಕಿಕೊಂಡಿರು" ಎಂದು ಆಜ್ಞೆ ಮಾಡಿ ಊರಿಗೆ ಹೊರಟುಹೋದರು.

ತುಕ್ರ ಧನಿಯರನ್ನು ಶಪಿಸುತ್ತ, ಏಕಾಕಿಯಾಗಿ ವಾಸಮಾಡತೊಡಗಿದ. ಊರಿಗೆ ಹೋಗಲೇ ಇಲ್ಲವೆಂದಲ್ಲ. ಒಂದೆರಡು ಬಾರಿ ಕದ್ದು ಹೋಗಿ ಬಾರದಿದ್ದರೆ ಅವನ ಜೀವವೇ ನಿಲ್ಲುತ್ತಿರಲಿಲ್ಲ. ಮುಂದೆ ಅವನ ಕೆಲಸ ಸುಲಭವಾಯಿತು. ಮರಿ ಆನೆ ಅದು. ಒಂದೆರಡು ತಾಸು ಬಿಟ್ಟಿದ್ದರೂ ನಡಿಯುತ್ತದೆ. ಮರ ಏರಿ ಸೊಪ್ಪು ಕಡಿದು ರಾಶಿ ಹಾಕಿದರೆ ಬೆಪ್ಪು ದನದಂತೆ

ತಿನ್ನುತ್ತಿರುತ್ತದೆ. ಅನಂತರ ಅದನ್ನು ತೋಡಿಗೊಯ್ದು, ಮೇಯಿಸಿ, ಮೈ ಉಜ್ಜಿ ತಂದು ಕಟ್ಟಿಹಾಕಿದರಾಯಿತು. ಒಂದು ದಿನ ತುಕ್ರ ಮರವೇರಿ ಸೊಪ್ಪು ಕಡಿಯುತ್ತಿದ್ದಾಗ ಮರಿ ಕೆಳಗೆ ನಿಂತು ಅದನ್ನು ಮೆಲ್ಲುತಿತ್ತು. ದೂರದ ಮೂಲೆಯ ಬಂಜರು ಭೂಮಿಯಲ್ಲಿ ಒಂದು ಕೆರೆ ಇತ್ತು. ಮರ ಏರಿದ ಅವನಿಗೆ ಕೆರೆಯಲ್ಲಿ ಮುಳುಗಿ ಸರಸವಾಡುತ್ತಿದ್ದ ಆನೆಗಳ ಹಿಂಡೊಂದು ಕಾಣಿಸಿತು. ಅದನ್ನೇ ಕುತೂಹಲದಿಂದ ನೋಡುತ್ತ ಕುಳಿತ. ಅಲ್ಲೊಂದಾನೆ ಧ್ವನಿಯ ಕಹಳೆಯನ್ನೂದುತ್ತಲೇ, ಮರದ ಕೆಳಗಿದ್ದ ಮರಿಯೂ ಸಹ ಮರು ಧ್ವನಿ ಕೊಟ್ಟೀತೆಂದು ಆತ ಎಣಿಸಿರಲಿಲ್ಲ. ಈತಗೆ ತಾನು ಅದನ್ನು ಕಟ್ಟಿ ಹಾಕಿರಲಿಲ್ಲ ಎಂಬ ನೆನಪೂ ಹೊಳೆಯಲಿಲ್ಲ. ಆ ನೆನಪು ಬಂದು ಗಾಬರಿ ಯಿಂದ ಮರ ಇಳಿಯುವುದರೊಳಗಾಗಿ, ಮರಿಯಾನೆ ಓಟ ಹೂಡಿ ಒಂದೇ ಸವನೆ ಕೆರೆಯ ಕಡೆಗೆ ಧಾವಿಸಿತು. ಇವನು ಅದನ್ನು ಕರೆಯುತ್ತ ಓಡಿದ. ಆದರೆ ಆನೆಯ ಓಟಕ್ಕೆ ಇವನ ಓಟವೇ! ಅದು ತನ್ನ ಹಿಂಡನ್ನು ಕೂಡಿ ಕೊಂಡುದನ್ನು ಕಂಡೊಡನೆಯೇ ದಾರಿಯಲ್ಲೇ ನಿಂತ. ಮುಂದುವರಿಯುವ ಸಾಹಸವಾಗಲಿಲ್ಲ. ಇವನ ಕಣ್ಣೆದುರಿಗೇ ಆ ಗುಂಪು ನೀರಿಂದೆದ್ದು ಮರಿ ಯನ್ನು ಕೂಡಿಕೊಂಡು ಮಲೆ ಹತ್ತಿದುದೂ ಕಂಡ ಹಾಗನಿಸಿತು. ಭಯ ಭೀತಿಗಳಿಂದ ತಲೆಯ ಮೇಲೆ ಕೈಯಿರಿಸಿಕೊಂಡು ಮನೆಗೆ ಬಂದ. ಬೀಡಿನ ಬಲ್ಲಾಳರಿಗೆ ಹೇಳಿದ. ಅವರ ಹೇಳಿಕೆಯಂತೆ ಧನಿಗಳಿಗೆ ಸುದ್ದಿ ತಿಳಿಸಲು ವಿಟ್ಟಲಕ್ಕೆ ತೆರಳಿದ. ಈ ಸುದ್ದಿ ಅವನ ಕೇರಿಗೂ ಮುಟ್ಟಿತು. ಕೆಂಚ ತುಂಬ ವ್ಯಸನಕ್ಕೆ ಗುರಿಯಾದ. ಬೂದನಿಗೆ ಅಷ್ಟು ದುಃಖವೆನಿಸಲಿಲ್ಲ. "ಕರಿಯ ಸಣ್ಣವ, ಅವನಿಂದೇನಾದೀತು ಅಂದರಲ್ಲ. ಈಗ ತುಕ್ರ ಮಾಡಿದ ಕೆಲಸ ನೋಡಿ ಸಂತೋಷಪಡಲಿ ಧನಿಗಳು. ತುಕ್ರನ ಮುಸುಡಿಗೆ ಸಮ ನಾದ ಮಂಗಳಾರತಿ ಆಗಲಿ" ಎಂದ.

ಕರಿಯನಿಗೆ ಒಂದು ಕಡೆ ಸಮಾಧಾನ; ಇನ್ನೊಂದು ಕಡೆ ಅಸಮಾ ಧಾನ. ಮರಿ ಓಡಿಹೋದ ಬಗ್ಗೆ ವ್ಯಥೆ; ತುಕ್ರನ ಪರಾಭವಕ್ಕಾಗಿ ಸಂತೋಷ. ತನಗೆ ಸಿಗದ ಗೌರವ ಅವನಿಗೆ ದೊರಕಿದ್ದಕ್ಕಾಗಿ ಅಸೂಯೆ ಉಂಟಾಗಿತ್ತು. ಅಸೂಯೆಯ ಕಾರಣ ಹೋಗುತ್ತಲೇ, ತೃಪ್ತಿಯುಂಟಾ ಯಿತು. ಅದರ ಜತೆಗೆ ಅನ್ನುತ್ತಾನೆ: "ನನಗೆಲ್ಲ ಗೊತ್ತು—ಕರ್ಪು

ಮಾಡುವ ಕ್ರಮ. ನಾನೂ ಒಂದು ದಿನ ಆನೆ ಹಿಡಿದೇನು. ಇಂದಲ್ಲವಾದರೆ ನಾಳೆ" ಎಂದು. ಅದನ್ನು ಕೇಳಿದ ಕೆಂಚ "ನಿನಗೆ ಈ ಮರುಳು ಬಿಡುವು ದೆಂದು ಮಗು? ಕುಡಿಯರು ಆನೆ ಹಿಡಿದು ಏನಾಗಬೇಕು? ನೀನು ಹಿಡಿ ದರೂ ಆಗುವುದು ಅಷ್ಟೇನೆ. ಇವೇ ಮಲೆಯ ಆನೆಯನ್ನು ಇಲ್ಲೇ ಹಿಡಿದು ಸಾಕಿದರೆ, ಮತ್ತೇನಾದೀತು? ಅಲ್ಲದೆ ಆನೆ ಹಿಡಿದರಾಯಿತೇ? ಅದನು ಸಾಧುಮಾಡಲು ಸಾಕಿದ ಬೇರೆ ಆನೆ ಬೇಡವೇ? ಧನಿಗಳಿಗೆ ಈ ಒಂದು ಮರಿ ಹಿಡಿಯುವುದಕ್ಕೆ ರಾಶಿ ರಾಶಿ ರೂಪಾಯಿ ಖರ್ಚಾಯಿತು. ಹಿಡಿದದ್ದು ನಾಟ ಎಳೆಯಿಸಲು ಬಂದೀತೆಂದು. ಆ ಕೆಲಸವೂ ಅರ್ಧದಲ್ಲಿ ನಿಂತಿದೆ. ಜನ ಬಂದವರು ನಿಲ್ಲುವುದಿಲ್ಲ" ಎಂದು ಹುಡುಗನ ಆಸೆಗೆ ಮಣ್ಣೆರಚಿದ.

ಎಷ್ಟೆಂದರೂ ಕರಿಯನಿಗೆ ಮಾವುತನಾಗುವ ಹೆಬ್ಬಯಕೆ ಹೋಗಲೇ ಇಲ್ಲ.

ಒಂದು ವಾರದಲ್ಲಿ ತುಕ್ರ ಧನಿಗಳಿಗೆ ಸುದ್ದಿ ತಿಳಿಸಿ, ಮಲೆಗೆ ಮರಳಿದ. ಆವರಾದರೂ ಅವನ ಅಪರಾಧಕ್ಕಾಗಿ ಅಷ್ಟೊಂದು ಸಿಟ್ಟುಗೊಳ್ಳಲಿಲ್ಲ. ಕಳ ವಳ ಪಟ್ಟರು. ಅದು ತೋರಿಕೆಗೆ ಮಾತ್ರ. ಆನೆ ಮಾರಾಟ ಮಾಡ ಬೇಕೆಂಬ ಅವರ ಪ್ರಯತ್ನ ಗಿರಾಕಿಯಿಲ್ಲದೆ ಸಾಧಿಸಲಿಲ್ಲ. ಇತ್ತ ಅದರಿಂದ ಲಾಭವೂ ಇಲ್ಲ. ನಿತ್ಯವೂ ಕಾಯಿ, ಬೆಲ್ಲ, ಅಕ್ಕಿ, ರಾಗಿ ಅದರ ಹೊಟ್ಟೆಗೆ ತುಂಬಿಸಿ ಬೆಳೆಯಿಸುವುದಕ್ಕೆ ಸಾಕಷ್ಟು ವೆಚ್ಚವಾಗುತಿತ್ತು. ಹಾಗೆ ಖರ್ಚು ಮಾಡಿ ಬೆಳೆಯಿಸಿದ ಮರಿಯನ್ನು ಯಾವುದಾದರೊಂದು ದೇವಾಲಯಕ್ಕೆ ಧರ್ಮಾರ್ಥವಾಗಿ ಕೊಡುವುದಕ್ಕೂ ಮನಸ್ಸಿರಲಿಲ್ಲ. ಈಗ 'ಇನ್ನಾವ ತಾಪ ತ್ರಯವೂ ಇಲ್ಲವಲ್ಲ' ಎಂದಂದುಕೊಂಡರು.

ದಿನಗಳು ಹೀಗೆಯೇ ಸರಿದುವು. ಕೇರಿಯ ಕುಡಿಯರ ಜೀವನ ಎಂದಿನಂತೆ ಸಾಗುತಿತ್ತು. ಕರಿಯನಿಗೀಗ ಹದಿನಾರು ತುಂಬಿ ಹದಿನೇಳು. ಆತ ಉಳಿದ ಹಿರಿಯರೊಡನೆ ಕೇರಿಯ ಕೆಲಸಗಳಲ್ಲಿ ನೆರವಾಗುತ್ತಿದ್ದಾನೆ. ಬಿಡುವಿನ ಕಾಲದಲ್ಲಿ ತಿರುಗಾಡುತ್ತಾನೆ, ಬೇಟೆಯಾಡುತ್ತಾನೆ. ಜನ ಏಲಕ್ಕಿ ಹೆಕ್ಕುವುದಕ್ಕೆ ಹೋದರೆ ಇವನೂ ಹೋಗುತ್ತಾನೆ, ಕುಮರಿಯ ಹೊಲಕ್ಕೆ ಹೋದರೆ ಅಲ್ಲಿಯೂ ತನ್ನ ಪಾಲಿನ ಸೇವೆ ಸಲ್ಲಿಸುತ್ತಾನೆ. ಅದನ್ನೆಲ್ಲ ಕಂಡು ಕೆಂಚನಿಗೆ ತುಂಬ ಸಂತೋಷ. ಆವನು ಮೊಮ್ಮಗನ ಜತೆಗೆ, ಹೊಲ

ತೋಟಗಳಿಗೆ ಹೋಗಿ ಬರುವವ. ತನ್ನಿಂದಾಗುವಷ್ಟು ಶ್ರಮಪಟ್ಟು ದುಡಿಯು ವವ. ಹೀಗಿರುತ್ತ—ಒಂದು ದಿನ ಇದ್ದಕ್ಕಿದ್ದ ಹಾಗೆ ಹಿಮದಲ್ಲಿ ಅಲೆದಾ ಡಿಯೋ, ದುಡಿದು ಬೆವರಿದ ಮೈಗೆ ಚಳಿಗಾಳಿ ಒಡ್ಡಿಯೋ ಶೀತ ಹಿಡಿಸಿ ಕೊಂಡ. ಶೀತದ ಜತೆಗೆ ಜ್ವರ, ತಲೆನೋವುಗಳು ಸೇರಿಕೊಂಡವು. ಕೆಂಚ ಹಾಸುಗೆ ಹಿಡಿಯಬೇಕಾಯಿತು. ಕೆಂಪಿ, ಬೂದ, ಕಾಳ, ಕರಿಯ ಎಲ್ಲರೂ ಸೇರಿ ಅವನ ಉಪಚಾರಕ್ಕೆ ಕುಳಿತರು. ದಿನ, ಎರಡು ದಿನ, ಮೂರು ದಿನ ಗಳಾದುವು. ಎದೆನೋವು, ಕಫ ತಲೆದೋರಿತು. ಮಲೆಯ ಮದ್ದು ಮಾಟ ಗಳು ವ್ಯರ್ಥವಾದುವು. ಕೆಂಚನ ಮನಸ್ಸಿಗೆ ತನ್ನ ಅವಸಾನ ಬಹುದೂರ ವಿಲ್ಲ—ಎಂದೂ ಹೊಳೆಯಿತು. ಆತ ಬೂದನನ್ನು ಬಳಿಯಲ್ಲಿ ಕುಳ್ಳಿರಿಸಿ ಕೊಂಡು, " ಮಗು, ಬರಿದೆ ಉಪಚಾರ ಮಾಡುವುದು ನೀವು. ನನಗೇನು ಈ ಜೀವ ಶಾಶ್ವತವೇ. ನನ್ನ ಗಡು ಸಮಾಪಿಸಿದೆ ಎಂದು ತೋರುತ್ತದೆ. ನೋಡು, ನನ್ನ ಮೊಮ್ಮಗನನ್ನು ಕಾಯುವ ಭಾರ ನಿನ್ನದು " ಎಂದು ತಿಳಿಸಿದ.

ಆ ರಾತ್ರಿ ಇನ್ನೊಮ್ಮೆ ಅವನನ್ನು ಬಳಿಗೆ ಕರೆದ. ಮೆಲು ಧ್ವನಿಯಿಂದ " ಮಗು, ನಾಳಿನ ದಿನ ನನ್ನದಲ್ಲ. ನನ್ನ ನಂತರ ಯಾರು ಗುರಿಕಾರರು— ಎಂದು ಯೋಚಿಸಿದ್ದೀರಾ ? " ಎಂದ.

" ಯಾರು ಎಂದರೆ, ನಿನ್ನ ಮೊಮ್ಮಗ. ದೈವ ಆ ದಿನವೇ ಅಂದಿತ್ತಲ್ಲ "

" ದೈವ ಅಂದಿತ್ತು. ಆದರೆ ನೋಡು, ಕರಿಯ ಇನ್ನೂ ಸಣ್ಣವ. ಮಲೆಗೆ ದೈವ ಇದ್ದ ಹಾಗೆ ಧನಿಗಳೂ ಒಬ್ಬರಿಲ್ಲವೇ ? ಅವರ ಮನಸ್ಸೂ ಹೇಗಿದೆಯೋ ! ಇನ್ನು ನಮ್ಮ ಜನಗಳ ಮನಸ್ಸು ಹೇಗಿದೆ—ಎನ್ನುವುದಕ್ಕಾ ಗದು. ಏನೂ ಇರಲಿ. ಇಲ್ಲದ ಹಟ ಹಿಡಿಯಬೇಡಿ. ನಾಳೆ ಜನಗಳಲ್ಲಿ ಒಡಕು ಬರಬಾರದಲ್ಲ. ಧನಿಯರ ನಂಬಿಕೆ, ವಿಶ್ವಾಸ ತುಕ್ರನ ಮೇಲೆ. ಅದು ನಿನಗೆ ಗೊತ್ತು."

" ಅದು ಯಾಕೆ, ಏನೆಂದು ನಮಗೆ ಗೊತ್ತಿಲ್ಲದ ಮಾತೇ."

" ಅದೇನೇ ಇರಲಿ. ಧನಿಗಳು ಧನಿಗಳೇ. ಅವರು ಒಪ್ಪುವ ಹಾಗೆ ನಡೆದುಕೊಳ್ಳಲಿ. ಆಮೇಲೆ ನೋಡು—ನನ್ನ ಮಲೆರಾಯನಿಗೆ ಒಂದು

ಕಾಯಿ ಸುಲಿದಿಡು. ಸುಬ್ರಹ್ಮಣ್ಯದೇವರಿಗೆ ಒಂದನ್ನು ತೆಗೆದಿರಿಸು. ಅದನ್ನಷ್ಟು ಮುಟ್ಟಿಸು."

'ಮಲೆರಾಯ' ಎಂದ ಬೂದ. ಅವನಿಗೆ ಕೆಂಚನ ಕುಲದೈವದ ಗಮನವೇ ಬಂದಿರಲಿಲ್ಲ. ಕೆಂಚ ಸಾವಿನ ವೇಳೆಯಲ್ಲಿ ಮಲೆರಾಯನನ್ನೂ ಮರೆಯಲಿಲ್ಲ! ಎಂದು ನೋಡಿ ಆಶ್ಚರ್ಯವಾಯಿತು.

ಆ ರಾತ್ರಿಯೆಲ್ಲ.ಕೆಂಚ ಜ್ವರದ ಕುದಿಯಿಂದ ಬಸವಳಿದು ಕೆಮ್ಮುತ್ತ ಮಲಗಿದ. ಇಷ್ಟು ಮಾತನಾಡುವುದೇ ಅವನಿಗೆ ಕಠಿಣವಾತ್ತು. ಎಲ್ಲರೂ ಬಳಿಯಲ್ಲಿ ಕೂತಿದ್ದರು. ಕರಿಯ ಅಜ್ಜನ ಹಸ್ತವನ್ನು ತೊಡೆಯ ಮೇಲಿರಿಸಿಕೊಂಡು ಸವರುತ್ತಿದ್ದ, ಕಂಬನಿ ಕರೆಯುತ್ತಿದ್ದ. ಮೊಮ್ಮಗನ ಮುಖ ನೋಡಿ ಕೆಂಚ ಒಂದು ಮಾತನಾಡಿದ: "ಮಗು, ದೈವಕ್ಕೆ ಸಮನಾಗಿ ನಡೆ"— ಎಂದ. "ಹೂಂ" ಎಂದ ಕರಿಯ.

ಮರುದಿನ ನಸುಕು ಹರಿದಾಗ, ಕೆಂಚ ಬೂದನ ಮನೆಯಲ್ಲಿರಲಿಲ್ಲ. ಕೇರಿಯವರ ಸಂತಾಪದೊಂದಿಗೆ, ಕರಿಯನ ಕಂಬನಿಯೊಂದಿಗೆ, ಮಲೆಯ ಮೂಲೆಯೊಂದರಲ್ಲಿ ಚಿತೆಯನ್ನೇರಿ, ಹೊಗೆಯಾಗಿ, ಕುಡಿಯ ಹಿರಿಯರ ರಾಜ್ಯಕ್ಕೆ ಹೊರಟುಹೋದ!

## ಅಧ್ಯಾಯ ೭

ಕೆಂಚಣ್ಣ ತೀರಿಕೊಂಡ; ಅವನ ಆತ್ಮವೇನೋ ಹಿರಿಯ ಕುಡಿಯರು ವಾಸಿಸಿದ ಲೋಕಕ್ಕೆ ಹೋಯಿತು. ಅವನ ಮೊಮ್ಮಗ ಕರಿಯ ತೀರ ಅನಾಥನಾಗಿದ್ದಾನೆ. ಬರಿಯ ಇನ್ನೆರಡು ವರ್ಷಗಳು ಕಳೆದರೆ ಆತ ಪ್ರಾಯಸ್ಥನೆನಿಸಬಹುದಿತ್ತು. ಕೇರಿಯ ಗುರಿಕಾರತನವೂ ಆಗ ಸಿಗುತ್ತಿತ್ತೋ ಏನೋ. ವಯಸ್ಸು, ವಯಸ್ಸಿನೊಂದಿಗೆ ಹೊಂದಿದ ಅನುಭವಶೀಲತೆ, ಇವೆರಡೂ ಇಲ್ಲದ ಕರಿಯ, ನಾಳಿನ ಧೈರ್ಯ ಸಾಲದೆ ಕುಡಿಯರ ಬಳಗದಲ್ಲಿ ಬೆಳೆಯಬೇಕಾಗಿ ಬಂದರೂ, ಸಾಮಾನ್ಯವಾಗಿ ಅವನ ಭವಿಷ್ಯಕ್ಕೆ ವಿಘ್ನಗಳೇನೂ ಬರಲಿಲ್ಲ. ದೊಡ್ಡವರಂತೆ—ಆತ ಏಲಕ್ಕಿ ಸಾಗುವಳಿಗೆ ನೆರವಾಗಬಲ್ಲ; ಕುಮರಿ ಬೇಸಾಯಕ್ಕೆ ಹೋಗಬಲ್ಲ; ವಿವಿಧ ಬೇಟೆಗಳಿಂದ ಜೀವನ ಸಾಗಿಸಬಲ್ಲ; ಇಷ್ಟೇ—ಕುಡಿಯರ ಗುರಿಕಾರನಾಗುವುದು ಮಾತ್ರ ಸಾಧ್ಯ

ವಲ್ಲದ ಮಾತು. ಅದಕ್ಕೆ ತಕ್ಕ ವಯಸ್ಸಿರಲಿಲ್ಲ. ಅಲ್ಲದೆ ಅಜ್ಜನ ಮೊಮ್ಮಗನೆಂದ ಮಾತ್ರಕ್ಕೆ, ಅಜ್ಜನು ಕಾಲವಾದ ಮೇಲೆ, ಅವನ ತಲೆಯ ಮೇಲೆ ಆ ಪಟ್ಟವು ತಾನಾಗಿ ಕುಳಿತುಕೊಂಡೀತೆನ್ನುವುದೂ ಕಷ್ಟ. ಕೇರಿಯವರೆಲ್ಲ ಅದಕ್ಕೆ ಒಡಂಬಡಬೇಕು ; ಹಿರಿಯರು, ಅನುಭವಿಗಳಾದ ಇತರರು, ಇಲ್ಲವೇನು ಕೇರಿಯಲ್ಲಿ ? ಆ ಇತರರೆಂದರೆ—ಮುಖ್ಯವಾಗಿ ತನ್ನ ಧನಿಗೆ ಪ್ರೀತಿಯವನಾದ ತುಕ್ರನಿದ್ದಾನಲ್ಲ. ಅವನಿಗಿಂತ ವಯಸ್ಸಿನಲ್ಲಿ ಹತ್ತು ವರ್ಷಕ್ಕೆ ಹಿರಿಯನಾದ ಚನಿಯ ಎಂಬವನೊಬ್ಬನಿದ್ದ. ಬೂದನ ಮನಸ್ಸಿನಲ್ಲಿ ಕರಿಯನನ್ನು ಒಮ್ಮೆಗೇ ತಾವೆಲ್ಲ ಎತ್ತಿಹಿಡಿದರೆ, ಕೆಲಸ ಆಗಲಾರದೆಂದು ಗೊತ್ತಿದ್ದುದರಿಂದ, ತುಕ್ರನ ಎದುರಿಗೆ ಪ್ರತಿಸ್ಪರ್ಧಿಯೊಬ್ಬನನ್ನು ಒಡ್ಡುವ ಹವಣಿಕೆ ಮಾಡಿದ. ಆತ, ತನಗೆ ಬೇಕಾಗಿದ್ದವನಾದರೆ, ಎಷ್ಟೋ ಒಳಿತೆಂದು, ಕೆಂಚ ಹಾಸಿಗೆ ಹಿಡಿದಿರುವಾಗಲೇ, ಚನಿಯನನ್ನು ಅವನ ಬಳಿಗೆ ಆಗಾಗ ಕರೆದು ತರುತ್ತಿದ್ದ ; ಅಲ್ಲದೆ ಹೋದರೂ, ಆತ ಕೆಂಚನ ಅಭಿಮಾನಿ. ಒಂದು ದಿನ ಆತನೊಡನೆ ಬೂದ "ಚನಿಯಣ್ಣ, ಅಜ್ಜ ಬದುಕುವ ದಾರಿ ನನಗೆ ಕಾಣುವುದಿಲ್ಲ. ವಯಸ್ಸೂ ಆಗಿದೆ. ಇಷ್ಟರತನಕ ಕೇರಿಯ ಮಾನ ಮರ್ಯಾದೆ ಅವನಿಗೇನೆ ಸಲುತಿತ್ತು ; ಸಲಬೇಕಾದದ್ದೂ ನ್ಯಾಯ. ಬಲು ಹಿಂದಿನಿಂದಲೂ ಕೆಂಚನ ಮನೆಯವರೇ ಗುರಿಕಾರರಾಗಿ ಬಂದಿದ್ದರು. ಇನ್ನು ಆಗಬೇಕಾದವರೂ ಅವರೇ. ಆದರೆ ನಾಳಿನ ಗತಿಯೇನು ? ಹೇಳು" ಎಂದು ಸೂಚಿಸಿದ.

"ಏನು ? ನನ್ನ ಮನಸ್ಸು ಹೇಗಿದೆಯೆಂದು ಕೇಳುವುದಕ್ಕೆ ಬಂದಿದ್ದೀಯಾ ?"

"ನಿನ್ನನ್ನು ಕೇಳಬೇಕಲ್ಲ. ವಯಸ್ಸಿನಲ್ಲಿ ಕೆಂಚನ ನಂತರ ನೀನೊಬ್ಬನೇ ಇರುವುದು. ಉಳಿದವರು ನನ್ನ ಹಾಗಿನವರು ; ಅಥವಾ ನನಗಿಂತಲೂ ಸಣ್ಣವರು."

"ಕೆಂಚಣ್ಣ ಬದುಕಿಯಾನು. ಈಗಲೇ ಏಕೆ ನಮಗೆ ಆ ಗುರಿಕಾರಿಗೆ ಯೋಚನೆ ? ಆತ ತೀರಿಕೊಂಡಮೇಲಲ್ಲವೇ ಅಂಥ ಯೋಚನೆ ? ಅಂಥಾ ಕಾಯಿಲೆ ಅವನಿಗೇನಾಗಿದೆ ? ಒಂದು ಶೀತವೋ, ಕೆಮ್ಮವೋ ಆದ ಮಾತ್ರಕ್ಕೆ ಅವನು ಸಾಯುತ್ತಾನೆಯೇ ? ಮದ್ದುಮಾಟ ಮಾಡುತ್ತಾ ಇದ್ದೀಯಾ ? ಗುಣ ಆಗುತ್ತೆ, ಬಿಡು."

ಇಷ್ಟು ಮಾತುಗಳಿಂದ ಬೂದನು ಉತ್ತೇಜನಗೊಳ್ಳುವ ಭರವಸೆ ಉಂಟಾಗಲಿಲ್ಲ. ಈಗಂತೂ ಕೆಂಚ ತೀರಿಕೊಂಡಿದ್ದು ನಿಜ. ಉತ್ತರಕ್ರಿಯೆ ಮುಗಿದದ್ದೂ ನಿಜ. ತಾವೆಲ್ಲರು ಕಲೆತು, ಕೇರಿಗೆ ಗುರಿಕಾರನನ್ನು ಆರಿಸುವ ಪ್ರಸಂಗವೂ ಬಂದಿದೆ. ಹಾಗೆಂದು ಇನ್ನೊಮ್ಮೆ ಚನಿಯನ ಮನೆಗೆ ಬೂದ ಹೋದ. ತಿರುಗಿ ಅದೇ ಪ್ರಸ್ತಾಪವನ್ನೆತ್ತಿದ. ಆಗಲೂ ಚನಿಯ ಉದಾಸೀನತೆಯಿಂದ ಉತ್ತರವಿತ್ತ—"ನನಗೂ ಅದೇ ಯೋಚನೆ ನೋಡು. ಕರಿಯ ಸಣ್ಣವ ನಿಜ. ಆದರೆ ಕುಲದ ಮರ್ಯಾದೆ ಹಿಂದೆ ಹೋದದ್ದು, ಈಗ ಹೋಗಬೇಕಾದುದು ಅವನ ಮನೆಯವರಿಗೆ. ನಾಳೆ ನಾವೇನಾದರೂ ಮಾಡಿದರೆ ಕಲ್ಕುಡ ಮೆಚ್ಚಲಿಕ್ಕಿಲ್ಲ. ನಾವು ಕೊಟ್ಟ ಸೇವೆಯನ್ನು ಕಲ್ಕುಡ ಮೂಸಿ ನೋಡಲಿಕ್ಕಿಲ್ಲ."

"ಅದೆಲ್ಲವೂ ನನಗೆ ಗೊತ್ತಿದೆ. ಆದರೆ ಕೇರಿಯ ಮನಸ್ಸು ಆ ಹುಡುಗನನ್ನು ಎತ್ತಿ ಹಿಡಿಯುವುದರಲ್ಲಿ ಉಂಟೆಂದು ನನಗೆನಿಸುವುದಿಲ್ಲ. ತುಕ್ರಣ್ಣ ಈಗಲೇ ತಾನು ಗುರಿಕಾರ ಅನ್ನುವಹಾಗೆ ನಡೆಯತೊಡಗಿದ್ದಾನೆ. ಅಲ್ಲದೆ ಅವನು ಧನಿಗಳಿಗೆ ಬೇಕಾದ ಬಂಟನಾಗಿದ್ದಾನೆ. ನಮ್ಮ ಮೇಲೆ ಹತ್ತು ದೂರು ಹೇಳಿ, ಧನಿಗಳು ಸಿಟ್ಟಾಗುವಂತೆಯೂ ಮಾಡಬಹುದು. ಈ ಪಂಚಾತಿಕೆಯನ್ನು ಧನಿಗಳು ತೋಟಕ್ಕೆ ಬರುವ ಮೊದಲೇ ನಾವು ಬಗೆಹರಿಸದೆ ಹೋದರೆ, ನಾಳೆ ತುಕ್ರನ ಮೀಸೆಯೇ ಮೇಲಾಗುತ್ತದೆ. ಆಮೇಲೆ ಕರಿಯ ದೊಡ್ಡವನಾದರೂ, ತುಕ್ರ ಸಾಯುವ ತನಕ, ನಾವು ಏನೂ ಮಾಡುವ ಹಾಗಿಲ್ಲ."

"ಅದು ಹೇಗಾದೀತು; ಗುರಿಕಾರ, ಗುರಿಕಾರ ಕರಿಯನೇ ಆಗಬೇಕು. ಇಂದಲ್ಲ ನಾಳೆಯೂ ಅವನದೇ ಪಟ್ಟ ಅದು. ಇನ್ನೊಬ್ಬನಾದರೆ ಹಾಳಾಗುತ್ತಾನೆ. ಧನಿಯರೂ ಕೇಳಿದ್ದರಲ್ಲ—ಕಲ್ಕುಡ ಆ ದಿನ ಹೇಳಿದ್ದನ್ನು. ಧನಿಯರಿದ್ದರಲ್ಲ ಆಗ. ಕೆಂಚನೊಡನೆ ದೈವ ಕೇಳಲಿಲ್ಲವೇ—'ನಿನ್ನ ನಂತರ ಯಾರೆಂದು?' 'ಮೊಮ್ಮಗನನ್ನು ನೋಡಿಕೋ' ಅನ್ನಲಿಲ್ಲವೇ?"

"ಚನಿಯಣ್ಣ, ಆ ಮಾತೆಲ್ಲ ಈಗ ಪ್ರಯೋಜನಕ್ಕೆ ಬಾರದು. ಹುಡುಗ ದೊಡ್ಡವನಾಗುವ ತನಕ ಬೇರೆ ಉಪಾಯವಿಲ್ಲ. ನಾಳೆ ಹಾಗೆಯೇ ಇತರ ಸಂಗತಿಗಳಲ್ಲೂ ಅವನ ಮಾತು ನಡೆಯಬೇಕಲ್ಲ. ವಯಸ್ಸಾಗದೆ ಯಾರು

ಕೇಳುತ್ತಾರೆ ಅವನನ್ನು? ನಾನು ಅನ್ನುವುದನ್ನು ಕೇಳು; ಕೇರಿಯವರು ಒಟ್ಟು ಸೇರಿ ಈ ನಿರ್ಣಯವನ್ನು ಧನಿಯರು ಬರುವ ಮೊದಲೇ ಮಾಡ ಬೇಕು. ಕರಿಯ ದೊಡ್ಡವನಾಗುವ ತನಕ, ಪ್ರಾಯದಲ್ಲಿ ಹಿರಿಯನಾದ ನೀನು ಯಜಮಾನಿಕೆ ಒಪ್ಪಿಕೊಳ್ಳಬೇಕು. ಏನನ್ನುತ್ತೀಯಾ ?"

"ನನಗ್ಯಾಕೆ ಮಹಾರಾಯ, ಅದೆಲ್ಲ. ನನಗೆ ಆ ಮಾನವೂ ಬೇಡ, ಅದರ ಮರ್ಯಾದೆಯೂ ಬೇಡ. ನಾಲ್ಕು ಜನರಿಗೆ ನಾನೆನ್ನುವವನೂ ಅಲ್ಲ, ಅವರಿಂದ ಅನಿಸಿಕೊಳ್ಳುವವನೂ ಅಲ್ಲ."

"ನಾಳೆ ತುಕ್ರನೇ ಯಜಮಾನ ಆಗಲಿ—ಎಂದು ಧನಿಗಳು ಹೇಳಿದರೆ ಅವರ ಮಾತಿಗೆ ಕೇರಿಯವರು ಕಟ್ಟುಬಿದ್ದರೆ, ಆಗ ಏನು ಮಾಡುತ್ತೀಯಾ? ಅವನ ಸ್ವಭಾವ ನಿನಗೆ ಗೊತ್ತು. ಬಲು ಒರಟ; ಸಿಟ್ಟೂ ಹೆಚ್ಚು, ಅಂಥವ ಏನಾದರೂ ಅಂದರೆ ಕೇಳುವವನೇ ನೀನು ?"

"ಧನಿಗಳೆಂದರೆ ಆಯಿತೇ? ತುಕ್ರನನ್ನು ಯಾಕೆ ಒಪ್ಪಿಕೊಳ್ಳಬೇಕು ನಾವು? ಮೂರು ಹೆಂಡಿರ ಗಂಡ ಎಂತಲೋ ?"

ಇದೇ ಬಗೆಯಲ್ಲಿ ಅವರಲ್ಲಿ ಚರ್ಚೆ ನಡೆದು, ಕೊನೆಗೆ ಕೇರಿಯ ಜನ ಗಳಲ್ಲಿ ಹಿರಿಯವನಾಗಿದ್ದ ಚನಿಯ, ಈ ವಿಚಾರವನ್ನು ಇತ್ಯರ್ಥಗೊಳಿಸುವ ಸಲುವಾಗಿಯೇ ಕುಲದವರನ್ನು ತನ್ನ ಮನೆಗೆ ಕರೆಯಿಸಿದ.

'ಈ ಸಂಜೆ ಚನಿಯಣ್ಣನ ಮನೆಗೆ ಎಲ್ಲರೂ ಬರಬೇಕಂತೆ' ಎಂದಿಷ್ಟೇ ಆತ ಹೇಳಿಕಳುಹಿಸಿದ ಸಂದೇಶ. ಅದನ್ನು ತಿಳಿಸಲು ಹೋದವರು ಕರಿಯ ಮತ್ತು ಕಾಳರು. ಹೇಳುವುದೇನು ಸಂಭ್ರಮ! ಐವತ್ತು ಗಜದೊಳಗೆ ಎಲ್ಲರ ಮನೆಗಳಿರುವಾಗ. ಕರಿಯ ಸುದ್ದಿ ಹೊತ್ತು, ತುಕ್ರನ ಮನೆಗೆ ಹೋದಾಗ, ಚಾವಡಿಯಲ್ಲಿ ಆತ ತನ್ನ ಕಿರಿಯ ಹೆಂಡತಿಯೊಡನೆ ಕುಳಿತು, ಎಲೆ ಅಡಿಕೆ ಮೆಲ್ಲುತ್ತಿದ್ದ. ಕರಿಯನನ್ನು ಕಂಡಾಕ್ಷಣವೇ "ಏನು ಕರಿಯ? ಅಜ್ಜ ಒಬ್ಬರು ತೀರಿಕೊಂಡರು. ಏನೋ, ದೊಡ್ಡ ಮನುಷ್ಯ. ಕುಲಕ್ಕೆ ಅದೃಷ್ಟ ವಿಲ್ಲ" ಎಂದುದಕ್ಕೆ ಪ್ರತಿಯಾಗಿ ಆತ, ತಾನು ತಂದ ಸಂದೇಶವನ್ನು ಒಪ್ಪಿ ಸಿದ. ತುಕ್ರ ಆಶ್ಚರ್ಯ ವ್ಯಕ್ತಮಾಡಿ "ಯಾಕಂತೆ ಹೇಳಿಕಳುಹಿಸಿದ್ದು ?" ಎಂದು ಪ್ರಶ್ನಿಸಿದ.

"ನನಗೆ ಗೊತ್ತಿಲ್ಲ."

"ಓ, ತನಗೆ ತಾನೇ ಗುರಿಕಾರಿಕೆ ತಂದುಕೊಂಡ ಅಂತ ಕಾಣುತ್ತೆ—ನಮ್ಮ ಚನಿಯು" ಎಂದು ಮಾತನ್ನು ಥಟ್ಟನೆ ನಿಲ್ಲಿಸಿದ.

ಅವನ ಮನಸ್ಸಿನಲ್ಲಿ, ಚನಿಯು ಹೇಳಿಕಳಿಸುವುದು, ಅದೂ ತನಗೆ—ಎಂಬ ವಿಚಾರ ಅತೃಪ್ತಿಯನ್ನುಂಟು ಮಾಡಿತು. ವಯಸ್ಸಿನಲ್ಲಿ ಕೂಡ ಆತ ಹಿರಿಯನೆಂದು ಒಪ್ಪಿಕೊಳ್ಳುವುದಕ್ಕೆ ತುಕ್ರನ ಮನಸ್ಸು ಸಿದ್ಧವಾಗಿರಲಿಲ್ಲ. ಮೇಲೆ, ಸಭೆ ಕರೆದುದರ ಸೊಕ್ಕನ್ನು ಆತ ಸಹಿಸದಾದ. ಅಂದು ಮಧ್ಯಾಹ್ನವಾಗುವುದರೊಳಗಾಗಿ ಸಭೆ ಯಾಕಿರಬಹುದು—ಎಂಬ ಊಹೆಯೂ ಅವನಿಗೆ ಹೊಳೆಯದೆ ಹೋಗಿರಲಿಲ್ಲ. ಅಷ್ಟು ಕ್ಷಿಪ್ರದಲ್ಲೇ ತನಗೆ ಸಲ್ಲದ ಶೀರ್ವಾನವಾದರೆ, ಮುಂದೆ ಕಷ್ಟಕ್ಕೆ ಬಂದೀತೆಂದು ಅಂದುಕೊಂಡು, ಆತ ತನ್ನ ಕಿರಿಯ ಹೆಂಡತಿಯೊಡನೆ "ನೋಡು, ರಾತ್ರಿ ಯಾರಾದರೂ ನನ್ನನ್ನು ಕರೆಯಲಿಕ್ಕೆ ಬಂದರೆ, ನಾನು ಮನೆಯಲ್ಲಿ ಇಲ್ಲ ಅನ್ನು" ಎಂದು ಹೇಳಿಕೊಟ್ಟ. "ಹೂಂ" ಎಂದಳು ಆ ಚಿಕ್ಕ ಹುಡುಗಿ. ಅವಳಿಗೆ ಅದೇನು ಗೊತ್ತು! ಸ್ವಲ್ಪ ಹೊತ್ತಿನಲ್ಲಿ "ಎಲ್ಲಿಗಾದರೂ ಹೋಗುತ್ತೀರಾ?" ಎಂದು ಆಕೆ ಕೇಳಿದಳು.

ಈ ಮಾತುಗಳಾಗುವಾಗ, ಮೊದಲ ಹೆಂಡತಿ ಚೆನ್ನಿ, ಅಲ್ಲೊಂದು ಮೂಲೆಯಲ್ಲಿ ಕುಳಿತು, ಬೆತ್ತದ ನಾರಿನ ದಟ್ಟಿ ಹೆಣೆಯುತ್ತಿದ್ದಳು. ಅವಳ ಮುಖ ಸೊಟ್ಟಗಾಯಿತು. ಕೆಂಪಿ ಇರುವಾಗ ಆ ಮುಖ ಅಸಮಾಧಾನದಿಂದ ಸದಾ ಸೊಟ್ಟನಾಗಿಯೇ ಇತ್ತು. ಅವಳು ಸಿಟ್ಟುಗೊಂಡು, ಆ ಮನೆಯ ಋಣ ಕಡಿದು ಹೊರಟುಹೋದ ಮೇಲೆ, ಗಂಡ-ಹೆಂಡಿರಲ್ಲಿ ಸ್ವಲ್ಪ ಹೆಚ್ಚು ಅನ್ಯೋನ್ಯ ಉಂಟಾಗಿತ್ತು. ಆದರೆ ತುಕ್ರ ಸಿಟ್ಟಿಗೆಂಬಂತೆ—ಹಟ ಸಾಧಿಸಿ, ನೆರಿಯ ಮಲೆಯಿಂದ ಮೂರನೆಯ ಮಡದಿಯನ್ನು ತಂದದ್ದು ಚೆನ್ನಿಗೆ ಇಷ್ಟಿಷ್ಟೂ ಸಮಾಧಾನವಾಗಲಿಲ್ಲ. ಆಕೆಯ ಮೇಲೆಯೇ ಅಸಮಾಧಾನವಲ್ಲ; ಇರುವ ಅಸಮಾಧಾನವೆಲ್ಲ ಗಂಡನ ಮೇಲೆ. ತುಕ್ರ ಮನೆಗೆ ತಂದ ಕಾಳಿ—ರೂಪದಲ್ಲಿ ಸಾಕಷ್ಟು ಚೆಲುವೆ. ವಯಸ್ಸಿನಲ್ಲಿ ಚೆನ್ನಿಗಿಂತ ಎಷ್ಟೋ ಕಿರಿಯಳು. ಆಕೆಗೆ ಬರಿಯ ಹದಿನಾರು ವಯಸ್ಸು. ಈಗ ಆಕೆ ಮನೆಗೆ ಬಂದು ಎರಡು ವರ್ಷಗಳು ಸಂದಿವೆ. ಇನ್ನು ಇಷ್ಟರಲ್ಲೇ ಅವಳು ತಾಯಿಯಾಗಬಹುದೆಂಬ ನಿರೀಕ್ಷೆಯೂ ಇದೆ. ಚೆನ್ನಿಯ ಕಣ್ಣಿನಲ್ಲಿ—ಕಾಳಿ ಚಿಕ್ಕವಳು, ಬುದ್ಧಿ ಸಾಲ

ದವಳು, ಸಂಭಾಷಣೆಗೂ ತಕ್ಕವಳಲ್ಲ. ಆದರೂ ತನ್ನ ಗಂಡ ಕೆಂಪಿಯ ವಿಷಯದಲ್ಲಿ ನಡೆದಂತೆಯೇ ಅವಳನ್ನು ತಲೆಯ ಮೇಲೆ ಕುಳ್ಳಿರಿಸಿಕೊಳ್ಳುವುದು ಮಾತ್ರ ಅವಳಿಗೆ ಸಹನೆಯಾಗದಿದ್ದ ವಿಷಯ. ಚೆನ್ನಾಗಿ ಮಾತನಾಡಲಾರದ ಹುಡುಗಿಯ ಮುಂದೆ, ಆತ ಆಪ್ತಾಲೋಚನೆ ಮಾಡುವುದಾಗಲೀ, ಸರಸ ಸಲ್ಲಾಪ ಮಾಡುವುದಾಗಲೀ—ಅವಳಿಗೆ ಎಂತು ಸಹಿಸೀತು? ಇಂದು ಮಧ್ಯಾಹ್ನ ಆತ ಮಗ್ಗಲು ಬಳಿಯಲ್ಲೇ ಕಾಳಿಯನ್ನು ಕುಳ್ಳಿರಿಸಿಕೊಂಡು ಮಾತನಾಡುತ್ತಿದ್ದ. ತನ್ನನ್ನು ಮೂದಲಿಸಲಿಕ್ಕೆ—ಎಂಬಂತೆ! ಅಷ್ಟೂ ಅಲ್ಲ, 'ಹೋಗುತ್ತೇನೆ' ಎಂದು ಗಂಡ ಹೇಳಿದರೆ 'ಎಲ್ಲಿಗೆ?' ಎಂದು ಅವಲಕ್ಷಣದ ಮಾತನ್ನು ಆಕೆ ಕೇಳಿದಾಗ, ಚೆಂದವಾಗಿ ಉತ್ತರ ಕೊಟ್ಟದ್ದೇ ಅವಳಿಗೆ ಇನ್ನಷ್ಟು ಹೊಟ್ಟೆಯುಕಿಚ್ಚು. ತಾನು ಮೊದಲು ಬಾರಿ ಮನೆಗೆ ಬಂದಾಗ, ಅಂಥದೇ ಒಂದು ಅವಿವೇಕ ಮಾಡಿದ್ದಳು. 'ಹೊರಡುವಾಗ ಎಲ್ಲಿಗೆ ಎಂದು ಕೇಳುತ್ತೀಯಾ?' ಎಂದು ಆಗ ತನ್ನ ಕೆನ್ನೆಗೆ ಏಟು ಏರಿಸಿದ್ದ ಅದೇ ಗಂಡ. ಅದನ್ನೇ ಚುಚ್ಚಿ ತಿಳಿಸಬೇಕೆಂದಿತ್ತು—ಆಕೆಗೆ. ಅನ್ನಲಿಲ್ಲ. ಬದಲು, "ಮನೆಯಲ್ಲಿದ್ದೂ ಇಲ್ಲ ಅನ್ನುವುದೇ" ಎಂದಳು.

"ನಿನ್ನನ್ನು ಯಾರು ಕೇಳಿದರು?" ಎಂದ ತುಕ್ರ.

"ನನ್ನನ್ನು ಕೇಳುವುದು ಬೇಡ. ನಿಮ್ಮ ದೇವರನ್ನು ಕೇಳಿ! ನಾನು ಬದುಕಿರುವುದೇ ನಿಮಗೆ ಬೇಡವಾಗಿದೆ" ಎಂದಳು ಚಿನ್ನಿ.

"ಮಾತನಾಡಿದರೆ ನಿನಗೆ ಸಿಟ್ಟು ಬರುತ್ತದೆ."

"ಹೂಂ, ಸಿಟ್ಟು, ಸೆಡ ನನಗೊಬ್ಬಳಿಗೇ ಸೇರಿದ್ದು. ಆದಿರಲಿ. ಇಂದೆಲ್ಲಿಗೂ ಹೋಗುವುದು ಬೇಡ. ಚನಿಯಣ್ಣ ಹೇಳಿಕಳುಹಿಸಿದ ಮಾತ್ರಕ್ಕೆ, ತಲೆತಪ್ಪಿಸಿಕೊಳ್ಳುವುದು ಯಾಕೆ? ಅವನನ್ನು ಬಿಟ್ಟು ಕೇರಿಯಲ್ಲಿ ಬೇರೆ ಹಿರಿಯರು ಯಾರಿದ್ದಾರೆ? ಆತ ಬರಿದೆ ಕರೆದಿರಲಾರ" ಎಂದಳು ಅವಳು.

ಆ ಮಾತು ಇನ್ನಷ್ಟು ಕೆರಳಿಸಿತು—ತುಕ್ರನನ್ನು. ಆತ ರೇಗಿ ನುಡಿದ. "ನಿನಗೆ ವಯಸ್ಸಾದದ್ದು ನಾಯಿಗಾದ ಹಾಗೆ. ಇವಳಿಗಿರುವ ಬುದ್ಧಿಯಲ್ಲಿ ಒಂದು ಚೂರಾದರೂ ನಿನಗಿದ್ದಿದ್ದರೆ" ಎಂದು ಅವಳನ್ನು ಹಂಗಿಸಿ, ಕತ್ತಿ, ಎಲೆ ಅಡಿಕೆ ಚೀಲ, ಒಂದು ಬೈರಾಸು ಇಷ್ಟನ್ನು ತಾನೇ ಹುಡುಕಿ ತೆಗೆದುಕೊಂಡು ಗುಡಿಸಲಿನಿಂದ ಹೊರಬಿದ್ದ. ಹೊರಡುವಾಗ ಮೂಕಳಾಗಿ ನಿಂತಿದ್ದ ಕಾಳಿಗೆ, ಹೊರಕ್ಕೆ ಬರಲು ಕಣ್ಣುಸನ್ನೆ ಮಾಡಿದ. ಆಕೆ ಹೊರಕ್ಕೆ ಬಂದಳು.

ಅವಳನ್ನು ತುಸು ಆಚೆಗೆ ಕರೆದುಕೊಂಡು ಹೋಗಿ, "ನಾನು ವಿಟ್ಟಲಕ್ಕೆ ಹೊಗುತ್ತೇನೆ. ಅದನ್ನಾರಿಗೂ ಹೇಳುವುದು ಬೇಡ. ಹೋಗಿ ಬರುವುದಕ್ಕೆ ನಾಲ್ಕು ದಿನವಾದೀತು! ಆ ರಾಕ್ಷಸಿ, ಅನ್ನುವುದೆಲ್ಲ ಅನ್ನುತ್ತಿರಲಿ. ನೀನು ಸುಮ್ಮನೆ ಮಾತನಾಡದೆ ಇದ್ದುಬಿಡು. ಯಾರಾದರೂ ಬಂದು ಕೇಳಿದರೆ, ನಾನು ಎಲ್ಲಿಗೆ ಹೋದದ್ದೆಂದು ಹೇಳುವುದು ಬೇಡ. ತಿಳಿಯಿತೇ? ಬಹಳ ಒತ್ತಾಯ ಮಾಡಿ ಕೇಳಿದರೆ ನೆರಿಯಕ್ಕೆ ಹೋಗಿದ್ದಾರೆ ಅನ್ನು" ಎಂದು ಉಪದೇಶಿಸಿ ಹೊರಟುಹೋದ. ಕಾಳಿಗೆ ಗಂಡನ ಅಂತರಾಳದ ಆಸೆಯಾಗಲೀ, ಈ ನಿರ್ಗಮನದ ರಹಸ್ಯವಾಗಲೀ ತಿಳಿದಿರಲಿಲ್ಲ. ಆಕೆ ಮೂಕಳಾಗಿಯೇ ಮನೆಗೆ ಮರಳಿದಳು. ಮನೆಗೆ ಬಂದಮೇಲೆ ಬಹು ಹೊತ್ತಿನ ತನಕ, ಸವತಿಯ ಸಿಟ್ಟಿನ ನುಡಿಗಳಿಗೆ ಕಿವಿಯೊಡ್ಡಬೇಕಾಯಿತು. ಆಕೆ ದೂರಿದುದು ತನ್ನ ಗಂಡನನ್ನಲ್ಲದೆ ಇವಳನ್ನಲ್ಲ. ಆದರೆ ದೂರುವುದಕ್ಕೆ—ಕಾರಣ 'ತಾನೇ' ಎಂಬುದು ಗೊತ್ತು. ಹೀಗಾಗಿ ಕಾಳಿ ಮೋರೆ ಸಪ್ಪಗೆ ಮಾಡಿಕೊಂಡು, ಮನೆಯಲ್ಲೆ ಕುಳಿತಿರಬೇಕಾಯಿತು.

ಆ ಸಂಜೆ ಇನ್ನೊಮ್ಮೆ ತುಕ್ರನ ಮನೆಗೆ ಕರಿಯ ಬಂದ. "ತುಕ್ರಣ್ಣ ಇಲ್ಲವೆ?" ಎಂದು ಕೇಳಿದ. ಮನೆಯ ಹುಡುಗರಾರೂ ಇದ್ದಿರಲಿಲ್ಲ. ಒಳಗಡೆ ಅಡುಗೆಮನೆಯಲ್ಲಿ ಚಿನ್ನಿ ಇದ್ದಳು. ಹೊರಗೆ ಪಡಸಾಲೆಯಲ್ಲಿ ಕಾಳಿ ಕುಳಿತಿದ್ದಳು.

"ಅವರಿಲ್ಲ" ಎಂದಳು ಕಾಳಿ.

"ಬರುವುದಿಲ್ಲವೇ? ಬೆಳಗ್ಗೆ ಹೇಳಿ ಹೋಗಿದ್ದೆನಲ್ಲ."

"ಎಲ್ಲಿಗೋ ಹೋಗುತ್ತೇವೆಂದು ಹೇಳಿ ಹೋದರಪ್ಪ. ಬಂದಾರು."

ಅಷ್ಟಕ್ಕೆ ಮಾತು ಮುಗಿದು, ಕರಿಯ ಅಲ್ಲಿಂದ ಮರಳಿದ. ಚನಿಯನ ಮನೆಯಲ್ಲಿ ಪ್ರಾಯಸ್ಥ ಕುಡಿಯರೆಲ್ಲರು ಸಭೆಸೇರಿದ್ದರು. ಹುಡುಗರಾರೂ ಇದ್ದಿಲ್ಲ. ಕರಿಯ ಅಲ್ಲಿಗೆ ಬಂದವನು, ತನ್ನ ವಯಸ್ಸಿನ ಯಾರೂ ಇಲ್ಲದ ಸಭೆಯಲ್ಲಿ ಸೇರಲು ಇಷ್ಟವಿಲ್ಲದೆ ಹೊರಕ್ಕೆ ಬಂದ. ಆಗ ಚನಿಯನೇ ಅವನನ್ನು ಕರೆದ. "ಬಾ ಕರಿಯಣ್ಣ, ಕೂತಿರು" ಎಂದ. ಅವನಿಗೂ ಅದು ಆಶ್ಚರ್ಯವಾಗಿ ಕಂಡಿತು. ಹಿರಿಯನಾದ ಚನಿಯನ ಬಾಯಲ್ಲಿ ತಾನು 'ಕರಿಯಣ್ಣ' ಎನಿಸಿದ್ದು ಸೋಜಿಗವೆನಿಸಿತು. "ಬೇಡ, ಹೋಗುತ್ತೇನೆ" ಎಂದು ಆತ

ಹೆಜ್ಜೆ ಕಿತ್ತರೂ, ಚನಿಯು ತಾನಾಗಿ ಹೊರಕ್ಕೆ ಬಂದು "ನೀನು ಇದ್ದೇ ಎಲ್ಲವೂ ಆಗಬೇಕು" ಎಂದು ಅವನನ್ನು ಬಲವಂತದಿಂದ ಸಭೆಗೆ ಕರೆದೊಯ್ದು ಕುಳ್ಳಿರಿಸಿಕೊಂಡು ಮಾತುಕತೆಗಾರಂಭಿಸಿದ.

"ಬೂದ, ನೀನು ಹೇಳು—ನನಗೆ ಅದೆಲ್ಲ ತಿಳಿಯದು. ನಾನು ಮಾತ ನಾಡಿದರೆ ಜನ ಏನಾದರೂ ತಿಳಿದಾರು" ಎಂದ. ಬೂದ, ತಾವು ಸಭೆಸೇರಿದ ಉದ್ದೇಶವನ್ನು ವಿವರಿಸಿದ. ಅನಂತರ "ಗುರಿಕಾರತನದ ಮರ್ಯಾದೆ ಯೇನೋ ನ್ಯಾಯವಾಗಿ ಸಲಬೇಕಾದದ್ದು ನಮ್ಮ ಕರಿಯಣ್ಣನಿಗೆ. ಅವನು ಸಣ್ಣವ; ಏನೂ ತಿಳಿಯದವ. ಆದರೂ ಕುಲದ ಮರ್ಯಾದೆಯು ಅವನದ್ದೇ. ಈಗ ಸಣ್ಣವನೆಂಬುದರಿಂದ ಅವನ ಮಾತು ಕೇಳುವವರಿಲ್ಲದೆ, ಒಂದ ಕ್ಕೊಂದು ಆಗಬಾರದಷ್ಟೆ. ಅವನು ದೊಡ್ಡವನಾಗುವ ತನಕ, ಲೆಕ್ಕಕ್ಕಾದರೂ ಒಬ್ಬರು ಹಿರಿಯರೆನ್ನುವವರು ಕೇರಿಗೆ ಬೇಕು. ವಯಸ್ಸಿನಲ್ಲಿ, ಬುದ್ಧಿಯಲ್ಲಿ ನಮ್ಮ ಕರಿಯ ಪ್ರಾಯಕ್ಕೆ ಬರುವ ತನಕ ಯಾರು ಯಜಮಾನರಾಗ ಬಹುದು—ಎಂಬುದನ್ನು ನಾವು ನಾಲ್ಕು ಜನ ಕೂಡಿ ನಿರ್ಣಯಿಸಬೇಕು. ಬರಿದೆ ನಿರ್ಣಯಿಸಿದರೂ ಸಾಲದು. ನಾಳೆ ಅವನೆಂದ ಹಾಗೆ ನಡೆದುಕೊಳ್ಳ ಬೇಕು...." ಎಂದು ನುಡಿದ. ಆ ಬಳಿಕ "ಯಾವುದಕ್ಕೂ ತುಕ್ರ ಬರಲೇ ಇಲ್ಲ. ಅವನೂ ಇದ್ದಿದ್ದರೆ ಚೆನ್ನಾಗಿತ್ತು ಇವತ್ತು" ಎಂದ. ತಿಮ್ಮ ಎದ್ದು ನಿಂತು "ಹೇಳಲಿಲ್ಲವೇ ಅವನಿಗೆ?" ಎಂದು ಕೇಳಿದ.

"ಹೇಳದೆ ಉಂಟೇ? ಆತ ಬರಲಲ್ಲ; ಗೊತ್ತಿದ್ದೂ ಬರಲಿಲ್ಲ."

"ಏನಾಯಿತು ಅವನೊಬ್ಬನಿಲ್ಲದಿದ್ದರೆ" ಎಂದ ತಿಮ್ಮ. ಅನಂತರ ತಿಮ್ಮನೇ ಮಾತನ್ನು ಮುಂದುವರಿಸಿದ. "ನನಗೆ ಕಾಣುವುದು—ಇಲ್ಲಿ ಕೂಡಿದವರಲ್ಲಿ ಚನಿಯಣ್ಣ ಒಬ್ಬನೇ. ಎಲ್ಲರಿಗಿಂತಲೂ ಅವನೇ ಹಿರಿಯ; ಎಲ್ಲರಿಗೂ ಬೇಕಾದವ. ಅಲ್ಲದೆ ನಾಳೆ ಕರಿಯಣ್ಣ ದೊಡ್ಡವನಾದ ಮೇಲೆ ಅವನಿಗೆ ಗುರಿಕಾರಿಕೆ ಒಪ್ಪಿಸಿ ಕೊಡುವುದರಲ್ಲಿಯೂ ಅವನಿಂದ ತೊಂದರೆ ಬರಲಾರದು" ಎಂದ.

ಚನಿಯಣ್ಣ "ನನಗೆ ಬೇಡಪ್ಪ—ಈ ಯಜಮಾನಿಕೆಯ ಹೊರೆ ಒಂದು ದಿನಕ್ಕೂ ಬೇಡ; ನಾಲ್ಕು ದಿನಕ್ಕೂ ಬೇಡ" ಎಂದು ಎಷ್ಟು ಹೇಳಿ ದರೂ ಅಲ್ಲಿ ಸೇರಿದ ಜನರು ತತ್ಕಾಲಕ್ಕೆ ಅವನನ್ನೇ ಆರಿಸಿದರು.

"ತುಕ್ರಣ್ಣ ಬರಲಿ" ಎಂದು ಒಬ್ಬಿಬ್ಬರೆಂದುದುಂಟು ಆದರೆ ಆ ಮಾತಿಗೆ ಹೆಚ್ಚಿನವರ ಬೆಂಬಲ ದೊರೆಯಲಿಲ್ಲ. ಆತ ಗೊತ್ತಿದ್ದೂ ತಮ್ಮ ಕೂಟಕ್ಕೆ ಬರಲಿಲ್ಲ—ಎಂಬುದರಿಂದ ಅವನ ನಡತೆಯಲ್ಲಿ ಉಳಿದವರಿಗೆ ವಿಶ್ವಾಸವೂ ಬರಲಿಲ್ಲ. ಹೀಗಾಗಿ ಆ ದಿನ ಸಭೆಯವರು ನ್ಯಾಯದ ಗುರಿಕಾರ ಕರಿಯಣ್ಣನೆಂದೂ, ತಾತ್ಕಾಲಿಕ ಯಜಮಾನಿಕೆ ಚನಿಯನಿಗೆಂದೂ ನಿರ್ಧರಿಸಿ, ಅವರಿಬ್ಬರಿಗೂ ಎಲೆ ಅಡಿಕೆಯ ಮರ್ಯಾದೆಗಳನ್ನು ಸಲಿಸಿ, ಸಭೆ ಮುಗಿಸಿದರು. ಬೂದನ ಮನಸ್ಸಿಗೆ ಅಷ್ಟೊಂದು ನೆಮ್ಮದಿಯಾಯಿತು. ಕರಿಯನನ್ನು ಕರೆದುಕೊಂಡು ಮನೆಗೆ ಬಂದ ಆತ, ಕೆಂಪಿಯೊಡನೆ ತಮ್ಮ ಕೂಟದ ಗೊತ್ತುವಳಿಯನ್ನು ಸಂತೋಷದಿಂದ ಹೇಳಿದ. ಕೆಂಪಿ ಅದಕ್ಕೆ "ಅವರಿದ್ದಿಲ್ಲವೇ?" ಎಂದು ಕೇಳಿದಳು.

"ಯಾರೇ ಅವರು?"

"ನಿಮಗಾಗದವರು."

"ಅವನೋ—ತುಕ್ರನೋ? ಎಲ್ಲಿಗೋ ಹೋಗಿದ್ದಾನಂತೆ. ಸತ್ತುಕೊಳ್ಳಲಿ."

ಕೆಂಪಿಯ ಮನಸ್ಸು ಮಿಂಚಿನಂತೆ ಓಡಿ, ತನ್ನ ತರ್ಕವನ್ನು ಮುಂದೂಡಿತು. "ನೀವು ನೀವೇ ಒಂದು ಒಡಂಬಡಿಕೆ ಮಾಡಿಕೊಂಡು ಬಂದಿರಿ, ನಿಜ. ಆದರೆ ಅವರು ಇದಕ್ಕೆ ಕಲ್ಲು ಹಾಕುವವರೇ. ಅವರು ಈ ಸುದ್ದಿಯನ್ನು ಕೇಳಿಯೇ ಓಡಿರಬೇಕು; ಓಡಿದ್ದು ಮತ್ತೆಲ್ಲಿಗೂ ಅಲ್ಲ, ಧನಿಗಳ ಮನೆಗೆ. ನಾಳೆ ಧನಿಗಳನ್ನು ಕರೆದುಕೊಂಡು ಬಂದು, ತಾವು ಗುರಿಕಾರ ಅನಿಸಿಕೊಳ್ಳುತ್ತಾರೆ ನೋಡಿ" ಎಂದಳು ಅವಳು. ಹಾಗಾಗುವುದೂ ಸಂಭವವೆಂದು ಬೂದನಿಗೆ ತೋರಿತು. ಬೂದ ಅವಸರದಲ್ಲಿ ಊಟ ಮಾಡಿಕೊಂಡು ಇನ್ನೊಮ್ಮೆ ಚನಿಯನ ಮನೆಗೆ ಓಡಿಹೋಗಬೇಕಾಯಿತು. ಕೆಂಪಿ ತನ್ನಲ್ಲಿ ತುಂಬಿದ ಅನುಮಾನಗಳನ್ನು ಅವನ ಮುಂದೆ ತೋಡಿಕೊಳ್ಳಬೇಕಾಯಿತು. ಅದಕ್ಕೆ ಆತನೆಂದ ಮಾತು ಒಂದೇ: "ಕೇರಿಯವರ ಮನಸ್ಸು ಗಟ್ಟಿ ಇದ್ದರೆ, ಯಾರೂ ಏನೂ ಮಾಡುವ ಹಾಗಿಲ್ಲ. ಅವರು ಧನಿಗಳಾದರೆ ಏಲಕ್ಕಿ ತೋಟಕ್ಕೆ; ಭೂಮಿಗೆ. ಕುಲಕ್ಕಲ್ಲ; ಅವರು ಕುಲಮರ್ಯಾದೆಯ ವಿಚಾರದಲ್ಲಿ ಕೈಹಾಕಬಾರದು. ಹಾಕಿದರೆ ತಪ್ಪಾಗುತ್ತದೆ. ಅದರ ಮೇಲೆಯೂ

ಅವರಾಗಿ ಒಡಕು ತಂದುಹಾಕಿದರೆ ಆ ದೈವ ನೋಡುತ್ತದಲ್ಲ. ನನಗೇನು, ನನಗೇನು" ಎಂದು ಚನಿಯ ಹೇಳಿದುದರಿಂದ ಬೂದ ವಿಶ್ವಾಸ ತಾಳಿ ಮನೆಗೆ ಮರಳಿದ.

ತುಕ್ರ ತನ್ನ ಚಿಂತೆಯನ್ನು ಹೊತ್ತುಕೊಂಡು, ವಿಟ್ಟಲಕ್ಕೆ ತೆರಳಿದ. ಅವನ ಚಿಂತೆ ಎರಡೆರಡು—ಧನಿಗಳಿಂದ ತನ್ನ ಕೆಲಸ ಮಾಡಿಸಿಕೊಳ್ಳುವ ವಿಚಾರವಾದ ಯೋಚನೆಯೊಂದು, ತಾನು ಮನೆಗೆ ಮರಳುವುದರೊಳಗೆ ಚಿನ್ನಿ ಎಲ್ಲಾದರೂ ತನ್ನ ಮುದ್ದಿನ ಮಡದಿ ಕಾಳಿಯನ್ನು ನುಂಗಿ ಬಿಡುತ್ತಾಳೋ—ಎಂಬ ಹೆದರಿಕೆ ಇನ್ನೊಂದು. ಹೀಗೆ ಎರಡೆರಡು ಸಂಕಟಗಳನ್ನು ಹೊತ್ತುಕೊಂಡು ವಿಟ್ಟಲಕ್ಕೆ ಹೋಗಿದ್ದ. ಅಲ್ಲಿ ಕೆಂಚ ತೀರಿಕೊಂಡ ಪ್ರಸ್ತಾಪವನ್ನೆತ್ತಿದ: "ನೀವು ಮಲೆಗೆ ಬರುವುದಕ್ಕೆ ಎಷ್ಟು ದಿವಸವಾಗುತ್ತೋ, ನೀವು ಬಂದು ಗುರಿಕಾರಿಕೆಯ ವಿಷಯದಲ್ಲಿ ಏನಾದರೊಂದು ಇತ್ಯರ್ಥ ಮಾಡುವ ತನಕ, ನಾಯಕರಿಲ್ಲದ ಕೇರಿಯಾಗಿ ಏನೇನು ಆಗಬಾರದಲ್ಲ—ಎಂದು ಹೇಳುವುದಕ್ಕೆ ಬಂದೆ" ಎಂದು ಅವರ ಮುಂದೆ ಬಿನ್ನವಿಸಿದ. ಮೂರು ದಿನ ಕಾಲ ಅಲ್ಲಿಯೇ ಕಳೆದ. ಮುಂದಿನ ತಿಂಗಳಲ್ಲಿ, ತಿರುಮಲಭಟ್ಟರು ಮಲೆಗೆ ಅವರಾಗಿಯೇ ಬರುತ್ತಿದ್ದರು. ಆದರೆ ತುಕ್ರ ಬಂದು, ಕೇರಿಯ ಚಿಕ್ಕ ಪುಟ್ಟ ಜಗಳಗಳನ್ನು ದೊಡ್ಡದಾಗಿ ಮಾಡಿ ತೋರಿಸಿ, ದಿನ ಹೋದರೆ ಅನರ್ಥವೇ ಆದೀತೆಂದು ಚಿತ್ರಿಸಿದುದರಿಂದ, ಉಪಾಯವಿಲ್ಲದೇ ಆಗಲೇ ಹೊರಟರು. ತುಕ್ರ ಅವರ ಜತೆಯಲ್ಲಿ, ಬಲು ಹಿಗ್ಗಿನಿಂದ ಊರಿಗೆ ಮರಳಿದ. ಧನಿಗಳು ತನ್ನನ್ನು ಬಿಟ್ಟು ಇನ್ನಾರನ್ನೂ ಗುರಿಕಾರಿಕೆಗೆ ಸೂಚಿಸಲಾರರು ಎಂಬುದು ಅವನಿಗೆ ಗೊತ್ತು.

"ಯಾಕೆ ನಿನಗೆ ಅಷ್ಟು ಯೋಚನೆ, ನೀನಿದ್ದೀಯಲ್ಲ. ನಿನ್ನ ಮಾತು ಮೀರುವವರುಂಟೇ?" ಎಂದು ಧನಿಗಳು ಬರುತ್ತ ದಾರಿಯಲ್ಲಿಯೂ ನುಡಿದಿದ್ದರು. ಆ ವಿಶ್ವಾಸದಿಂದಲೇ ತುಕ್ರ ತನ್ನ ಕೇರಿಯನ್ನು ಸೇರಿದ.

ತಿರುಮಲಭಟ್ಟರು, ಅಡುಗೆಯವ, ತೈನಾತಿಯವರನ್ನು ಕೂಡಿಕೊಂಡು ತಮ್ಮ ಮಲೆಯ ಬಿಡಾರಕ್ಕೆ ಬಂದರು. ಆ ಸುದ್ದಿ ತನ್ನಂತೆಯೇ ಕೇರಿಗೆ ಮುಟ್ಟಿತು. ಮುಟ್ಟಿದೊಡನೆಯೇ, ಚನಿಯ ಕರಿಯನನ್ನು ಕರೆದುಕೊಂಡು, ಧನಿಗಳ ದರ್ಶನಕ್ಕೆ ಹೊರಟ. ಇಬ್ಬರೂ ಹೊಸ ಯಜಮಾನಿಕೆಯ

ಮರ್ಯಾದೆಯಂತೆ ಬಾಳೆಯ ಹಣ್ಣುಗಳನ್ನು ಬೆತ್ತದ ಬುಟ್ಟಿಯಲ್ಲಿರಿಸಿ ಕೊಂಡು, ಅವರ ಮನೆಗೆ ಹೋಗಿ, ಮನೆಯ ಜಗುಲಿಯಲ್ಲಿ ಅವನ್ನಿಟ್ಟು, ಅಂಗಳದಲ್ಲಿ ಕಾದು ನಿಂತರು. ಧನಿಗಳು ಒಳಗಿಂದ ಹೊರಕ್ಕೆ ಬರುವಾಗ, ಈ ಕಾಣಿಕೆ ಕಣ್ಣಿಗೆ ಕಾಣಿಸಿತು. ಎದುರಿಗೆ ನಿಂತು, ತಮಗೆ ಸಾಷ್ಟಾಂಗ ವೆರಗಿದ ಕರಿಯ, ಚನಿಯರೂ ಕಾಣಿಸಿದರು.

"ಏನಪ್ಪಾ, ಅಪೂರ್ವದ ಫಲಕಾಣಿಕೆ!" ಎಂದರು ಧನಿಗಳು.

"ಧನಿಗಳಿಗೆ ಸಲಬೇಕಾದ ಮರ್ಯಾದೆ. ಕೆಂಚಣ್ಣ ನಮ್ಮನ್ನು ಬಿಟ್ಟುಹೋದನಲ್ಲ. ಹಾಗಾಗಿ ನಿಮ್ಮನ್ನು ಕಾಣಲು ಬಂದಿದ್ದೇವೆ. ಕುಲದ ಮರ್ಯಾದೆ ಸಲ್ಲಿಸುತ್ತಿದ್ದಾನೆ—ನಮ್ಮ ಕರಿಯಣ್ಣ. ಧನಿಗಳು ನಮ್ಮ ಹಿರಿಯರನ್ನು ಕಂಡುಬಂದ ಹಾಗೆ ಈ ಸಣ್ಣ ಗುರಿಕಾರನನ್ನು ನಡೆಸಿಕೊಂಡು ಬರಬೇಕು. ಏನೋ ಕೇರಿಯವರ ಮನಸ್ಸಿನಲ್ಲಿ, ನಾನು ವಯಸ್ಸಿನಲ್ಲಿ ದೊಡ್ಡವನೆಂದು 'ಇವನಿಗೆ ಪ್ರಾಯ ಬರುವ ತನಕ ಯಜಮಾನಿಕೆ ನೋಡಿಕೋ' ಎಂದಿದ್ದಾರೆ ನನಗೆ. ಧನಿಗಳ ಅನುಗ್ರಹವಾದರೆ, ದೈವ ಒಲಿದರೆ, ಹಿರಿಯರ ಹೆಜ್ಜೆ ತುಳಿಯುತ್ತಾ ಬರುತ್ತೇವೆ" ಎಂದು ಬಲು ವಿನಯದಿಂದ ನುಡಿದ.

ತಿರುಮಲಭಟ್ಟರು ಆ ಮಾತುಗಳನ್ನು ಕೇಳಿ ಒಮ್ಮೆಗೇ ದಿಗಿಲುಗೊಂಡರು. ತುಕ್ರ ತನಗೆ ಇದಾವುದನ್ನೂ ತಿಳಿಸದೆ, ವ್ಯರ್ಥವಾಗಿ ಕರೆದು ಕೊಂಡು ಬಂದನೇಕೆ? ಎಂದು ಅನಿಸಿತು—ಒಮ್ಮೆ. ಮರುಗಳಿಗೆಗೆ ತುಕ್ರನಿಗೆ ತಿಳಿಯುವುದರೊಳಗಾಗಿ, ಆತ ಊರು ಬಿಟ್ಟಾಗಲೇ, ಇಷ್ಟೆಲ್ಲ ನಡೆದಿರ ಬೇಕು—ಎಂದು ಹೊಳೆಯಿತು. ಈಗ ಬಂದವರಿಗೆ ಏನು ಹೇಳುವುದಕ್ಕೂ ತೋರಲಿಲ್ಲ. ಗುರಿಕಾರಿಕೆಯ ವಿಚಾರದ ರೀತಿ, ನೀತಿ ಅವರಿಗೆ ಗೊತ್ತಿಲ್ಲದ್ದು. ಮಲೆಗೆ ಅವರು ಹೊಸತರಲ್ಲಿ ಬರುವಾಗಲೇ ಕೆಂಚನಿದ್ದ. ಆದರೆ ಈಗ ಜನರು ಮಾಡಿದ್ದನ್ನು ಒಮ್ಮೆಗೇ ಒಪ್ಪಿಕೊಂಡರೆ, ತಮ್ಮ ನೆಚ್ಚಿನ ತುಕ್ರನಿಗೆ ಅನ್ಯಾಯ ವಾಗುತ್ತದೆಂದು ತೋರಿತು. ತಾವು ಬಂದದ್ದು, ಆತ ಓಡಿಬಂದು ದೂರು ಕೊಟ್ಟದ್ದು—ಎಲ್ಲವೂ ವ್ಯರ್ಥವಾದಂತೆಯೇ. ಚನಿಯನ ವಿಷಯ ಅವರಿಗೆ ತಿಳಿದದ್ದೂ ಕಡಿಮೆ; ಈತನಕ ಬರಿಯ ಆಳುಮಗನಾಗಿ ಕಾಣಿಸಿದ್ದ ಆತ. ಗುರಿಕಾರಿಕೆ ನಡೆಸುವ ಯೋಗ್ಯತೆ ಅವನಲ್ಲಿ ಇದ್ದೀತು—ಎಂಬುದರಲ್ಲಿಯೂ

ಭರವಸೆ ಇರಲಿಲ್ಲ. ಹಾಗೇ ಯೋಚಿಸುತ್ತ ನಿಂತರು. ಕೊನೆಗೆ ಅಂದರು : "ಏನು, ಕೇರಿಯವರು ಸೇರಿ ಇಷ್ಟೆಲ್ಲ ಮಾಡಿಬಿಟ್ಟರು—ಅನ್ನುತ್ತೀಯಾ ?"

"ಅಜ್ಜ ತೀರಿಕೊಂಡಮೇಲೆ ಆಗಬೇಕಲ್ಲ ಏನಾದರೊಂದು ವಿಲೆವಾರಿ."

"ಏನಾದರೂ ಆದರಾಯಿತೋ ?"

"ಕುಲಾಚಾರದ ಹಾಗೆ ನಡೆಯದೆ ಮಾರ್ಗವುಂಟೇ ? ಹತ್ತು ಮಂದಿ ಸೇರಿ ಹೀಗೆ ಮಾಡಿ ಎಂದರು."

"ತುಕ್ರ ಇದ್ದಿಲ್ಲವೇ—ಇಷ್ಟೆಲ್ಲ ತೀರ್ಮಾನವಾಗುವಾಗ ?"

"ಇದ್ದನಂತೆ. ಆದರೆ ಅವನು ನಮ್ಮ ಕೂಟಕ್ಕೆ ಬಂದಿರಲಿಲ್ಲ. ಹೇಳಿ ಕಳುಹಿಸಿದರೂ ಬರಲಿಲ್ಲ. ಎಲ್ಲಿಗೋ ಹೋದನಂತೆ. ಹಾಗೆಂದುಕೊಂಡು ಅವನೊಬ್ಬನಿಗೋಸ್ಕರ ಕೂಟದ ಮನಸ್ಸು ತಡೆಹಿಡಿಯಲು ಬರುತ್ತದೆಯೇ ?"

"ನಾನು, ನೀವು ತಂದ ಈ ಫಲಕಾಣಿಕೆಯನ್ನು ಮುಟ್ಟುವುದಿಲ್ಲ. ನಿಮಗೆ ಒಬ್ಬರು ಧನಿಗಳಿದ್ದಾರೆ—ಎಂಬುದು ಮರೆತೇ ಹೋಗಿದೆಯೆಂದು ಕಾಣುತ್ತದೆ. ಕೆಂಚಣ್ಣ ಸತ್ತುಹೋದರೆ ನಾನು ಬರುವ ತನಕ ಕಾಯ ಬೇಕಿತ್ತು. ತುಕ್ರ ಆ ಸುದ್ದಿ ಹೇಳುವುದಕ್ಕೇ ಬಂದಿದ್ದ ನನ್ನಲ್ಲಿಗೆ. ಅದಕ್ಕೆಂದೇ ನಾನು ಬಂದದ್ದು. ಎಲ್ಲವೂ ನನ್ನ ಸಮಕ್ಷಮದಲ್ಲಿ ಆಗಬೇಕು."

"ಆಗಬೇಕಿತ್ತು. ಆಗಿದ್ದರೆ ಚೆಂದ ನಿಜ; ಆದರೆ ನೋಡಿ, ಅವನು ಹೋದಮೇಲೆ ಅವನ ಏಳನೆಯ ದಿನಕ್ಕೆ ಈ ಕೆಲಸ ಮಾಡಬೇಕಾಗಿತ್ತು. ಆದರೂ ಒಂದೆರಡು ದಿನ ತಡೆದೆವು. ಮತ್ತೆ, ಉಪಾಯವಿಲ್ಲದೆ ಹೀಗೆ ಮಾಡಿ ದೆವು. ಬಹುದಿನ ಹಾಗೆಯೇ ಗುರಿಕಾರನಿಲ್ಲದೆ ಇರುವುದಕ್ಕಾಗುತ್ತದೆಯೇ ? ಏನಾದರೊಂದು ಆಪತ್ತು ಬಂದರೆ, ಮತ್ತೊಂದಾದರೆ—ಹೇಳುವವರು ಬೇಕಲ್ಲ."

ತಿರುಮಲಭಟ್ಟರು ಚನಿಯನ ಸಮಾಧಾನದ ಮಾತುಗಳಿಗೆ, ರೇಗಿದ ಉತ್ತರವನ್ನೇ ದಯಪಾಲಿಸಿದರು. ಅವಾವುದನ್ನೂ ತಾವು ಒಪ್ಪಿಕೊಳ್ಳುವು ದಿಲ್ಲವೆಂದೂ, ತಮ್ಮ ಎದುರಿನಲ್ಲಿಯೇ ಎಲ್ಲವೂ ಇತ್ಯರ್ಥವಾಗಬೇಕೆಂದೂ ಹೇಳಿದರು. 'ತುಕ್ರನನ್ನು ಗುರಿಕಾರನಾಗಿ ಒಪ್ಪಿಕೊಳ್ಳಲಿ' ಎಂದು ಮಾತ್ರ ಹೇಳಲಿಲ್ಲ. ಆದರೆ ಅವರಷ್ಟೇ ತಳಮಳಿತನಾದ ಚನಿಯ, ನೆತ್ತಗೆ ತನ್ನ ನಿರ್ಧಾರ ಹೇಳಿದ.

" ಧನಿಗಳೇ, ತಾವು ಸಿಟ್ಟಾಗಬಾರದು. ಕೂಡುಕಟ್ಟಿನ ಸಭೆಯು ನೀವಿದ್ದು ಆಗಬೇಕೆಂಬ ಮಾತೇನು? ಅದು ಜಾತಿಯವರಿದ್ದು ಆಗುವ ಕೆಲಸ. ಅದಕ್ಕೆ ಇನ್ನೊಬ್ಬರನ್ನು ನಾವು ಕರೆಯುವುದೂ ಸಮನಲ್ಲ; ಅವರು ಬರುವುದೂ ಚೆಂದವಲ್ಲ. ಈಗ ಕೇರಿಯವರು ನಿರ್ಧಾರ ಮಾಡಿ, ಒಂದು ಮನಸ್ಸಿನಿಂದ, ನಮಗೆ ಎಲೆ ಅಡಿಕೆ ಮರ್ಯಾದೆ ಸಲಿಸಿದ್ದಾರೆ. ನಾವು ತಕ್ಕೊಂಡಿದ್ದೇವೆ. ನಾನು ಮರ್ಯಾದೆ ಹಿಡಿದದ್ದು ನಮ್ಮ ಸಣ್ಣ ಕರಿಯಣ್ಣನಿಗಾಗಿ. ಕುಲದವರು ಬೇಡವೆಂದ ದಿನ ನನ್ನ ಗುರಿಕಾರಿಕೆ ಬಿಡುತ್ತೇನೆ. ಆದರೆ ಕರಿಯಣ್ಣನ ಮರ್ಯಾದೆ ಅವನದ್ದೇ. ಅವನ ಮನೆತನದ್ದು. ಅದನ್ನು ನೀವು ಬಿಡು ಅನ್ನುವ ಮಾತೇ ಇಲ್ಲ" ಎನ್ನುತ್ತಲೇ ತಿರುಮಲಭಟ್ಟರ ತಾಳ ತಪ್ಪಿತು.

" ಅಷ್ಟಿದ್ದ ಮೇಲೆ ನನಗೆ ಹೇಳಬೇಕಾದ್ದಿಲ್ಲ. ನನಗೆ ಈ ಹಣ್ಣು ಹಂಪಲು ತಂದುಕೊಡಬೇಕಾಗಿಲ್ಲ" ಎಂದು ಮುಖ ತಿರುಗಿಸಿ, ಕೋಣೆಯೊಳಗೆ ಹೋದವರು ಹೊರಗೆ ಬರಲೇ ಇಲ್ಲ. ಪಾಪದ ಚನಿಯ, ಕರಿಯರು ಸಂಜೆಯ ತನಕ ಅಲ್ಲಿಯೇ ಕಾದು, ಉಪವಾಸವಿದ್ದು, ಕೇರಿಗೆ ಮರಳಬೇಕಾಯಿತು. ಜಗುಲಿಯಲ್ಲಿರಿಸಿದ ಫಲಕಾಣಿಕೆಗಳನ್ನು ಅವರು ತಿರುಗಿ ಮುಟ್ಟಲಿಲ್ಲ; ಬರಿದೆ ಮರಳಿಬಂದರು. ಅಷ್ಟರೊಳಗೆ ಕೇರಿಯ ಜನಗಳಿಗೆ ಧನಿಗಳಿಂದ ಕರೆಬಂದಿತು. ತುಕ್ರಣ್ಣ ಎಲ್ಲರಿಗೂ ಖುದ್ದಾಗಿ ಹೇಳಿಕೆ ಸಲ್ಲಿಸಿದ್ದ. ಕರೆದ ಮೇಲೆ ಜನ ಹೋಗದಿರುತ್ತಾರೆಯೇ? ಪ್ರತಿಯೊಬ್ಬರೂ ಹೋದರು. ಚನಿಯ ಕರಿಯರೂ ಹೋಗಿ, ಮನೆಯಂಗಳದಲ್ಲಿ ಕೈಕಟ್ಟಿ ನಿಂತರು.

ಸಭೆ ಸೇರಿದಮೇಲೆ ಸಭೆಯ ನಾಯಕನಂತೆ, ತುಕ್ರ, ಗುರಿಕಾರಿಕೆಯ ವಿಚಾರದಲ್ಲಿ ತನ್ನ ಪ್ರವಚನ ತೊಡಗಿದ. ಕೂಟದವರ ಮುಂದೆ ಕೆಂಚಣ್ಣ ತೀರಿಕೊಂಡ ವಿಚಾರ ಹೇಳಿದ. ಉಳಿದವರಿಗೆ ತಿಳಿಯದೆಂಬಂತೆ, ಗುರಿಕಾರರನ್ನು ಆರಿಸುವ ಅವಶ್ಯಕತೆ ಹೇಳಿ, " ಹೇಗೂ ಅನ್ನ, ಅರಿವೆ ಕೊಟ್ಟು ನಡೆಸಿಕೊಂಡು ಬರುವ ಧನಿಗಳೇ ಇದಕ್ಕೆ ಬಂದಿದ್ದಾರೆ. ಅವರ ಮುಂದೆಯೇ ಎಲ್ಲವೂ ಇತ್ಯರ್ಥವಾದರೆ ಚೆಂದ" ಎಂದು ಬಿತ್ತರಿಸಿದ. ತುಕ್ರನನ್ನು ಕಂಡರೆ ತಿಮ್ಮನಿಗೆ ಬಹುಕಾಲದಿಂದ ಹಗೆ. ಆ ಹಗೆತನ ಕೆಂಪಿಯ ಲಗ್ನದ ವೇಳೆಯಲ್ಲೇ ಉಂಟಾಗಿತ್ತು. ಅದನ್ನವನು ಎಂದೂ ಮರೆತವನಲ್ಲ. ಅಲ್ಲದೆ,

ವೊನ್ನೆಯ ದಿನ ಕೇರಿಯ ಜನಗಳ ಮುಂದೆ, ಚನಿಯನನ್ನು ತಾತ್ಕಾಲಿಕ ಯಜಮಾನನನ್ನಾಗಿ ಆರಿಸುವ ವಿಚಾರದಲ್ಲಿ ಹೆಚ್ಚಿನ ಬೆಂಬಲ ಕೊಟ್ಟವನೂ ಅವನೇ. ಅದೇ ಚನಿಯ, ಈಗ ಮಾತನಾಡದಿದ್ದುದನ್ನು ಕಂಡು ತಿಮ್ಮ, ಧನಿಗಳು ಇದ್ದಾರೆಂದು ಹಿಂದು ಮುಂದು ನೋಡದೆ, "ತಕ್ರಣ್ಣ—ಏನು ಕೇರಿಗೆ ಕುಲಾಚಾರ ಗೊತ್ತಿಲ್ಲದ ಹಾಗೆ ಹೇಳುತ್ತೀಯಲ್ಲ ನೀನು. ನಿನಗೆ ಆ ದಿನ ಯಾರು ಬರಬೇಡವೆಂದರು? ಹೇಳಿಕಳುಹಿಸಿದರೆ ತಲೆ ತಪ್ಪಿಸಿಕೊಂಡು ಹೋದೆ ನೀನು. ಇವತ್ತು ಧನಿಗಳನ್ನು ಮುಂದಿರಿಸಿಕೊಂಡು, ಏನೂ ಗೊತ್ತಿಲ್ಲದವರ ಹಾಗೆ ಮಾತನಾಡುತ್ತೀಯಲ್ಲ. ನಮ್ಮ ನಮ್ಮ ಜಗಳದಲ್ಲಿ ಧನಿಗಳನ್ನು ಸಿಕ್ಕಿಸಿ ಹಾಕುವುದರಲ್ಲಿದ್ದಿಯಾ ನೀನು. ಗುರಿಕಾರಿಕೆಗೆ ಎರಡೆರಡು ಸಾರಿ ಆರಿಸುವುಧೆಂದರೇನು" ಎಂದು ಬಿರುಸಾಗಿಯೇ ನುಡಿದ. ಅದಕ್ಕೆ ಕಡಿಮೆ ಇಲ್ಲದ ಬಿರುಸಿನಿಂದ ತುಕ್ರ ಉತ್ತರ ಕೊಡುವವನೇ. ಆದರೆ ಧನಿಗಳ ಮುಂದೆ ಸಂಭಾವಿತತನ ನಟಿಸಬೇಕೆಂದು "ನಿನ್ನ ಹತ್ತಿರ ನಾನು ಮಾತನಾಡಲಿಲ್ಲ. ಧನಿಯರು ಎಲ್ಲರನ್ನೂ ಕರೆಯಬೇಕೆಂದರು—ಕರೆದೆ. ಯಾಕೆ ಏನೆಂಬ ಸಂಗತಿ ಹೇಳಿದೆ ಅಷ್ಟೆ. ಮುಂದೆ ಅವರಿದ್ದಾರೆ, ನೀವಿದ್ದೀರಿ" ಎಂದ.

ತಿರುಮಲಭಟ್ಟರು ತುಕ್ರನ ವಿವೇಕಕ್ಕೆ ತಲೆದೂಗಿದರು. ಅನಂತರ ನುಡಿದರು—"ತಿಮ್ಮ, ಏನೋ ಕೆದಕಿ ಮಾತನಾಡುತ್ತೀ ನೀನು. ನಿಮ್ಮನ್ನೆಲ್ಲ ಕರೆಯಿಸಿದ್ದು ನಾನು. ನಾನು ಇಲ್ಲಿ ಇರುವುದು ಗೊತ್ತಿಲ್ಲವೇ ನಿನಗೆ? ಕುಡಿದ ಅಮಲೋ! ತೆಪ್ಪಗೆ ಬಿದ್ದಿರು" ಎಂದು ಘರ್ಜಿಸಿ, ಉಳಿದವರನ್ನು ನೋಡಿ ಹೇಳಿದರು:

"ಈ ಮಲೆಯನ್ನು ಹತ್ತಾರು ವರ್ಷಕಾಲ ದುಡ್ಡು ತೆತ್ತು, ತಲೆಗೆ ಸುತ್ತಿಕೊಂಡವನು ನಾನು. ನೀವು ಇಲ್ಲಿ ಮೂಲದ ಜೀತದ ಆಳುಗಳು. ಮಲೆಯ ಕೆಲಸವೆಲ್ಲ ನಿಮ್ಮಿಂದಲೇ ಆಗುತ್ತದೆ, ನೀವಿದ್ದರೆ ಬೆಳಕು, ಇಲ್ಲದಿದ್ದರೆ ಕತ್ತಲೆ ಎಂದು ತಿಳಿಯಬೇಡಿ. ಹಿಂದೆ ಸಂಪಾಜೆಯಲ್ಲಿ ನನಗೆ ಇನ್ನೊಂದು ಮಲೆ ಇತ್ತು. ಇದರ ಅಪ್ಪನಂಥ ಏಲಕ್ಕಿ ತೋಟ. ವಿಟ್ಲದಿಂದ ನಾನು ಜನರನ್ನು ಕಟ್ಟಿಕೊಂಡು ಹೋಗಿ ಅಲ್ಲಿ ಬೇಸಾಯ ಮಾಡಿಸುತ್ತಿದ್ದೆ. ನನ್ನೆದುರು ನಿಮ್ಮ ಧಿಮಾಕು, ದಿಟ್ಟತನ ಬೇಡ. ಕೆಂಚ ತೀರಿಹೋದರೇನಾಯಿತು? ಮಲೆ ಕೆಂಚನದಲ್ಲ. ಮಲೆ ನನ್ನದು. ನಾನು 'ಇದ್ದಿರಿ, ಬಿದ್ದಿರಿ' ಎಂದಷ್ಟು ಕಾಲ

ಇಲ್ಲಿ ಇರಬಹುದಾದವರು ನೀವು. ಅದನ್ನು ಮರೆಯಬೇಡಿ. ನನ್ನನ್ನು ಬಿಟ್ಟು, ನನ್ನನ್ನು ಕೇಳದೆ, ಗುರಿಕಾರನನ್ನು ಮಾಡುತ್ತೇವೆ, ಮತ್ತೊಂದನ್ನು ಮಾಡುತ್ತೇವೆ—ಎಂಬ ಉಡಾಪಿ ಬೇಡ. ಅದರ ಪರಿಣಾಮ ಒಳ್ಳೆಯದಲ್ಲ. ಈಗ ನಾನಿದ್ದೇನೆ; ನೀವೆಲ್ಲರೂ ಇದ್ದೀರಿ. ನಿಮಗೆ ಯಾರು ಯಜಮಾನ ರಾಗಬೇಕೆಂದು ಆರಿಸಿ; ಎಲ್ಲವೂ ಕ್ರಮವಾಗಿ ಆಗಲಿ" ಎಂದರು.

ಪ್ರತಿಯೊಬ್ಬರೂ ಮುಖಮುಖ ನೋಡಿದರು. ಮಾತು ಒಬ್ಬರ ಬಾಯಿಂದಲೂ ಹೊರಡಲಿಲ್ಲ. ಪ್ರತಿಯೊಬ್ಬರಲ್ಲೂ ಅಸಮಾಧಾನ ಮೂಡಿತು. ಕುಲಕ್ಕೆ ಸಂಬಂಧಿಸಿದ ವಿಚಾರಗಳಲ್ಲಿ ಧನಿಗಳ ತನಕ ದೂರು ಹೋದದ್ದೇ ಸಮನಲ್ಲ—ಎಂದು ಹೆಚ್ಚಿನವರ ಅಭಿಪ್ರಾಯವಾಗಿತ್ತು. ಆದರೆ ಧನಿಗಳ ಎದುರಿನಲ್ಲಿ, ಪ್ರತಿನುಡಿ ಆಡುವಷ್ಟು ಧಾರ್ಷ್ಟ್ಯವೂ ಆ ಜನರಿಗಿರಲಿಲ್ಲ. ಅನಾದಿ ಕಾಲದಿಂದಲೂ ಅವರನ್ನೇ ಧನಿ ಎಂದು ಒಪ್ಪಿ, ಸಲ್ಲಿಸುವ ಸೇವೆ ಸಲ್ಲಿಸಿ, ಕೊಳ್ಳುವ ಅರಿವೆ ಉಪ್ಪು ಕೊಂಡು, ಬದುಕಿ ಬಂದವರು ಅವರು. ಹೀಗಾಗಿ ಧನಿಗಳ ಮುಂದೆ ಮೌನವಾಗಿದ್ದರು. ದಿಙ್ಮೂಢರಾಗಿ ನಿಂತ ಅವರನ್ನು ಕಂಡ ತುಕ್ರ "ಯಾಕೆ? ಧನಿಗಳ ಮುಂದೆ ಹೇಳಬಹುದಲ್ಲ. ಇಲ್ಲದೆ ಹೋದರೆ ಅವರೆಂದ ಜನವನ್ನು ಒಪ್ಪಿಕೊಳ್ಳಿ. ಯಾರೇ ಇರಲಿ. ಅದು ಚೆಂದ. ಧನಿಗಳೂ ಸಮ; ದೇವರೂ ಸಮ" ಎಂದು ಉಪದೇಶ ಮಾಡಿದ.

ತಿಮ್ಮನ ಎದೆಯಲ್ಲಿ ತುಂಬಿದ್ದ ಬೇಗುದಿ ಅದುಮಲಾರದ್ದು. ತುಕ್ರ ಮಾತಿಗೆ ಬಂದನಾದರೆ, ಅದು ಒಳಕ್ಕೆ ಕುಳಿತಿರಲಾರದು. ಧನಿಗಳು ಒಮ್ಮೆ ಗದರಿಸಿದ್ದಕ್ಕೆ ಮೂಕನಾಗಿ ಕುಳಿತ. ಅವನು ಅಚೀಚೆ ನೋಡಿದ. ಹಿಂದೆ ಸರಿದು ಒಬ್ಬಿಬ್ಬರೊಡನೆ ಗುಸುಗುಸು ಮಾತನಾಡಿದ. ಅದನ್ನು ಕಂಡು ಧನಿಗಳು "ಏ ತಿಮ್ಮ, ಬಾ ಮುಂದಕ್ಕೆ. ನಾಯಿಯ ಹಾಗೆ ಇಲ್ಲಿ ನಿಂತಿರು" ಎಂದರು. ಎಲ್ಲರ ಮುಂದೆ ಅವಮಾನಿಸಿಕೊಂಡು, ಅದೂ ತುಕ್ರನ ಮುಂದೆ ಅಷ್ಟು ಬೈಸಿಕೊಂಡು, ತನ್ನ ಸೋಲೊಪ್ಪಲಾರದ ಜೀವ ತಿಮ್ಮನದು. ಹೆಚ್ಚಾಗಿ ಆತ ತಾನಾಗಿ ಯಾರನ್ನೂ ಕೆಣಕುವವನಲ್ಲ. ತನ್ನ ಪಾಲಿನ ಕೆಲಸ ವನ್ನು ಕಟ್ಟುನಿಟ್ಟಿನಿಂದ ಮಾಡುವವ. ಈ ಅವಮಾನ ಸಹಿಸಲು ಅವನಿಂದಾಗಲಿಲ್ಲ. ಅದಕ್ಕೆಂದ. "ಧನಿಗಳೇ, ನೀವೇನು ತಿಳಿದರೂ ಸಮನೇ. ನೀವು ಉಗಿದರೂ ಉಗಿಸಿಕೊಳ್ಳುತ್ತೇನೆ. ಆದರೆ ಅನ್ಯಾ

ಯುದ ಕೆಲಸಕ್ಕೆ ನಾನಿಲ್ಲ. ಕುಲಾಚಾರದ ಮಾತಿನಲ್ಲಿ ನೀವು ಕೈಹಾಕ ಬಾರದು. ಇದು ನಮ್ಮ ನಮ್ಮ ಕೂಡುಕಟ್ಟಿಗೆ ಸಂಬಂಧಿಸಿದ ಸಂಗತಿ. ನಾಳೆ ಒಬ್ಬನನ್ನು ಜಾತಿಯಿಂದ ತೆಗೆಯಿಸುವ ವಿಷಯ, ಸೇರಿಸಿಕೊಳ್ಳುವ ವಿಷಯ, ಮದುವೆಯ ಮಾತು, ಬೊಜ್ಜದ ಮಾತು—ಪ್ರತಿಯೊಂದು ಅಲ್ಲಿ ಬರುತ್ತದೆ. ಅದೆಲ್ಲ ನಮ್ಮ ನಮ್ಮ ಮನೆತನದ ಮಾತು. ಧನಿಗಳು ಆ ವಿಷಯದಲ್ಲಿ ಏನೂ ಅಪ್ಪಣೆ ಕೊಡಿಸಬಾರದು. ನಿಮ್ಮ ತೋಟದ ಕಸುಬಿನ ವಿಚಾರವೋ, ಏಲಕ್ಕಿ ತರುವುದೋ, ಹೆಕ್ಕುವುದೋ, ಏನೇನು ಆಗಬೇಕೋ ಅದೆಲ್ಲ ಸಂಗತಿಯಲ್ಲಿ ನೀವು ಯಾರನ್ನೇ ತೋರಿಸಿ, ಅವರನ್ನು ಒಪ್ಪಿಕೊಂಡು ಚಾಚೂ ತಪ್ಪದೆ ನಡೆದುಕೊಂಡು ಬರುತ್ತೇವೆ. ನಿಮಗೆ ಇಷ್ಟ ಕಂಡರೆ ತುಕ್ರನನ್ನೇ ಮಾಡಿ. ಬೇಡ—ಅನ್ನುವುದಿಲ್ಲ. ಉಳಿದ ಸಂಗತಿಗಳನ್ನು ನಮಗೆ ಬಿಟ್ಟುಬಿಡಿ. ಕರಿಯಣ್ಣ ಇದ್ದಾನೆ. ಅವ ದೊಡ್ಡದಾಗುವಲ್ಲಿಯ ವರೆಗೆ ಚನಿಯ ನೋಡುತ್ತಾನೆ."

ಜನರ ಮನಸ್ಸು ಒಮ್ಮೆ ಧನಿಗಳ ಮುಖದ ಕಡೆಗೆ ತಿರುಗಿತು; ಇನ್ನೊಮ್ಮೆ ತಿಮ್ಮಣ್ಣ ನುಡಿದ ವಿವೇಕದ ಮಾತಿನ ಕಡೆ ಹರಿಯಿತು. 'ಅದು ಒಂದೇ ಸಮನಾದ ದಾರಿ'—ಎಂದು ಅವರೆಲ್ಲರಿಗೂ ತೋರುತಿತ್ತು. ಇಷ್ಟರ ವರೆಗೆ ಸುಮ್ಮನಾಗಿದ್ದ ಚನಿಯ, ಬೂದರಿಬ್ಬರೂ "ಧನಿಗಳೇ, ತಿಮ್ಮ ಹೇಳಿದ್ದು ತೀರ ನ್ಯಾಯ" ಎಂದರು. ಆ ಮಾತು ಕೇಳಿ ತಾಳ್ಮೆ ತಪ್ಪಿದರು ತಿರುಮಲಭಟ್ಟರು. ತಮ್ಮ ಒಡೆತನದ ದರ್ಪಕ್ಕೆ ಅದು ಕುಂದೆಂದು ಕಂಡಿತು ಅವರಿಗೆ. ಅವರೆಂದರು "ಏನು, ನಿಮ್ಮ ಇಷ್ಟ ಬಂದ ಹಾಗೆ ಇರುವವರೋ ನೀವು? ನನಗಾಗಿ ಒಬ್ಬ ಗುರಿಕಾರ; ನಿಮಗಾಗಿ ಒಬ್ಬನೋ, ಇಬ್ಬರೋ. ಬುದ್ಧಿಗೇಡಿಗಳು ನೀವು. ಗುರಿಕಾರಿಕೆಗೆ ಇಂದಿನಿಂದ—ಈ ಕ್ಷಣದಿಂದ ತುಕ್ರನನ್ನು ಗೊತ್ತುಮಾಡಿದ್ದೇನೆ. ಎಲ್ಲದಕ್ಕೂ ಅವನೇ ಗುರಿಕಾರ. ಅವನ ಮಾತು ಕೇಳುವುದಾದರೆ ಕೇಳಿ; ಬಿಡುವುದಾದರೆ ಬಿಡಿ. ಕೇಳಲಾರದವರು ಈ ಮಲೆಯಲ್ಲಿರಕೂಡದು—ಎಂಬುದನ್ನು ಮಾತ್ರ ಯೋಚಿಸಬೇಡಿ" ಎಂದರು. ತುಸು ಹೊತ್ತು ಯಾರೂ ಮಾತನಾಡಲಿಲ್ಲ. ತಿರುಗಿ ತಮ್ಮ ಅಪ್ಪಣೆ ಮುಂದುವರಿಸಿದರು—"ಏನು? ಒಪ್ಪಿಗೆಯೇ? ನಾಳೆ ನನ್ನ ಹಿಂದೆ ತಂಟೆ, ತಕರಾರು ಮಾಡಿ, ನಾನು ಬಂದಾಗ ದೂರು ಕೊಟ್ಟರೆ ನಿಮ್ಮ

ಚರ್ಮ ಸುಲಿಸಿಬಿಟ್ಟೇನು" ಎಂದರು. ಅಷ್ಟರತನಕ ಮಾತು ಹೋದೀ ತೆಂದು ಯಾರೂ ಎಣಿಸಿರಲಿಲ್ಲ. ಆದರೂ ಚನಿಯು ಮಾತನಾಡಲಿಲ್ಲ. ಅದರಿಂದ ಬೂದ ಮುಂದಕ್ಕೆ ಬಂದು "ಧನಿಗಳೇ, ಕುಲದ ಗುರಿಕಾರಿಕೆಯ ವಿಚಾರದಲ್ಲಿ ಇನ್ನು ಮಾತಿಲ್ಲ. ನಾವು ಮಾಡಿದ್ದು ತಪ್ಪು ಎಂದು ದೈವದ ಮನಸ್ಸಿಗೆ ಬಂದರೆ, ಅದೇ ಅಪ್ಪಣೆ ಕೊಡಿಸಲಿ. ದೈವ ಹೇಳುವ ತನಕ ಕರಿಯನನ್ನಾಗಲೀ ಚನಿಯನನ್ನಾಗಲೀ ನಾವು ತೆಗೆದುಹಾಕಲಿಕ್ಕೆ ಬರುವುದಿಲ್ಲ. ನಿಮ್ಮ ತೋಟದ ಸೇವೆ ನಾವು ಮಾಡಬೇಕಾದದ್ದೇ; ಯಾರು ಹೇಳಿದರೂ ಮಾಡುತ್ತೇವೆ" ಎಂದು ತಮ್ಮ ನಿರ್ಧಾರ ತಿಳಿಸಿದರು. "ಅದೇ ಸಮ, ಅದೇ ಸಮ" ಎಂದು ಸೇರಿದವರೆಲ್ಲ ಅವನಂದಂತೆ ತಲೊದಗಿದರು.

ಅನಂತರ ಹೊತ್ತು ಕಳೆಯಿತೇ ವಿನಾ ಬೇರೆ ಮಾತುಗಳು ಬರಲಿಲ್ಲ. ತಿರುಮಲಭಟ್ಟರು ಅಶಾಂತರಾದರು. "ತುಕ್ರ, ಹೇಗೆ ಬೇಕೋ ಹಾಗೆ ಮಾಡಲಿ ಅವರು. ನಿನ್ನ ಮಾತು ಕೇಳಿದವರು ಇರುತ್ತಾರೆ–ಈ ಮಲೆಯಲ್ಲಿ. ಕೇಳಲು ಇಷ್ಟವಿಲ್ಲದವರು ಮಲೆಯಿಂದ ಹೊರಟುಹೋಗಲಿ ಹೋಗದವರನ್ನು ಹೊರಡಿಸುತ್ತೇನೆ" ಎಂದು ಅಪ್ಪಣೆ ಕೊಟ್ಟು, ಒಳಕ್ಕೆ ಹೋಗಿ ಬಿಟ್ಟರು.

ಕುಡಿಯರ ಗುಂಪು ಚದರಿತು. ತಂತಮ್ಮ ಮನೆಗಳಿಗೆ ಜನ ಹಿಂದೆರಳಿತು. ಪ್ರತಿಯೊಬ್ಬರ ಮನಸ್ಸು ತಮ್ಮ ಧನಿಗಳು ಇದರಲ್ಲಿ ಕೈಹಾಕಬಾರದಿತ್ತು—ಎಂದು ಹೇಳುತಿತ್ತಾದರೂ, ಅವರ ಅಜ್ಞಾನದ ಬಾಳಲ್ಲಿ ಇಂಥ ಸಂಧಿಗ್ಧ ಬಂದೊದಗಿದಾಗ ಏನು ಮಾಡಬೇಕೆಂಬ ದಾರಿ ತೋರಲಿಲ್ಲ. ಕೇರಿಯಲ್ಲಿ ಇಬ್ಬಣವಾಗುತ್ತಿದೆ. ಯಾರ ಅಧಿಕಾರವೂ ನಡೆಯದೆ ಹೋಗುತ್ತದೆ—ಎಂಬ ದುಃಖ ಚನಿಯನಿಗೆ ತೀರ ಮೂಡಿತು. ಬೂದನೂ ಅದನ್ನು ಬಲ್ಲ, ಆತ ಬಹು ಹೊತ್ತಿನವರೆಗೆ ಯೋಚಿಸಿ, ಕೊನೆಗೆ—'ಆದಷ್ಟು ತೀವ್ರ ದೈವಕ್ಕೆ ಪೂಜೆ ಸಲಿಸಿ, ಪೂಜೆಯ ಕಾಲದಲ್ಲಿ ದೈವವನ್ನು ಕೇಳಿ ಅಪ್ಪಣೆ ಪಡೆಯುವುದು ಒಳಿತೆಂದು'. ಯೋಚಿಸಿದ. ಅದನ್ನೇ ಚನಿಯನಿಗೂ ಉಪಾಯವಾಗಿ ಸೂಚಿಸಿದ.

ತಿಮ್ಮ ಮಾತ್ರ—ತನ್ನ ಸ್ವಭಾವಕ್ಕನುಸಾರವಾಗಿ, 'ಬೆಟ್ಟ ತಲೆಯ ಮೇಲೆ ಕುಸಿದರೂ, ತುಕ್ರನ ಗುರಿಕಾರಿಕೆಯನ್ನು ತಾನು ಒಪ್ಪಿಕೊಳ್ಳಲಾರೆ'

ಎಂದುಕೊಂಡ. ಅವನ ಮನಸ್ಸು—ಅಂಥ ಪ್ರಸಂಗ ಒದಗಿದರೆ ಕೇರಿ ಯನ್ನು ಬಿಟ್ಟು, ಬೇರೊಂದು ಮಲೆ ಸೇರುವುದಕ್ಕೂ ಸಿದ್ಧವಿತ್ತು. ಧನಿಯ ರಿಂದ ಮಾತು ಅವನನ್ನೇ ಹೆಚ್ಚಾಗಿ ಚುಚ್ಚಿದಂತಿತ್ತು. 'ಹೋ, ನಮ್ಮನ್ನು ಓಡಿಸಿ, ಘಟ್ಟದ ಕೆಳಗಿನ ಆಳುಗಳನ್ನು ತಂದು, ಇವರು ಏಲಕ್ಕಿ ಬೇಸಾಯ ಮಾಡಿಸುತ್ತಾರಾದರೆ ಮಾಡಲಿ' ಎಂದು ಒಮ್ಮೆ ತೋರಿದರೆ, ಇನ್ನೊಮ್ಮೆ ಬದಲೇ ಅನ್ನುತಿತ್ತು ಮನಸ್ಸು. ಬೂದನಿಗೂ ಅವನಿಗೂ ಹಿಂದೆ ಅಷ್ಟೊಂದು ಮೈತ್ರಿ ಇಲ್ಲದಿದ್ದರೂ, ಈಗ ತುಂಬ ನೆಚ್ಚಿನಿಂದ ಅವನನ್ನು ಮೇಲಿಂದ ಮೇಲೆ ಕಾಣುತ್ತಿದ್ದ. "ಕರಿಯಣ್ಣ, ಚನಿಯಣ್ಣ — ಇಬ್ಬರನ್ನೂ ಬಿಟ್ಟು ಮಲೆಯ ಕಾರುಭಾರ ತುಕ್ರ ಮಾಡಿಸುತ್ತಾನೇನು? ಮಾಡಿಸಲಿ! ಈ ವರೆಗೆ ಗುರಿಕಾರ ಅಂದ ಹಾಗೆ ಕೇರಿ ನಡೆಯುತಿತ್ತು. ಗುರಿಕಾರನನ್ನು ಆರಿಸಿದ್ದೇವೆ—ನಾವು ಆಮೇಲೆ ತುಕ್ರನಂಥಾ ನಾಯಿಯ ಮಾತು ಕೇಳಿ ಕೊಂಡು ಬಿದ್ದಿರಬೇಕೆಂದರೆ ಹೇಗೆ ಸಾಧ್ಯ" ಎಂದ. ಅದಕ್ಕೆ ಬೂದ "ನೀನೆ ನ್ನುವುದೂ ನ್ಯಾಯ. ಆದರೆ ನೋಡು, ಮಲೆಯ ಧನಿಯಾದವರು ಹಾಗೆ ಹೇಳುವಾಗ, ಅವರೊಂದಿಗೆ ನಾವು ಜಗಳಕ್ಕೆ ನಿಲ್ಲಲು ಬರುತ್ತದೆಯೋ? ಆದ ಕ್ಕೇನಾದರೂ ಉಪಾಯ ಹೂಡಬೇಕು. ದೈವದ ತನಕ ದೂರು ಕೊಡ ಬೇಕು. ದೈವ ಎಂದ ಹಾಗೆಯೇ ಆಗಲಿ" ಎಂದ. ಅದಕ್ಕೆ ತಿಮ್ಮನ ಒಪ್ಪಿಗೆ ಇಲ್ಲ. ಆತನೆನ್ನುತ್ತಾನೆ "ದೈವಕ್ಕೆ ಆಡಿದ ಮಾತಿದೆ. ಅಂದೇ ಅಂದಿತ್ತು ದೈವ—ಕೆಂಚಣ್ಣನೊಡನೆ. ಈಗ ಇನ್ನೊಂದು ಅನ್ನಲಾರದು. ನಮಗೆ ಉಳಿದ ದಾರಿ ಒಂದೇ—ಈ ಮಲೆ ಬಿಡುವಂಥಾದ್ದು. ಆದರೆ ನಮ್ಮ ಅನ್ಯಾಯವೇನಿದೆ—ಇಲ್ಲಿ? ನಾವು ತಪ್ಪು ಮಾಡಿದರೆ ಆಗ ನಾವು ಮಲೆ ಬಿಡಬೇಕು. ಈ ಮಲೆಗೆ ಎಷ್ಟು ಧನಿಗಳಾಗಿಲ್ಲ; ಹಿಂದೆ ಮೂಲೆಗುಂಪಿನ ಬಲ್ಲಾಳರಿದ್ದರು. ಈಗ ಇವರಿದ್ದಾರೆ. ನಾಳೆ ಇವರಿಗೆ ಬೇಸರ ಬಂದು ಇದನ್ನು ಮಾರಿದರೆ ಇನ್ನೊಬ್ಬರೇ ಧನಿಗಳು ಬರುತ್ತಾರೆ. ಧನಿಗಳು ಬದಲಿಸಿ ದರು—ಎಂದರೆ ಮಲೆ ನಮ್ಮದಲ್ಲವೇ? ಮಲೆರಾಯ, ಕುಡಿಯರ ಮಕ್ಕಳಿಗೆ, ಕೊಟ್ಟ ಮಲೆ ಇದು. ಅವರು ನಮ್ಮನ್ನೇ ಓಡಿಸುವುದನ್ನು ನೋಡಿ ಬಿಡುವ, ಬೇಕಾದರೆ ಈ ಕೇರಿಯನ್ನು ಬಿಟ್ಟ—ಗವಿ ಇದೆ; ಗುಡ್ಡ ಇದೆ. ಅದರ ಒಂದಲ್ಲ ಒಂದು ತುದಿಯಲ್ಲಿ ಇದ್ದು ಬಿಡುವ. ದೈವಕ್ಕೆ ಕಣ್ಣಿಲ್ಲವೇ? ಈ

ತುಕ್ರ ನಮ್ಮನ್ನು ಕುತ್ತಿಗೆಗೆ ಕೈಹಾಕಿ, ನೂಕುವುದನ್ನೂ ನೋಡಿಕೊಂಡೀತು. ಅಥವಾ ಧನಿಗಳು ಬೇರೆ ಜನ ತಂದು ಬೇಸಾಯ ನಡೆಸುವುದನ್ನೂ ದೈವ ನೋಡೀತು. ಮೊದಲು ಆ ತುಕ್ರನೇ ಇನ್ನು ಎಷ್ಟು ದಿನ ಬದುಕುತ್ತಾನೆ ಎಂತ ಲೆಕ್ಕ ಹಾಕಲಿ. ಕೇರಿಯೆಲ್ಲ ಒಂದಾದರೆ ತುಕ್ರ ನೇಣುಹಾಕಿಕೊಳ್ಳ ಬೇಕಾದೀತು. ನಾಳೆ ಅವನು ನೆರಿಯಕ್ಕೆ ಮಾವನ ಮನೆಗೆ ಹೋಗ ಬೇಕಾದೀತು. ಅವನ ಮೊದಲ ಹೆಂಡತಿಯೂ ಬರಲಿಕ್ಕಿಲ್ಲ ಜತೆಗೆ" ಎಂದು ಆಬ್ಬರದ ಮಾತನ್ನಾಡಿದ. ಅವನ ಮನಸ್ಸಿನಲ್ಲಿ ನೂರಾರು ಯುದ್ಧದ ಹಂಚಿಕೆಗಳು ಮೂಡತೊಡಗಿದುವು. ವ್ಯಕ್ತಿದ್ವೇಷ ಎಂಥ ಕೆಲಸಕ್ಕೂ ಅವ ನನ್ನೊಯ್ಯುವ ಸಾಧನವಾಯಿತು. ಮನಸ್ಸಿನಲ್ಲಿ 'ಯಾರೂ ಏನೂ ಮಾಡಲಿ ತಾನು ತಲೆ ತಗ್ಗಿಸುವವನಲ್ಲ; ಒಂದು ಮಳೆಗಾಲವೂ ತುಕ್ರನ ಯಜಮಾ ನಿಕೆ ನಡೆಯಕೂಡದು' ಎಂಬ ಹಟವನ್ನು ಆತ ಮನಸ್ಸಿನಲ್ಲಿ ಹೊತ್ತು, ಅದನ್ನು ಸಾಧಿಸುವುದಕ್ಕಾಗಿ ಹಂಚಿಕೆ ಹೂಡತೊಡಗಿದ. ಬೂದನ ಶಾಂತಿ ಪ್ರವಚನವೂ ಅವನಿಗೆ ಒಪ್ಪಿಗೆಯೆನಿಸಲಿಲ್ಲ. ಆತ ಎರಡೆರಡು ವಿಧಗಳಿಂದ ತನ್ನ ಕೆಲಸ ತೊಡಗಿದ—ಮೊದಲನೆಯದು ನಾಳಿನ ಗುರಿಕಾರನಾದ ಕರಿಯ ನನ್ನು ತನ್ನ ಪಕ್ಷಕ್ಕೆ ಸೆಳೆದುಕೊಂಡು, ಧನಿಗಾಗಿ ದುಡಿಯುವವನಂತೆ, ಅವನಿಗಾಗಿ ದುಡಿಯಬೇಕೆಂಬುದು. ಇನ್ನೊಂದು—ಹಿರಿ ಮಲೆಯ ತನಕ ಹೋಗಿ, ಜಾತಿಯವರ ಮುಂದೆ ತಮಗೊದಗಿದ ಈ ವಿಪತ್ತನ್ನು ತಿಳಿಸಿ, ಆಪತ್ಕಾಲದಲ್ಲಿ ಅವರ ಬೆಂಬಲ, ಸಹಾನುಭೂತಿ—ದೊರಕಿಸಬೇಕೆಂಬುದು. ಎಷ್ಟೋ ಬಾರಿ ಅವನಿಗನಿಸುತಿತ್ತು—ಇದಕ್ಕಿಂತ ಸುಲಭದ ಕೆಲಸವೆಂದರೆ— ನೆಪವಿಲ್ಲದ ನೆಪ ಹೂಡಿ, ತುಕ್ರನೊಡನೆ, ಧನಿಗಳೊಡನೆ ಜಗಳ ಕಾಯ್ದು, ಅವರನ್ನು ಬಲಿಗೊಳ್ಳಬೇಕೆಂದು. ಹೆಚ್ಚು ಕಡಿಮೆ ಈ ಎಲ್ಲ ವಿಷಯಗ ಳನ್ನೂ ಆತ ಬೂದನೊಡನೆ ಯೋಚನೆ ಮಾಡುತ್ತಲಿದ್ದ. ಅವನ ಅತಿಗಾಮಿ ಧೋರಣೆಯನ್ನು ನಾಲ್ಕು ದಿನ ಕಾಲ ತಡೆದು ಹಿಡಿದವನೆಂದರೆ ಬೂದ ನೊಬ್ಬನೇ. ದೈವದಿಂದ ಅಪ್ಪಣೆ ಪಡೆಯುವ ತನಕ, ಯಾವುದೊಂದು ಕಠಿಣ ದಾರಿಯನ್ನು ತಾವು ಹಿಡಿಯುವುದಕ್ಕೂ, ದುಡುಕುವುದಕ್ಕೂ ಬೂದನ ಮನಸ್ಸು ಕೇಳಲಾರದು.

ಯಾರು ಹೇಗೆಯೇ ಇರಲಿ; ಕುಡಿಯರ ಸ್ವಾಭಿಮಾನ ಕಾಯುವ

ವಿಚಾರದಲ್ಲಿ ತಿಮ್ಮ ಮಾತ್ರ ಬದ್ಧ ಕಂಕಣ. ತನ್ನ ತಲೆ ಹೋದರೂ ಆ ಕೆಲಸ ಮಾಡಬೇಕೆಂಬ ಹಟವುಳ್ಳವ.

## ಅಧ್ಯಾಯ ೮

ಗುರಿಕಾರಿಕೆಯ ಇತ್ಯರ್ಥಕ್ಕೆ ಬಂದ ತಿರುಮಲಭಟ್ಟರು, ಈ ಬಾರಿ ಬರಿಯ ಒಂದು ವಾರಕಾಲ ಮಾತ್ರ ಮಲೆಯಲ್ಲಿ ಇದ್ದು ಹೊರಟುಹೋದರು. ಮಳೆಗಾಲ ಕಳೆದಿತ್ತು. ಏಲಕ್ಕಿ ಫಸಲು ಕೊಯ್ಯಲಿಕ್ಕೆ ಬಹು ಸ್ವಲ್ಪವೇ ಸಮಯವೂ ಉಳಿದಿತ್ತು. ಇನ್ನೂ ಒಂದು ಹದಿನೈದು ದಿವಸ ಉಳಿದಿದ್ದರೆ ಆ ಕೆಲಸವನ್ನೂ ತೊಡಗಿಸಿ, ವಾಡಿಕೆಯಂತೆ ಎಲ್ಲವನ್ನೂ ಮುಗಿಸಿಕೊಂಡು, ಅನಂತರವೇ ಹೊರಟುಹೋಗಬಹುದಿತ್ತು. ಆದರೆ ಈ ಬಾರಿ ಅವರು ಬಂದದ್ದು ಅವಸರದಿಂದ. ಅವಸರವಾಗಿಯೇ ಹೊರಟುಹೋದರು. ಇದ್ದ ಎಂಟು ದಿನ ಕಾಲ ತೋಟದಲ್ಲಿ ಸುತ್ತಾಡಿ ಫಸಲು ನೋಡಿಕೊಂಡು ಬಂದರು. ಕುಡಿಯರ ಕೇರಿಗೆ ಸುತ್ತು ಬಂದು ಜನಗಳೊಡನೆ ಉಪಚಾರದ ನಾಲ್ಕು ಮಾತುಗಳನ್ನು ಆಡಿದರು. ಹೀಗೆ ಅವಕಾಶ ದೊರೆತಾಗ ಕೇರಿ ಸುತ್ತಾಡುವುದು ಅವರ ಸ್ವಭಾವ. ಆಳುಗಳೆಲ್ಲ—ಕಾಡಿಗೋ, ತೋಟಕ್ಕೋ ಹೋಗಿದ್ದರೆ, ಇನ್ನಷ್ಟು ಉತ್ಸಾಹದಿಂದ ಕೇರಿಯ ಆಚೀಚೆ ಸುತ್ತಿ—ಏನು ಬೆಳೆದಿದ್ದಾರೆ, ಏನು ಮಾಡುತ್ತಿದ್ದಾರೆ—ಎಂದು ನೋಡಿ ಕೊಂಡು ಬರುವುದೂ ಹೆಚ್ಚು. ತಮ್ಮ ಜನಗಳ ಕ್ಷೇಮಸಮಾಚಾರ ತಿಳಿಯು ವುದೇ ಅವರ ಇಂಥ ಸಂಚಾರಗಳ ಉದ್ದೇಶವಲ್ಲ. ಅದಕ್ಕಿಂತ ಹೆಚ್ಚಾಗಿ —ಅವರ ಮನಸ್ಸನ್ನು ಸೆಳೆಯುತ್ತಿದ್ದುದು, ಕುಡಿಯರ ಕನ್ಯೆಯರ ಚಿತ್ರ. ಯಾರು ಕಣ್ಣಿಗೆ ಬಿದ್ದಾರು—ಎಂದು ಹುಡುಕುವ ಚಟ ಅವರಿಗೆ ಬಹು ದಿನದಿಂದಲೂ ಬಂದದ್ದು. ಈ ಬಾರಿ ಕೇರಿಯ ಜನ, ತಮ್ಮ ನಿತ್ಯ ಕೆಲಸಕ್ಕೆ ಹೋದಾಗ, ಬಹು ಕಾಲದ ಬಳಿಕ, ಕೆಂಪಿಯೇ ಅವರ ಗಮನ ಸೆಳೆದಂತೆ ಕಾಣುತ್ತದೆ. ಕೇರಿಯ ಬಳಿ ಕಟ್ಟಿದ್ದ ಚಿಕ್ಕದೊಂದು ಗುಡಿಸಲಿ ನಲ್ಲಿ ಆಕೆ ಕುಳಿತು, ಬೀಳಲಿನ ಬುಟ್ಟಿ ಹೆಣೆಯುತ್ತಿದ್ದಳು. ಅದು 'ಮುಟ್ಟಿನ ಮನೆ.' ಕುಡಿಯರಲ್ಲಿ ಸ್ತ್ರೀಯರು ಹೊರಗಾದಾಗ ಆ ಮನೆಯಲ್ಲಿ ದಿನ ಕಳೆ ಯುವುದು ವಾಡಿಕೆ. ಈ ಸಂಗತಿ ತಿಳಿದಿಲ್ಲದ ಅವರು, ಅದರ ಬಳಿ ಹಾಯ್ದು

ಕೆಂಪಿಯನ್ನು ಕಂಡು—ಒಂದು ಕ್ಷಣ ನಿಂತರು. ಬೂದನ ಮನೆ ಬೇರೆಯಾಗಿತ್ತು; ಅದರ ಪರಿಚಯವೂ ಅವರಿಗೆ ಇತ್ತು. ಹಾಗಾಗಿ, ಕೆಂಪಿ ಅಲ್ಲಿ ಏಕೆ ಕುಳಿತಿದ್ದಳೆಂಬುದು ಅವರಿಗೆ ಹೊಳೆಯಲಿಲ್ಲ. ಆಕೆಯನ್ನು ಮಾತಾಡಿಸುವ ಆಸೆಯಾಗಿ, " ಯಾರದು ? " ಎಂದು ಕೇಳಿದರು.

" ನಾನು ಒಡೆಯ " ಎಂದು ಧ್ವನಿ ಕೇಳಿ, ಪ್ರತ್ಯುತ್ತರ ನುಡಿದು, ಕೆಂಪಿ ಕತ್ತೆತ್ತಿ ನೋಡಿದಳು. ತುಸು ದೂರದಲ್ಲೇ ನಿಂತು ಮಾತನಾಡಿಸಿದವರು ಧನಿಗಳು. ಈಕೆ ಥಟ್ಟನೆ ತಲೆ ತಗ್ಗಿಸಿ ತನ್ನ ಕೆಲಸವನ್ನು ಸಾಗಿಸಿದಳು.

" ಬೂದ ಮನೆಯಲ್ಲಿಲ್ಲವೇ ? ಇದು ಯಾರ ಮನೆ ? "

" ಅವರೆಲ್ಲಿಗೆ ಹೋಗಿದ್ದಾರೋ ? "

" ಇದು ನಿಮ್ಮ ಮನೆಯೆ ? "

" ಅಲ್ಲ."

" ಮತ್ತೇನು ಒಬ್ಬಳೇ ಕೂತಿದ್ದೀಯಾ ? "

ಹೀಗೆ ಭಟ್ಟರು ಮೇಲಿಂದ ಮೇಲೆ ಹತ್ತೆಂಟು ಪ್ರಶ್ನೆಗಳನ್ನು ಕೇಳಿದರು. ಆಕೆ ಒಮ್ಮೊಮ್ಮೆ ತಲೆಯೆತ್ತಿ, ಕೆಲವೊಮ್ಮೆ ಅದೂ ಇಲ್ಲದೆ, ಅರ್ಧಮರ್ಧ ಉತ್ತರ ಸಲ್ಲಿಸುತ್ತಿದ್ದಳು. ಭಟ್ಟರು ಬಹುಹೊತ್ತು ಹಾಗೆಯೇ ಪ್ರಶ್ನೆ ಕೇಳುತ್ತ ನಿಂತಿರಲಾರದೆ, ತಮ್ಮ ಮನೆಯ ಕಡೆಗೆ ಸಾಗಿದರು. ಸಾಗುತ್ತ, ಅನೇಕ ಬಾರಿ ಅವರು ಕತ್ತನ್ನು ತಿರುಗಿಸಿ ತನ್ನನ್ನು ನೋಡುತ್ತಿದ್ದುದು ಅವಳಿಗೂ ಕಾಣಿಸದೆ ಹೋಗಲಿಲ್ಲ. ಅವಳಾದರೂ, ಅವರು ಹೊರಟುಹೋದುದನ್ನು ತೃಪ್ತಿಯಿಂದ ನೋಡುತ್ತ ಕುಳಿತಳು. ಆಮೇಲೆ ಕೆಲಸವನ್ನು ಅಲ್ಲಿಗೇ ನಿಲ್ಲಿಸಿ, ಬುಟ್ಟಿಗೆ ಬೀಳಲು ಸಾಕಾಗದಿದ್ದುದಕ್ಕೆ, ಅದನ್ನು ಕೊಯ್ದುಕೊಂಡು ಬರಲು ಹೋದಳು. ಕತ್ತಿ ಹಿಡಿದುಕೊಂಡು, ಕಾಡಿನ ದಾರಿಯಲ್ಲಿ ನಿಧಾನವಾಗಿ ನಡೆಯುತ್ತ, ಆಚೀಚೆ ಎಂಜಿರು ಬೀಳಲು ಎಲ್ಲಿ ಬೆಳೆದಿದೆ ಎಂದು ಅರಸುತ್ತ, ಹೊರಟಳು. ಹೋಗಿ ತುಸು ದೂರದಲ್ಲಿ, ಒಂದು ಮರಕ್ಕೆ ಅಂಟಿ ಬೆಳೆದಿದ್ದ ಬೀಳಲೊಂದನ್ನು ಕಂಡು, ನಿಂತಳು. ಅನುಕೂಲವಾದ ಬೀಳಲು ಸಿಗಬಹುದೆಂದು ಮರವನ್ನೇರಿ ಅದನ್ನು ಕಡಿಯತೊಡಗಿದಳು. ನಾಲ್ಕೆಂಟು ಬೀಳಲುಗಳನ್ನು ಕತ್ತರಿಸಿ, ಎಳೆದು ಕೆಳಕ್ಕೆ ಹಾಕುವಾಗ ಯಾರದೋ ಧ್ವನಿ ಕೇಳಿಸಿತು.

"ಯಾರದು ಗೆಲ್ಲು ಕಡಿಯುವವರು?" ಎಂಬ ಧ್ವನಿ ತೀರ ಸಮೀಪ ದಿಂದಲೇ ಕೇಳಿಸಿತು. ಕೇಳಿದವರು ತಿರುಮಲಭಟ್ಟರೇ. ಕೆಂಪಿಯ ಮೇಲಿನ ಆಸೆ ಅವರನ್ನು ಅಲ್ಲಿಯ ತನಕ ಇನ್ನೊಮ್ಮೆ ಕರೆದು ತಂದಿತು. ಈಗ ಅವ ರನ್ನು ನೋಡಿ, ಅವರ ಮನವನ್ನು ತಿಳಿಯಲಾರದೆ, ಸರಳವಾಗಿ "ನಾನು; ಬುಟ್ಟಿಗೆ ಬೀಳು ಕಡಿಯಲು ಬಂದೆ" ಎಂದಳು. ಮರವನ್ನೇ ದೃಷ್ಟಿಸಿ ನೋಡಿದರು—ಭಟ್ಟರು. ಕೆಂಪಿ ತನ್ನ ಕೆಲಸ ಮುಗಿಸಿಕೊಂಡು, ಬೀಳಲು ಗಳನ್ನು ಸುರುಳಿ ಸುತ್ತಿ, ಹೊತ್ತುಕೊಂಡು, ಮನೆಯ ಕಡೆ ಹೊರಟಳು. ಭಟ್ಟರು ನಿಂತವರು, ನಿಂತಲ್ಲಿಯೇ ಇದ್ದರು. ಕೆಂಪಿ ಅವರ ಮಗ್ಗುಲಿಂದ ಸರಿದು ತುಸು ಮುಂದಕ್ಕೆ ಹೋದ ಮೇಲೆ, ನಾಲ್ಕು ಹೆಜ್ಜೆ ಹಿಂಬಾಲಿಸಿ, ಅವಳ ಹೆಗಲ ಮೇಲೆಯೇ ಕೈಯಿಟ್ಟರು!

"ಅಯ್ಯೋ!" ಎಂದು ಚಕಿತಳಾದಳು ಕೆಂಪಿ. ಆಕೆಗೆ ತುಂಬ ಅಸ ಮಾಧಾನವಾಯಿತು.

"ಏನು ಗಾಬರಿಯಾಯಿತೇ?" ಎಂದು ಕೇಳಿದರು ಭಟ್ಟರು.

"ನಾನು ಹೊರಗೆ. ಮುಟ್ಟಿಬಿಟ್ಟಿರಾ?" ಎಂದು ನುಡಿದು, ಕೆಂಪಿ ಸರಸರನೆ ಹೊರಟೇ ಹೋದಳು. ಭಟ್ಟರ ಮನಸ್ಸಿನಲ್ಲಿ 'ಆಕೆಗೆ ಯಾರಾ ದರೂ ಕಂಡಾರೆಂಬ ಅಧೈರ್ಯವಾಯಿತು. ಆದುದರಿಂದ ಸುಳ್ಳು ನೆಪ ಹೇಳಿ ದಳೋ' ಎಂಬ ಅನುಮಾನ ಒಮ್ಮೆಗೇ ಮೂಡಿತು. ಆದರೆ ಕೆಂಪಿ ಬೇರೇನೂ ಮಾತನಾಡದಿದ್ದುದನ್ನು ನೆನೆದು, ಆಕೆ ತನ್ನ ವಶವರ್ತಿಯಾಗುವಳೆಂಬ ಆಸೆ ಮನದಲ್ಲಾಯಿತು. ಅವರು ಮೆಲ್ಲಗೆ ಹೆಜ್ಜೆ ಹಾಕುತ್ತ, ಆಚೀಚೆ ನೋಡುತ್ತ ಆ ದಾರಿಯಲ್ಲೇ ನಡೆದರು. ದಾರಿಯಲ್ಲಿನ ನೀರಿನ ದಂಬೆ ಬರುತ್ತಲೇ, ಅಲ್ಲಿ ಬೂದನ ತಾಯಿ ಗಡಿಗೆಗೆ ನೀರು ತುಂಬಿಸಲು ಕುಳಿತಿದ್ದಳು. ಭಟ್ಟರು ಆ ದಾರಿಯಾಗಿ ಬಂದು, ಅಲ್ಲಿ ನಿಂತು,

"ಬೂದನ ಮನೆಯಲ್ಲವೇ ನಿನಗೆ?" ಎಂದು ಕೇಳಿದರು.

"ಹೌದು ಬುದ್ಧಿ."

"ಈಗ ಆಚೆ ಬೀಳು ಹೊತ್ತುಕೊಂಡು ಹೋದದ್ದು ಯಾರದು?"

"ಅವನ ಹೆಂಡತಿ."

"ಬೂದನ ಹೆಂಡತಿಯೇ!" ಎಂದು ವಿಸ್ಮಯ ತೋರಿಸಿದರು.

ಗೊತ್ತಿದ್ದೂ ಕೇಳಿದ ಮಾತದು. ಆ ಪ್ರಶ್ನೆಯ ಬೆಂಗಡೆಗೇ "ಅವಳೇನು ಬೇರೆ ಮನೆಯಲ್ಲಿರುವುದು?" ಎಂದರು.

"ಬೇರೆ ಮನೆಯೆಲ್ಲಿ? ನಮ್ಮೊಂದಿಗೇ ಇದ್ದಾಳಲ್ಲ" ಕೊನೆಗೆ ನೆನಪಾಗಿ "ಹೋ, ಆ ಮನೆಯೋ, ಅದು ಹೆಂಗಸರ ಮುಟ್ಟಿನ ಮನೆ" ಎಂದಳು. ಭಟ್ಟರು ಆಕೆಯನ್ನು ಮಾತನಾಡಿಸಿದ್ದಕ್ಕೆ, ಅಪಾರ್ಥ ಉಂಟಾಗಬಾರದೆಂದು ಬೂದನ ವಿಷಯದಲ್ಲೂ, ಕರಿಯನ ವಿಷಯದಲ್ಲೂ ಬಳಸಿ ಬಳಸಿ ಮಾತನಾಡಿ, ತಮ್ಮ ಮನೆಗೆ ಮರಳಿದರು. ಬೆಳಗಿನ ಒಂದು ಸ್ನಾನವಾಗಿತ್ತು ಅವರಿಗೆ. ಆದರೂ ಮೈಲಿಗೆ ಹೆಂಗುಸನ್ನು ಮುಟ್ಟಿದೆನೆಂಬ ಮಡಿ ಬುದ್ಧಿಯುಂಟಾಗಿ, ಇನ್ನೊಮ್ಮೆ ಸ್ನಾನಕ್ಕಿಳಿಯಬೇಕಾಯಿತು.

ಇನ್ನುಳಿದ ಮೂರು ನಾಲ್ಕು ದಿನ ಕಾಲವೆಲ್ಲ ಅವರಿಗೆ ಕೇರಿ ಸುತ್ತಾಡುವ ಕೆಲಸ. 'ಮುಟ್ಟಿನ ಮನೆಯಲ್ಲಿ ಯಾರಿದ್ದಾರೆ'—ಎಂದು ನೋಡುವ ಚಪಲ ಅವರಿಗೆ. ಅವರು ಹೊರಡುವ ದಿನ, ಆ ಮನೆಯಲ್ಲಿ ಕೆಂಪಿ ಇದ್ದಿರಲಿಲ್ಲ. ಅವಳ ಸ್ಥಾನದಲ್ಲಿ ಕಾಳಿ ಕಾಣಿಸಿದಳು. ಮದುವೆಯಾಗಿ ಬಂದ ತುಕ್ರನ ಹೆಂಡತಿಯನ್ನು ಅವರು ಅಷ್ಟು ಚೆನ್ನಾಗಿ ನೋಡಿರಲಿಲ್ಲ. ಈ ಬಾರಿಯೇ ಅವಳನ್ನು ಕಣ್ತುಂಬ ಕಂಡಿದ್ದೆನ್ನಬಹುದು. ಮನಸ್ಸಿಗೆ 'ಕೆಂಪಿಯಷ್ಟೇ ಆಕೆಯೂ ಲಕ್ಷಣವಾಗಿದ್ದಾಳೆ' ಎಂದನಿಸಿತು. ಅಂತು ಭಟ್ಟರು ಈ ಬಾರಿ ಊರಿಗೆ ಹೊರಡುವಾಗ, ಇಬ್ಬಿಬ್ಬರು ಕನ್ಯೆಯರ ಸ್ಮರಣೆಯಿಂದ ಊರಿಗೆ ಮರಳುವಂತಾಯಿತು. ಆದುದರಿಂದಲೋ ಏನೋ, "ಆದಷ್ಟು ತೀವ್ರ ಮಲೆಗೆ ಬರುತ್ತೇನೆ" ಎಂದು ತಿಳಿಸಿ ಹೊರಟುಹೋದರು. ತುಕ್ರ ಅವರನ್ನು ಬೀಳ್ಕೊಡಲು, ಎಂದಿನಂತೆ ಮೂಲೆಗುಂಪಿನ ತನಕ ಹೋಗಿದ್ದನು. ಅವನ ಆಗ್ರಹವೂ ಧನಿಗಳು ಬೇಗನೆ ಬರಬೇಕೆಂದೇ ಇತ್ತು. "ಅಯ್ಯೊ, ನೀವೇನೋ ನನ್ನನ್ನು ಗುರಿಕಾರನೆಂದು ಗೊತ್ತುಮಾಡಿ ಹೋಗುತ್ತೀರಿ. ನಿಮ್ಮ ಬೆನ್ನ ಹಿಂದೆ ಇಲ್ಲಿ ಏನೇನಾಗುತ್ತದೋ ನಾನು ಹೇಳಲಾರೆ. ಕೇರಿಯವರು ನೀವಿದ್ದಾಗ ಬಾಯಿ ತೆರೆಯದೆ ಸುಮ್ಮನಿದ್ದರೂ ನೀವಿಲ್ಲದಾಗ ಏನು ಮಾಡುತ್ತಾರೋ" ಎಂದು ತನ್ನ ಭೀತಿಯನ್ನು ಅವರ ಮುಂದೆ ತೋಡಿಕೊಂಡ.

"ಯಾಕೆ ಹಾಗನ್ನುತ್ತೀಯಾ? ನೀನೇನು ಹೆದರಬೇಡ. ಕೇರಿ

ಯವರು ಏನು ಮಾಡುತ್ತಾರಲ್ಲ! ಮಲೆಯಲ್ಲಿರುವ ಇಚ್ಛೆ ಇದ್ದರೆ, ಹೇಳಿದಂತೆ ಕೇಳುತ್ತಾರೆ; ಇಲ್ಲದಿದ್ದರೆ ಮಲೆಯಿಂದ ಹೊರಟುಹೋಗುತ್ತಾರೆ. ಅಷ್ಟೇ ಅಲ್ಲವೆ?" ಎಂದು ತಿಳಿಸಿ ಹೋದರು.

ಭಟ್ಟರು ಹೊರಟುಹೋದ ಮೇಲೆ ತುಕ್ರ ತನ್ನಷ್ಟಕ್ಕೆ ಯಜಮಾನಿಕೆ ವಹಿಸಿ, ಚನಿಯನಿಂದ ಕರಿಯನ ತನಕ, ಎಲ್ಲರನ್ನೂ ಕುರಿತು ತಾಕೀತು ಮಾಡುತ್ತಿದ್ದ. 'ಇವತ್ತು ತೋಟದಲ್ಲಿ ಏಲಕ್ಕಿ ಬುಡ ಬಿಡಿಸುವವರು ಯಾರು', 'ಮರ ಕಡಿಯುವವರು ಯಾರು', 'ಕಟ್ಟಿಗೆ ಹೊರುವವರು ಯಾರು'—ಎಂಬ ಆಜ್ಞೆಗಳನ್ನು ಹೊರಡಿಸುತ್ತಿದ್ದ. ಎಲ್ಲರೂ ಪ್ರತಿ ಮಾತಿಲ್ಲದೆ ಹೇಳಿದ ಕೆಲಸಗಳನ್ನೇನೋ ಮಾಡುತ್ತಿದ್ದರು. ತಿಮ್ಮನ ಸ್ವಭಾವವನ್ನು ಬಲ್ಲ ತುಕ್ರ, ಅವನನ್ನು ಉದ್ದೇಶಿಸಿ ಏನೊಂದೂ ಅಪ್ಪಣೆ ಕೊಡುತ್ತಿರಲಿಲ್ಲ. ಕೊಡದೆ ಇದ್ದರೂ, ಎಲ್ಲರೊಡನೆ ಆತನೂ ಸೇರಿ ಕೆಲಸ ನಿರ್ವಹಿಸುತ್ತಿದ್ದ. ಇದರಿಂದ ತುಕ್ರನಿಗೆ ಇನ್ನಷ್ಟು ಹೆಚ್ಚಿನ ಭರವಸೆಯುಂಟಾಯಿತು. ಅವನ ಭರವಸೆ ಕಳಚತೊಡಗಿದ್ದು ಕೇರಿಯವರೆಲ್ಲ ಸೇರಿ ಶೀಘ್ರದಲ್ಲೆ ದೈವಕ್ಕೆ ಸೇವೆ ಸಲ್ಲಿಸುವ ನಿರ್ಧಾರ ಮಾಡಿದ್ದಾರೆಂದು ಕೇಳಿ. ಆ ವಿಚಾರದಲ್ಲಿ ಒಬ್ಬರಾದರೂ ಅವನನ್ನು ಕೇಳಿರಲಿಲ್ಲ. ಆದರೆ ಸುದ್ದಿ ಮಾತ್ರ—ಮಕ್ಕಳ ಬಾಯಿಂದ ಮಕ್ಕಳ ಬಾಯಿಗೆ ಹಬ್ಬಿ, ಅವನ ಕಿವಿಯನ್ನು ಸೇರಿದುವು. ಒಮ್ಮೆ ತಿಮ್ಮ ಕರಿಯನನ್ನು ಕಟ್ಟಿಕೊಂಡು, ಹಿರಿಮಲೆಗೆ ಹೋಗಿಬಂದ ಸುದ್ದಿಯೂ ಅವನಿಗೆ ದೊರೆಸಿಕ್ಕಿತು. ಇನ್ನೊಮ್ಮೆ ಬೂದಣ್ಣ ಅಲ್ಲಿಗೆ ಹೋಗಿಬಂದ ವಾರ್ತೆಯೂ ದೊರೆಯಿತು ಈತ—ಆದರ ಏರ್ಪಾಟುಗಳನ್ನು ತಡೆಯಲು ಹಿರಿಮಲೆಗೆ ಹೋಗೋಣವೇ—ಎಂದು ನಾಲ್ಕು ನಾಲ್ಕಾವರ್ತಿ ಯೋಚಿಸಿದ. ಆದರೆ ಕೆಂಪಿಯ ಪ್ರಕರಣ ನಡೆದಂದಿನಿಂದ, ಆ ಮಲೆಯಲ್ಲಿ ಅವನ ಪ್ರತಿಷ್ಠೆ ಇಷ್ಟಿಷ್ಟೂ ಉಳಿದಿರಲಿಲ್ಲ. ಅಲ್ಲದೆ ಬರಿಯ ಸುದ್ದಿಯನ್ನು ಕೇಳಿಯೇ ತಾನು ಅಲ್ಲಿಗೆ ಹೋದರೆ ಹೇಗೆ—ಎಂಬ ಅನುಮಾನವೂ ಅವನನ್ನು ಕಾಡಿತು.

ತಿಮ್ಮ ಹಿರಿಮಲೆಗೆ ಒಂದು ಬಾರಿ ಹೋದದ್ದಲ್ಲ, ನಾಲ್ಕು ಬಾರಿ ಹೋಗಿ ಬಂದಿದ್ದ. ಆತ ಕರಿಯನನ್ನು ಕರೆದುಕೊಂಡು ಹೋದದ್ದೂ ನಿಜ; ಕೆಂಚನ ಈ ಮೊಮ್ಮಗನನ್ನು ಆ ಮಲೆಯವರು ಹೆಚ್ಚಿನ ಪ್ರೀತಿ, ಆದರಗಳಿಂದ ಕಂಡದ್ದೂ ನಿಜ. ಆ ಮಲೆಯ ಗುರಿಕಾರನಲ್ಲಿಗೆ ಹೋಗಿ ತಮ್ಮ

ಮಲೆಯಲ್ಲುಂಟಾದ ವೈಷಮ್ಯ, ಸ್ಪರ್ಧೆಗಳನ್ನು ಕುರಿತು ವಿಸ್ತರಿಸಿ ಹೇಳಿ, ಅಲ್ಲಿನ ಬಂಧುಗಳ ಸಹಾನುಭೂತಿಯನ್ನು ಕೋರಿದ್ದೂ ನಿಜ. ಗುರಿಕಾರರ ಮಾದ 'ಧನಿಗಳಿಗೆ ಎದುರು ಬೀಳದಂತೆ ಕೆಲಸ ಮಾಡಬೇಕು. ಎಲ್ಲಕ್ಕೂ ಮೇಲಾದ ದಾರಿಯೆಂದರೆ, ದೈವದ ಅಪ್ಪಣೆಯನ್ನು ಪಡೆದು, ಅದಕ್ಕೆ ಸಮ್ಮತ ವಾಗುವ ರೀತಿಯಲ್ಲಿ ನಡೆಯುವುದೊಳ್ಳೆಯದು' ಎಂದು ತಿಳಿಸಿದ. ಆಮೇಲೆ ಬೂದ ಅಲ್ಲಿಗೆ ಪಯಣ ಬೆಳೆಸಿದ. ಜತೆಗೆ ಕೆಂಪಿಯನ್ನೂ ಕರೆದುಕೊಂಡು ಹೋಗಿದ್ದ. ಮಾವನ ಮನೆಯಲ್ಲಿ ಒಂದು ದಿನ ಕಳೆದು, ಅವನ ಜತೆಯಲ್ಲೇ ಗುರಿಕಾರನನ್ನು, ಪೂಜಾರಿಯನ್ನೂ ಕಂಡು, ಪೂಜೆಯ ಕೂಲಂಕಷ ತಿಳಿದು ಕೊಂಡು, ಅದಕ್ಕೆ ದಿನ ನಿಶ್ಚಯಿಸಿ, ಕೇರಿಗೆ ಮರಳಿದ. ಹೀಗೆ ನಿಶ್ಚಿತವಾದ ಸಂಕ್ರಾಂತಿಯ ಮೊದಲ ದಿನ ಸಂಜೆಯೆ ತುಕ್ರನಿಗೆ ಆ ಸುದ್ದಿ ತಿಳಿಯಿತು. ಚನಿಯ ಪ್ರತಿಯೊಬ್ಬರನ್ನು ಕಂಡು 'ನಾಳೆಗೆ ಪೂಜೆ ನಿಶ್ಚಯ ಮಾಡಿದೆ'— ಎಂದು ಹೇಳಿಕೆ ಮಾಡಿದ. ತುಕ್ರನನ್ನು ಸಂಧಿಸಿ "ತುಕ್ರಣ್ಣ, ದೈವವನ್ನು ಮೀರಿ ನಾವು ನಡೆಯಬಾರದು ಎಂದು ಯೋಚಿಸಿ, ದೈವದ ಅಪ್ಪಣೆಯಾದ ಹಾಗೆ ನಡೆದುಕೊಳ್ಳಬೇಕೆಂದೂ, ಅವಸರದಲ್ಲಿ ಈ ಕೋಲಕ್ಕೆ ದಿನ ನಿಶ್ಚಯ ಮಾಡಬೇಕಾಯಿತು. ನಾಳೆಗೇ ಕಲ್ಕುಡನಿಗೆ ಸೇವೆ. ನೀನೂ ಬಂದು ಸೇರಿ, ನಡೆಯಿಸಿಕೊಡಬೇಕು" ಎಂದು ವಿನಯವಾಗಿಯೇ ತಿಳಿಸಿದ.

ಆ 'ನಡೆಯಿಸಿಕೊಡು'—ಎಂಬ ಮಾತು ತುಂಬ ಗೌರವಯುಕ್ತ ವಾಗಿದ್ದರೂ, ಅಲ್ಲಿಯ ತನಕ ಯಾವುದಕ್ಕೂ ತನ್ನನ್ನು ಕೇಳದೆ, ಕೋಲಕ್ಕೆ ದಿನ ನಿಶ್ಚಯಿಸಿದ ಬಗ್ಗೆ ಆತ ತುಂಬ ಅಸಮಾಧಾನ ತಾಳಿದ. ತುಸು ಹೊತ್ತು ಚನಿಯ ಅಲ್ಲಿ ನಿಂತಿದ್ದರೆ ಅವನೊಡನೆ ಜಗಳ ಕಾಯುತ್ತಿದ್ದನೋ ಏನೋ. ಚನಿಯ ಮಾತ್ರ ಏನೂ ನಡೆಯದ ಹಾಗೆ, ಮರುಕ್ಷಣಕ್ಕೆ ಹೊರಟುಹೋದ. ಆ ರಾತ್ರಿಯೆಲ್ಲ ತುಕ್ರನ ಚಿಂತೆಯನ್ನು ಹೇಳತೀರದು. 'ದೈವ ಏನು ನುಡಿ ದೀತು' ಎಂದು ಆತ ಈಗಾಗಲೇ ಊಹಿಸಲಾರ. ಧನಿಗಳು ಬಂದಮೇಲೆ, ಅವರೆದುರಿಗೆ ದೈವದ ಕೋಲು ನಡೆಸಬೇಕು—ಎಂದಿತ್ತು ಅವನ ಮನಸ್ಸು. ಆಗ ದೈವದ ಪ್ರಶ್ನೆಗಳಿಗೆ ಧನಿಗಳಾದರೂ ಸಮಾಧಾನ ಹೇಳಿಯಾರು— ಎಂದು ಅವನ ತಿಳುವಳಿಕೆ. ಈಗ ಅದಕ್ಕೂ ಅವಕಾಶವಿಲ್ಲ. ಹೀಗಾಗಿ ಆತ ಕಾತರ ತಾಳುವಂತಾಯಿತು. ನೇಮ ಮುಂದುವರಿಸಲಿಕ್ಕೂ ಉಪಾಯ

ಕಾಣಲಾರ; ನೇಮಕ್ಕೆ ಹೋಗಲಾರ; ಹೋಗದಿರಲಾರ. ರಾತ್ರಿ ಮಲಗಿ ಕೊಂಡರೆ ಸುಖವಾಗಿ ನಿದ್ರೆಯಾದರೂ ಬರಬೇಕೇ? ದೈವದ್ದೇ ಕನಸು— ಅವನಿಗೆ; ಪ್ರತಿಗಳಿಗೆಗೂ ಆ ದೈವ ತನ್ನ ತೋಳನ್ನು ಹಿಡಿದು, ಅಲುಗಿಸಿ, 'ಏನು, ಏನು' ಎಂದು ಗದರಿಸುವಂತೆ ಕಾಣಿಸಿತು.

ಮರುದಿನ ಮಲೆಯ ಮೇಲೆ ಎಲ್ಲೆಲ್ಲೂ ಸೂರ್ಯಬಿಂಬ ಹಸನಾಗಿ ಬೆಳಕನ್ನು ಹಾಸಿತ್ತು. ಕೇರಿಯ ಗಂಡಸರು, ಹೂ, ಕಾಯಿ, ಕೋಳಿ— ಹೊತ್ತುಕೊಂಡು, ಒಬ್ಬೊಬ್ಬರಾಗಿ ಕಲ್ಕುಡನ ಗುಡಿಯಿರುವ ಕೊರಕಲನ್ನು ಸೇರಿದರು. ತೀರ ಕೊನೆಗೆ ಹೋದವನೆಂದರೆ ತುಕ್ರ. ಹಿರಿ ಮಲೆಯ ಜನ ಗಳು ತಂಡವಾಗಿ ಬಂದಿದ್ದರು. ಎರಡು ಕೇರಿಯವರೂ ಮಾತುಕತೆ ನಡೆ ಯಿಸುತ್ತಲಿದ್ದರು. ಎಲ್ಲರೂ ಕಲೆತಮೇಲೆ, ದೈವದ ಸೇವೆ ಯಥಾವತ್ತಾಗಿ ತೊಡಗಿತು. ಪೂಜಾರಿ 'ಧರಿಸಲು' ನಿಂತ. ಅವನೆದುರಿಗೆ ವಾಡಿಕೆಯಂತೆ ಕೇರಿಯ ಗುರಿಕಾರರು ನಿಲ್ಲಬೇಕಾಯಿತು. ಹಿರಿ ಮಲೆಯ ಮಾದನ ಬಳಿ ಯಲ್ಲಿ, ಚನಿಯ, ಕರಿಯನನ್ನು ಕರೆದುಕೊಂಡು ನಿಂತ. ಅವರೆದುರಿಗೇನೆ ಧನಿಯರಿಂದ ನಿಯಮಿತನಾದ ತುಕ್ರ ನಿಂತುಕೊಂಡ. ಎಲ್ಲರೂ ದೈವಕ್ಕೆ ನಮಸ್ಕರಿಸಿದರು. ಹಿರಿ ಮಲೆಯ ಯಜಮಾನ ಪೂಜಾರಿಯ ಕೈಗೆ ಸಿಂಗಾರ ಹೂವು ಹಾಕಿದ. ಅನಂತರ ಚನಿಯ ಕರಿಯನ ಕೈಯಲ್ಲಿ ಹೂ ಕೊಟ್ಟು, ಅವನ ಕೈಗಳನ್ನೆತ್ತಿ ಪೂಜಾರಿಯ ಕೈ ಮೇಲೆ ಹಿಡಿಯುವಾಗಲೇ ತುಕ್ರ ಮುಂದೆ ಬಂದು, ಹೂವನ್ನಾರಿಸಲು ಹೋದ. ಆ ಹೂ ಇವರ ಕೈ ಮೇಲೆ ಬಿದ್ದು ಕೆಳಕ್ಕುರುಳಿತು. ಅಷ್ಟಕ್ಕೆ ಎದುರಿನ ಮಲೆಯ ಗುರಿಕಾರ "ನೀನು ಯಾರಣ್ಣ ಹೂ ಕೊಡುವವನು? ದೂರ ನಿಲ್ಲು" ಎಂದು ಸಿಟ್ಟಾಗಿಯೇ ನುಡಿದ. ತುಕ್ರ ಅವಮಾನ ಸಹಿಸಲಾರದೆ, ಇನ್ನಷ್ಟು ಸಿಂಗಾರ ಹೂವನ್ನು ಕೊಂಡು ಪೂಜಾರಿಯ ಕೈ ಮೇಲೆ ಇರಿಸಲು ಹೋದರೆ, ಪೂಜಾರಿಯೂ ಅದನ್ನು ಸ್ವೀಕರಿಸಲಿಲ್ಲ.

ಪೂಜಾರಿ ನಡುಗಲಾರಂಭಿಸಿದ; ದೈವದ ಆವೇಶ ತಾಳಿದ; ವಾದ್ಯದ ಅಬ್ಬರಕ್ಕೆ ಘರ್ಜಿಸಿದ. ಹಿರಿ ಮಲೆಯ ಗುರಿಕಾರ ಕೈಗೆ ಹೊತ್ತಿಸಿ ಕೊಟ್ಟ ಒಂದೊಂದು ಬೆಂಕಿಯ ದೊಂದಿಯನ್ನು ಹಿಡಿದು, ಬಾಯಿಗೆ ಒಯ್ದು, ಆರ್ಭಟಿಸಿ, ನುಂಗಿ, ನಂದಿಸಿದ. ಈ ಬಾರಿ ದೈವದ ಕೀರ್ತಿ ಸಾರುವುದರಲ್ಲಿ

ಇದೊಂದು ಪ್ರಕರಣ ಹೆಚ್ಚು. ಮಾದ ಹೊತ್ತಿಸಿಕೊಟ್ಟ ಆರೆಂಟು ದೊಂದಿಗಳನ್ನು ಮೇಲಿಂದ ಮೇಲೆ ಗಳಕ್ಕನೆ ನುಂಗಿ ನಂದಿಸಿದುದನ್ನು ನೋಡಿ, ಜನ ಚಕಿತರಾದರು. ದೈವವು ಈ ಬಾರಿ ಹೆಚ್ಚಿನ ಆವೇಶ ತಾಳಿದೆಯೆಂಬ ಭೀತಿಯಾಯಿತು. ಅನಂತರ ದೈವದ ಆವೇಶ ತಳೆದ ಪಾತ್ರಿ ಮಾತನಾಡಲು ಪ್ರಾರಂಭಿಸಿದ.

"ಕೆಂಚಣ್ಣ ತೀರಿಕೊಂಡನಲ್ಲವೇ ?"

ಚನಿಯ "ಹೌದು" ಎಂದ.

"ಕಿರಿ ಮಲೆಗೆ ಯಾರು ಗುರಿಕಾರರು ?"

"ನಿನ್ನ ಅಪ್ಪಣೆಯಾದ ಹಾಗೆ."

"ಅಂದರೆ ಇಷ್ಟು ದಿನ ನಿಮಗೆ ಯಾರೂ ಯಜಮಾನರಿಲ್ಲದೆ ಇದ್ದರೋ ?"

ಬೂದ ನಮ್ರನಾಗಿ ನುಡಿದ—"ಏನೋ, ನಮ್ಮಷ್ಟಕ್ಕೆ ಒಬ್ಬನನ್ನು ಮಾಡಿಕೊಂಡಿದ್ದೇವೆ. ಹಿಂದೆ ನಿನ್ನ ಅಪ್ಪಣೆಯಾಗಿತ್ತು, ಕೆಂಚನ ಮೊಮ್ಮಗ ಗುರಿಕಾರನಾಗಬೇಕೆಂದು. ಅವನೇ ನ್ಯಾಯವಾದ ಗುರಿಕಾರ. ಆದರೆ ಅವನು ಸಣ್ಣವನೆಂಬುದರಿಂದ ಇದ್ದ ಹಿರಿಯರಲ್ಲಿ ಚನಿಯನನ್ನು, ತತ್ಕಾಲಕ್ಕೆ, ಗುರಿಕಾರನನ್ನಾಗಿ ಆರಿಸಿಕೊಂಡಿದ್ದೇವೆ"—ಎಂದ. ಅಷ್ಟರಲ್ಲಿ ನಡುವೆ ಬಾಯಿ ಹಾಕಿದ ತುಕ್ರ. "ಏನು, ಧನಿಗಳೆಂದದ್ದನ್ನು ಬೂದ, ಮರೆತೇ ಬಿಟ್ಟೆಯೋ" ಎಂದ; ಬೂದನ ಕಡೆಗೆ ಕಣ್ಣು ಹೊರಳಿಸಿ ಅಸಮಾಧಾನ ತಾಳಿದ.

"ಅದನ್ನೂ ಅನ್ನುತ್ತೇನೆ; ನಾವೇನೋ ಕೇರಿಯವರು ಸೇರಿ ಹೀಗೆ ಮಾಡಿದ್ದೇವೆ. ಕರಿಯನಿಗೆ ಪ್ರಾಯ ಬರುವವರೆಗೆ ಗುರಿಕಾರಿಕೆ ಚನಿಯ ನೋಡಿಕೊಳ್ಳಲೀ ಅಂತ. ಆದರೆ ಧನಿಗಳ ಅಪ್ಪಣೆಯಾಗಿದೆ—ತುಕ್ರಣ್ಣ ಗುರಿಕಾರನಾಗಬೇಕು ಅಂತ" ಎಂದು ಬೂದ ಎಲ್ಲ ಸಂಗತಿಗಳನ್ನು ವಿವರಿಸಿದ.

"ಧನಿಗಳು! ಯಾವ ಧನಿಗಳು! ಯಾರ ಧನಿಗಳು?" ಎಂದು ಘೂಂಕರಿಸಿತು ದೈವ.

"ತೋಟದ ಧನಿಗಳು; ನಮಗೆ ಅರಿವೆ, ಉಪ್ಪು ಕೊಡುವವರು. ಅವರ ಮಾತನ್ನು ನಡೆಸಬೇಡವೇ ?" ಎಂದ ತುಕ್ರ.

" ಅದಕ್ಕೇನೆ, ಈ ನ್ಯಾಯ ಬೇಗ ಇತ್ಯರ್ಥವಾಗಲಿ—ಎಂತ ಬೇಸಗೆಯಲ್ಲಿ ಬರುವ ನಿನ್ನ ಸೇವೆಯನ್ನು ಈಗ ಮಾಡಿಸಿದ್ದು " ಎಂದು ಸೇರಿಸಿದ ಚನಿಯ.

" ಧನಿಗಳು, ಧನಿಗಳು, ಧನಿಗಳು ! " ಎಂದು ಮೂರು ಮೂರು ಬಾರಿ ಆರ್ಭಟಿಸಿತು—ದೈವ. ತಿರುತಿರುಗಿ ಆರ್ಭಟೆಯೊಂದಲ್ಲದೆ ಮತ್ತೇನೂ ಹೇಳಲಿಲ್ಲ.

ಚನಿಯ ಭಯಭೀತನಾದ. " ನೀನು ಸಿಟ್ಟುಮಾಡಬಾರದು. ನಾವು ತಿಳಿಯದವರು. ನಮ್ಮಿಂದ ಏನು ತಪ್ಪಾದರೂ ಕ್ಷಮಿಸಬೇಕು. ನಿನ್ನ ಮಕ್ಕಳನ್ನು ನಡೆಸಿಕೊಂಡು ಹೋಗಬೇಕು. ನೀನೇ ಮುಂದಿನ ದಾರಿ ತೋರಿಸಬೇಕು " ಎಂದ.

" ನನ್ನ ಮಕ್ಕಳೋ ನೀವು ! ನಾನು ಹೇಳುವ ಹಾಗೆ ನಡೆಯುವವರೋ ಅಥವಾ ನಿಮ್ಮಿಷ್ಟ ಬಂದಂತೆ ಮಾಡುವವರೋ " ಎಂದಿತು ದೈವ. ಆಗ ಹಿರಿಮಲೆಯ ಗುರಿಕಾರ ಮಾದನೆಂದ: " ನೀನು ಸಿಟ್ಟಾಗಬಾರದು. ಆ ಮಲೆಯಾಗಲೀ, ಈ ಮಲೆಯಾಗಲೀ ನಿನ್ನವು. ನಿನ್ನ ರಾಜ್ಯ ಇದು. ನಿನ್ನ ಪಾರುಪತ್ಯ ಇದರಲ್ಲಿ. ತಿಳಿಯದೆ ಯಾರು ಏನು ಮಾಡಿದರೂ ಬುದ್ಧಿಪೂರ್ವಕವಾಗಿ ನಿನ್ನ ಮಾತನ್ನು ಮೀರುವವರುಂಟೇ ? ಅಪ್ಪಣೆ ಕೊಡಿಸು. ನೀನು ಅಂದ ಹಾಗೆ ನಡೆಯುತ್ತಾರಂತೆ, ಅದಕ್ಕೇನು ? "

ತುಕ್ರ ನಮ್ರನಾಗಿಯೇ, " ನಿನ್ನ ಮಾತಿಗೆ ಇದಿರಾಡುತ್ತೇನೆ—ಎನ್ನುವವರು ನಾವಲ್ಲ. ಆದರೂ ನೋಡು. ಬಲ್ಲವರು ಧನಿಗಳು. ಅವರಿದ್ದಾಗಲೇ ನೀನು ಎಲ್ಲವನ್ನು ವಿಚಾರಿಸಿ ಇತ್ಯರ್ಥಮಾಡಿದರೆ ಚೆಂದ. ಈಗ ಆ ಮಾತನ್ನು ಎತ್ತುವುದು ಬೇಡ. ಧನಿಗಳು ಬರುವ ತನಕ ಇದ್ದಹಾಗೆ ನಡಿಯಲಿ " ಎಂದ.

ದೈವ ಇನ್ನಷ್ಟು ಕೇಕೆ ಹೊಡೆಯಿತು. ಆರ್ಭಟಿಸಿ, ಅನಂತರ ಕೂಗಿ, " ಈ ಮಲೆ ನನ್ನದು. ಹಿರಿಮಲೆ, ಕಿರಿಮಲೆ ಎರಡೂ ನನ್ನ ಪಾರುಪತ್ಯದಲ್ಲಿವೆ—ಅನಾದಿಕಾಲದಿಂದಲೂ. ನಿಮಗೆ ನಾನು ಬೇಡವಾದರೆ ಹೇಳಿ—ಹೋಗುತ್ತೇನೆ; ಹೋಗುತ್ತೇನೆ. ಹಾದಿಯುದ್ದಕ್ಕೂ ರಕ್ತದ ಮಳೆ ಕಾರಿ ಹೋಗುತ್ತೇನೆ. ಬರಿದೆ ಹೋದೆನೆಂದು ತಿಳಿಯಬೇಡಿ. ಬದಲು ನನ್ನನ್ನು

ಕೇಳುವ ಮಕ್ಕಳಾದರೆ—ಕೇಳಿ; ಬಾಳಿ" ಎಂದು ಅಪ್ಪಣೆ ಕೊಡಿಸಿತು.

ಈ ಕೊನೆಯ ಮಾತನ್ನು ಕೇಳಿ ಹಿರಿ ಮಲೆಯ ಗುರಿಕಾರ, ಮುಂದಾಗಿ ದೈವಕ್ಕೆ ಸಮಾಧಾನ ಹೇಳುವ ಕೆಲಸ ಮಾಡಬೇಕಾಯಿತು. "ಏನೋ ತಿಳಿಯದೆ ತಪ್ಪಾಗಿರಬಹುದು. ಈ ಮಲೆ ನಿನ್ನದಲ್ಲ ಎನ್ನುವವರ್‍ಯಾರು? ನೀನು ಇಲ್ಲಿಂದ ಬಿಟ್ಟುಹೋಗುವುದೆಂದರೇನು? ನೀನು ಬೆಳೆಸಿದ ಮಕ್ಕಳನ್ನು ರಕ್ತದಲ್ಲಿ ಅದ್ದುವುದೆಂದರೇನು? ಅದು ನಿನಗೊಂದು ಗೌರವವೇ? ನಮಗೊಂದು ಗೌರವವೇ? ಇಲ್ಲಿನ ಪಾರುಪತ್ಯ ಮೊದಲಿಂದ ಕಡೆಯ ತನಕ ನಿನ್ನದು. ಅಪ್ಪಣೆ ಕೊಡಿಸು—ನೀನು ಹೇಳಿದ್ದಕ್ಕೆ ಕರಿಯ ಅಲ್ಲ ಅನ್ನುತ್ತಾನೆಯೋ? ಚನಿಯ ಅಲ್ಲ ಅನ್ನುತ್ತಾನೆಯೋ? ಅಥವಾ ತುಕ್ರಣ್ಣ ಅಲ್ಲ ಅನ್ನುವವನೇ?" ಎಂದು ಬಲುಪರಿಯಿಂದ ವಾದಿಸಿ, ಒಂಡಂಬಡಿಸಿ, ಮುಂದಿನ ಅಪ್ಪಣೆಯನ್ನು ನಿರೀಕ್ಷಿಸಿದ.

"ಕಿರಿ ಮಲೆಯ ಗುರಿಕಾರ ಯಾರು? ಯಾರು?....ಯಾರು ಅಂದರೆ ಕೆಂಚನ ಮೊಮ್ಮಗ. ಮೊದಲಿಂದ ನಡೆದದ್ದೇ ಹಾಗೆ ನನ್ನ ಅಪ್ಪಣೆಯೂ ಹಾಗೆ. ನನ್ನ ಇಚ್ಛೆಯೂ ಹಾಗೆ. ಅವನೇನು ಸಣ್ಣವನಲ್ಲ. ನನಗೆ ಇನ್ಯಾರೂ ಬೇಕಿಲ್ಲ" ಎಂದು ದೈವ ಅಪ್ಪಣೆ ಕೊಡಿಸುತ್ತಲೇ, ಚನಿಯ ತನ್ನ ಎದೆಯ ಮೇಲಿನ ಹೊರೆ ಇಳಿದಂತಾಯಿತೆಂದು ಹಿಗ್ಗಿದ. ಬಲು ಸಂತೋಷದಿಂದ, "ಅದೆಂದರೆ ಮಾತು! ನನ್ನ ದೇವರೆ, ನನ್ನ ಇಚ್ಛೆಯೂ ಹಾಗಿತ್ತು. ನನಗೆ ಸಲ್ಲದ ಹೊರೆಯೆಂದು ನನಗೆ ಗೊತ್ತಿತ್ತು. ನಿನ್ನ ಎದುರಿಗೇ ಕರಿಯನನ್ನು ಒಪ್ಪಿಸಿದ್ದೇನೆ" ಎಂದ. ಪೂಜೆ ಮುಗಿಯುವಾಗ ದೈವ ಹಿರಿ ಮಲೆಯ ಗುರಿಕಾರನಿಗೆ ಪ್ರಸಾದ ಸಲ್ಲಿಸಿದ ಬಳಿಕ, ಕರಿಯಣ್ಣನಿಗೆ ಪ್ರಸಾದವನ್ನಿತ್ತಿತು. ಎರಡೂ ಕೇರಿಯವರು ಆ ದಿನ ತಂತಮ್ಮ ಗುರಿಕಾರರಿಂದಲೇ ಪ್ರಸಾದವನ್ನು ಪಡೆದುಕೊಂಡು, ದೈವಕ್ಕೆ ಮೊಣಕಾಲೂರಿ ವಂದಿಸಿದರು. ಕರಿಯ ಪ್ರಾಪ್ತವಾದ ಆ ದೊಡ್ಡಸ್ತಿಕೆಯ ಹೊರೆಯ ಆಳತೆ, ಆಯಗಳನ್ನು ಏನೇನೂ ತಿಳಿಯದವನಾಗಿದ್ದ. ಚನಿಯ ಅವನ ಬಾಯಿಂದ "ದೈವವೇ, ನಾನು ಸಣ್ಣವ. ನಿನ್ನ ಇಚ್ಛೆಗೆ ಸಮನಾಗಿ ನನ್ನನ್ನು ನಡೆಸಿಕೊಂಡು ಹೋಗುವ ಭಾರ ನಿನ್ನದು" ಎಂದು ಹೇಳಿಸಿದ ಆ ಮಾತನ್ನು ದೈವವೂ ಒಪ್ಪಿದಂತಿತ್ತು. 'ನಾನಿದ್ದೇನೆ; ನಾನಿದ್ದೇನೆ' ಎಂಬ ಭರವಸೆಯನ್ನು ಕೊಟ್ಟಂತಿತ್ತು. ತುಕ್ರ

ಸಹ ಆ ಗಳಿಗೆಯಲ್ಲಿ, ಕರಿಯನಿಂದ ಪ್ರಸಾದವನ್ನು ತಲೆಬಾಗಿ ಸ್ವೀಕರಿಸ ಬೇಕಾಯಿತು.

ಆ ನೋಟ ನೋಡಲು ಬಂದ ಹೆಂಗಳೆಯರಲ್ಲಿ ಇಬ್ಬರಿಗಂತೂ ತುಂಬ ಸಂತೋಷ ಸಮಾಧಾನಗಳಾದುವೆಂದು ಹೇಳಲೇಬೇಕು—ಚಿನ್ನಿ ಮತ್ತು ಕೆಂಪಿ ಅವರಿಬ್ಬರು. ಕೆಂಪಿ ತಮ್ಮ ಪಂಗಡದ ವಿಜಯಕ್ಕಾಗಿ ಹಿಗ್ಗಿದಳು ಮಾತ್ರವಲ್ಲ ಅದು ತುಕ್ರನ ಅವಮಾನವೆಂದು ತಿಳಿದು ಸಂತೋಷಪಟ್ಟಳು. ಅವಳ ಮಗ್ಗುಲಲ್ಲಿ ನಿಂತ ಚಿನ್ನಿ, ಹಳೆಯ ಹಗೆತನ ಮರೆತವಳಂತೆ ಕೆಂಪಿ ಯೊಡನೆ ಸೇರಿ "ಅವರಿಗೇನು—ಇಲ್ಲದ ಸೊಕ್ಕು! ಆ ದಿನವೇ ನಾನು ಬೇಡ ಅಂದಿದ್ದೆ. ಕುಲಾಚಾರದ ಕೆಲಸದಲ್ಲಿ ಧನಿಗಳನ್ನು ಕರೆದುಕೊಂಡು ಬಂದು, ಹೀಗೆಲ್ಲಾ ಮಾಡಿದರೆ ದೈವ ಕೇಳೀತೇ? ಪುಣ್ಯಕ್ಕೆ ಇಷ್ಟಕ್ಕೆ ಸುಮ್ಮನಾಯಿತು ದೈವ. ಬದಲು—ಕೊಡು ನಿನ್ನ ತಲೆ—ಎಂದಿದ್ದರೆ ನಮ್ಮ ಗತಿ ಏನು" ಎಂದಳು. ತನ್ನ ಗಂಡನನ್ನು ಹೆಚ್ಚಿನ ದಂಡನೆಗೆ ದೈವ ಗುರಿಮಾಡಲಿಲ್ಲವಲ್ಲ ಎಂಬುದೇ ಚಿನ್ನಿಯ ಪಾಲಿನ ಸಮಾಧಾನ.

ಇನ್ನು ಹಾಗೆಯೇ ಗಂಡಸರಲ್ಲಿ—ಚನಿಯ, ಬೂದರು ಸಮಾಧಾನ ತಾಳಿದುದಕ್ಕಿಂತ ಮಿಗಿಲಾದ, ಉಕ್ಕು, ದರ್ಪ ತಾಳಿದವನು ತಿಮ್ಮ. ಊಟಕ್ಕೆ ಕುಳಿತಾಗ ಆ ರಾತ್ರಿ ತುಕ್ರನನ್ನು ಉದ್ದೇಶಿಸಿ, "ಹೌದಣ್ಣ, ನಾವೆಲ್ಲ ತೀರ್ಮಾನ ಮಾಡಿದೆವು; ದೈವ ಒಪ್ಪಿತು. ಧನಿಗಳು ಇನ್ನೇನಾದರೂ ಅಂದರೆ ನಮ್ಮ ಗತಿಯೇನು? ಮಲೆ ಬಿಟ್ಟು ಹೊರಡಿ ಎಂದರೆ—ನಮ್ಮ ಅವಸ್ಥೆ ಏನು?" ಎಂದು ಚುಚ್ಚಿ ನುಡಿದ. ಮಾತು ತುಕ್ರನನ್ನು ಕುರಿತು ಉದ್ದೇಶಿಸಿದ್ದು—ಎಂಬುದನ್ನು ಎಲ್ಲರೂ ಬಲ್ಲರು. ಯಾರೂ ಅದಕ್ಕೆ ಉತ್ತರ ಕೊಡಲಿಲ್ಲ. ಹಿರಿ ಮಲೆಯ ತೌಡ, ಬೂದನ ಮಾವ, "ಏನೆನ್ನುತ್ತಿ ತಿಮ್ಮ, ಮಕ್ಕಳಂತೆ ಮಾತನಾಡುತ್ತೀಯಲ್ಲ; ದೈವಕ್ಕಿಂತ ಮೇಲೆ ಇನ್ನೊಬ್ಬರು ಧನಿಗಳೇ? ಅವರು ಬ್ರಾಹ್ಮಣರಲ್ಲವೇ—ನಮ್ಮ ಕಲ್ಕುಡನ ಪ್ರತಾಪ ಗೊತ್ತಿಲ್ಲ ದವರೇ? ನೀವೆಲ್ಲ ನಮ್ಮ ಮಲೆಯ ಧನಿಗಳನ್ನು ದೈವಕ್ಕಿಂತ ದೊಡ್ಡದಾಗಿ ಮಾಡಲು ಹೋದಿರಿ. ಆದರೆ ದೈವ ಅದನ್ನು ಕೇಳಿತೇ?" ಕೆಲವರು ತುಕ್ರನ ಮೋರೆಯನ್ನೇ ನೋಡಿದರು. ಆತ ಯಾರ ಮೋರೆಯನ್ನೂ ನೋಡದೆ ತನ್ನ ಪಾಡಿಗೆ ತಾನು ಊಟ ಮಾಡಿ ಹೊರಟುಹೋದ. ಕೇರಿ

ಯುವರ ಸರಸ ಸಲ್ಲಾಪಗಳಲ್ಲಿ ಚಕ್ಕಂದಗಳಲ್ಲಿ ಸೇರದೆ ಮೌನವಾಗಿ ನಿರಾಶೆಯಿಂದ, ತನ್ನ ಗುಡಿಸಲನ್ನು ಸೇರಿಕೊಂಡು ಮಲಗಿಕೊಂಡವ ಅವನೊಬ್ಬನೇ.

ತುಕ್ರನ ಮನಸ್ಸಿನಲ್ಲಿದ್ದ ಗುರಿಕಾರಿಕೆಯ ಆಸೆ ಸಂಪೂರ್ಣ ಧ್ವಂಸವಾಯಿತು. ಇನ್ನು ಧನಿಗಳು ಹೇಳಿದರೂ, ಆತ ಆ ಕೆಲಸವನ್ನು ನಿರ್ವಹಿಸಲಾರ. ಕಲ್ಕುಡನ ಭಯ ಅವನಿಗಿದ್ದೇ ಇದೆ. ದೈವವನ್ನೆದುರಿಸಿ, ತನ್ನ ಆಟ ನಿಮಿಷಮಾತ್ರಕ್ಕೂ ಸಾಗದೆಂಬುದನ್ನು ತಿಳಿದಿದ್ದ. ಆತ ಕೇರಿಯ ಲೌಕಿಕಕ್ಕೆ ಮಾತ್ರ ಯಜಮಾನನಾಗಲು ಹವಣಿಸಿದನು. ಆ ಲೌಕಿಕ ಕೂಡುಕಟ್ಟಿನ ಕುಲಾಚಾರಕ್ಕೆ ಸಂಬಂಧಿಸಿದುದಲ್ಲ. ಮಲೆಯ ಧನಿಯರಿಗೂ ತೋಟದ ಜೀತಗಾರರಿಗೂ ಇರುವ ಸಂಬಂಧ ಎಂಬ ಭರವಸೆ ಅವನಿಗಿತ್ತು. ಅಲ್ಲದೆ ಅವನನ್ನು ನಂಬಿದಷ್ಟು ಧನಿಗಳು ಇನ್ನಾರನ್ನೂ ನಂಬುವವರಲ್ಲ—ಎಂಬುದೂ ತಿಳಿದಿತ್ತು. ಆದುದರಿಂದ ತನ್ನ ಆ ಕೆಲಸದಲ್ಲಿ ಯಾರಾದರೂ ಅವಿಧೇಯರಾಗಿ ನಡೆದುಕೊಂಡಲ್ಲಿ, ಅವರು ತನ್ನನ್ನು ಇಷ್ಟೆಲ್ಲ ಅವಮಾನಿಸಿದುದಕ್ಕಾಗಿ ತಕ್ಕ ಪ್ರಾಯಶ್ಚಿತ್ತ ವಿಧಿಸಬೇಕೆಂಬ ಹಂಬಲವೂ ಉಂಟಾಗಿತ್ತು. ನೇಮ ಮುಗಿದಮೇಲೆ, ಅವನ ನಡತೆಯ ಧೋರಣೆಯೂ ಬದಲಾಯಿತು. ಮಾತು ಮೊದಲಿನಂತಿಲ್ಲ. ವಿನಯ, ನಯ, ಎರಡನ್ನು ಬಿಟ್ಟು, ಹಿರಿಕಿರಿಯರೆನ್ನದೆ ಎಲ್ಲರನ್ನು ಗದರಿಸಿಯೇ ಮಾತನಾಡತೊಡಗಿದ. ಆದರೂ ಉಳಿದವರು ಒಮ್ಮೆಗೇ ಅವನನ್ನು ಪ್ರತಿಭಟಿಸುವ ಸಾಹಸ ಇಲ್ಲದವರಾಗಿ, ಅಸಮಾಧಾನ ತಾಳುತ್ತ, ನಡೆದಷ್ಟು ಕೆಲಸ ನಡೆಯಲಿ ಎನ್ನುತ್ತ ದಿನ ಕಳೆಯುತ್ತಿದ್ದರು. ಹಾಗೆ, ಹೀಗೆ—ಅನ್ನುವುದರೊಳಗಾಗಿ ನವರಾತ್ರಿಯ ದಿನಗಳು ಕಳೆದುವು. ತಿರುಮಲಭಟ್ಟರು ಎರಡು ತಿಂಗಳ ಅವಕಾಶ ಗಳಿಸಿ, ಮಲೆಗೆ ಬಂದು ಸ್ಥಾಪಿತರಾದರು. ತುಕ್ರ, ದೈವ ಮಾಡಿದ ಅಪ್ಪಣೆಯನ್ನು ಅವರಿಗೆ ವಿವರಿಸಿ ಹೇಳಿದನು. ಅದರಿಂದ ಅವರೂ ಅಸಮಾಧಾನ ತಾಳಿದರು. "ಹಾಗಾದರೆ ನಿಮ್ಮ ಕೇರಿಯವರು ಅಷ್ಟು ಜೋರಿದ್ದಾರೆ ಎಂದ ಹಾಗಾಯಿತು. ಕೆಂಚ ಇದ್ದಾಗ ಪೂಜೆ, ನೇಮ, ಮಾಡಿಸಬೇಕಾದರೆ ನನ್ನಲ್ಲಿ ಒಂದು ಮಾತನ್ನಾದರೂ ಕೇಳುತ್ತಿದ್ದ. ಇವರಿಗೀಗ ನಾನು ಬೇಡವಾದೆನೇ? ಇರಲಿ; ಇರಲಿ" ಎಂದುಕೊಂಡರು. ತುಕ್ರನಿಗಾದ ಅವಮಾನ ತಮಗೂ ಆದಂತೆ ಎಂದನಿಸಿತು ಅವರಿಗೆ. ದೈವ ಧನಿಗಳ ವಿಷಯದಲ್ಲಿ ಆಡಿದ ನುಡಿಗಳನ್ನು ತುಕ್ರ ಬಿಡಿಸಿ

ಅವರಿಗೆ ಹೇಳಿದ. ‘ ಮಲೆಯ ಧನಿ ತಾನಲ್ಲದೆ ಇನ್ನಾರು ’ ಎಂದುದನ್ನೂ ತಿಳಿಸಿದ. ಅದು ಅವರ ಪ್ರತಿಷ್ಠೆಗೆ ಕುಂದಲ್ಲವೆ? ಮಾತು ಕೇಳಿದ ಆ ಕ್ಷಣ, “ ಹಾಗೆ, ನಾನು ಮನಸ್ಸು ಮಾಡಿದರೆ, ನಿಮ್ಮ ಕಲ್ಕುಡನ ಪರಾಕ್ರಮವನ್ನೂ ನೋಡಬಹುದು! ಮಳಯಾಳದಿಂದ ಮಂತ್ರವಾದಿಗಳನ್ನು ಕರೆಯಿಸಿ, ಕಲ್ಕುಡನ ಕಣ್ಣಿಗೆ ಮೊಳೆ ಹೊಡಿಸಿ, ಅಲುಗಾಡದಂತೆ ಮಾಡಿಸುವುದೊಂದು ದೊಡ್ಡ ಕೆಲಸ—ಎಂದು ತಿಳಿಯಬೇಡ. ಬೇಡ, ಅಷ್ಟೆಲ್ಲ ಯಾಕೆ? ನಿಮ್ಮ ನಿಮ್ಮ ಕುಲಾಚಾರದ ಸಂಗತಿ; ಬೇಕಾದದ್ದು ಮಾಡಿ. ನಾಳೆಗೆ ಹೊಟ್ಟೆಗೋ, ಬಟ್ಟೆಗೋ ಕಡಿಮೆಯಾದರೆ ಕುಮರಿ ಕರಟ, ಭತ್ತ ಕೈಗೆ ಬಾರದೆಹೋದರೆ ಧನಿಗಳ ಕಾಲ ಬುಡಕ್ಕೆ ಬಂದು ಬೀಳುವ ದಿನ, ನಿಮ್ಮ ಕೇರಿಯವರಗೂ ಬಂದೀತು” ಎಂದರು. ದೈವದ ತಂಟೆಗೆ ಅವರು ಹೋಗಬಾರದೆಂದು ಅಂಗ ಲಾಚಿ ಕೇಳಿಕೊಂಡ ತುಕ್ರ. ಅವನಿಗೆ ಕಲ್ಕುಡನೊಬ್ಬನೇ ಗೊತ್ತು! ಕೇರಳದ ಮಂತ್ರವಾದಿಗಳನ್ನು ಅವನು ಬಲ್ಲವನಲ್ಲ. ಮಂತ್ರವಾದವನ್ನು ಅವರ ಜನರೂ ಮಾಡುತ್ತಾರೆ. ಅದು ಮೈಮೇಲೆ ಬರುವ ಯಕ್ಷಿಣಿಗೆ, ಮೈಮೇಲಿ ಬರುವ ಕಾಯಿಲೆಗಳಿಗೆ ಹೊರತು, ಕಲ್ಕುಡನಂತಹ ಮಲೆಯ ದೇವತೆಗಳಿಗಲ್ಲ. ಧನಿಗಳು ಹಾಗೆಲ್ಲಾದರೂ ಮಾಡುತ್ತಹೋದರೆ, ತಮ್ಮ ಪಾಡು ನೆಟ್ಟಗಾಗ ಲಾರದು; ನಾಳೆ, ಕುಡಿಯರ ಮಕ್ಕಳೆಲ್ಲ ನೆತ್ತರು ಕಾರಿ ಸಾಯಬೇಕಾ ದೀತು—ಎಂಬ ಭೀತಿ ಅವನ ಎದೆಯಲ್ಲಿಯೂ ನಟ್ಟಿತು. ಹೀಗಾಗಿ, ಮಳ ಯಾಳಿ ಮಂತ್ರವಾದಿಗಳ ಮಾತನ್ನು, ಆರೆಂಟು ದಿನ, ಧನಿಗಳ ಮುಂದೆ ಆಗಾಗ ಹೇಳುತ್ತ ‘ ಹಾಗೆ ಮಾಡಬಾರದೆಂದು ’ ಅಂಗಲಾಚಿ ಬೇಡುವ ಕೆಲಸವನ್ನು ತುಕ್ರ ಮಾಡಬೇಕಾಯಿತು.

ಈ ಬಾರಿ ತಿರುಮಲಭಟ್ಟರಿಗೆ—ಮಲೆಯಲ್ಲಿ ಯಾವ ಬಗೆಯ ಶಾಂತಿ ನೆಮ್ಮದಿಗಳು ದೊರೆಯಲಿಲ್ಲ ಒತ್ತಟ್ಟು ಲಾಭ; ಇನ್ನೊತ್ತಟ್ಟು ವಿಲಾಸ— ಎರಡರ ಆಸೆಯಿಂದ ಮಲೆಯಲ್ಲಿ ಬಂದು ವಾಸಿಸುವ ಅವರು ಮೊದಲನೆಯ ದಿವವೇ ತುಕ್ರ ಕೊಟ್ಟ ದೂರಿನಿಂದಾಗಿ ಅಸಮಾಧಾನ ತಾಳಿ, ವ್ಯಗ್ರ ಮನಸ್ಕ ರಾದರು. ಈಗ ಮಲೆಯ ಕೆಲಸ ತೊಡಗಿತು—ಅಂದರೆ ಏಲಕ್ಕಿ ಆಯುವ ಕೆಲಸ ತೊಡಗಿತು. ಹಿಂದಣ ಬಾರಿ ಬಂದಾಗ, ಏಲಕ್ಕಿ ತೋಟವನ್ನು ನೋಡಿ ಕೊಂಡು ಬಂದಿದ್ದರು. ಮೂಲೆ ಮೂಲೆಗೂ ಹೋಗಿ ಗಿಡಗಳ ಬುಡ ನಿರೀಕ್ಷಿಸಿ,

ನಾಳೆ ಕಾಯಾಗಲಿರುವ ಏಲಕ್ಕಿಯ ಹಂಬುಗಳನ್ನು ನಿರೀಕ್ಷಿಸಿ ಬಂದಿದ್ದರು. ಸೊಂಪಾಗಿ ಕೈಗೆ ಬೆಳೆ ಬರುವ ಆಸೆಯಿತ್ತು. ಆದರೆ ಈಗ ಕೆಲಸ ತೊಡಗಿದ ಮೇಲೆ ಗಂಡು ಹೆಣ್ಣಾಳುಗಳು ಮಳೆ ಸುತ್ತಿಸುತ್ತಿ, ತರುತ್ತಿರುವ, ತಂದು ಸುರಿಯುತ್ತಿರುವ ಏಲಕ್ಕಿಯನ್ನು ನೋಡಿದರೆ, ಅರ್ಧಕ್ಕರ್ಧವೂ ಕಾಣಿಸಲಿಲ್ಲ. ಎರಡು ದಿನವೂ ಹೀಗಾದುದನ್ನು ಕಂಡು, " ತುಕ್ರ, ಯಾವ ಕಡೆಯಿಂದ ಕೆಲಸ ಶುರುಮಾಡಿದಿರಿ " ಎಂದು ಕೇಳಿದರು. " ತೋಟದ ತೆಂಕು ಸಂದಿನಿಂದ " ಎಂದ ತುಕ್ರ.

" ಅಲ್ಲಿ ಬೆಳೆ ಚೆನ್ನಾಗಿತ್ತಲ್ಲ " ಎಂದರು ಭಟ್ಟರು.

" ಏನೋಪ್ಪ, ಇವತ್ತು ಸಿಕ್ಕಿದ್ದು ಇಷ್ಟೆ ! " ಎಂದ ತುಕ್ರ. ಮನಸ್ಸು ಸಮಾಧಾನಗೊಳ್ಳದೆ, ಮರುಗಿನ ತಾವೇ ತೋಟದ ಸಂಚಾರಕ್ಕೆ ಹೊರಟರು. ಆಳುಗಳು ಏಲಕ್ಕಿ ಹೆಕ್ಕುತ್ತಿದ್ದ ಸ್ಥಳವನ್ನು ಬಿಟ್ಟು, ಪ್ರತಿಯೊಂದು ಸಂದುಗೊಂದಿಗೂ ದಣಿದು, ಅಲೆದಾಡಿ, ಇಂಬಳಗಳಿಂದ ಕಚ್ಚಿಸಿಕೊಂಡು ಸುತ್ತಾಡಿದ್ದೇ ಬಂದಿತು. ಫಸಲು ರೂಪಾಯಿಗೆ ಎಂಟಾಣೆಯೂ ಇದ್ದಿರಲಿಲ್ಲ. ಯಾವ ಮೂಲೆಯಲ್ಲಿ ಅತಿ ಹೆಚ್ಚಿನ ಫಸಲನ್ನು ತಾವೇ ಕಂಡುಹೋಗಿದ್ದರೋ ಅಲ್ಲಿ ಒಂದೊಂದು ಏಲಕ್ಕಿಯೂ ಕಾಣದೆ ಹೋಗಿ, ಮರಳಿ ಮನೆಗೆ ಬಂದರು. ಆ ಕುರಿತು ತುಕ್ರನನ್ನು ಕೇಳೋಣ—ಎಂದು ಎಷ್ಟು ಯೋಚಿಸಿದರೂ, ಕೇಳುವ ಸಾಹಸವಾಗಲಿಲ್ಲ. ಮನಸ್ಸು ಎರಡು ತೆರನಾದ ಊಹೆಗಳಿಗೆ ಇಂಬುಗೊಟ್ಟಿತು. ಮೊದಲನೆಯದು ' ಇದು ಎಲ್ಲ ದೈವದ ಪ್ರಭಾವವೇ ಇರಬಹುದೇ ? ' ಎಂಬ ಅನುಮಾನ. ' ಅದು ನಿಜವಾದರೆ, ಕಂಡ ಏಲಕ್ಕಿ ಉದುರಿ ರೋಗದಿಂದ ನಷ್ಟವಾದ ಕುರುಹಾದರೂ ಕಾಣಿಸಿಕೊಳ್ಳಬೇಕಲ್ಲ. ಎನಿಸಿತು. ಏಲಕ್ಕಿಗೆ ರೋಗ ಬರಬಾರದೆಂದಲ್ಲ. ಮಳೆ ಅತಿಯಾಗಿ, ಅದು ಕೊಳೆಯಬಾರದೆಂದಲ್ಲ. ಆದರೆ ಹದನಾಗಿ ಮಳೆ ಬಿದ್ದ ವರ್ಷ ಅದು. ರೋಗ ಹಿಡಿದು ಕಾಯಿ ಉದುರಿದ್ದರೆ, ಹಂಬು ಕೊಳೆತು ಹೋಗಿದ್ದರೆ, ರೋಗದ ಕುರುಹಾದರೂ ಕಾಣಿಸಬೇಕು. ಹಂಬಿನಲ್ಲಿ ಉಳಿದಿರುವ ಕಾಯಿಗಳು ಚೆನ್ನಾಗಿವೆ, ರೋಗ ರುಜೆಯ ಚಿಹ್ನೆಯಿಲ್ಲ '—ಎಂಬ ಈ ಚಿಂತೆಯೇ ಅವರನ್ನು ಆವರಿಸಿತು.

ಮರುದಿನ ಮನಸ್ಸು ಸಮಾಧಾನಗೊಳ್ಳದ್ದಕ್ಕೆ, ಇನ್ನೊಮ್ಮೆ ತೋಟ

ವನ್ನು ಸುತ್ತಾಡಿದರು. ಕಣ್ಣಿನ ಮೇಲೆ ಕಣ್ಣು ಹಾಕಿ, ಏಲಕ್ಕಿ ಗಿಡಗಳ ಬುಡ ನೋಡಿದರು. ಹಾಗೆ ನೋಡಿದ ಒಂದು ಕಡೆಯಲ್ಲಿ, ಒಂದು ಗಿಡದ ಬುಡದಲ್ಲಿ ತುಂಬ ಕಾಯಿ ಹೊರಟದ್ದೂ ಕಾಣಿಸಿತು. ಆದರೆ ಅದರ ಮಗ್ಗುಲ ಗಿಡಗಳು ಬರಿದಾದುದನ್ನು ಕಂಡು ಚಕಿತರಾದರು. ಆಸುಪಾಸಿನ ಗಿಡ ಗಳಲ್ಲಿ ಒಂದಾದರೂ ಕಾಯಿ ಉಳಿದಿರಲಿಲ್ಲ. ಕೆಸರ ಮೇಲೆ ಕುಳಿತು, ಗಿಡ ಗಳ ಬುಡವನ್ನು ಇಣಿಕಿ ನೋಡಿದರೆ, ಹೊಸದಾಗಿ ಚಿವುಟಿ ತೆಗೆದ ಹಂಬು ಗಳು ಕಾಣಿಸದೆ ಹೋಗಲಿಲ್ಲ. ಈಗ ಮನಸ್ಸಿಗೆ—ದೃಢವಾಯಿತು. ಇದು ದೈವದ ಉಪದ್ರವಲ್ಲ—ಕಳ್ಳರ ಕಾಟವೆಂದು. ಬೆಳೆ ಅರ್ಧಕ್ಕರ್ಧ ನಷ್ಟವಾಗಿದೆ. ನಿನ್ನೆ ನಿನ್ನೆಯೆಂಬಂತೆ ಕುಡಿ ಚಿವುಟಿದ ಏಲಕ್ಕಿಯ ಹಂಬುಗಳಿವೆ—ಎಂದ ಮೇಲೆ, ತಮ್ಮ ತೋಟಕ್ಕೆ ಕಳ್ಳರು ಬರುತ್ತಿದ್ದಾರೆ—ಎಂಬುದು ಖಂಡಿತ ವಾಯಿತು. ಅಂಥ ಜನಹೀನವಾದ ಸ್ಥಳದಲ್ಲಿ, ಕಳ್ಳತನ ನಡೆದದ್ದನ್ನು ಈ ತನಕ ಅವರು ಕೇಳಿಯೇ ಇರಲಿಲ್ಲ. ವ್ಯಥೆಯಾಯಿತು, ಆಶ್ಚರ್ಯವಾಯಿತು, ಸಿಟ್ಟೂ ಬಂದಿತು. ಸಂಜೆ ಕೇರಿಯವರನ್ನೆಲ್ಲ ತಮ್ಮ ಮನೆಗೆ ಬರಮಾಡಿದರು. ತುಕ್ರನನ್ನು ನಿಲ್ಲಿಸಿಕೊಂಡು "ನೋಡು ತುಕ್ರ, ಈ ವರ್ಷ ಬೆಳೆ ಚೆನ್ನಾಗಿದೆ ಎಂದು ಕಣ್ಣಾರೆ ಕಂಡು ಹೋದವ ನಾನು. ಈಗ ಮನೆಗೆ ಬರುತ್ತಿರುವ ಏಲಕ್ಕಿಯನ್ನು ನೋಡಿದರೆ ರೂಪಾಯಿಗೆ ನಾಲ್ಕಾಣೆಯ ಫಸಲೂ ಇಲ್ಲ. ರೋಗವಲ್ಲ; ಇನ್ನೊಂದಲ್ಲ—ನನಗಷ್ಟು ಖಾತ್ರಿಯಾಗಿದೆ. ತೋಟದ ಸಂದುಗೊಂದುಗಳನ್ನೆಲ್ಲ ನೋಡಿ ಬಂದಿದ್ದೇನೆ—ನಾನು. ಒಂದು ಗಿಡದ ಬುಡದಲ್ಲಿ ತುಂಬ ಏಲಕ್ಕಿ ಇದ್ದರೆ ಇದರ ಮಗ್ಗುಲ ಗಿಡದಲ್ಲಿ ಒಂದೂ ಇಲ್ಲದೆ, ಏಲಕ್ಕಿ ಚಿವುಟಿ ತೆಗೆದ ಗುರುತು ಇದೆ. ಅಲ್ಲಲ್ಲಿ ಕಾಯಿ ಬಿದ್ದ ಗುರುತೂ ಇದೆ. ನನಗೆ ನಿಮ್ಮ ಜನಗಳಲ್ಲಿನ ವಿಶ್ವಾಸವೂ ಹೋಗಿದೆ. ಖಂಡಿತಕ್ಕೂ ನಿಮ್ಮಲ್ಲಿ ಯಾರೋ ಏಲಕ್ಕಿ ಕದ್ದು, ಒಳಗಿಂದೊಳಗೆ ಎಲ್ಲಿಗೋ ಸಾಗಿಸಿ ಮಾರುತ್ತಿದ್ದಾರೆ. ಇಲ್ಲವಾದರೆ ಹೀಗಾಗಲಿಕ್ಕಿಲ್ಲ" ಎಂದು ಅಪ್ಪಣೆ ಕೊಟ್ಟರು.

ಕೇರಿಯ ಜನಕ್ಕೆ, ಏಲಕ್ಕಿ ಬೆಳೆ ಇದ್ದಕ್ಕಿದ್ದ ಹಾಗೆ ಕಡಿಮೆಯಾದ ವಿಚಾರ, ಪ್ರತ್ಯಕ್ಷ ಅನುಭವವಾಗಿತ್ತು. ಅವರಲ್ಲಿ ಒಬ್ಬಿಬ್ಬರು ಆ ವಿಚಾರ ವಾಗಿ ಸೋಜಿಗವನ್ನು ವ್ಯಕ್ತಪಡಿಸಿದ್ದರು. 'ದೈವದ ಮಾಟ, ಧನಿಯ ಮೇಲಿನ ಸಿಟ್ಟು, ಅಲ್ಲದಿದ್ದರೆ ಹೀಗಾಗಲಾರದಿತ್ತು' ಎಂದು ತಮ್ಮಲ್ಲಿಯೇ

ತರ್ಕ ವಿತರ್ಕ ನಡೆಯಿಸಿದ್ದರು. ಈಗ ಸಂಗತಿ ಬೆಳಕಿಗೆ ಬಂದಿದೆಯಷ್ಟೆ. ಆದರೆ ಧನಿಗಳ ಮಾತಿಗೆ ಪ್ರತಿಯಾಗಿ, 'ತಾವು ಕದ್ದವರು' ಎಂದು ಯಾರಾದರೂ ಹೇಳುತ್ತಾರೆಯೇ? ತುಕ್ರಣ್ಣನ ಸೂಚನೆಯಂತೆ, ಪ್ರತಿ ಗುಡಿಸಲನ್ನು ಆ ರಾತ್ರಿಯೇ ಶೋಧಿಸಿ ಕಂಡುಹಿಡಿಯಬೇಕೆಂಬ ಆಜ್ಞೆ ಹೊರಟಿತು. ಧನಿಗಳು, ತುಕ್ರ, ಚನಿಯ—ಈ ಎಲ್ಲರ ಸಮಕ್ಷಮದಲ್ಲಿ ಪ್ರತಿ ಮನೆಯನ್ನೂ ಹೊಕ್ಕು ಜಡತಿ ಮಾಡಿಸಿದರು. ಅದರಿಂದಾದ ಲಾಭವೆಂದರೆ ಧನಿಗಳಿಗೆ—ಕೆಂಪಿ, ಕಾಳಿಯರನ್ನು ಅವರವರ ಮನೆಯಲ್ಲೇ ನೋಡುವ ಅವಕಾಶ ಸಿಕ್ಕಿದ್ದು. ಎಲ್ಲಿಯೂ ಅಡಗಿಸಿದ ಏಲಕ್ಕಿಯಾಗಿ ಕಾಣದೆ ತುಂಬ ನಿರಾಶೆಗೊಂಡು, ಅವರು ಮನೆಗೆ ಮರಳಿದರು. ತುಕ್ರನೊಡನೆ "ಏನೂ ಇರಲಿ. ನೀನು ಒಂದೆರಡು ರಾತ್ರೆ ಕಾವಲು ಹಾಕಿ, ತೋಟಕ್ಕೆ ಯಾರು ಬರುತ್ತಾರೆ, ತೋಟದಲ್ಲಿ ಯಾರು ತಿರುಗುತ್ತಾರೆ—ಎಂಬುದನ್ನು ನೋಡಿಕೊ" ಎಂದು ಅಪ್ಪಣೆ ಕೊಟ್ಟರು. ನ್ಯಾಯವಾಗಿ ಇಂಥ ದೊಡ್ಡ ಸಮಸ್ಯೆ ಉಂಟಾದಾಗ, ಗುರಿಕಾರನನ್ನು ಮುಂದಕ್ಕಿರಿಸಿಕೊಂಡು, ಅವನಿಂದ ಕೇಳಿಸಿ, ಆಣೆ ಮಾಡಿಸಿಯೋ, ದೈವಕ್ಕೆ ಸುಲಿದಿರಿಸಿದ ಕಾಯಿಯನ್ನೋ, ದೀಪವನ್ನೋ ಮುಟ್ಟಿಸಿ ಒಬ್ಬೊಬ್ಬರನ್ನು ತನಿಖಿ ಮಾಡಿಸಬಹುದಿತ್ತು. ಹಾಗೆ ಮಾಡುವುದಾದರೆ—ಕರಿಯನ ಹಿರಿತನ ತಾವು ಒಪ್ಪಿಕೊಂಡಹಾಗೆ—ಎಂದು ಅವರಿಗೆ ತೋರಿತು. ಅದನ್ನು ಮಾಡಲಾರದವರಾಗಿ, ಸುಲಭ ಉಪಾಯವೆಂದು ಕಾವಲಿನ ಕೆಲಸ ಕೊಟ್ಟರು ತುಕ್ರನಿಗೆ. ಆದರೆ ತುಕ್ರನ ಕಣ್ಣಿಗೆ ಯಾವ ಕಳ್ಳರೂ ಕಾಣಿಸಲಿಲ್ಲ.

ಧನಿಗಳಿಂದ ಬಂದ ಅಪವಾದವನ್ನು ಕೇಳಿದ ಮೇಲೆ, ಮುದಿ ಚನಿಯನ ಮನಸ್ಸು ಮಾತ್ರ ತುಂಬ ನೋವುಗೊಂಡಿತು. 'ಇದು ಆಗಬಾರದ ಕೆಲಸ, ಯಾರಾದರೂ ಹಾಗೆ ಮಾಡಿದ್ದಿದ್ದರೆ, ಅದನ್ನು ದಂಡಿಸಬೇಕಾದ ಕೆಲಸ. ಇನ್ನೊಂದು ಕೇರಿಯವರು ಬಂದು ಹಾಗೆ ಮಾಡಿಯಾರೇ?'—ಎಂದು ಎಷ್ಟು ಊಹಿಸಿದರೂ, ಯಾರಿಗಾಗಿ ಹಾಗೆ ಮಾಡಬೇಕು—ಎಂಬ ಪ್ರಶ್ನೆಗೆ ಅವನಿಗೆ ಉತ್ತರ ಸಿಗಲಿಲ್ಲ. ಆದರೂ ಮನಸ್ಸು ಸಮಾಧಾನಗೊಳ್ಳದ್ದಕ್ಕಾಗಿ ಕರಿಯಣ್ಣನನ್ನು ಕರೆದು, "ಅಣ್ಣಾ, ಧನಿಗಳು ನಮ್ಮ ಮುಂದೆ ಹೀಗೆ ಹೇಳಿದರು. ಸಾಲದ್ದಕ್ಕೆ ನಾವೆಲ್ಲರೂ ಕಳ್ಳರು—ಎಂಬ ಅಪನಂಬುಗೆಯಿಂದ ಮನೆ ಜಡತಿ ಮಾಡಿಸಿದರು. ಹಾಗೆ ಮಾಡಬಾರದಿತ್ತು. ಇಷ್ಟು ಕಾಲ

ದಿಂದಲೂ ಇಲ್ಲಿ ಬದುಕಿದ ನಾವು, ಇಂಥ ಅಪವಾದ ಕೇಳಿದವರಲ್ಲ. ಈಗ ಅದು ಬಂದಿದೆ. ಈ ಅಪವಾದವನ್ನು ತೊಲಗಿಸಿಕೊಳ್ಳಬೇಕು ನಾವು. ನ್ಯಾಯಕ್ಕೂ ಯಾರೂ ಹಾಗೆ ಮಾಡಿರಲಾರರು. ಆದರೂ ನೀನು ಕೇಳು; ಒಬ್ಬೊಬ್ಬರನ್ನೇ ಕರೆದು ಕೇಳು. ಕೇಳಬೇಕಾದವ ನೀನು. ಕೇಳದೆಯೆ ಇದ್ದರೆ ತಪ್ಪಾಗುತ್ತದೆ" ಎಂದು ಉಪದೇಶಿಸಿದನು; ಬೂದಣ್ಣನಿಗೂ 'ಅದೇ ಸಮನಾದ ದಾರಿ' ಎಂದನಿಸಿತು.

ಕರಿಯನೆಂದ "ಹಾಗಾದರೆ, ಇನ್ನೊಮ್ಮೆ ಎಲ್ಲರನ್ನೂ ಕೂಡಿಸಿ ನಾನು ಅವರನ್ನು ಕೇಳಬೇಕೆ?"

"ಎಲ್ಲರನ್ನೂ ಕೂಡಿಸಿ ಕೇಳುವುದು ಬೇಡ. ಒಬ್ಬೊಬ್ಬರನ್ನೇ ಕರೆದು ಬೇರೆ ಬೇರೆಯಾಗಿ ಕೇಳು. ಧನಿಯರಿಗೆ ಸರಿಸಮವಾಗಿ ನಾವೂ ಒಂದು ಸಭೆ ಮಾಡಿದ್ದೇವೆ ಎಂದರೆ ಅವರು ಏನು ತಿಳಿದಾರು?" ಎಂದು ಬೋಧಿಸಿದ.

ಕರಿಯ ಚಿಕ್ಕವನಾದರೂ, ಮೊದಲ ಬಾರಿಗೆ ಯಜಮಾನಿಕೆ ವಹಿಸಿ, ಪ್ರತಿಯೊಬ್ಬರನ್ನು ಒಂಟಿಯಾಗಿ ಕರೆಯಿಸಿ, ಮಾತನಾಡಿಸಿದ. ಯಾರೂ ಆಕ್ಷೇಪವೆತ್ತದೆ ಕೆಲಸ ನಡೆಯಬೇಕಾಗಿತ್ತು. ಹಾಗಾಗಿ ಬೂದನನ್ನು ಕೇಳಿದ; ತುಕ್ರನನ್ನೂ ಕೇಳಿದ. ಚನಿಯನನ್ನೂ ಕೇಳಿದ. ತುಕ್ರ ರೇಗಿಯೇ ಮಾತನಾಡುವಂತಾಯಿತು. "ಎಲಾ, ನನ್ನನ್ನೇ ಕೇಳುತ್ತೀಯಲ್ಲ—ನೀನು. ನಾನು ಕದ್ದವನಾಗಿದ್ದರೆ ಕಳ್ಳರನ್ನು ಹಿಡಿಯುವ ಕೆಲಸ ನನಗೆ ಧನಿಯರು ಒಪ್ಪಿಸುತ್ತಿದ್ದರೇ?" ಎಂದ. ಆದಕ್ಕೆ ಕರಿಯ "ನೀನು ಸಿಟ್ಟಾಗುವುದೇಕೆ? ಒಂದೂ 'ಇಲ್ಲ' ಅನ್ನುವುದು, ಒಂದೂ 'ಉಂಟು' ಅನ್ನುವುದು. ನನ್ನ ಮರ್ಯಾದೆಗೆ ಸಮನಾಗಿ ನಾನು ಕೇಳಬೇಕು—ಪ್ರತಿಯೊಬ್ಬರನ್ನೂ. ಹಾಗೆ ಕೇಳಿದೆ" ಎಂದ. ಅದಕ್ಕೂ ಸಿಟ್ಟಿನ ಪ್ರತ್ಯುತ್ತರವೇ! "ನಾನು ಕದ್ದವನಾಗಿದ್ದರೆ, ದೈವ ನನ್ನ ತಲೆ ಒಪ್ಪಿಸಿಕೊಳ್ಳಲಿ" ಎಂದ ತುಕ್ರ. ಹಾಗೆಯೇ ವಿಚಾರಣೆ ಮುಂದುವರೆಯಿತು. ಎಲ್ಲರ ಬಾಯಿಂದಲೂ 'ಇಲ್ಲ, ಇಲ್ಲ' ಎಂಬ ಮಾತೇ ಹೊರಟುವು ಆ ದಿನ ವಿಚಾರಣೆಗೆ ಸಿಗದಿದ್ದವರೆಂದರೆ ತಿಮ್ಮ, ಕಾಳರು ಮಾತ್ರ. ಅವರು ಆ ಸಂಜೆ ಮುಳ್ಳಿಲಿ ಹಿಡಿಯುವುದಕ್ಕೆಂದು ಈಚಲು ಮರ ಹತ್ತಿ, ರಾತ್ರಿಯೆಲ್ಲಾ ತಪಸ್ಸು ಮಾಡುತ್ತಿದ್ದು, ಬೆಳಗ್ಗೆ

ಮನೆಗೆ ಬಂದರು. ಬಂದು, ತುಸು ವೇಳೆ ಮಾಡಿಕೊಂಡು, ನೀರಿನ ದಂಬೆಗೆ ಹೋಗಿ, ಹಲ್ಲುಜ್ಜುತ್ತ ನಿಂತಾಗ, ಕರಿಯಣ್ಣ ಅಲ್ಲಿಗೇನೇ ಹೋದ. "ಅಣ್ಣ, ಸಿಟ್ಟು ಮಾಡಬೇಡ—ತುಕ್ರಣ್ಣನ ಹಾಗೆ. ಒಂದು ಮಾತು ಕೇಳುತ್ತೇನೆ—ನಿಮ್ಮಿಬ್ಬರನ್ನು. ಎಲ್ಲರನ್ನೂ ಕೇಳಿದ್ದೇನೆ. ನಿಮ್ಮನ್ನೂ ಕೇಳಬೇಕು" ಎಂದ.

"ಏನಣ್ಣಾ ಅದು?"

"ಮತ್ತೇನಿಲ್ಲ. ಧನಿಗಳು—'ತೋಟದ ಏಲಕ್ಕಿ ಬಹಳವಾಗಿ ಕದ್ದು ಹೋಗಿದೆ. ಯಾರೋ ಅದನ್ನು ಕದ್ದು ಮಾರುತ್ತಿದ್ದಾರೆ' ಅಂದರಲ್ಲ. ನಾನು ಅದನ್ನು ವಿಚಾರಿಸಬೇಕು ಎಂತಾಗಿದೆ. ಅದನ್ನೇ ಕೇಳುತ್ತಿದ್ದೇನೆ. ನೀವೆಲ್ಲಿಯಾದರೂ ಏಲಕ್ಕಿ ಕದ್ದು ಮಾರಿದ್ದೀರೋ?" ಎಂದ.

ಅದಕ್ಕೆ ತಿಮ್ಮ ನಗುತ್ತ "ಏಲಕ್ಕಿ ಕದ್ದು ಮಾರುವುದೇ? ಏಲಕ್ಕಿ ಬಲಿತ ಮೇಲೆ ನಾವು ಕೇರಿಯಿಂದ ಕಾಣೆಯಾದ ದಿವಸ ಯಾವುದು? ನಿನ್ನೆ ಏನೋ ಬೇಕೆಂತಲೇ ರಾತ್ರಿ ಮುಳ್ಳಿಲಿ ಹಿಡಿಯಲಿಕ್ಕೆ ಹೋಗಿದ್ದೆವು. ತುಕ್ರ ಬಂದು ನೀವು ಕಳ್ಳರು ಎಂದರೆ—ಒಂದು ಕೈ ತೋರಿಸುವ ಅಂತ. ಅಲ್ಲದೆ ಹೋದರೆ ಕದ್ದು, ಮಾರಿ, ನಮಗೇನಾಗಬೇಕು" ಎಂದ. ಅಲ್ಲಿಗೆ ಕೇರಿಯ ನಾಲ್ಕಾರು ಮಂದಿ ಬಂದು ಹೋದರು. ತಿಮ್ಮ ಕಾಳರ ಹಲ್ಲುಗಳ ಉಜ್ಜಾಟ ಒಂದೇ ಸಮನೆ ನಡೆಯುತಿತ್ತು. ಬಂದ ಜನರು ಹೊರಟುಹೋದಮೇಲೆ, ಕರಿಯನೊಬ್ಬನೇ ಉಳಿದದ್ದನ್ನು ಕಂಡು, ತಿಮ್ಮನೆಂದ: "ಅಣ್ಣಾ, ನೀನು ಸಣ್ಣವ; ಆದರೆ ಯಜಮಾನ. ನಿನ್ನ ಎದುರಿಗೆ ಹೇಳದಿರುವಂಥದು ಯಾವುದೂ ಇಲ್ಲ. ತಪ್ಪಿಗೂ ಒಪ್ಪಿಗೂ ನೀನೆ. ನಿಜಕ್ಕೂ ಯಾರೂ ಅದನ್ನು ಕದ್ದು ಮಾರಿಲ್ಲ. ಆದರೆ ನೋಡು, ಧನಿಗಳು ಆ ದಿನ ನಿನ್ನ ಯಜಮಾನಿಕೆ ಹಾರಿಸಿ ತುಕ್ರನಿಗೆ ಪಟ್ಟ ಕಟ್ಟಿದರಲ್ಲ. ಆ ದಿನ ನನ್ನ ಮನಸ್ಸು ಮುರಿಯಿತು. 'ಮಲೆಯಿಂದ ಹೊರಡಿ' ಅಂದರು, ಸಾಲದ್ದಕ್ಕೆ. ನನಗೆ ಗೊತ್ತಿದ್ದ ಹಾಗೆ, ಈ ಮಲೆಯ ಯಜಮಾನರಿಬ್ಬರು. ಮೊದಲಿಂದಲೂ ನಡೆದು ಬಂದದ್ದು ಹಾಗೆ. ಹಾಗೆ ನನ್ನ ಕುಲಕ್ಕೆ ಮಲೆರಾಯ ಒಂದು ಯಜಮಾನ; ಇನ್ನು ಕಲ್ಕುಡ ಒಬ್ಬ ಯಜಮಾನ."

"ನಿನಗೂ ಮಲೆರಾಯನೇ? ಮನೆದೈವ?"

“ಹೂಂ, ನಮ್ಮ ದೈವವೂ ಅದೇ. ಕಾಳನೂ ನಾನೂ ಅಲ್ಲಿಗೆಷ್ಟೋ ಸಾರಿ ಹೋಗಿದ್ದೇವೆ.”

“ನಾನೂ ಹೋಗಿ ಬರುತ್ತೇನೆ.”

“ನಾನು ನೋಡಣ್ಣ, ಕಾಳನನ್ನು ಕರೆದುಕೊಂಡು ಏಲಕ್ಕಿ ಕೊಯ್ದದ್ದು ಹೌದು. ಮಾರಲಿಕ್ಕಲ್ಲ. ಸಿಟ್ಟಿಗೆ—ಧನಿಗಳ ಮೇಲೆ ಸಿಟ್ಟಿಗೆ. ಕೊಯ್ದದ್ದನ್ನೆಲ್ಲ ಮಲೆರಾಯನ ಮುಂದೆ, ನೀರಿನ ಹೊಂಡ ಇದೆಯಲ್ಲ, ಅಲ್ಲಿ ರಾಶಿ ಹಾಕಿ ಬಂದಿದ್ದೇವೆ. ಅವ ನಮ್ಮ ಮೊದಲನೆಯ ಧನಿ. ಆ ದೈವ ವನ್ನು ಕೇಳಿದ್ದೇನೆ—ಈ ಮಲೆ ನಮ್ಮದಾದರೆ ನಮ್ಮನ್ನು ಕಾಪಾಡು. ಧನಿಗಳನ್ನು ಇಲ್ಲಿಂದ ಓಡಿಸು—ಎಂದು. ಅಷ್ಟು ಮಾಡಿಸಿಯಾನು ಅವನು.”

ಈ ಮಾತನ್ನಾಡುವಾಗ ಅವನ ಧ್ವನಿ ಮೆಲ್ಲಗಿದ್ದರೂ, ಮುಖದಿಂದ ಕೆಚ್ಚು ಸೂಸುತಿತ್ತು. ಕಾಳ ಮಾತ್ರ ಅಪರಾಧಿಯಂತೆ ತುಸು ನಡುಗುತ್ತಿದ್ದ. ಕರಿಯಣ್ಣ ಇಬ್ಬರ ಮುಖವನ್ನೂ ಮಿಕಿ ಮಿಕಿ ನೋಡಿ ನಕ್ಕ. ಹುಡುಗ ವಯಸ್ಸು ಅವನಿಗೆ. ಕೇರಿಯ ಆಸೆ, ಅಸೂಯೆಗಳಲ್ಲಿ ಅವನಿಗೂ ಪಾಲಿತ್ತು. ಧನಿಗಳ ನಡೆನುಡಿ ಅವನಿಗೂ ಸಹಿಸಿರಲಿಲ್ಲ. ಹೀಗಾಗಿ, ತಿಮ್ಮ ಮಾಡಿದ ಕೆಲಸ ಅಷ್ಟೊಂದು ತಪ್ಪೆಂದು ತೋರಲಿಲ್ಲ. ಕೇಳಿದ ಮಾತಿಗೆ ಅವರಿಬ್ಬರೂ ಸತ್ಯ ಹೇಳಿದ ಹಾಗೆಯೇ ಇತ್ತು. ‘ಕದ್ದು ಮಾರಿದ್ದಲ್ಲ. ಅಷ್ಟು ನಿಜ. ಆದರೆ ಮಾಡಿದ ಕೆಲಸ ಸಮನಾದದ್ದು’ ಎಂದು ಗುರಿಕಾರನಾಗಿ ನುಡಿಯುವ ಧೈರ್ಯ ಅವನಿಗೂ ಬರಲಿಲ್ಲ. ತುಸು ಹೊತ್ತು ಹಾಗೆಯೇ ನಿಂತ.

ತಿಮ್ಮ ಕೇಳಿದ: “ಏನಣ್ಣ, ನಮ್ಮನ್ನು ಕೈಬಿಡುತ್ತಿಯೋ? ಕಾಯು ತ್ತಿಯೋ? ನನಗೇನು ಹೆದರಿಕೆ ಇಲ್ಲ. ದೈವ ಹೇಳಿತು ನನ್ನ ಮನಸ್ಸಿಗೆ—ಧನಿಗಳ ಕೆಲಸ ಸಮನಲ್ಲ—ಎಂದು. ತುಕ್ರನನ್ನು ನಂಬಿಕೊಂಡು ಅವರು ಬೇಕಾದ ಹಾಗೆ ಮಾಡಲಿ. ನೀನು ಮಾತ್ರ ಆ ಸಂಗತಿಯಲ್ಲಿ ಕೈಹಾಕ ಬಾರದು. ನಿನಗೆ ಈ ಸಂಗತಿ ಹೇಳಿಯೇ ಮಾಡುವ ಎಂದಿತ್ತು. ಆದರೆ ನಿನ್ನನ್ನು ಜತೆಗೆ ಕರೆದುಕೊಂಡದ್ದು ಗೊತ್ತಾದರೆ, ಬೂದಣ್ಣನೂ ಸಿಟ್ಟಾ ದಾನು—ಎಂದು ಸುಮ್ಮನಾದೆವು.”

ಕರಿಯ ಸುಮ್ಮನಾದ. “ಸುಮ್ಮನಿರು. ಆ ಸಂಗತಿ ಹಾಗೆಯೇ ಇರಲಿ. ಯಾರಿಗೂ ಅದನ್ನು ಹೇಳಬೇಡ” ಎಂದು ತನ್ನ ತೀರ್ಮಾನ ಕೊಟ್ಟ.

ಅನಂತರ ಒಂದು ವಾರದ ಬಳಿಕ ತಿಮ್ಮ ಅವನನ್ನು ಕರೆದುಕೊಂಡು, ಮಲೆರಾಯನ ದರ್ಶನಕ್ಕೆ ಹೋಗಿದ್ದ. ಮಲೆರಾಯನ ಗವಿಯ ಮುಂದೆ ಹೊಂಡ ಒಂದರಲ್ಲಿ, ರಾಶಿಯಾಗಿ ಹಾಕಿ ಕೊಳೆತ ಏಲಕ್ಕಿಯಿಂದ ಪರಿಮಳದ ಬದಲು ನಾತ ಹೊರಡುತಿತ್ತು. ಕರಿಯನೆಂದ ಮಾತಿದು: "ಕದಿಮರಪ್ಪಾ ನೀವು. ಹತ್ತಾಳುಗಳ ಕೆಲಸವನ್ನು ಇಬ್ಬರೇ ಸೇರಿ ಮಾಡಿದ್ದೀರಿ. ಎಷ್ಟು ರಾತ್ರಿ ನಿದ್ರೆ ಬಿಟ್ಟರೊ! ಮಲೆ, ಮಲೆರಾಯನದ್ದು ನಿಜ; ಏಲಕ್ಕಿಯೂ ಅವನದ್ದೇ—ಆ ಮಾತೇ ನಿಜ. ಕೆಂಚಜ್ಜ ಇರುವಾಗ ತನ್ನದು ಏನಾದರೂ ದೂರಿದ್ದರೆ, ಇಲ್ಲಿಗೆ ಬಂದು ಹೇಳಿಕೊಳ್ಳುತ್ತಿದ್ದ. ನೀವೂ ಹಾಗೆ ಮಾಡಿದಿರಿ. ಒಳ್ಳೆಯದಾಯಿತು ಬಿಡಿ" ಎಂದ. ತಿಮ್ಮ ಆ ಬಳಿಕ ತುಕ್ರನ ವಿಷಯದಲ್ಲಿ, ತಾನು ತುಂಬಿಸಿಕೊಂಡಿದ್ದ ಸೇಡನ್ನು ತೀರಿಸುವ ಸಲುವಾಗಿ ಹೊತ್ತಿದ್ದ ಹಲವು ಹಂಚಿಕೆಗಳನ್ನು ಹೇಳಿದ. ಆದರೆ ಅವನ್ನೆಲ್ಲ ಕರಿಯು ಒಪ್ಪಿಕೊಳ್ಳಲಿಲ್ಲ. ಅದಕ್ಕೆ ತಿಮ್ಮ "ನೀನು ಬೇಡ ಅಂದರೆ ಬೇಡ; ನಿನ್ನ ಮಾತನ್ನು ಮೀರಿ ನಾನು ನಡೆಯುವವನಲ್ಲ" ಎಂದು ಉತ್ತರ ಕೊಡಬೇಕಾಯಿತು.

## ಅಧ್ಯಾಯ ೯

ಹಿಂಗಾರು ಮಳೆಯು ಬಂದು ಹೋಗಿಯಾಯಿತು. ಮಲೆಯ ಸುತ್ತಲಿನ ಬಾನು ಬೆಟ್ಟಗಳೆಲ್ಲ ಶುಭ್ರವಾಗಿ ನೀಲ, ಹಸುರು ಬಣ್ಣಗಳಿಂದ ಕಂಗೊಳಿಸುತ್ತಿವೆ. ಬೆಟ್ಟದ ತೊರೆಗಳ ಆರ್ಭಟೆಯು ನಿಂತು, ಅದರ ನಿತ್ಯದ ಪ್ರವಾಹ ಹದನಾದ ಮೆಲುನಡೆಯಿಂದ ಸಾಗಿದೆ. ತುಂಬ ವಿರಾಮವುಳ್ಳ ನೃತ್ಯಕನ್ಯೆಯರಂತೆ ಕಿರಿ ಮಲೆಯ ನೀರಿನ ಅಬ್ಬಿಗಳು ಅಲ್ಲಲ್ಲಿ ಕುಣಿದು, ಹಾರಿ, ನಡುನಡುವೆ ವಿರಮಿಸಿ, ಕಣಿವೆಯ ನಡುವಣ ತೊರೆಯನ್ನು ಸೇರುತ್ತವೆ. ಈ ತೊರೆಯು ಕಿಲಕಿಲನೆ ನಗುತ್ತ ಬಂಡೆಗಳನ್ನು ಸುತ್ತಿ ಸುಳಿದು, ಅಲ್ಲಲ್ಲಿ ತಂಗಿ, ವಿರಮಿಸಿ, ಮುಂದಕ್ಕೆ ಹರಿದು, ಕೊರಕಲುಗಳಿಗೆ ಧುಮುಕುತ್ತಲೋ, ಇಳಿಕಲುಗಳಲ್ಲಿ ಮೆಲುನಡೆಯಿಂದ ಜಾರುತ್ತಲೋ ನೂರಾರು ಬಗೆಯಿಂದ ನಕ್ಕು ನಲಿದು, ಮೂಲೆಗುಂಪಿನ ಹಾದಿಯಾಗಿ ನೇತ್ರಾವತಿ ನದಿಯನ್ನು ಸೇರುತ್ತವೆ. ಚಳಿಗಾಲ ಪ್ರಾರಂಭವಾದುದರಿಂದ ಸೂರ್ಯ ಬಾನಲ್ಲಿ ಸಾಕಷ್ಟು ಮೇಲಕ್ಕೇರುವ ತನಕ ಬೆಟ್ಟ, ಕಣಿವೆಗಳು ಬಿಳಿ ಮಂಜಿನಿಂದ ಮುಸುಕಿದ್ದು,

ಮಲೆವಾಸಿಗಳ ಮೈಗೆ ನಡುಕನ್ನುಂಟುಮಾಡುತ್ತವೆ. ಬಿಸಿಲೇರಿ ಮಂಜಿನ ಮೇಲೆ ಸೂರ್ಯಕಿರಣ ಕುಣಿದಾಡತೊಡಗಿತೆಂದರೆ ನೆಲವನ್ನು ಬಿಟ್ಟು ಮೇಲೇರುತ್ತದೆ—ಆ ಮಂಜು. ಆಗ ಅದೇ ಮುಗಿಲಿನ ರೂಪು ತೊಟ್ಟು, ಮೇಲು ಮೇಲಕ್ಕೇರಿ, ನಭೋಮಂಡಲದಲ್ಲಿ ತೇಲಿ, ಗಾಳಿಗೆ ಅದೃಶ್ಯವಾಗಿ ಹೋಗುತ್ತವೆ. ಅತ್ತ—ಕಿರಿ ಮಲೆಯ ಕುಡಿಯರಿಗೆ ಏಲಕ್ಕಿ ತೋಟದ ಕೆಲಸಗಳು ಮುಗಿದು ಬಂದಿವೆ; ಕೈ ತೆರವಾಗಿವೆ. ವಿನೋದಕ್ಕೋ, ಬೇಟೆಗೋ ಅತ್ಯನುಕೂಲ ಸಮಯ ಬಂದೊದಗಿದೆ. ನಾಲ್ಕಾರು ತಿಂಗಳ ಕಾಲ ಮೈ ನಡುಗಿಸುವ ಶೀತವಾದ ಗಾಳಿ, ಮುಗಿಲುಗಳಿಂದ ಚಳಿ ಹೆಚ್ಚಿಗಿದ್ದರೂ ಉಲ್ಲಾಸದಿಂದ ತಿರುಗುವುದಕ್ಕೆ ತುಂಬ ಇಷ್ಟದಾಯಕವಾಗುತ್ತದೆ. ಕೆಲಸ ಇಲ್ಲೆಂದು ಮಲೆಯ ಹೆಂಗಳೆಯರು ಅಲಸಿಗಳಾಗಿ ಕುಳಿತಿರುವುದಿಲ್ಲ. ಮನೆಯಲ್ಲಿ ಕುಳಿತಿರುವವರೆಂದರೆ ಪ್ರಾಯ ಮೀರಿದವರು, ಚಿಕ್ಕಪುಟ್ಟ ಬೇನೆಗಳಿಂದ ನರಳುವವರು ಮಾತ್ರ. ಬೇಸಾಯದ ಕೆಲಸ ಈಗ ಇಲ್ಲದಿದ್ದರೂ, ಹೆಂಗಸರಿಗೆ ಪ್ರಿಯವಾದ ಹಲವಾರು ಕೆಲಸಗಳಿರುತ್ತವೆ. ತೀರ ಉತ್ಸಾಹಿಗಳಾದವರು ಮನೆಯಲ್ಲಿ ಕುಳಿತಿರುವುದಕ್ಕೆ ಎಂದೂ ಇಷ್ಟಪಡುವದಿಲ್ಲ. ಅವರ ಅಡುಗೆಗೆ, ಮನೆಗೆಲಸಗಳಿಗೆ ಎಷ್ಟು ಸಮಯ ಬೇಕು? ಹಾಗೆಂದು ಬೆಳಗಿನ ಊಟ ಮುಗಿಸಿ ಹೊರಬೀಳುತ್ತಾರೆ, ಕಾಡಿನ ಮೂಲೆ ಮೂಲೆಗಳನ್ನು ಗಡ್ಡೆಗೆಣಸುಗಳಿಗಾಗಿ ಹುಡುಕಾಡುತ್ತಾರೆ. ಕೆಲವರು ಬಯನಿ ಹೆಂಡ ಇಳಿಸುವುದಕ್ಕೆ ಮರವನ್ನೇರಿ ಇಳಿಯುವುದೂ ಉಂಟು. ಹಲವರು ತೊರೆಯ ಬುಡಕ್ಕೆ ಹೋಗುತ್ತಾರೆ. ತೊರೆಯ ಮಗ್ಗುಲಿನ ಚಿಕ್ಕ ಪುಟ್ಟ ಕಲ್ಲುಗಳನ್ನೆಬ್ಬಿಸಿ, ಅವುಗಳ ಎಡೆಯಲ್ಲಿ ಮನೆಮಾಡಿಕೊಂಡಿರುವ ಏಡಿಗಳನ್ನು ಹಿಡಿದು, ಕಣ್ಣುಚಿಪ್ಪುಟಿ ಬುಟ್ಟಿಗಳಲ್ಲಿ ತುಂಬಿಸಿಕೊಳ್ಳುತ್ತಾರೆ. ಏಡಿಯಂತೆ ಬೆಟ್ಟದ ತೊರೆಗಳಲ್ಲಿ ಸಿಗಡಿಯೂ ಸಿಗುತ್ತದೆ. ಹಿಡಿಯಲು ಇಷ್ಟವಾದರೆ ತೊರೆಯಲ್ಲಿ ಚಿಕ್ಕ ಪುಟ್ಟ ಮೀನುಗಳಿಗೂ ಬರಗಾಲವಿಲ್ಲ. ಕೆಂಪಿಗೆ ಏಡಿ, ಸಿಗಡಿ, ಮೀನು ಹಿಡಿಯುವುದೆಂದರೆ ತುಂಬ ಇಷ್ಟ. ಆಕೆ ಒಂಟಿಯಾಗಿಯೋ ಗೆಳತಿಯರನ್ನು ಕೂಡಿಕೊಂಡೋ ತೊರೆಯ ಬಳಿಗೆ ಜಾವಹೊತ್ತಿಗೆ ಬಂದರೆ, ಮನೆ ಸೇರುವುದು ಮುಸ್ಸಂಜೆಗೆ. ಕಿರಿ ಮಲೆಯ ತೊರೆಯ ಸೆರಗನ್ನು ಹಿಡಿದು, ಮೈಲುದ್ದಕ್ಕೂ—ಬಂಡೆಗಳನ್ನು ಹಾರಿ, ಕುಪ್ಪಳಿಸಿ ಹೋಗಿ ಬರುವುದುಂಟು. ತೊರೆಯ ಮೇಲೆ

ನೆರಳು ಕಡಿಮೆ ; ಅದಷ್ಟೇ ಚೆನ್ನಾಗಿ ಬಿಸಿಲು ಬೀಳುವ ಜಾಗವೆನ್ನಬೇಕು. ಹೀಗಾಗಿ ಶೀತಲ ನೀರಲ್ಲಿ ನಿಂತು, ಅಲೆದಾಡಿದರೂ ಮೈಮೇಲೆ ಬೆಚ್ಚಗಿನ ಬಿಸಿಲು ಬೀಳುತ್ತದೆ. ಆಗ ಮನೆಗಿಂತ ಪ್ರಕೃತಿ ಹಿತವಾಗಿ ಕಾಣಿಸುತ್ತದೆ. ಆಕೆ ಒಮ್ಮೊಮ್ಮೆ ಏಡಿಯ ಬೇಟೆಗೆ ಹೊರಟರೆ, ಮಧ್ಯಾಹ್ನ ಸರಿದರೂ ಪ್ರಪಂಚದ ಅರಿವನ್ನೇ ಮರೆತುಬಿಡುತ್ತಾಳೆ. ಬುಟ್ಟಿ ತುಂಬಿದ ಮೇಲೆಯೇ ಇತರ ವಿಚಾರಗಳು ಹೊಳೆಯಬೇಕು. ಬುಟ್ಟಿ ತುಂಬಿತೆಂದರೆ, ನಾಲ್ಕು ಕ್ಷಣ ಕಾಲ ಬಂಡೆಯೊಂದರ ಮೇಲೆ ಕುಳಿತು, ನೀರಲ್ಲಿ ಕಾಲಾಡಿಸುತ್ತ ದಣಿವಾರಿಸಿ ಕೊಳ್ಳುತ್ತಾಳೆ. ಅನಂತರ ಕಣ್ಣು ಆಚೀಚಿನ ಗಿಡಮರಗಳ ಕಡೆಗೆ ಹೊರಳು ತ್ತದೆ. ಆ ವನರಾಜ್ಯದಲ್ಲಿ, ತೀರ ಮಳೆಗಾಲವೊಂದನ್ನು ಬಿಟ್ಟರೆ, ಉಳಿದ ಸಮಯಗಳಲ್ಲಿ ಎಷ್ಟೆಲ್ಲ ಹೂಗಳಿಲ್ಲ! ಮರಗಳಿಗೆ ಅಂಟಿಕೊಳ್ಳುವ ಬದನಿಕೆ ಗಳು ತೆರತೆರನ ಹೂ ಬಿಡುತ್ತವೆ. ಬಂಡೆಗಳ ಎಡೆಯಲ್ಲಿ ಒಂದು ಜಾತಿಯ ಸುಗಂಧಿ, ಬಿಳಿಯ ಹೂವರಳಿಸಿಕೊಂಡು ನಗುತ್ತಿರುತ್ತದೆ. ಕಿಸ್ಕಾರದಂಥ ಹೂವಿಗೆ ಬರಗಾಲವಿಲ್ಲ. ಬಂಡೆಗಳಿಗೆ ಅಂಟಿಕೊಂಡು ಬೆಳೆಯುವ ಕೆಲ ವೊಂದು ಹುಲ್ಲು ಜಾತಿಯಲ್ಲೂ, ನೀಲ, ಕೆಂಪು, ಹಳದಿ ಬಣ್ಣದ ಹೂಗಳು ಸಾವಿರಾರು. ತನ್ನ ಚೆಲುವಿನ ಪ್ರಜ್ಞೆಯುಳ್ಳ ಆಕೆ ಮೈ ಸಿಂಗಾರಕ್ಕಾಗಿ ಇಷ್ಟ ಪಡುತ್ತಾಳೆ. ಒಬ್ಬಳೇ ಇದ್ದರಂತು, ಅಂಥ ವೇಳೆಗೆ ಈ ಉತ್ಸಾಹ ಹೇಳಿ ತೀರದು. ಜಾರುವ ಬಂಡೆಗಳನ್ನು ಹತ್ತಿ, ಹೂ ಕೊಯ್ದರೂ ಕೊಯ್ದಳೇ! ಪಾಮಾಜಿ ಅಂಟಿದ ಮರಗಳನ್ನು ಹತ್ತಿ, ಬದನಿಕೆಯ ಹೂವಿಗೆ ಕೈಹಾಕಿ ದರೂ ಹಾಕಿದಳೇ. ಹೂಗಳನ್ನಾಯ್ದು ಬಂದಳೆಂದರೆ, ಅವನ್ನು ಕ್ರಮದಂತೆ ಮಡಬೇಕು. ಅನುಕೂಲವಾದ ಗಿಡದ ನಾರುಗಳನ್ನು ತಂದು, ಹೂ ಮಡುತ್ತಾಳೆ. ತಲೆಗೂ ಇಟ್ಟು ನೋಡುತ್ತಾಳೆ. ಅವಳ ಪಾಲಿಗೆ ತೊರೆಯ ಅಲ್ಲಲ್ಲಿನ ಶಾಂತವಾದ ಕಿರುಕುಣಿಗಳು ನೀಲಕನ್ನಡಿಗಳು. ಹೂಗಳನ್ನು ತಲೆ ಗಿರಿಸಿಕೊಂಡು ತನ್ನ ವದನ ತಾನೇ ನೋಡಿ ಮೆಚ್ಚಿ ಹಿಗ್ಗುತ್ತಾಳೆ. ಅವನ್ನು ಅನಂತರ ಬದಿಗಿರಿಸಿ ಸ್ನಾನದ ಯೋಚನೆ ಮಾಡುತ್ತಾಳೆ.

ನೀರಲ್ಲಿ ಕಾಲು ಕುಣಿಸುವುದು ಬೇರೆ, ಮೈ ಪೂರ್ಣ ಮುಳುಗಿಸಿ ಮೀಯುವುದು ಬೇರೆ. ಮೈಯನ್ನು ಮೆಲ್ಲಗೆ ಕುಣಿಯಲ್ಲಿಳಿಸಹೋದರೆ ಶೀತಲವಾಗಿ ಕರುಳನ್ನು ಕೊರೆಯುವಂತಾಗುತ್ತದೆ. ಹಾಗೆಂದು ನೀರಿಗಿಳಿ

ಯುವುದಕ್ಕೆ ನಿಧಾನಿಸಿ, ನಿಧಾನಿಸಿ, ಮಗ್ಗುಲ ಬಂಡೆಯಿಂದ ಒಮ್ಮೆಗೇ ಕುಣಿಯೊಂದಕ್ಕೆ ಧುಮುಕುತ್ತಾಳೆ. ಕತ್ತಿನ ತನಕ ನೀರು ಬಂದ ಮೇಲೆ ಮತ್ತೆ ಚಳಿಯ ಬೆದರಿಕೆಯಿಲ್ಲ. ಮುಖದ ಮೇಲೆ ಬಿಸಿಲು ಹಚ್ಚಗೆ ಹೊಯ್ಯುತ್ತದೆ. ಹಾಗೆ ನೀರಿನಲ್ಲಿ ಕುಳಿತು ಈಸುತ್ತ, ನೂರಾವೃತ್ತಿ ಮುಖ ತೊಳೆದುಕೊಳ್ಳುವುದೋ, ಮೈ ಉಜ್ಜಿಕೊಳ್ಳುವುದೋ ಅವಳ ಚೇಷ್ಟೆ. ಕರಿಮಣಿ ಸರಕ್ಕೆ ಸಿಕ್ಕಿಸಿಕೊಂಡ ಮೇಲುದೆಯನ್ನು ಇಳಿಯಬಿಟ್ಟು, ತನ್ನೆದೆಯನ್ನು ಕಂಡು ತಾನೇ ಮೋಹಿಸುವಂತೆ, ನೀರಲ್ಲಿ ಬಳುಕಾಡುತ್ತಾಳೆ. ಹಲವು ಬಾರಿ ನೀರನ್ನು ನುಂಗಿ, ಹಲ್ಲಿನೆಡೆಯಿಂದ ಚಿರ್ರನೆ ಚಿಮ್ಮಿಸಿ ನಗುತ್ತಾಳೆ. ನೀರಿಗಿಳಿದವಳು ಮೇಲೆ ಬರುವುದೇ ಬಲು ನಿಧಾನ ಗೆಳತಿಯರ ಅವಸರ ಅವಳಿಗೆ ಸಹಿಸದು. ಸಂಜೆಯ ತನಕ ಏನು ಕೆಲಸ—ಎಂದು ಅವರಿಗೆ ಹೇಳುವುದುಂಟು. ಗೆಳತಿಯರಿದ್ದರೆ, ತನ್ನ ಸೊಗಸನ್ನು ತಾನೇ ನೋಡಿ ಮೆಚ್ಚುವುದಕ್ಕೂ ಸಂಕೋಚ. ಹೀಗೆಂದು ಒಂಟಿಯಾಗಿ ಬರುವುದೇ ಹೆಚ್ಚು. ಒಂಟಿಯಾಗಿ ಬಂದಳೆಂದರೆ, ನೀರಿನ ಮರುಳು ಅವಳಿಗೆ ಬಿಟ್ಟದ್ದಲ್ಲ. ಆಚೀಚಿನ ಬೆಟ್ಟದ ಗೋಡೆಗಳೆಲ್ಲವೂ ಅವಳ ಬಚ್ಚಲುಮನೆಯ ಗೋಡೆಗಳೆಂದು ಅನಿಸುತ್ತವೆ. ನಿರ್ಭೀತಳಾಗಿ, ಉರುಟಾದ ಬೆಣಚುಕಲ್ಲೊಂದನ್ನು ತೆಗೆದು ಮೈಯನ್ನು ಉಜ್ಜಿಕೊಳ್ಳುವುದೂ ಉಂಟು. ಹಾಗೆಯೇ ಬಟ್ಟೆ ಒಗೆಯಲು ಮನವಾದರೆ ತೊಟ್ಟ ಅರಿವೆ ಕಿತ್ತು, ಬಂಡೆಯ ಮೇಲೆ ಕುಕ್ಕಿ, ಕೊಳೆ ತೆಗೆದು, ಹಿಂಡಿ, ಬಿಸಿಲಿಗೆ ಹರವುತ್ತಾಳೆ. ಅಲ್ಲಿಯ ತನಕ ಇನ್ನೇನು ಕೆಲಸ? ಆಚೀಚೆಗೆ ಕದ್ದು ನೋಡಿ, ತನಗೆ ತಾನೇ ಧೈರ್ಯ ಮಾಡಿಕೊಂಡು, ತಿರುಗಿ ನೀರಿಗೆ ಇಳಿಯುತ್ತಾಳೆ. ನೀರಲ್ಲಿ ಓಡಾಡುವ ಮೀನುಗಳನ್ನು ಗಬಕ್ಕನೆ ಕೈಹಾಕಿ ಹಿಡಿಯುವುದುಂಟು. ಅವಳ ಮೀನು ಹಿಡಿಯುವ ಕ್ರಮ ಇದೇನೆ. ಕೇರಿಯವರಂತೆ, ನೀರಿಗೆ ವಿಷ ಹಾಕಿ, ಹೊಟ್ಟೆ ಮೇಲೆ ಮಾಡಿ ಬೀಳುವ ಮೀನಿನ ಹೆಣಗಳನ್ನು ಒಟ್ಟುಮಾಡುವುದರಲ್ಲಿ ಅವಳಿಗೆ ಸಂತೋಷವಿಲ್ಲ. ಕೈಯಲ್ಲಿ ಅವನ್ನು ಹಿಡಿದು, ಬುಟ್ಟಿಗೆ ತುಂಬಿಸಿದರೇ ಚೆಂದ. ಯಾವಾವ ಮೂಲೆಯಲ್ಲಿ ಯಾವಾವ ಜಾತಿಯ ಮೀನುಗಳು ಸಿಗುತ್ತವೆ ಎಂಬುದು ಅವಳಿಗೆ ಕಂಠಪಾಠ. ಮೀನು ಹಿಡಿದು, ಬುಟ್ಟಿಗೆ ತುಂಬಿಸಿ, ಅತಿ ದೀರ್ಘದ ಸ್ನಾನ ಮುಗಿಸಿ, ಬಂಡೆಯಿಂದ ಮೇಲಕ್ಕೆ ಬಂದು, ಸೀರೆ ಉಟ್ಟುಕೊಂಡ

ಳೆಂದರೆ ಅಲ್ಲೇ ಹಾಯಾಗಿ ಕುಳಿತಿರುವ—ಅನಿಸುತ್ತದೆ. ಬೆರಳೇ ಬಾಚಣಿಗೆ ಯಾಗಿ, ಕೂದಲನ್ನೆಲ್ಲ ಸವರಿ, ಸರಿಪಡಿಸಿಕೊಂಡು, ಹೆರಳು ಹಾಕಿ, ಮುಚ್ಚಿಟ್ಟ ಹೂಗಳನ್ನು ಮುಡಿದು, ತನ್ನ ಚೆಲುವನ್ನು ತಾನೇ ಮೆಚ್ಚು ವವಳಂತೆ, ಆಚೀಚೆ ನೋಡುತ್ತಾಳೆ, ಮೈ ನೋಡಿಕೊಳ್ಳುತ್ತಾಳೆ. ಒಮ್ಮೊಮ್ಮೆ ಉಸ್ಸೆಂದು ತನ್ನ ಜೀವನದ ನಿರಾಶೆಯಿಂದ ಬೇಸರ ಸೂಸು ವುದೂ ಉಂಟು.

ಹಳೆಯ ದಿನಗಳ ನೆನಪಾಗುತ್ತದೆ. ಹಿರಿ ಮಲೆಗಾಗಲಿ, ಕಿರಿ ಮಲೆಗಾ ಗಲಿ ತನಗೆ ಸಮನಾದ ಸುಂದರಿಯರಿಲ್ಲ—ಎಂದು ಬಲ್ಲವಳು. ಹಾಗೆಂದೇ ತನ್ನ ತಂದೆ, ತಾಯಿಯರು ಸೇರಿ ಕೆಂಪಿಯೆಂಬ ನಾಮಕರಣ ಮಾಡಿದ್ದು. ಕೆಂಪಗಿನ ಮೈಯುಳ್ಳವಳಾದುದರಿಂದಲೇ ಆ ಹೆಸರು. ಅವಳ ಬೊಗಸೆ ಗಣ್ಣುಗಳು ಮಿಗದಂತೆ ಹೊಳೆದು ತಿರುಗುವ ಚೆಲುವು ಉಳ್ಳವು. ಆರಿಸಿ, ಆರಿಸಿ—ತುಕ್ರನೊಡನೆ ಅವಳ ವಿವಾಹಕ್ಕೆ ಒಡಂಬಟ್ಟರು. ಆ ಆಯ್ಕೆಯಲ್ಲಿ ಅವಳೇ ಪ್ರಧಾನಪಾತ್ರ ವಹಿಸಿದ್ದಳು. ಕಿರಿ ಮಲೆಯ ಬಂಧುಗಳ ಮನೆಗೆ ಬಂದಾಗ, ಅವರೊಡನೆ ಕಲೆತು ಕೆಲಸಕ್ಕೆ ಹೋಗುವಾಗ, ದೃಷ್ಟಿಯ ಗಾಳದಲ್ಲಿ ತುಕ್ರನನ್ನು ಸೆಳೆದವಳು ಅವಳೇನೆ. ಮೊದಲು ಮದುವೆಯಾದ ಕೆಲವು ದಿನ, ಹೆಚ್ಚಿನ ಸುಖದಲ್ಲೇ ಬಾಳಿದಳು ಅನಂತರ ಮನೆಗೆ ಅವಳೇ ರಾಣಿಯಾ ದರೂ, ಹಿರಿಯ ಹೆಂಡತಿ, ಚಿನ್ನಿ ಇದ್ದುದರಿಂದ, ಅವಳ ಬಾಳು ಅಷ್ಟು ಸೊಗಯಿಸಲಿಲ್ಲ. ಗಂಡನ ಮನೆಗೆ ಬಂದು ಹಲವು ವರ್ಷಗಳಾದರೂ, ಆಕೆ ಗರ್ಭಿಣಿಯಾಗಲೂ ಇಲ್ಲ. ಚಿನ್ನಿ ಗಂಡನನ್ನು ಇದಕ್ಕಾಗಿ ಹಂಗಿಸಿದ್ದೂ ಉಂಟು. ಅವಳು ನಾಲ್ಕು ಮಕ್ಕಳ ತಾಯಿಯಾದುದರಿಂದ 'ನೀವು ಮೆಚ್ಚಿ ಮೆಚ್ಚಿ ತಂದುದು ಬಂಜೆಯನ್ನಲ್ಲವೇ?' ಎಂದು ಚಿನ್ನಿ ಎಂದುದುಂಟು. 'ಎಂದೋ ಮುಗಿಯಿತಲ್ಲ, ಆ ವಿಷಮ ದಾಂಪತ್ಯ. ಒಳಿತೇ ಆಯಿತು' ಎಂದು ಕೊಂಡಳು ಕೆಂಪಿ ಕಾರಣ—ಗಂಡ ಒರಟ; ಅಳತೆ ಮೀರಿ ಮಾತನಾಡು ವವ. ಕುಡಿದಾಗ ಪ್ರಜ್ಞೆ ಮೀರಿ ಬಡಿಯುವವ.

'ಹಾಗೆಂದು ಅದೃಷ್ಟದಿಂದ ಬೂದನ ಮನೆ ಸೇರಿದೆ' ಎಂದಂದು ಕೊಂಡಳು. ಬೂದ ಅವಳನ್ನು ಪ್ರೀತಿ ಮನ್ನಣೆಗಳಿಂದಲೇ ಕಂಡವನಾದರೂ, ಮನೆಗೆ ಬಂದು ಕೆಲವು ವರ್ಷಗಳು ಸಂದಮೇಲೆಯೂ, ಆಕೆ ಹೆರದಿದ್ದು

ದನ್ನು ಕಂಡು ವ್ಯಥೆ ತಾಳುತ್ತಾನೆ. ಅದಕ್ಕೋ ಏನೋ—ಮನೆಗೆ ಕರೆತಂದ ಕರಿಯನನ್ನು ತನ್ನಳಿಯ ಕಾಳನನ್ನು ಬೆಳೆದ ಮೇಲೆಯೂ, ಆತ ಮುದ್ದಿಸುವುದನ್ನು ಕಂಡರೆ 'ತನಗೂ ಒಂದು ಕೂಸಿಲ್ಲದೇ ಹೋಯಿತೇ' ಎಂಬ ವ್ಯಥೆ ಕೆಂಪಿಗೆ ಉಂಟಾಗುತ್ತದೆ. ಸಾಲದುದಕ್ಕೆ ಬೂದನಿಂದ—ಆಕೆಗೆ ಮೈಸುಖದ ತೃಪ್ತಿಯೂ ಸಂಪೂರ್ಣ ದೊರೆತಂತಿಲ್ಲ. ಇದರಿಂದಲೋ ಇನೋ, ಚೆಲುವಿನ ಇಲ್ಲವೇ ಬಲಿಷ್ಠ ಗಂಡುಗಳನ್ನು ಕಂಡಾಗಲೆಲ್ಲ ಅವಳ ಮನ ಚಂಚಲವಾಗುತ್ತದೆ. ಆದರೂ ಬಹುಕಾಲ ಬೂದನ ಸಂಸಾರದಲ್ಲಿ, ಒಡಕಿಲ್ಲದೆ ಬಾಳಿದಳು—ಅವಳು. ಅವನ ದ್ವೇಷಗಳಲ್ಲೂ ಸ್ನೇಹದಲ್ಲೂ ಪಾಲುಗಾರಲಾದಳು. ಶುಕ್ರನನ್ನಂತು ವೈರಿಯೆಂದೇ ತಿಳಿದಳು. ಈಗಲೂ ಆತನೆಲ್ಲಾದರೂ ಸಮೀಪಿಸಿದರೆ, ಕಣ್ಣಿಂದಲೇ ನುಂಗುವಂತೆ ಬೆದರಿಕೆ ಹಾಕುವುದುಂಟು. ತನಗೆ ಕೂಸೊಂದಾಗಿದ್ದರೆ ಆ ಮಗುವನ್ನು ಹೊತ್ತು ಕೇರಿಯಲ್ಲೆಲ್ಲ ಮೆರೆಯಿಸುತ್ತಿದ್ದೆ—ಎಂಬ ಹವಣಿಕೆ ಅವಳಿಗೆ. ಅದೊಂದೇ ಅವಳ ಜೀವನದ ಕೊರತೆ. ಶುಕ್ರನಂತೆ ಅವಳ ಅನಾದರಕ್ಕೆ ಒಮ್ಮೊಮ್ಮೆ ಪಾತ್ರರಾದವರು, ತಿರುಮಲಧನಿಗಳು. ಧನಿಗಳನ್ನು ಮೊದಲಬಾರಿಗೆ ಕಲ್ಕುಡನ ಕೋಲದವೇಳೆ ಕಂಡಾಗ ನೀರಡಿಕೆಯ ಕಣ್ಣುಗಳಿಂದಲೇ ಆಕೆ ಕಂಡಿದ್ದಳು. ಅವರ ಬೆಳ್ಳಗಿನ ಮೈ, ನಡುವಿಗೆ ಬಿಗಿದ ಚಿನ್ನದ ನೇವಳ, ಕತ್ತಿಗೆ ತೂಗುವ ಚಿನ್ನದ ಸರಪಣಿ—ಎಲ್ಲವೂ ಅವಳ ಮನ ಸೆಳೆದಿದ್ದುವು. ಅವರು ಅವಳನ್ನು ಬಹುಹೊತ್ತು ನೋಡಿದ್ದರೂ, ತನ್ನನ್ನೋ ತನ್ನ ಗುಂಪನ್ನೋ ಎಂದು ತಿಳಿಯಲಾರಳಾಗಿದ್ದಳು, ಆ ಕಾಲದಲ್ಲಿ.

ಅನಂತರ ಕಿರಿ ಮಲೆಗೆ ಬೂದನ ಹೆಂಡತಿಯಾಗಿ ಬಂದಮೇಲೆ ಧನಿಯ ಕುರಿತಾದ ಅವಳ ಮನಸ್ಸು, ಮನೆಯವರ ಮನಸ್ಸಿನೊಂದಿಗೆ ಒಂದಾಗುತಿತ್ತು, ಅವರು ಕೆಟ್ಟವರೆಂದು ತೋರುತಿತ್ತು. ಆದರೆ ತನ್ನ ಪಾಡಿಗೆ ತಾನಿರುವ ಆಕೆಗೆ ಧನಿಗಳ ಹಂಗು ಹೆಚ್ಚೇನು ಇರಲಿಲ್ಲ. ಅವರ ಮನೆಗೆಲಸಕ್ಕೆ ಆಕೆ ಹೋಗುತ್ತಲೂ ಇದ್ದಿಲ್ಲ. ಹೋಗುವವರ ವಿಷಯದಲ್ಲಿ ಧನಿಗಳಿಗೆ ಸಲುಗೆ ಇತ್ತೆಂದು ಅನುಮಾನಿಸಿದ್ದರೂ ಆ ಹಾದಿಯಾಗಿ ಹೋದದ್ದು ಕಡಿಮೆ. ಅವಳ ಮನದಲ್ಲಿ—ಅವರನ್ನು ಕುರಿತಾದ ಬಯಕೆ ಅಸ್ಪಷ್ಟವಾಗಿ ಉಂಟಾದುದು, ಆವೊಂದು ದಿನ 'ಮುಟ್ಟಿನ ಮನೆ'ಯ ಮುಂದೆ ಅವರು

ಬಂದು ನಿಂತು—ಮಾತನಾಡಿಸಿದಾಗ. ಅವರ ಇಂಗಿತ ಸ್ಪಷ್ಟವಾದದ್ದು—ಬೀಳಲು ತರಲು ಹೋದಾಗ. ಅಷ್ಟಿದ್ದರೂ—ತನ್ನ ಅವರ ಅಂತರವನ್ನೆಲ್ಲ ಬಲ್ಲಳು. ತನ್ನ ಬಯಕೆಗಳಿಗೆ ಪುಷ್ಟಿ ಕೊಡುವ ಪ್ರಯತ್ನವನ್ನು ತಾನಾಗಿ ಮಾಡಲಿಲ್ಲ.

ಕೆಂಪಿಯ ಮನದಲ್ಲಿ ಏನೇ ಇರಲಿ, ಹೇಗೂ ಇದ್ದಿರಲಿ—ಈ ಬಾರಿ ಬಂದು ಬಿಡಾರ ಹೂಡಿದ ತಿರುಮಲಭಟ್ಟರ ಮನಸ್ಸಿನಲ್ಲಿ, ಅವಳ ಕುರಿತಾದ ಆಸೆ ಬಲವಾಗಿತ್ತು. 'ಮುಟ್ಟೆದಿರಾ' ಎಂದು ಅವಳು ನುಡಿದ ಒಂದು ಮಾತಿನ ಮೇಲೆಯೇ, ಮನದ ಆಸೆಯನ್ನು ಬೆಳೆಸಿಕೊಂಡು, ಅವಕಾಶ ಹೊಂಚು ಹಾಕುತ್ತಿದ್ದರು—ಅವರು. ಮಲೆಯ ಹುಡುಗಿಯರು ತಮ್ಮ ಕೈಗೆ ನಿಲುಕದವರಲ್ಲ—ಎಂಬುದೊಂದು ಸಾಮಾನ್ಯ ಧೈರ್ಯ. ಆ ಧೈರ್ಯಕ್ಕೆ ತುಕ್ರ ಬೆಂಬಲನೆಂದರೂ ಸರಿಯೆ. ಈ ಬಾರಿ ಏಲಕ್ಕಿಯ ಕೊಯ್ಲನ್ನು ಕೊಯ್ಯಿಸಿ, ಒಣಗಿಸಿ, ಮುಗಿಯಿತಾದರೂ ಅವರು—ಆದ ನಷ್ಟವನ್ನೆಲ್ಲ ಮರೆತು, ಈ ಒಂದು ಬಯಕೆಯಿಂದಲೇ ಊರಿಗೆ ಮರಳುವುದನ್ನು ಮುಂದು ವರಿಸಿದ್ದರು. ತಮ್ಮ ಆಪ್ತ ತುಕ್ರನೊಡನೆ "ತುಕ್ರ, ಅದೇನು ನಿನ್ನ ಕೆಂಪಿ ಕೇರಿಯಲ್ಲೇ ಇರುವುದಿಲ್ಲ" ಎಂದೊಮ್ಮೆ ನುಡಿದರು.

"ಅವಳು ಮಾಂಟ ಬೆಕ್ಕು. ಅದೊಂದು ಹೆಣ್ಣಿನ ಜಾತಿಯಲ್ಲ" ಎಂದು ಆತ ಉತ್ತರವಿತ್ತುದ್ದಕ್ಕೆ—ಬರಿದೆ ನಕ್ಕರು 'ಏಕೆ ಅನ್ನುತ್ತಾನೆ ತುಕ್ರ!' ಎಂದು ಊಹಿಸಲಾರರು. ಆ ವಿಚಾರದಲ್ಲಿ ತುಕ್ರನ ಬೆಂಬಲ ಪ್ರಯೋಜನ ದ್ದಲ್ಲ ಎಂದೂ ಅರಿತವರವರು. ಆದರೂ ಇಂಥ ಸಂಗತಿಗಳಲ್ಲಿ, ಉಳಿದ ಕುಡಿಯರೊಡನೆ ಅವರು ಬಿಚ್ಚುಮನಸ್ಸಿನಿಂದ ಆಡುವವರಲ್ಲ. ಈ ವಿಷಯ ತುಕ್ರನೊಡನೆ ಆಡಿದರೂ—ಕೆಂಪಿಗೂ, ತುಕ್ರನಿಗೂ ಎಣ್ಣೆ ಸೀಗೆ—ಎಂದು ಗೊತ್ತಿದ್ದುದರಿಂದ—ತುಂಬ ಅನುಮಾನ. ಆದರೂ ಮೇಲಿಂದ ಮೇಲೆ ಕೆಂಪಿಯ ವಿಚಾರ ಅವನ ಮುಂದೆ ಆಡದೆ ಇರಲಿಲ್ಲ. ಅವನಾದರೂ ಅವಳ ವಿಷಯದಲ್ಲಿ ಅಭಿಮಾನ ತಾಳಿದವನಲ್ಲ. ಒಮ್ಮೆ ಮಾತನಾಡುವಾಗ ಪ್ರಸಂಗವಶಾತ್ "ಅವಳಿಗೆ ಸಿಗಡಿ, ಏಡಿ ಅಂದರೆ ಪ್ರಾಣ. ದಿನವೆಲ್ಲ ಅವಳ ತಾವುರಿಕಾಣಿ ಹೊಳೆಯ ಬುಡದಲ್ಲೇ. ಕೇರಿಯಲ್ಲಿ ಕಾಣಿಸುತ್ತಲಿಲ್ಲ ಅಂದರೆ ಅಲ್ಲಿ ಹೋಗಿ ಸತ್ತುಬಿದ್ದಿರಬೇಕು" ಎಂದು ಆತ ಸೂಚನೆ ಕೊಡುವಂತೆ

ನುಡಿದ. ಇದರ ಮೇಲಿಂದ ಭಟ್ಟರು—ತಮ್ಮ ವಿಹಾರದ ಹಾದಿಯನ್ನು ಬದಲಿಸಿದರು. ಮಾಡುವುದಕ್ಕೆ ಬೇರೆ ಉದ್ಯೋಗವಿಲ್ಲ; ಕೇರಿ ಸುತ್ತುವುದು, ಕಾಡು ಸುತ್ತುವುದು—ಅವರ ನಿತ್ಯದ ಕೆಲಸ. ಅದರ ಜತೆಗೆ ಹೊಳೆ, ಹಳ್ಳ ನೋಡಿಕೊಂಡು ಬರುವ ಕೆಲಸವೊಂದು ಹೆಚ್ಚಿತಷ್ಟೆ.

ತನ್ನ ನಿತ್ಯದ ಪರಿಪಾಠದಂತೆ ಕೆಂಪಿ ಅದೊಂದು ದಿವಸ ಏಡಿ ಹಿಡಿಯಲಿಕ್ಕೆ ಹೋಗಿದ್ದಾಳೆ. ಹೂ ಕೊಯ್ದಿಟ್ಟು, ನದಿಯೊಳಗಿನ ನೀರ ಹೊಂಡವೊಂದರಲ್ಲಿ ಮುಳುಗಿ ಕುಳಿತು, ಬಾಯಿಂದ ನೀರು ಚಿಮ್ಮುತ್ತಾ ಆಟವಾಡುತ್ತಿದ್ದಾಳೆ. ಆ ಹಾದಿಯಾಗಿ ಅಲೆದಾಡಿಕೊಂಡು ಬಂದ, ಅಲ್ಲ, ಅರಸಿಕೊಂಡೇ ಬಂದ ವಿಲಾಸಪ್ರಿಯ ತಿರುಮಲಭಟ್ಟರ ಕಣ್ಣಿಗೆ ಕೆಂಪಿ ಜಲಮಧ್ಯದಲ್ಲಿ ಕಾಣಸಿಕ್ಕಿದಳು. ಅವರಿದ್ದ ತಾವಿಗೂ, ಕೆಂಪಿ ಮುಳುಗಿ ಕುಳಿತ ತಾವಿಗೂ, ಬರಿಯ ಇಪ್ಪತ್ತು ಗಜ ದೂರವಿರಬಹುದು ಮರಗಳ ಎಡೆಯಿಂದ ಅವಳು ಕಣ್ಣಿಗೆ ಬಿದ್ದದ್ದೇ ತಡ, ಕಾಲು ಸ್ತಂಭಿತವಾಯಿತು. ನೋಟ ಚಲಿಸದ್ದಾಯಿತು. ಬಹುಹೊತ್ತು ಹಾಗೆಯೇ ನಿಂತು ನೋಡುತ್ತ ಒಂದೊಂದು ಹೆಜ್ಜೆ ಮುಂದಕ್ಕೆ ಇಡುತ್ತ, ನದಿಯ ದಂಡೆಗೆ ಬಂದು, ನೀರುನೇರಳೆ ಗಿಡವೊಂದನ್ನು ಅರಸಿ, ಮುರಿದು, ಒಂದು ಕಡ್ಡಿಯನ್ನು ತೆಗೆದು, ಹಲ್ಲುಜ್ಜುವ ನೆಪದಿಂದ ತೊರೆಯ ನೀರಲ್ಲಿ ನಿಂತುಕೊಂಡರು. ಆಕೆಗೆ ಅದು ಕಾಣಿಸಲಿಲ್ಲ. ಬಂಡೆಯೊಂದು ಅಡ್ಡವಾಗಿತ್ತು. ಆತುರದಿಂದ ಮೆಲ್ಲಗೆ ಬಂಡೆಯೇರಿ ಹಲ್ಲುಜ್ಜುತ್ತಾ, ಕಂಡೂ ಕಾಣದವರಂತೆ ನಿಂತುಕೊಂಡರು. ಅವಳ ಮೈ ಬೆಡಗಿಗೆ ಮೋಹಗೊಂಡು ಹಲ್ಲುಜ್ಜುವುದನ್ನು ನಿಲ್ಲಿಸಿ, ಎವೆಯಿಕ್ಕದೆ ಅವಳನ್ನೇ ನೋಡುತ್ತ ನಿಂತರು. ಕೆಂಪಿಯ ದೃಷ್ಟಿಗೆ ಅವರು ನಿಂತುದು ಕಾಣಿಸಿತು. ಥಟ್ಟನೆ ಚಕಿತಳಾದಳು. ಆ ಬಳಿಕ ತಾನು ಅವರನ್ನು ನೋಡದವಳಂತೆ ಮುಖ ತಿರುಗಿಸಿ, ಮೈ ಉಜ್ಜಿಕೊಳ್ಳುತ್ತ ಕುಳಿತಳು. ಎಡೆ ಎಡೆಯಲ್ಲಿ—ಧನಿಗಳು ಹೋದರೆ ಹೋಗಲಿ. ಅಲ್ಲಿಯ ತನಕ ಹಾಗೆಯೇ ಕುಳಿತು ಕೊಳ್ಳೋಣ—ಎಂದೆನಿಸಿ, ಸ್ನಾನವನ್ನು ಇನ್ನಷ್ಟು ಉದ್ದವಾಗಿ ಮಾಡಿದಳು. ಕಾದುನಿಂತು ಬೇಸರಬಂದಿತು—ಭಟ್ಟರಿಗೆ. ವೇಳೆ ಕಳೆಯುವುದಕ್ಕೆ ನೇರಳೆ ಕಡ್ಡಿ ಕಚ್ಚುತ್ತಾ ಹಲ್ಲುಜ್ಜುತ್ತಾ ನಿಂತಿದ್ದ ಅವರಂತೆಯೇ ಕೆಂಪಿಗೂ ಬೇಸರ ಬಂದಿತು. ಆಕೆ ಎದ್ದು ಒದ್ದೆ ಬಟ್ಟೆಯಿಂದಲೇ ಈ ಕಡೆ ಸರಿದು, ಮರೆಗೆ

ಹೋಗಿ, ಬಟ್ಟೆ ಹಿಂಡಿ, ಉಟ್ಟು, ಏಡಿ ತುಂಬಿಸಿದ ಬುಟ್ಟಿ ಇದ್ದಲ್ಲಿಗೆ ಬಂದು ಅದನ್ನೆತ್ತಿಕೊಂಡು ಹೊರಡುವ ಯೋಚನೆ ಮಾಡಿದಳು. ಹೋಗಬೇಕಾದುದು —ಭಟ್ಟರು ನಿಂತ ಬಂಡೆಯ ಮಗ್ಗುಲಿಂದಲೇ. ತಾನು ಅವರನ್ನು ಕಂಡಿದ್ದೇನೆ —ಎಂಬುದನ್ನು ತೋರಿಸಿಕೊಳ್ಳದೆ, ಅವಸರವಾಗಿ ಹೊರಟಳು. ಬಂಡೆಯ ಮಗ್ಗುಲಿಗೆ ಬರುತ್ತಲೆ "ಯಾರು ಕೆಂಪಿಯೇ ಅದು ?" ಎಂದು ಮಾತ ನಾಡಿಸಿದರು ಅವರು. "ಹೂಂ" ಎಂದು ತಲೆತಗ್ಗಿಸಿ ಹೆಮ್ಮೆಯ ನಗು ವೊಂದನ್ನು ತನ್ನಷ್ಟಕ್ಕೆ ನಕ್ಕು, ನಾಲ್ಕು ಹೆಜ್ಜೆ ಮುಂದೆ ಸರಿದಳು. ಅಷ್ಟ ರೊಳಗೆ ಭಟ್ಟರ ಗಮನ, ಆಕೆ ಆ ಮೊದಲ ಬಂಡೆಯ ಮೇಲೆ ಇರಿಸಿದ ಹೂವಿನ ಕಡೆಗೂ ಹಾಯ್ದಿತು. "ಏನು ಹೂ ಬಿಟ್ಟು ಬಂದೆಯಲ್ಲ" ಎಂದು ಉಪಚರಿಸಿದರು. ಆಕೆ ಹಿಂದೆ ಹೋಗುವುದಕ್ಕೂ ಇಲ್ಲ, ಮುಂದೆ ಹೋಗುವುದಕ್ಕೂ ಇಲ್ಲ. ಹೂವನ್ನು ಬಿಟ್ಟು ಹೋದರೆ ಇನ್ನೇನಾದರೂ ಮಾತು ಬಂದೀತೆಂದು, ಅಲ್ಲಿಗೆ ಹೋಗಿ, ಅದನ್ನು ಹಿಡಿದುಕೊಂಡು, ಅವಸರ ದಿಂದ ತಿರುಗಿ ಅದೇ ಹಾದಿಯಾಗಿ, ಆ ಬಂಡೆಯ ಮಗ್ಗುಲಿಂದ ಬೆಟ್ಟ ಏರಿದಳು. ಭಟ್ಟರು ಕೆಳಗೆ ಬಂದು ನಿಮಿಷಮಾತ್ರದಲ್ಲಿ, ಮೋರೆ ತೊಳೆದು ಕೊಂಡರು, ತಾವೂ ಬೆಟ್ಟ ಏರುವ ಸಡಗರದಲ್ಲಿದ್ದರು. ಕೆಂಪಿ ಹೂ ಮುಡಿ ಯದೆ, ಬುಟ್ಟಿಯ ಜತೆಗೆ ಅದನ್ನು ಹಿಡಿದುಕೊಂಡು, ಒದ್ದೆಯಾಗಿ ಮೈಗೆ ಬಿಗಿ ಹಿಡಿಯುವ ಬಟ್ಟೆಯನ್ನುಟ್ಟು ಮೇಲೇರುತ್ತಿರುವಾಗ ಭಟ್ಟರು ಅವ ಳನ್ನು ಹಿಂಬಾಲಿಸಿದರು. ಹಿಂದೆ ಬರುವ ಅವರ ಕಾಲಸಪ್ಪಳ ಆಕೆಗೆ ಕೇಳಿಸು ತ್ತಿತ್ತು. ಕತ್ತು ತಿರುಗಿಸಿ ನೋಡುವುದಕ್ಕೆ ಸಂಕೋಚ. ಅವರಿಗೆ ದಾರಿ ಬಿಡುವುದು ಉಚಿತವೆಂದೆನಿಸಿ, ತುಸು ಮಗ್ಗುಲಿಗೆ ಸರಿದು ನಿಂತಳು. ಭಟ್ಟರು ಅಲ್ಲಿಯ ತನಕ ಬಂದು ತಾವೂ ನಿಂತರು. "ಹೂ ಹಿಡಿಯಲಿಕ್ಕೇನು ? ಮುಡಿಯಲಿಕ್ಕಲ್ಲವೇ ?" ಎಂದು ನಕ್ಕು ನುಡಿದರು. ಪ್ರತಿ ನಗು ಅವಳ ತುಟಿಯಿಂದಲೂ ಸೂಸಿತು. ಒಂದು ಕ್ಷಣಕ್ಕೆ ತಾನೇನು ಮಾಡುತ್ತೇನೆಂಬ ಅರಿವು ಅವಳಿಗೂ ಆಗಲಿಲ್ಲ. ಮರುಕ್ಷಣದಲ್ಲಿ ಭಟ್ಟರು ಏನೋ ಕೊಡಲು ಬಂದುದು ಕಾಣಿಸಿತು. ಈಕೆ ಏನೆಂದು ಊಹಿಸಲಾರದೆ "ನನಗೇನೂ ಬೇಡ" ಎಂದಳು. ಕೈಗೆ ಏನನ್ನೋ ಅವರು ಆ ಗಳಿಗೆಯಲ್ಲಿ ತುರುಕಿದರು. ಸ್ಪರ್ಶ ಚಕಿತಳಾದ ಅವಳ ಕೈಯಿಂದ ಕಿರಿಯ ಉಂಗುರವೊಂದು ಕೆಳಕ್ಕೆ ಬಿತ್ತು.

" ತೆಗೆದುಕೋ. ಅದು ನಿನಗೆ " ಎಂದರು ಅವರು. ಅವಳು ಅದನ್ನು ಹೆಕ್ಕುವ ಸಾಹಸ ಮಾಡಲಿಲ್ಲ. ಭಟ್ಟರಿಗೆ ಹಾಗೆ ಬಹು ಹೊತ್ತು ನಿಂತು ಸಂಭಾಷಣೆ ನಡೆಸಲು ಸಂಕೋಚವಾಯಿತೋ ಏನೋ—ಮುಂದೆ ನಡೆದರು. ಹತ್ತು ಗಜ ದೂರ ಹೋಗಿ ಮರೆಯಾಗಿ ನಿಂತರು. ಕೆಂಪಿ ಜಾನಿಸಿ, ಜಾನಿಸಿ ಮೆಲ್ಲನೆ ಉಂಗುರವನ್ನೆತ್ತಿ ಹಿಡಿದಳು. ತೆಳ್ಳಗಿದ್ದರೂ ತುಂಬ ಚೆಲುವಿನ ಚಿನ್ನದ ಉಂಗುರ. ಬಳಿಯಲ್ಲಿರಿಸಿಕೊಂಡರೆ ಒಂದಲ್ಲ ಒಂದು ದಿನ ತೊಡಬಹು ದೆಂಬ ಆಸೆ. ಅದನ್ನು ಬುಟ್ಟಿಯಲ್ಲಿರಿಸಿಕೊಂಡು, ಇನ್ನಷ್ಟು ಮೆಲು ನಡೆ ಯಿಂದ ಮನೆಯ ದಾರಿಯನ್ನು ಹಿಡಿದಳು. ಆಗ ದಾರಿಯಲ್ಲೇ ತಿರುಗಿ ಸಂಧಿಸಿದರು ಭಟ್ಟರು. ಇಬ್ಬರಲ್ಲೂ ವೆಚ್ಚುಗೆಯ ನಗುಗಳು ಸೂಚಿಸಿದುವು. ಅಂತರಂಗದ ಆಸೆಗಳೂ ಕೆರಳಿದುವು. ಭಟ್ಟರು ಆಕೆಯ ಬೆನ್ನು ಸವರಿ ತೃಪ್ತಿಪಟ್ಟು, ಆಕೆಯನ್ನು ಬೀಳ್ಕೊಟ್ಟರು.

ಆ ದಿನ ಅವರ ಮನಸ್ಸು ತುಂಬ ಉತ್ಸಾಹಭರಿತವಾಗಿತ್ತು. ವಿಜ ಯದ ಆಸೆಯಿಂದ ಕುದಿಯುತಿತ್ತು. ಮುಂದಿನ ನಿರೀಕ್ಷೆಗಳ ಸ್ವಪ್ನವನ್ನೆಲ್ಲ ತಮ್ಮಷ್ಟಕ್ಕೆ ಕಟ್ಟಿಕೊಳ್ಳುತ್ತಿದ್ದರು. ಅನಂತರ ಎರಡು ಮೂರು ದಿನ ಕಾಲ ಸಮಯ ಆರಿಸಿಕೊಂಡು, ಕೆಂಪಿಯು ಈ ನಿಸರ್ಗ ಸ್ನಾನಗೃಹಕ್ಕೆ ಬಂದು ಹೋದರು. ಕೆಂಪಿ ಸರಸ ನುಡಿಗಳಿಗೆ ಮೂಕಿಯಲ್ಲ—ಎಂಬ ಭಾವನೆಯು ಉಂಟಾಯಿತು. ಬೆಳೆದ ಸಲುಗೆಯ ಫಲವನ್ನುಣ್ಣುವುದಕ್ಕಾಗಿ ಎದೆಯ ಹಂಬಲ ತೀವ್ರವಾಗುವುದು ಸ್ವಾಭಾವಿಕ. ಹಾಗೊಂದು ದಿನ ಭಟ್ಟರು ವೇಳೆ ಅರಸಿ, ಅವಳಿಗೆ ಭೇಟಿಯಾಗಿ " ಕೆಂಪಿ, ಕಳೆದ ವರ್ಷ ಕುಮರಿ ಬೆಳೆದಲ್ಲಿ ಮನೆಗಳೆಲ್ಲಾ ಇದ್ದಾವೆಯೋ, ಹೋದುವೇ ? " ಎಂದು ಕೇಳಿದರು. " ಇರ ಬೇಕು " ಎಂದು ಉತ್ತರ ದೊರೆಯಿತು. " ನಾಳೆ ಈ ಹೊತ್ತಿಗೆ ನೀನು ಅಲ್ಲಿಗೆ ಬರುತ್ತೀಯಾ ? " ಎಂದರು. ನಕ್ಕರೂ, ಮಾತನಾಡದೆ ಕೆಂಪಿ ಹೊರಟು ಹೋದಳು.

ಆ ದಿನ ಕೆಂಪಿ ನಿತ್ಯದಂತೆ ಹೊಳೆಯ ದಂಡೆಗೆ ಹೋಗಲಿಲ್ಲ. ಬದಲು ಗಡ್ಡೆಗೆಣಸುಗಳನ್ನು ಹರಡುವ ಯೋಚನೆಯಿಂದ ಕತ್ತಿ, ಕುಂಟು ಪಿಕ್ಕಾಸನ್ನು ಹಿಡಿದುಕೊಂಡು, ಹಳೆಯ ಕುಮರಿಯ ಹೊಲದ ಕಡೆಗೆ ಸಾಗಿದಳು. ಹೊತ್ತು ಕಳೆಯುವುದಕ್ಕೆ ಗೆಣಸಿನ ಬಳ್ಳಿ ಎಲ್ಲಿದೆಯೆಂದು ಕಾಡು ತುಂಬ ಅಲೆ

ದಾಡಿದಳು. ಕುಮರಿ ಬೆಳೆದ ಪ್ರದೇಶದಲ್ಲಿ, ಆ ಮಳೆಗಾಲ ಅವರು ಕಟ್ಟಿದ್ದ ಗುಡಿಸಲುಗಳೆಲ್ಲ, ಹರಕು ಮುರುಕಾಗಿ ಜೀವ ಹಿಡಿದು ನಿಂತಿದ್ದುವು. ಬೆಳಗಿನ ವೇಳೆ—ಆ ದಿನವೇಕೋ ತಿಮ್ಮ ಉರುಳೊಡ್ಡುವುದಕ್ಕಾಗಿ ಅದೇ ಕುಮರಿಯ ಕಡೆಗೆ ಬಂದ. ಒಮ್ಮೆ ಕೊಯ್ದು ಭತ್ತದ ಬುಡಗಳು ಚಿಗುರಿದ್ದರಿಂದ, ಅದೇ ಸೊಂಪಾದ ಹುಲ್ಲುಗಾವಲಾಗಿತ್ತು. ಅಲ್ಲಿ ಮೇಯುವುದಕ್ಕೆ ಮಿಗವಾಗಲಿ, ಕೆಮ್ಮವಾಗಲಿ, ಬರ್ಕವಾಗಲಿ, ಒಂದಲ್ಲ ಒಂದು ಪ್ರಾಣಿ ಬಂದೀತೆಂಬ ಆಸೆ ಅವನಿಗೆ. ಆತ, ಕೆಂಪಿ ಮರದ ಬುಡವೊಂದರಲ್ಲಿ ಕುಳಿತುದನ್ನು ಕಂಡ. "ಏನು ಮಾಡುತ್ತೀ ಕೆಂಪಿ—ಇಲ್ಲಿ ?" ಎಂದುದಕ್ಕೆ, ಆಕೆ "ಗೆಣಸಿಗೆ ಬಂದೆ. ಎಲ್ಲಿಯೂ ಗೆಣಸಿನ ಹಂಬು ಕಾಣುವುದಿಲ್ಲ" ಎಂದಳು. ತಿಮ್ಮ ಅದಕ್ಕೆ "ಅದಕ್ಕೇನು ಬರಗಾಲ; ಅಲ್ಲಲ್ಲಿ, ಅಲ್ಲಲ್ಲಿ ಉಂಟು. ನಿನಗೆ ಏಡಿ ತಿಂದು ಬೇಸರ ಬಂತು ಅಂತ ಕಾಣುತ್ತದೆ; ಗೆಣಸಿಗೆ ಬಂದೆಯಾ ?" ಎಂದು ತಾನು ಕಂಡಿದ್ದ ಒಂದೆರಡು ಗೆಣಸಿನ ಬೀಳಲುಗಳ ಬುಡವನ್ನು ತೋರಿಸಿ ಹೊರಟುಹೋದ. ತಾನು ಉರುಳಿಡುವ ಸ್ಥಳವನ್ನು ಯಾರೂ ಕಾಣದಿದ್ದರೆ ಪಾಸಿ ಎಂದು ಅವನ ತಿಳಿವು. ಹೆಚ್ಚಾಗಿ ಉರುಳಿಡುವುದು ಗುಟ್ಟಿನಲ್ಲಿ. ಇನ್ನದು ಕೆಂಪಿಯ ಕಣ್ಣಿಗೇಕೆ ಬೀಳಬೇಕೆಂದು—ತಿಮ್ಮ ನಾರು, ಕತ್ತಿ, ಕೋಲುಗಳನ್ನು ಹಿಡಿದುಕೊಂಡು ಹೊಲದಿಂದ ಮರೆಯಾದ. ಅಲ್ಲೆಲ್ಲಾದರೂ ಮೃಗಗಳ ಹಿಕ್ಕೆ ಬಿದ್ದಿದೆಯೋ, ಹೆಜ್ಜೆ ಕಾಣಿಸುತ್ತಿದೆಯೋ ಎಂದು ಹುಡುಕಾಡಿ, ಆ ಭಾಗದ ಕಾಡಿನಲ್ಲಿ ಅದೃಶ್ಯನಾದ. ಇದರಿಂದ ಕೆಂಪಿಗೆ ಸಂಕೋಚವಾಯಿತು. ತಿಮ್ಮಣ್ಣ ಅಲ್ಲೆಲ್ಲಾದರೂ ಸುಳಿದಾಡುವನೆಂಬ ಅನುಮಾನವಾಯಿತು. ಅವನು ಮರೆಯಾದ ದಾರಿ ಹಿಡಿದು, ಹಿಂಬಾಲಿಸಿ, ತೊರೆಯ ತನಕವೂ ಹೋದಳು. ತಿಮ್ಮನ ಸವಾರಿ ತೊರೆಗೆ ಹೋಗಿ, ಅಲ್ಲಿಂದ ಮೇಲಕ್ಕೆ ಗುಡ್ಡ ಏರಿದ್ದನ್ನು ಕಂಡ ಮೇಲೆಯೇ ಅವಳು ಮರಳಿ ಬಂದಳು. ಬಂದು ಕುಮರಿಯನ್ನು ಸೇರುವಾಗ ಹೊತ್ತು ಬಹಳವಾಗಿತ್ತು. ತನಗಾಗಿ ಧನಿ ಬರಬಹುದೆಂಬ ಆಸೆಯೂ, ತಮ್ಮನ್ನು ಇತರರು ನೋಡಬಹುದೆಂಬ ಬೆದರಿಕೆಯೂ ಏಕ ಕಾಲದಲ್ಲಿ ಮೂಡಿತು; ಎದೆ ಬಡಿಯುತಿತ್ತು. ಹಾಗೆ ತಾನು ಬಂದ ಕೆಲಸ ಸುಳ್ಳಾಗಬಾರದೆಂದು, ಮೊದಲು ಒಂದಿಷ್ಟು ಗೆಣಸಿನ ಬುಡಗಳನ್ನು ಹರಡಿ ರಾಶಿ ಹಾಕಿದಳು. ಅನಂತರ ಅವನ್ನು ತಂದು,

ಜಿನುಗುತ್ತಿದ್ದ ಬೆಟ್ಟದ ಊಟೆಯೊಂದರಲ್ಲಿ ತೊಳೆಯುತ್ತ ಅಚೀಚೆ ನೋಡು ವಾಗ, ಎತ್ತರದ ಏರಿನಲ್ಲಿ ಬಿಳಿ ಬಟ್ಟೆಯುಟ್ಟ ಭಟ್ಟರ ಸಂಚಾರ ಕಾಣಿಸಿತು. ಹಳೆಯ ಗುಡಿಸಲೊಂದನ್ನು ಅವರು ಹೊಕ್ಕುದೂ ಕಾಣಿಸಿತು. ಇವುಗಳನ್ನೆಲ್ಲ ಅಲ್ಲಿಯೇ ಬಿಟ್ಟು ವೈಮರೆತವಳಂತೆ, ಅವಳೂ ಆ ಕಡೆಗೇನೆ ಹೋದಳು.

ಇತ್ತ ತಿಮ್ಮ—ತೊರೆಯಿಂದ ಮೇಲಕ್ಕೆ ತುಸು ದೂರದಲ್ಲಿ ಮೃಗಗಳ ಹಾದಿಯನ್ನು ಶೋಧಿಸಿ, ಅಲ್ಲಿ ನಾರಿನ ಉರುಳೊಂದನ್ನು ಇರಿಸಿ, ಕೆಳಕ್ಕೆ ಇಳಿದು ಬರುವಾಗ ಕೆಂಪಿ, ನೀರ ಕುಣಿಯೊಂದರಲ್ಲಿ ವಿಾಯುತ್ತ ಕುಳಿತಿದ್ದಳು. ಉಪಚಾರಕ್ಕಾಗಿ ಮಾತನಾಡುತ್ತ "ಏನು ಗೆಣಸು ಸಿಕ್ಕೀತೆ? ಎಲ್ಲಿ ಎಷ್ಟು ಸಿಕ್ಕೀತು?" ಎಂದು ಕೇಳಿದ.

"ಅಲ್ಲೇ ಕುಮರಿಯಲ್ಲೇ ಬಿಟ್ಟುಬಂದಿದ್ದೇನೆ" ಎಂದು ಕೆಂಪಿ ನಕ್ಕು ನುಡಿದಳು. ತಿಮ್ಮ ಕೈ ತೊಳೆದು, ಮೋರೆ ಉಜ್ಜಿಕೊಂಡು, ಆ ಹಾದಿಯಾಗಿ ಕೇರಿಗೆ ಹೊರಟ. ಆತ ಹೋಗುವಾಗ ಕುಮರಿಯ ದಾರಿಯಿಂದ ಭಟ್ಟರು ವಿರಾಮವಾಗಿ ನಡೆಯುತ್ತ ಅವನಿಗಿಂತ ನೂರು ಹೆಜ್ಜೆ ಮುಂದೆ ಹೋಗುವುದೂ ಕಾಣಿಸಿತು. 'ಧನಿಗಳು ಇಲ್ಲೇಕೆ ಸುಳಿಯುತ್ತಿದ್ದಾರೆ. ಅಲ್ಲದೆ, ಅವರ ಸ್ವಂತ ಗುರಿಕಾರ ಜತೆಯಲ್ಲಿಲ್ಲದೆ ತಿರುಗಾಡುವುದೂ ರೂಢಿಯಿಲ್ಲ; ಕೈಯಲ್ಲಿ ಕೋವಿಯೂ ಇಲ್ಲ. ಶಿಕಾರಿಗೇನು ಹೊರಟದ್ದಲ್ಲ' ಎಂದು ತರ್ಕಿಸುತ್ತಿರಲು, ಮನೆಯ ಕಡೆಗೆ ಹೊರಟ ಕೆಂಪಿ ಆ ಬೆಳಿಗ್ಗೆ ಆದೇ ಕುಮರಿಯಲ್ಲಿ ಸುಳಿದಾಡಿದ್ದು ಅವನ ನೆನಪಿಗೆ ಬಂದಿತು. ಅದರಿಂದ ತನ್ನದೇ ಆದ ತರ್ಕಕ್ಕೆ ಮನ ಕೊಟ್ಟು ಯಾವ ನಿರ್ಧಾರಕ್ಕೂ ಬಾರದೆ ಹೊರಟುಹೋದ.

ಆ ಸಂಜೆ ಉರುಳಿಟ್ಟಲ್ಲಿಗೆ ತಿಮ್ಮ ತಿರುಗಿ ಹೋಗಿಬಂದ. ಏನೂ ಪ್ರಯೋಜನವಾಗಲಿಲ್ಲ. 'ನೋಡುವ—ಅದು ರಾತ್ರಿಯಾದರೂ ಬಿದ್ದೀತು' ಎಂದುಕೊಂಡು ಮರುದಿನ ಬೆಳಿಗ್ಗೆ ಅಲ್ಲಿಗೆ ಹೋದ. ಬೇಟೆ ಸಿಲುಕಿರಲಿಲ್ಲ. ನಿರಾಶೆಯಿಂದ ಇನ್ನು ನಾಲ್ಕಾರು ಕಡೆ ಉರುಳಿಟ್ಟು, ಆತ ಕೇರಿಗೆ ಮರಳುವಾಗ ತಿರುಗಿ ಕುಮರಿಯ ಹೊಲದಲ್ಲಿ—ಕೆಂಪಿ ಕಾಣಿಸಿದಳು. ಕೆಂಪಿಗೂ ಇವನು ಕಾಣಿಸಿರಬೇಕು. ಅವಳು ಕೆಲಸ ಮಾಡುವವಳಂತೆ ನಟಿಸಿದಳು. ತಿರುಗಿ ಗಡ್ಡೆಗೆಣಸು ಹರಡುತ್ತ ಕುಳಿತಳು. ಅಲ್ಲಿನ ಊಟೆಯೊಂದರಲ್ಲಿ ಅವನ್ನು ತೊಳೆಯುತ್ತ ಕುಳಿತಳು. ನಡುನಡುವೆ ಕೆಂಪಿಯು

ಕಣ್ಣು, ಕುಮರಿಯ ಮನೆಗಳ ಕಡೆಗೂ, ಮರೆಯಾದ ತಿಮ್ಮನ ಕಡೆಗೂ ಹಾಯುತ್ತಲೇ ಇತ್ತು. ಕಿವಿ ಚೆನ್ನಾಗಿ ಹೊರಳಿಸಿದಾಗ ಅನತಿ ದೂರದಲ್ಲಿ ತರಗೆಲೆಗಳ ಸದ್ದೂ ಕೇಳಿಸಿತು. ತಿಮ್ಮ ಅಲ್ಲೆಲ್ಲಾದರೂ ಇರಬಹುದೆಂಬ ಅನುಮಾನವುಂಟಾಯಿತು. ವೇಳೆ ಮಾಡದೆ, ಗಡ್ಡೆಗೆಣಸುಗಳನ್ನು ಬುಟ್ಟಿಯೊಂದರಲ್ಲಿ ಹಾಕಿ, ತುಸು ನಿಂತುಕೊಂಡು, ಮೇಲೆ ಏರುವ ಧೈರ್ಯವಾಗದೆ, ನದಿಯ ಕಡೆಗೆ ಹೊರಟಳು. ನಾಲ್ಕು ಹೆಜ್ಜೆ ಮುಂದೆ ಹೋಗಿ ಕಣ್ಣು ತಿರುಗಿಸಿದಾಗ, ದೂರದಲ್ಲಿ ಗಿಡ ಪೊದೆಗಳ ಎಡೆಯಲ್ಲಿ ಯಾರೋ ನಿಂತುದು ಕಾಣಿಸಿತು. ಅದರಿಂದ ಕೆಂಪಿ, ಒಂದೊಂದೇ ಹೆಜ್ಜೆಯನ್ನು ನದಿಯ ಕಡೆಗೆ ಹಾಕಿದಳು. ಕುಮರಿಯ ಗುಡಿಸಲೊಂದರಲ್ಲಿ ಆಕೆಯನ್ನು ನಿರೀಕ್ಷಿಸುತ್ತಿದ್ದ ಭಟ್ಟರು ಹೊರಬಂದರು. ಹೊರಕ್ಕೆ ಬಂದಾಗ ಕೆಂಪಿ, ಊಟೆಯ ಬಳಿ ನಿಂತಿದ್ದಳು. ಅಲ್ಲಿಂದ ಮೇಲಕ್ಕೆ ಬಾರದೆ ಅವಳು ಹೊರಟುದೂ ಕಾಣಿಸಿತು. ಹೀಗಾಗಿ ಅವರು, ಅವಳು ಹೋದ ದಾರಿಯನ್ನು ಹಿಡಿದರು. ನದಿಗೂ ಹೋದರು. ಕೆಂಪಿ ಸ್ನಾನಕ್ಕೆ ತೊಡಗಿದಳು. ಇವರು ಹಲ್ಲುಜ್ಜುವ ನೆಪವನ್ನು ಮಾಡದೆ ದಂಡೆಯಿಂದಲೇ "ಯಾರು ಕೆಂಪಿಯೇ ?" ಅಂದರು. ಆಕೆ ಉತ್ತರಿಸುವ ಪ್ರಯತ್ನ ಮಾಡಲಿಲ್ಲ. ಬೇಗನೆ ಸ್ನಾನ ಮುಗಿಸಿ, ಈ ಪ್ರಸಂಗ ತಪ್ಪಿಸಿಕೊಳ್ಳುತ್ತೇನೆಂದು ಅಲ್ಲಿಂದ ಹೊರಟು, ಸರಸರನೆ ಗುಡ್ಡವನ್ನೇರಿದಳು. ನಾಲ್ಕು ಹೆಜ್ಜೆ ಮುಂದುವರಿಯುವಾಗ, ಭಟ್ಟರು ಬೀಸಾಗಿ ಹಿಂಬಾಲಿಸಿ ಬಂದು, ಬೆನ್ನ ಮೇಲೆ ಕೈಯಿರಿಸಿ "ಯಾಕೆ ಓಡುತ್ತಿ ಇವತ್ತು ?" ಎಂದು ಕೇಳಿದರು. ಕೆಂಪಿಯ ಎದೆ ಢಡಬಡಿಸತೊಡಗಿತು. ಇನ್ನೇತಕ್ಕೂ ಅಲ್ಲ. ತನ್ನನ್ನೂ ಭಟ್ಟರನ್ನೂ ತಿಮ್ಮ ಹೊಂಚು ಹಾಕುತ್ತಿದ್ದಾನೆ—ಎಂಬ ಹೆದರಿಕೆ ಅವಳಿಗಾಗಿತ್ತು. ಅವರು ಭುಜದ ಮೇಲೆ ಕೈಯಿಟ್ಟಾಗ, ತಾನು ಸುಮ್ಮನಿರುವುದನ್ನು ಆತ ಕಂಡರೆ, ತೊಂದರೆಗೆ ಗುರಿಯಾಗುವೆನೆಂದು ತಿಳಿದು 'ಅಯ್ಯೋ' ಎಂದು ಚೀರಿದಳು. ಮರುಗಳಿಗೆಗೆ ಒಳ ಧ್ವನಿಯಿಂದ 'ಯಾರೋ ಇದ್ದಾರೆ' ಎಂದೂ ನುಡಿದು, ಧಾವಿಸಿದಳು. ಅಷ್ಟೆಲ್ಲ ಆಗುವಾಗ ಪೊದೆಗಳ ಎಡೆಯಿಂದ ತಿಮ್ಮ ಹೊರಬಿದ್ದು "ಯಾರದು ಕೂಗಿದ್ದು ? ಏನು ? ಏನು ?" ಎಂದು ಧಾವಿಸಿ ಬಂದ ಆಗ ಕೆಂಪಿ ಮರೆಯಾಗಿದ್ದಳು. ಇದೇನು ಸಂದರ್ಭವೆಂದು ತಿಳಿಯಲಾರದ

ಭಟ್ಟರು, ಕಕ್ಕಾಬಿಕ್ಕಿಯಾಗಿ ನಿಂತಲ್ಲಿಯೇ ನಿಂತಿದ್ದರು. ತಿಮ್ಮ ಧಾವಿಸಿ ಬಂದು "ಯಾರದು ಕೂಗಿದ್ದು? ಯಾರೋ ಇಲ್ಲಿಂದ ಓಡಿದಂತಾಯಿತಲ್ಲ ಧನಿಯರೇ" ಎಂದ.

"ನಾನೂ ಅದನ್ನೇ ಕೇಳಿದೆ. ಏನೋ ಓಡಿದ್ದು ನಿಜ" ಎಂದರು. ನಿಜಕ್ಕೂ ತಿಮ್ಮ ಅನುಮಾನದಿಂದ ಹೊಂಚುಹಾಕಿದ್ದನಾದರೂ, ಕೆಂಪಿಯೂ ಭಟ್ಟರೂ ಸಂಧಿಸಿದ್ದನ್ನು ಆತ ಕಂಡವನಲ್ಲ. ಅವನ ಊಹೆಯೇನೋ 'ಕೆಂಪಿಯ ಹಾದಿಯಲ್ಲಿ ಭಟ್ಟರು ಉದ್ದೇಶಪೂರ್ವಕವಾಗಿ ಹೊಂಚುಹಾಕುತ್ತಿದ್ದಾರೆ' ಎಂದು ತೋರಿತು. ಧನಿಯರ ಎದುರಿಗೆ ಅಷ್ಟೆಲ್ಲವನ್ನು ತೋರಿಸಿಕೊಳ್ಳುವ ಶಕ್ತಿಯಿಲ್ಲ. ಆದುದರಿಂದ "ಯಾರೋ ಮನುಷ್ಯರು ಕೂಗಿದ ಹಾಗೆ ಕೇಳಿಸಿತು" ಎಂದು ನುಡಿದು, ಆಚೀಚೆ ನಾಲ್ಕು ಕಡೆಗೆ ಹೋಗಿ ಹುಡುಕಾಡಿದ. ಭಟ್ಟರು ತಾವೂ ಹುಡುಕಾಡುವಂತೆ ನಟಿಸಿದರು. "ಏನೋ, ಏನಾದರೂ ಕೂಗಿರಬಹುದು. ಕಾಡಲ್ಲವೆ?" ಎಂದು ನುಡಿದು, ಮನೆಯ ಕಡೆಗೆ ತೆರಳಿದರು.

ಈ ಘಟನೆಯಿಂದ ತುಂಬ ಬೆರಗು ಕುತೂಹಲಗಳಿಗೊಳಗಾದವನೆಂದರೆ ತಿಮ್ಮ. ಮದುವೆಯಾಗದ ಆತ, ಹೆಣ್ಣಿನ ವಿಚಾರದಲ್ಲಿ ಆಸೆ ತಾಳಿ ತಾಳಿ ನಿರಾಶೆಗೊಂಡಿದ್ದರೂ, ವೈರಾಗ್ಯಶೀಲನಾಗುವ ಮನ ಅವನದ್ದಲ್ಲ. ಬಯಕೆಯ ಕುಡಿ ಎಷ್ಟೆಷ್ಟು ನಿರಾಶೆಯಲ್ಲಿ ಬೆಳೆಯುತ್ತದೋ, ಅದರ ಬೇರು ಅಷ್ಟಷ್ಟು ಬಲವಾಗಿ ಮನದಲ್ಲಿ ಊರಿಕೊಳ್ಳುತ್ತದೆ. ಅದೇ ಚಿಂತನೆಯನ್ನು ಮಾಡುತ್ತ, ತನಗೆ ಇಲ್ಲದ ವಸ್ತುವಿಗಾಗಿ ಅಸೂಯೆಗೊಳ್ಳುತ್ತದೆ. ತನಗೆ ದೊರೆಯದ ಸುಖ ಅನ್ಯರಿಗೆ ದೊರಕುವುದನ್ನು ಕಂಡು, ಊಹೆಗೆ ಶರಣುಹೋಗುತ್ತದೆ, ಜತೆಗೆ ಅನ್ಯಾಯಗಾರರೆಂಬವರನ್ನು ದಂಡಿಸಲು ಧೈರ್ಯ ಕೊಡುತ್ತದೆ. ಅವನಿಗೆ ಗೊತ್ತಿತ್ತು ಕೆಂಪಿಯ ಧ್ವನಿ. ಅವಳು ಉದ್ದೇಶಪೂರ್ವಕವಾಗಿ ಚೀರಿದ್ದರೂ, ಆ ನಾಟಕದ ತಪ್ಪನ್ನೆಲ್ಲ ಭಟ್ಟರ ಮೇಲೆ ಎಸೆಯುವುದಕ್ಕೆ ಬೇಕಾದ ಊಹೆಗಳನ್ನು ಅವನ ಕಲ್ಪನೆ ಹೆಣೆದುಕೊಟ್ಟಿತು. ಮನಸ್ಸಿನಲ್ಲಿ ಇದರ ಕಡೆ ಕುಡಿ ನೋಡಬೇಕೆಂಬ ಚಪಲವೂ ಹೆಚ್ಚಿತು. ಹಾಗೆಂದು ನೆಟ್ಟಗೆ ಬೂದನಿಗೆ ಈ ಸಂಗತಿ ಹೇಳಲಾರ. ಅವನು ಹಲವು ವರ್ಷಗಳ ಹಿಂದೆ, ಅರಸಿಕೊಂಡು ಹೋದ ಹೆಣ್ಣು—ಕೆಂಪಿ. ಆಗ ಬೂದನಿಗೆ ಆದ ನಿರಾಶೆಯಲ್ಲಿ ಅವನಿಗೂ

ಸವು ಪಾಲಿತ್ತು. ಮುಂದೆ, ಆಕೆ ಬೂದನ ಮನೆಗೆ ಬಂದಮೇಲೆ ಅವನಿಗೆ ತೃಪ್ತಿ ಬಂದೀತೆ? ಕೆಂಪಿಯ ವಿಷಯದ ಹಸಿವು ಅವನಲ್ಲಿ ಉಂಟಾಗಿದ್ದರೂ, ಕುಡಿಯರ ಕಟ್ಟುನಿಟ್ಟಿನ ಜೀವನ, ಬಾಹ್ಯದ ಸ್ವೇಚ್ಛಾವರ್ತನೆಗೆ ಅವಕಾಶ ಕೊಟ್ಟಿರಲಿಲ್ಲ. ಆದರೂ ಈಗ ಕೆಂಪಿಯ ಬಾಯಿಯಲ್ಲಿ, ತಾನು ಒಳ್ಳೆಯವ ನೆನಿಸಿಕೊಳ್ಳಬೇಕೆಂಬ ಹಂಬಲ ಉಂಟಾಯಿತು. ಅದರಿಂದೇನೋ ಎಂಬಂತೆ ಅವಕಾಶ ಸಾಧಿಸಿ, 'ಆ ದಿವಸ ಕೆಂಪಿ ಕೂಗಿದ್ದೇಕೆ?' ಎಂದು ಅವಳ ಬಾಯಿ ಯಿಂದಲೇ ಹೊರಡಿಸಬೇಕೆಂಬ ಮನೋವೃತ್ತಿ ಉಂಟಾಯಿತು.

ಹಿಂದಣ ದಿನದ ಘಟನೆಯಿಂದ ಕೆಂಪಿ ಮರುದಿನ ಕುಮರಿ ಬೆಳೆದೆಡೆಗೆ ಕಾಲಿರಿಸಲು ಆತುರಪಡಲಿಲ್ಲ. ಬದಲು 'ತಿಮ್ಮನು ತಮ್ಮನ್ನು ಗುರುತಿಸಿರ ಬಹುದೆಂಬ' ಅನುಮಾನವನ್ನು ಧನಿಗಳಿಗೆ ತಿಳಿಸುವ ಆಸೆಯಾಗಿದ್ದರೂ, ಅದಕ್ಕೆ ಅನುಕೂಲ ಸಂದರ್ಭ ಒದಗಲಿಲ್ಲ. ಆ ಸಂದರ್ಭ ಒದಗುವ ತನಕ, ತಾನು ಎಚ್ಚರಿಕೆ ಇರಬೇಕೆಂದು ಹವಣಿಸಿದಳು. ಅವಳ ಮನಸ್ಸು ವಿಚಿತ್ರ ವಾಗಿ ಹರಿಯುತಿತ್ತು. ಅವಳ ಮನಸ್ಸಿಗೆ ಅಪೂರ್ವದ ಧನಿಗಳು ದೊರಕಿದು ದಕ್ಕೆ ಬೆದರಿಕೆಯೂ ಇತ್ತು. ಅಲ್ಲದೆ—ಅಂಥ ಶ್ರೀಮಂತರ ಸ್ನೇಹದಿಂದ ಚಿನ್ನದ ಒಡವೆಗಳನ್ನು ತೊಟ್ಟೇನೆಯೋ—ಎಂಬ ಆಸೆಯೂ ಮೂಡಿತ್ತು. ಆದರೆ ಆ ಉಂಗುರವನ್ನು ಆಗಲೇ ಅವಳು ತೊಡುವಂತಿಲ್ಲ; ಯಾರಿಗೆ ತೋರಿಸುವಂತೆಯೂ ಇರಲಿಲ್ಲ. ಮೂಲೆಗುಂಪಿನ ಜಾತ್ರೆಗೆ ಹೋದಾಗ, ಅಲ್ಲಿ ಅದು ತನಗೆ ಸಿಕ್ಕಿತು—ಎಂಬ ನೆಪ ಹೂಡಿ, ಅದನ್ನು ಬೆಳಕಿಗೆ ತರುವೆನೆಂದೆ ನಿಸಿಕೊಂಡಳು. ಅಲ್ಲದೆ ಮತ್ತೂ ಒಂದು ಯೋಚನೆ! ತುಕ್ರನ ವಿಷಯದಲ್ಲಿ ಅವಳಿಗೆ ಸರ್ಪದ್ವೇಷವೇ ಎದೆಯಲ್ಲುಂಟಾಗಿತ್ತು. ಧನಿಗಳ ಮೇಲಿನ ಅನಾದರ ಮಾಯವಾಗಲು ವೇಳೆ ಹಿಡಿಯಲಿಲ್ಲ. ಸರಸಾಪೇಕ್ಷೆ—ಅವರ ಮೇಲಿನ ತಿರಸ್ಕಾರವನ್ನು ಗೆದ್ದಿತು. ತುಕ್ರನ ಮಾತು ಕೇಳಿಯೇ ಅವರು ಜನಕ್ಕೆ ಕೆಟ್ಟ ವರಾದದ್ದು—ಎಂಬ ನೆಪವನ್ನು ಮನದ ಸಮಾಧಾನಕ್ಕಾಗಿ ತಂದುಕೊಟ್ಟಿತು. ಧನಿಯ ಮನಸ್ಸನ್ನು ನಾಲ್ಕು ದಿನ ಕಟ್ಟಿ ಹಿಡಿದೆನಾದರೆ, ತುಕ್ರನ ಪ್ರಭಾವ ವನ್ನು ತಗ್ಗಿಸುತ್ತೇನೆ—ಎಂಬ ಆಸೆಯು ಕುಡಿಯೂ ಮೊಳೆಯಿತು. ಮನದಲ್ಲಿ ಇಂಥೆಲ್ಲ ಸ್ವಪ್ನಗಳನ್ನು ಹೊತ್ತುಕೊಂಡು, ಮರುದಿನ ಕುಮರಿಯ ಕಡೆಗೆ ಹೋಗಲಿಲ್ಲ. ಬದಲು ಏಡಿ, ಸಿಗಡಿಗಳ ಅನ್ವೇಷಣೆಗೆ ತೊರೆಯ ಕಡೆಗೆ

ಹೊರಟಳು. ಬೇಟೆಯಾಡಿ, ನೀರಲ್ಲಿ ಮುಳುಗಿ, ಹಿಂದಣ ದಿನಗಳ ಸುಖಗಳನ್ನೆಲ್ಲ ನೆನೆದು, ಮಿಂದು, ಬಂಡೆಯ ಮೇಲೆ ಕುಳಿತು ಹೂ ಮುಡಿದು, ಕಾಲು ಚಾಚಿ ಕುಳಿತಳು; ಬೆಟ್ಟ ಬಾನುಗಳನ್ನು ನೋಡುತ್ತ ಸಮಯ ಕಳೆದಳು. ಭಟ್ಟರು ಬಂದರೇನು? ಇನ್ನೊಮ್ಮೆ, ತಿಮ್ಮ ಬಂದರೇನು?—ಎಂದು ಎಣಿಕೆಹಾಕುತಿತ್ತು ಮನಸ್ಸು. ಹೊತ್ತು ತಿರುಗಿತು; ಭಟ್ಟರು ಬಾರದಿದ್ದುದಕ್ಕಾಗಿ, ತಾನು ಬದನಿಕೆ ಹೂಗಳನ್ನು ಮುಡಿದ ಚೆಲುವು ನೋಡಲು ಇಲ್ಲದುದಕ್ಕಾಗಿ, ನಿಟ್ಟುಸಿರು ತೆಗೆದಳು. ಕೊನೆಗೆ ಅದೂ ಒಳಿತೇ—ಎಂದು ತೋರಿತು. ಅನಂತರ ಏನಾದರೊಂದು ಅಪೂರ್ವದ ಒಡವೆ ಕಿತ್ತುಕೊಂಡು ಧನಿಗಳ ಮನೆಗೆ ಹೋಗಿ ಕೊಡುವ ನೆಪ ಹೂಡಬೇಕೆಂದು ಎಣಿಕೆಹಾಕಿದಳು.

ನಿಜಕ್ಕೂ ಭಟ್ಟರಿಗೆ ಆ ದಿನ ಹಿಂದಣ ದಿನದ ಘಟನೆಯಿಂದಾಗಿ, ತೊರೆಯ ಬಳಿಗೆ ಕಾಲಿರಿಸಲು ಸಾಹಸವಾಗಲಿಲ್ಲ. ಮಾತ್ರವಲ್ಲದೆ, ಆ ದಿನ ಅವರು ಹಿಂದಿನಂತೆ ಸಂಚಾರಕ್ಕೆ ಹೊರಡಲಿಲ್ಲ. ಆ ದಿನ ಹೊರಟವನೆಂದರೆ, ತಿಮ್ಮ. ಬೇಟೆ ಉರುಳುಗಳ ನೆಪ—ಅವನಿಗಂತು ಇದ್ದೇ ಇದೆಯಲ್ಲ. ಕುಮರಿಯ ಹೊಲ ಸುತ್ತಾಡಿ, ಕಾಡೆಲ್ಲ ಅಲೆದು, ಮೀಯುವ ನೆಪದಿಂದ ತೊರೆಗೆ ಬಂದ. ಬಂಡೆಯ ಮೇಲೆ ಕುಳಿತ. ಕೆಂಪಿ ಕಾಣಿಸದಿರುತ್ತಾಳೆಯೇ! ಎಂದಿಗಿಂತ ನೂರ್ಮಡಿ ಚೆಲುವೆಯಾಗಿ ಕಾಣಿಸಿದಳು ಆ ದಿನ. ಆದರೂ ಮನಸ್ಸಿನಲ್ಲಿ ಕೆರಳಿದ ಆಸೆಗಳಿಂದಾಗಿ ತಿಮ್ಮಗೆ ಮಾತು ಗಂಟಲನ್ನು ಹಿಡಿಯಿತು. ತನ್ನಷ್ಟಕ್ಕೆ ಮಿಂದು, ಮೈ ಒಣಗಿಸಿಕೊಂಡು, ಕತ್ತಿ ಸವೆಯುವಷ್ಟು ಭರದಿಂದ, ಅದನ್ನು ಬಂಡೆಯೊಂದರ ಮೈಮೇಲೆ ಮಸೆಯುತ್ತ ಕುಳಿತ. ಕೆಂಪಿಗೂ ಆ ಕಾರುಭಾರ ತಿಮ್ಮನದೇ ಎಂದನಿಸಿತು. ಈ ಕದಿಮ, ತಮ್ಮನ್ನೇ ಹೊಂಚುಹಾಕುತ್ತಿದ್ದಾನೆ—ಎಂಬುದು ಸ್ಪಷ್ಟವಾಯಿತು. ಆದುದರಿಂದ ಸರಸರನೆ ಎದ್ದು ಹೊರಟಳು—ಅಲ್ಲಿಂದ. ಈಚೆ ಬರುವಾಗಲೂ, ಕತ್ತಿಯನ್ನು ಮಸೆಯುತ್ತಲೇ ಇದ್ದ ತಿಮ್ಮ. ನಕ್ಕು ನುಡಿದಳು ಕೆಂಪಿ. "ಏನಣ್ಣ, ಕತ್ತಿ ಸವೆಯುತ್ತದೋ, ಕಲ್ಲು ಸವೆಯುತ್ತದೋ ಎಂದು ನೋಡುತ್ತಿಯಾ?" ಎಂದು ಕೇಳಿದಳು. "ಯಾರು, ನೀನೇ? ಇವತ್ತೇನು ಹಬ್ಬವೇ? ಕಾಡಿನ ಹೂ ಒಂದೂ ಬಿಡಲಿಲ್ಲ" ಎಂದು ಪ್ರತಿಹಾಸ್ಯ ಮಾಡಿದ ತಿಮ್ಮ. ಅವಳ ಬೆಡಗಿಗೆ ಮನಸೋತು ಮಾತನಾಡಿದರೆ ತನ್ನ ಉದ್ದೇಶ ಸಫಲವಾಗದೆಂದು ಮರುಕ್ಷಣ

ಮನಗಂಡು "ಅದಿರಲಿ ಕೆಂಪಿ, ನಾನೊಂದು ಕೇಳುತ್ತೇನೆ. ಆಣೆ ಮಾಡಿ ಹೇಳುತ್ತೇನೆ—ಯಾರಿಗೂ ಹೇಳುವುದಿಲ್ಲ" ಎಂದ. ಕೆಂಪಿಯ ಎದೆ ನಡುಗ ಧಿದ್ದೀತೇ. "ಏನಣ್ಣ ಅದು?" ಎಂದಳು ಅವಳು ತಡವರಿಸಿ. ತಿಮ್ಮ ಕೇಳಿದ—

"ನಿನ್ನೆ ನೀನು ಯಾಕೆ ಕೂಗಿದ್ದು ಹೇಳು. ನಾನು ನೋಡುತ್ತ ಇದ್ದೆನಲ್ಲ" ಎಂದ ಆತ. ಕೆಂಪಿಗೆ ಆತನೊಡನೆ ಸುಳ್ಳಿನ ಮಾಲೆ ಹೆಣೆದು ತಪ್ಪಿಸಿಕೊಳ್ಳುವ ದಾರಿ ಕಾಣಲಿಲ್ಲ ಕಂಡವರನ್ನು ಚಮತ್ಕಾರದ ಸುಳ್ಳಿನಿಂದ ಮೋಸಗೊಳಿಸಲಾರೆ—ಎಂದು ಗೊತ್ತಾಗಿ, ಮುಂದಿನ ಮಾತು ಹೊರಡದ್ದಕ್ಕೆ "ಕೂಗಿದೆ—ನಾನೇ!" ಎಂದಳು. ಮರುಕ್ಷಣಕ್ಕೆ ತಾನು ಹಾಗೆ ಕೂಗಿದ್ದೊಳಿತಾಯಿತೆಂದೂ ತೋರಿತು.

"ಕೂಗಿದ್ದನ್ನೂ ಕೇಳಿದೆ. ನೀನು ಓಡಿದ್ದನ್ನೂ ನೋಡಿದೆ. ಹಾಗೆಯೇ ಅಲ್ಲಿದ್ದ ಧನಿಗಳನ್ನೂ ನೋಡಿದೆ."

"ಹಾಗಾದರೆ ಗೊತ್ತಿದ್ದೇ ಕೇಳುವವ ನೀನು; ಕಂಡೇ ಕೇಳುವವ ನೀನು. ಹಾಗಿದ್ದರೆ ನಾನು ಹೇಳುವುದೇನುಂಟು?"

"ಧನಿಗಳು ನಿನ್ನನ್ನು ತಡೆದರೇ—ಇರಬೇಕು—ಇರಬೇಕು. ನಿನ್ನೆ ಮೊನ್ನೆಯೆಲ್ಲ ಕುಮರಿ ಹೊಲ ಅವರು ಸುತ್ತಾಡುವುದನ್ನು ಕಂಡು, ನನಗೆ ಅನುಮಾನವಾಯಿತು."

ಹಾಗೆ ಹೇಳಿದ ಮೇಲಂತು ಆಕೆಗೆ ಇನ್ನಷ್ಟು ಎದೆಯುಳುಕು ಬಂದಿತು. ಅದನ್ನು ತೋರಿಸಿಕೊಳ್ಳದೆ "ಧನಿಗಳನ್ನು ನೀನು ಬಲ್ಲೆ. ನನಗೆ ಕಂಡು ಗಾರಿಯಾಯಿತು, ಕೂಗಿದೆ. ಆಮೇಲೆ ಓಡಿದೆ. ಮತ್ತೇನು ಮಾಡುವುದು? ಅವರು ನಾನು ಹೋದಲ್ಲಿಗೆ ನನ್ನನ್ನು ಹುಡುಕಿಕೊಂಡು ಬಂದರೆ.... ಹೋಗಲಿ ಬಿಡು. ನಾಲ್ಕು ಮಂದಿಯ ಕಿವಿಗೆ ಈ ಸುದ್ದಿ ಹಾಕಿ ಇಲ್ಲದ ರಂಪ ಮಾಡಬೇಡ" ಎಂದು ಪ್ರಾರ್ಥಿಸಿದಳು.

ಮುಂದೆ ಮಾತನಾಡುವ ದಾರಿ ತಿಳಿಯದೆ ತಿಮ್ಮನೆಂದ: "ಓಹೋ ಹಾಗೋ, ನೀನು ನನ್ನ ಮಾತು ಕೇಳುತ್ತೀಯಾ? ಇನ್ನೊಮ್ಮೆ ನಿನ್ನ ತೊಂದರೆಗೆ ಬಂದರೆ ಅವರನ್ನೊಂದು ದಿನ ಬಲಿ ಹಾಕಿದರೂ ಹಾಕುವ."

"ಬೇಡ ಮಹಾರಾಯ; ದೊಡ್ಡವರ ಮಾತು. ಅಷ್ಟಕ್ಕೇ ಬಿಡು

ವುದು ಒಳ್ಳೆಯದು" ಎಂದಳು ಆಕೆ. ಅನಂತರ ಹೊತ್ತಾಯಿತೆಂದು ಹೊರಟು ಹೋದಳು. ಮುಂದಿನ ಹಂಚಿಕೆ ಏನೆಂದು ತಿಳಿಯದ ತಿಮ್ಮ, ಮಾತಿಗೆ ಬೇರೆ ವಿಷಯ ಕಾಣದೆ, ಅಲ್ಲಿಯೇ ಕೆಲವು ಹೊತ್ತು ನಿಂತು, ಎಲೆ ಅಡಿಕೆ ಮೆಲ್ಲುತ್ತ ಸಮಯ ಕಳೆದು, ತನ್ನ ಕೇರಿಯ ಕಡೆಗೆ ಹೊರಟ.

ಮುಂದಣ ಎರಡು ಮೂರು ದಿನಗಳ ಕಾಲ, ನಿತ್ಯದಂತೆಯೇ ತೊರೆಯ ತಡಿಗೆ ಕೆಂಪಿ ಹೋದರೂ ಆಕೆಗೆ ಯಾರ ಭೇಟಿಯೂ ಆಗಲಿಲ್ಲ. ಧನಿಗಳನ್ನು ಕಾಣುವ ಆತುರ, ಎಚ್ಚರವಾಗಿಯೇ ಇರಬೇಕೆಂಬ ಆತುರ— ಎರಡೂ ಮನದಲ್ಲಿ ತುಂಬಿದ್ದುವು. ಅದಕ್ಕಾಗಿ ದಾರಿ ಹುಡುಕುತ್ತಿದ್ದಳು. ಬೇರೇನೂ ಗೋಚರಿಸದ್ದಕ್ಕೆ ಬೆತ್ತಗಳನ್ನು ತಂದು, ಸೀಳಿ, ನಾಜೂಕಿನ ಬುಟ್ಟಿಯೊಂದನ್ನು ಹೆಣೆಯುತ್ತ ಮನೆಯಲ್ಲೇ ಕುಳಿತಳು. ಅದಕ್ಕೆ ಸಮನಾಗಿ ಆಕೆ ತಿಂಗಳಾಗುವ ದಿನ ಒದಗಿತು. ಕೇರಿಯ ಮುಟ್ಟಿನ ಮನೆಯಲ್ಲೇ ಕುಳಿತು, ಬುಟ್ಟಿ ಹೆಣೆಯುತ್ತಲೇ ಆಕೆ ಇರಬೇಕಾಯಿತು. ಭಟ್ಟರು ಕೇರಿ ಸುಳಿದಾಡುತ್ತ, ಆಚೀಚೆ ಅಲೆದಾಡಿ, ಅಲ್ಲಿಗೂ ಬಂದರು. ಮಾತನಾಡುವ ನೆಪದಿಂದ ಅಲ್ಲಿಯೇ ಸಮೀಪದಲ್ಲಿ ಬೆಳೆದ ನಿಂಬೆಯ ಗಿಡವೊಂದನ್ನು ಕಂಡು "ತುಂಬ ಕಾಯಾಗಿದೆ; ಯಾರು ನಟ್ಟದ್ದೋ" ಎಂದರು. ಕೆಂಪಿ ಕಣ್ಣರಳಿಸಿ "ನಮ್ಮದೇ" ಎಂದಳು. ಆಚೀಚೆ ಯಾರೋ ಸರಿದುಹೋದುದು ಕಾಣಿಸಿದುದರಿಂದ, ಅಲ್ಲಿಂದ ಭಟ್ಟರು ತೊಲಗಬೇಕಾಯಿತು. ನಾಲ್ಕು ದಿನ ಕಳೆದ ಮೇಲೆ ಕೆಂಪಿ, ಅದೇ ಬೆತ್ತದ ಬುಟ್ಟಿಯ ಕೆಲಸ ಮುಗಿಸಿಕೊಂಡು, ಅದರಲ್ಲಿ ತುಂಬ ನಿಂಬೆಯ ಹಣ್ಣುಗಳನ್ನು ಇರಿಸಿಕೊಂಡು, ಧನಿಗಳ ಮನೆಗೆ ಹೋದಳು. ಧನಿಗಳು ಚಾವಡಿಯಲ್ಲಿ ಚಾಪೆ ಹಾಸಿ, ಒಂದು ದಿಂಬಿಗೆ ಒರಗಿಕೊಂಡು, ಎಲೆ ಅಡಿಕೆ ಮೆಲ್ಲುತ್ತಿದ್ದರು. ಆಗ ಕೆಂಪಿ ನಿಂಬೆಹಣ್ಣಿನ ಬುಟ್ಟಿಯನ್ನು ಅವರ ಎದುರಿಗೆ ತಂದಿರಿಸಿದಳು. ತುಂಬಾ ಸಂತೋಷವಾಯಿತವರಿಗೆ. ಆಚೀಚೆ ನೋಡಿದರು; ಯಾರೂ ಇದ್ದಿರಲಿಲ್ಲ. ಮೆಲುಧ್ವನಿಯಿಂದ "ಆ ದಿನ ಯಾಕೆ ಕೂಗಿದಿ?" ಎಂದು ಕೇಳಿದರು. "ಯಾರೋ ಇದ್ದದ್ದು ಕಾಣಿಸಿತು—ಅದಕ್ಕೆ" ಎಂದಳು ಕೆಂಪಿ. ಭಟ್ಟರು ನಕ್ಕರು.

"ಹೂಂ, ನೀನು ಬುದ್ಧಿವಂತೆ! ಹೌದು—ಆ ಶನಿ ತಿಮ್ಮ ಅಲ್ಲೆಲ್ಲೋ ಇದ್ದನೆಂದು ಕಾಣುತ್ತದೆ" ಎಂದರು. ಮುಂದೆ ಏನೋ ಯೋಚಿಸಿದವರಂತೆ

"ಮನೆಗೆಲಸಕ್ಕೆ ಯಾರಿಲ್ಲ. ಅವಳು ಒಂದೆರಡು ದಿನ ಬರುತ್ತಿದ್ದು, ಜ್ವರ ಎಂದು ಮಲಗಿರಬೇಕು. ಒಂದು ನಾಲ್ಕು ದಿನ ನೀನೇ ಬಂದುಹೋಗು" ಎಂದು ಅಪ್ಪಣೆ ಕೊಡಿಸಿದರು. ಕೆಂಪಿ ಇಂಗಿತ ಅರಿತವಳಂತೆ ಕಂಡರೂ— ಪ್ರತ್ಯುತ್ತರ ಸಲ್ಲಿಸಲಿಲ್ಲ. ತಿಮ್ಮನ ಭಯ ಅವಳಿಗೆ ಉಂಟಾಗಿತ್ತು. ತಿಳಿದು ತಿಳಿದೂ ತಾನೇ ಅಲ್ಲಿಗೆ ಹೋಗುತ್ತಿದ್ದೇನೆ ಎಂದರೆ, ಅವನ ಬಾಯಿಗೆ ಬೀಳ ಬೇಕಾಗುತ್ತದೆ—ಎಂದು ತೋರಿ "ಅವರಿಗೆ ಹೇಳಿ. ಅವರೇ ಹೇಳಲಿ" ಎಂದು ಸೂಚನೆ ಕೊಟ್ಟು ಹೊರಟುಹೋದಳು. ಆ ಸಂಜೆಯೇ ಭಟ್ಟರು ತುಕ್ರನನ್ನು ಕೆಲಸದಮೇಲೆ ದೂರದ ಉಪ್ಪಿನಂಗಡಿಗೆ ಕಳುಹಿಸಿದರು. ಕಳುಹಿಸಿ, ಆಮೇಲೆ ಬೂದನನ್ನು ಕರೆಯಿಸಿ, ನಾಲ್ಕು ಸವಿಯಾದ ಮಾತುಗಳ ನ್ನಾಡಿ, ಎಲೆ ಅಡಿಕೆ ಹೊಗೆಸೊಪ್ಪುಗಳನ್ನು ಕೊಟ್ಟು "ಹೌದೋ ಬೂದ, ನೀರಿಗೆ, ಮುಸುರೆಗೆ ಬರುತ್ತಿದ್ದ ಕೊರಪುಳು—ಯಾಕೋ ಬರಲಿಲ್ಲ. ಒಂದು ನಾಲ್ಕು ದಿನಕ್ಕೆ ಯಾರನ್ನಾದರೂ ಕಳುಹಿಸು" ಅಂದರು.

"ಆಯಿತು ಒಡೆಯ" ಎಂದು ನುಡಿದ ಬೂದ. ಭಟ್ಟರು ಬೂದನನ್ನು ಒಲಿಸುವ ಪ್ರಯತ್ನ ಮಾಡುವವರಂತೆ, "ಏನು ಬೂದ, ಈಗ ನಿಮ್ಮ ಇಷ್ಟ ದಂತೆ ಆಯಿತಲ್ಲ. ದೈವದ ಮಾತು, ನಿಮ್ಮ ಮಾತು ಒಂದೇ ಆಯಿತು. ನನಗೆ ಕರಿಯ ಗುರಿಕಾರನಾಗುವುದು ಬೇಡ ಅಂತಿರಲಿಲ್ಲ. ಅವನು ಗುರಿಕಾರ ನಾಗಬೇಕಾದದ್ದೂ ನ್ಯಾಯ. ಆದರೆ ನೋಡು, ಅವನು ತೀರ ಸಣ್ಣವ. ಚನಿಯ ಅಂಥ ಆಳೇನೂ ಅಲ್ಲ; ಅಂಥ ಬುದ್ಧಿವಂತನೂ ಅಲ್ಲ. ತುಕ್ರನಿಗೂ ಅವನಿಗೂ ಸಮವೇ" ಎಂದರು.

"ಒಟ್ಟಾರೆ ಧನಿಗಳ ಮನಸ್ಸಿಗೆ ಬೇಸರ ಬರುವ ಕೆಲಸ ಒಂದು ನಡೆದ ಹಾಗಾಯಿತು. ಹಾಗಾಗಬಾರದಿತ್ತು. ಆದರೆ ಒಡೆಯ, ನಿಮ್ಮ ಮೇಲಿನ ಬೇಸರದಿಂದ ನಾವು ಯಜಮಾನಿಕೆ ಚನಿಯನಿಗೆ ಕೊಟ್ಟದ್ದೂ ಅಲ್ಲ. ತುಕ್ರ ನಿಗೇ ಅದು ಬರುತ್ತಿರಲೂಬಹುದು. ಆದರೆ ಅವನು ಆ ದಿನ ಕೂಟದಿಂದ ತಪ್ಪಿಸಿಕೊಂಡಿದ್ದ. ನಿಮ್ಮನ್ನು ಕರಕೊಂಡು ಬರುವ ಮೊದಲು 'ತಡಿಯಿರಿ ನಾಲ್ಕು ದಿನ' ಎಂದಿದ್ದರೆ ನಾವು ತಡೆಯುತ್ತಿರಲಿಲ್ಲವೇ? ಅವನು ನಿಮ್ಮಲ್ಲಿಗೆ ಹೋದದ್ದು ನಮಗೆ ಗೊತ್ತಾಗದಿದ್ದುದರಿಂದ ಹಾಗಾಯಿತು. ಅಲ್ಲದೆ, ತುಕ್ರನನ್ನು ಕಂಡರೆ ಜನಕ್ಕೆ ಅಷ್ಟೊಂದು ಒಳ್ಳೆಯದೂ ಇಲ್ಲ."

“ಅದು ನಿಜ. ಆದರೆ ನೋಡು—ಕೆಲಸದಲ್ಲಿ ಆತ ಬುದ್ಧಿವಂತ. ನನಗೂ ನಿಮ್ಮ ಕಟ್ಟುಕಟ್ಟಳೆಗಳೆಲ್ಲ ಏನು ಗೊತ್ತು? ಗೊತ್ತಿಲ್ಲದೆ ಆ ದಿನ ಸಿಟ್ಟಾದೆ. ಆಮೇಲೆ ನನಗೇನೆ ಬೇಸರವಾಯಿತು. ಈಗ ನಿಮ್ಮಿಷ್ಟದಂತೆಯೇ ಆಯಿತಲ್ಲ. ಆದರೆ ನೋಡು ಬೂದ, ಗುರಿಕಾರರು ಯಾರೇ ಇರಲಿ. ತೋಟದ ಏಲಕ್ಕಿ ಕದ್ದು ಹೋದದ್ದು ಮಾತ್ರ ತಪ್ಪಾಗದೆ ಉಳಿಯಿತು. ಮುಂದಿನ ವರ್ಷಕ್ಕೆ ಜಾಗ್ರತೆ ನೋಡಿಕೊಳ್ಳಬೇಕು.”

“ಕದ್ದು ಹೋದದ್ದೇ ನಿಜ ಅನ್ನುತ್ತೀರಾ? ತುಂಬಾ ಏಲಕ್ಕಿ ಹಿಡಿದಿತ್ತು; ಒಳ್ಳೆ ಬೆಳೆ ಬಂದೀತೆಂದು ನನಗೆ ಅನಿಸಿತ್ತು. ಆದರೆ ಏನು ರೋಗ ಬಂತೋ, ಉದುರಿತೋ ಯಾರು ಬಲ್ಲರು?”

“ಇಲ್ಲ. ಅದು ಕದ್ದು ಹೋದದ್ದು ಖಂಡಿತ.”

“ಕದ್ದರೆ ಯಾರಿಗೆ ಮಾರುತ್ತಾರೆ? ಮಾರುವುದಾದರೆ ಮೂಲೆಗುಂಪಿಗೆ ತೆಗೆದುಕೊಂಡು ಹೋಗಬೇಕು. ಮಾರಿದರೆ ನಾಲ್ಕು ಜನರ ಕಿವಿಗೆ ಆ ಸಂಗತಿ ಬೀಳುವುದಿಲ್ಲವೇ? ಹಸಿ ಏಲಕ್ಕಿ ಎಲ್ಲಿಂದ ಬಂತೆಂದು ಯಾರಾದರೂ ಕೇಳಲಾರರೇ? ಕದ್ದು ಹೋದದ್ದು ನಿಜವಾದರೂ ಈ ಕೇರಿಯವರು ಅಂಥ ಕೆಲಸ ಮಾಡಿರಲಾರರು.”

“ಹಾಗೆ ನನಗೂ ಅನಿಸುತ್ತದೆ. ಆದರೆ ದೂರದಿಂದ ಬೇರೆ ಯಾರು ಬರುವವರು? ಮಕ್ಕಳಾಟಿಕೆಯೋ ಏನೋ.”

“ಬರುವ ವರ್ಷ ಒಡೆಯ, ನಾಲ್ಕು ಕಡೆಗೂ ಮುಟ್ಟಿಸು ಮಾಡಿ ಕಟ್ಟಿದರಾಯಿತು. ಕದ್ದವರು ರಕ್ತ ಕಾರಿ ಸಾಯುತ್ತಾರೆ; ಅಂಥವರಿಗೆ ಹಾಗೆಯೇ ಆಗಬೇಕು.”

ಬೂದನ ಮನಸ್ಸು ಧನಿಗಳ ನಯದ ಮಾತುಗಳಿಂದ, ತುಂಬ ಸಂತೋಷ ತಾಳಿತು. ಹಾಗೆಲ್ಲ ಅವನನ್ನು ಕರೆದು ಮಾತನಾಡಿಸಿದವರಲ್ಲ. ಅದೂ ಶುಕ್ರ ಬಳಿಯಲ್ಲಿದ್ದರೆ ಎರಡಕ್ಕಿಂತ ಹೆಚ್ಚಿಗೆ ಮಾತನಾಡುವವರೇ ಅಲ್ಲ. ಆದರೆ ಇಂದು ಶುಕ್ರನಿಲ್ಲದ್ದಕ್ಕೋ, ಅಥವಾ ನಿಜವಾಗಿಯೂ ಅವರಿಗೆ ತನ್ನ ಮೇಲೆ ಅಭಿಮಾನ ಉಂಟಾದುದಕ್ಕೋ, ದೈವದ ವಾಣಿಯನ್ನು ಮುರಿಯ ಬಾರದೆಂದು ಧನಿಗಳಿಗೂ ಕಾಣಿಸಿದ್ದಕ್ಕೋ—ಅವರು ಒಲಿದರು—ಎಂದು ತಿಳಿದು ಬೂದ ಮನೆಗೆ ಹೋದ. ಮನೆಗೆ ಹೋದವನೇ ಕೆಂಪಿಯನ್ನು

ಕರೆದು " ಧನಿಯರು ಮನೆಯ ಕೆಲಸಕ್ಕೆ ಯಾರನ್ನಾದರೂ ಕಳಿಸು ಅಂದರು " ಎಂದ.

" ಯಾರನ್ನು ಕಳಿಸುವುದು ? " ಎಂದು ಮಾತು ತೆಗೆದಳು ಕೆಂಪಿ.

ಮನೆಯಲ್ಲಿರುವವರಿಬ್ಬರೇ ; ಬೇನೆಗೆ ಆಗಾಗ ತುತ್ತಾಗುವ ಅಕ್ಕ, ಗಟ್ಟಿಮುಟ್ಟಾದ ಕೆಂಪಿ. " ನನ್ನಿಂದೆಲ್ಲಾಗುತ್ತದೆ—ಆ ನೀರು ಹೊರುವ ಕೆಲಸ "—ಎಂದು ತಾಯಿ ನುಡಿದಳು. ಹೀಗಾಗಿ, ಬಯಸಿದುದಕ್ಕೆ ಸಮ ನಾಗಿ, ಗಂಡನ ಬಾಯಿಯಿಂದಲೇ ' ನೀನು ಹೋಗು ' ಎಂಬ ಅಪ್ಪಣೆ ಕೆಂಪಿಗೆ ದೊರೆಯಿತು. ಆವೊಂದು ವಾರ ಕಾಲ ಧನಿಯರು ಮಲೆಯಲ್ಲೇ ನೆಲೆಸಿದರು. ಅಷ್ಟು ದಿನವೂ ಕೆಂಪಿ ಅವರ ಮನೆಗೆ ಹೋಗಿ ಬರುತ್ತಿದ್ದಳು. ನೀರು, ಮುಸುರೆಗಳ ಕೆಲಸ ಅವಳಿಂದಲೇ ಸಾಗಿತು. ಬೂದನೊಡನೆ ಧನಿ ಗಳು ಅವಳ ವಿಚಾರದಲ್ಲಿ ಶಿಫಾರಸಿನ ಮಾತುಗಳನ್ನೇ ಆಡಿದರು. " ಕೆಲಸ ದಲ್ಲಿ ನಿನ್ನ ಹೆಂಡತಿ ಅಷ್ಟು ಚುರುಕೆಂದು ನನಗೆ ಗೊತ್ತೇ ಇರಲಿಲ್ಲ " ಎಂದೂ ಹೇಳಿದರು. ಆ ಹೆಮ್ಮೆಯಿಂದ ಹಿಗ್ಗಿ ಬೂದನೂ ಮನೆಗೆ ಬಂದ. ಧನಿಗಳು, ತುಕ್ರ ಕೇರಿಗೆ ಬಂದ ಮೇಲೆ, ಚಳಿಗಾಲ ಕಳೆದ ಮೇಲೆ ತಿರುಗಿ ಬರುವೆ ನೆಂದು ಹೇಳಿ ಸ್ವಗ್ರಾಮಕ್ಕೆ ತೆರಳಿದರು

ತಿಮ್ಮ ಆ ಒಂದು ವಾರ ಕಾಲ ನಿತ್ಯವೂ ತೊರೆಯ ಬಳಿಗೆ ಹೋಗಿ ಕೆಂಪಿ ಗಾಗಿ ಕಾದಿರುತ್ತಿದ್ದ. ಆಚೀಚೆ ಅಲೆದಾಡಿ ಅವಳನ್ನು ಹುಡುಕಾಡುತ್ತಿದ್ದ. ಅವಳನ್ನು ಇನ್ನೊಮ್ಮೆ ಗುಟ್ಟಾಗಿ ಕಂಡು, ಧನಿಗಳನ್ನು ಬೋನಿಗೆ ಕೆಡೆಯ ಬೇಕೆಂದು ಯೋಚಿಸಿ, ದಾರಿ ಹುಡುಕುತ್ತಿದ್ದ. ಹಾಗೆ ಕಾದದ್ದು ವ್ಯರ್ಥ ವಾಯಿತು. ಆ ದಿನಗಳಲ್ಲಿ, ಒಂದು ದಿನ ಕೆಂಪಿ ಚಿಲುಮೆಯ ನೀರನ್ನು ಧನಿಗಳ ಮನೆಗೆ ಹೊತ್ತು ಸಾಗಿಸುತ್ತಿದ್ದುದು ಆತಗೆ ಕಂಡಿತು. " ಏನು ! ಅಲ್ಲಿಯೇ ಕೆಲಸಕ್ಕೆ ಹೋಗುತ್ತಿದ್ದೀಯಾ ? " ಎಂದು ತಿಮ್ಮ ಅವಳನ್ನು ಕೇಳಿಯೇ ಬಿಟ್ಟ. ಅದಕ್ಕೆ ಕೆಂಪಿ ಬೇಸರ ನಟಿಸಿ, " ಅವರೇ ಹೇಳಿದರೆ ಏನು ಮಾಡ ಬೇಕು " ಎಂದಳು.

" ಅವರೇ, ಧನಿಗಳೇ ? "

" ಧನಿಗಳಲ್ಲ, ನಮ್ಮವರು."

" ಬೂದನೇ ? "

" ಹೂಂ."

" ನೀನು ಅವನಿಗೆ ಹೇಳಲಿಲ್ಲವೇ ನಡೆದ ಸಂಗತಿ ? "

" ಹ್ಯಾಗೆ ಹೇಳುವುದು ? "

" ಬೇಡ ಬಿಡು. ಹೇಳದಿದ್ದುದೇ ಒಳ್ಳೆಯದಾಯಿತು ; ನೀನು ಮನಸ್ಸು ಮಾಡಿದರೆ ಇದಕ್ಕೆಲ್ಲ ಮುದ್ದರೆಯಬಹುದು. ಇಂದೋ ನಾಳೆಯೋ ಅವರು ಹೋಗುತ್ತಾರೆ. ಹೋಗಲಿ. ಮುಂದಿನ ಸಾರಿ ಬರುವುದರೊಳಗೆ ಒಂದು ಉಪಾಯ ಹುಡುಕಿಸುವ " ಎಂದು ಬೋಧಿಸಿದ.

" ಏನು ಉಪಾಯವೋ ! " ಎಂದು ಬೇಸರದ ಮುಖ ಮಾಡಿ ಕೊಂಡು, ಕೆಂಪಿ ತನ್ನ ಕೆಲಸಕ್ಕೆ ಹೋದಳು ; ಉಪಾಯದ ದಾರಿ ಕಾಣದೆ, ತಿಮ್ಮನೂ ತನ್ನ ದಾರಿ ಹಿಡಿದ

## ಅಧ್ಯಾಯ ೧೦

ಕುಡಿಯರ ಕೇರಿಯೊಳಗೆ ಇಂದು ಅತಿ ಹೆಚ್ಚಿನ ಅಸಂತೃಪ್ತ ಜೀವಿಯೆಂದರೆ ತಿಮ್ಮನೊಬ್ಬನೇ—ಎಂದು ಕಾಣಿಸುತ್ತದೆ. ಇತರ ಸಮಸ್ಯೆಗಳು ಪರಿಹಾರವಾಗುತ್ತ ಬಂದರೂ ತಿಮ್ಮನ ಬದುಕಿನ ಸಮಸ್ಯೆ ಬಗೆಹರಿಯಲಿಲ್ಲ. ದೈವ, ತನ್ನ ಅಪ್ಪಣೆಯನ್ನು ಸಲ್ಲಿಸಿದ ಬಳಿಕ, ಗುರಿಕಾರತನದ ಬಗ್ಗೆ ಇದ್ದ ಅಸಮಾಧಾನಗಳೆಲ್ಲ ನಾಶವಾಗುತ್ತ ಬಂದುವು. ಯಾವ ಕಾರಣದಿಂದಲೋ, ತಮ್ಮ ಕೆಲಸಗಳ ಮಟ್ಟಿಗೂ ಕೇವಲ ತುಕ್ರನೊಬ್ಬನನ್ನು ಧನಿಗಳು ಕರೆದು ಹೇಳುವುದು ಕಡಿಮೆಯಾಗುತ್ತ ಬಂತು. ಹಾಗೆಂದು ತುಕ್ರ, ಅವರ ನೆಚ್ಚಿನ ಆಳಾಗಿ ವರ್ತಿಸುವುದೆಂದೂ ಕಡಿಮೆಯಾಗಲಿಲ್ಲ. ಈಗೀಗ ಅವರು ಹೆಚ್ಚಾಗಿ ಅವನನ್ನು ಮಲೆಯ ಹೊರಗಿನ ಕೆಲಸಗಳಿಗೆ ಕಳುಹಿಸಿ ಕೊಡುತ್ತಾರೆ. ಮೂಲೆಗುಂಪಿನ ಬಳಿಯಲ್ಲಿ, ಅವರದೇ ಭೂಮಿಯಲ್ಲಿ ಕಾಡಿನಲ್ಲಿ ಮರ ಕಡಿಯುವ ಕೆಲಸ, ನಾಟ ಸಾಗಿಸುವ ಕೆಲಸ ನಡೆಯುತ್ತಿದೆ. ಆ ಕೆಲಸಕ್ಕೆ ಹೆಚ್ಚಾಗಿ ತಮ್ಮ ಊರಿನಿಂದಲೇ ಆಳುಗಳನ್ನು ಬರಮಾಡಿಕೊಳ್ಳುತ್ತಿದ್ದರೂ, ಅವರ ಮೇಲಿನ ತನಿಖೆಗೆ ತುಕ್ರನನ್ನು ನೇಮಿಸಿದ್ದಾರೆ. ಹೀಗಾಗಿ ಈ ಬೇಸಿಗೆಯಲ್ಲಿ ಹತ್ತೆಂಟು ದಿನ ಕೂಡ ತುಕ್ರ ಮಲೆಯಲ್ಲಿರಲಿಲ್ಲ. ಧನಿಗಳು ಮಕರಸಂಕ್ರಾಂತಿ ಕಳೆದಮೇಲೆ, ಮಲೆಗೆ ಬಂದು, ಒಂದು ತಿಂಗಳ ಕಾಲವೇ

ಇದ್ದರು. ಮಲೆಯಲ್ಲೇ ಇದ್ದು, ದಿನ ಎರಡು ದಿನಗಳಿಗೊಮ್ಮೆ ನಾಲ್ಕಾರು ಮೈಲು ಬೆಟ್ಟವನ್ನು ಹತ್ತಿ, ಇಳಿದು, ಕಾಡಿನ ಕೆಲಸ ನೋಡಿಕೊಂಡು ಬರುತ್ತಿದ್ದ ಧನಿಗಳು ಮಲೆಯ ಮನೆಗೆ ಆಗಾಗ ಹೋಗಿ ಬರುತ್ತಿದ್ದರೂ ತುಕ್ರ ಅವರ ಜತೆಗೆ ಬರುತ್ತಿರಲಿಲ್ಲ. ಅವರು ಬೇಸಗೆಯಲ್ಲಿ ಮಲೆಯಲ್ಲಿರಬೇಕಾದ ಕೆಲಸವೂ ಅಷ್ಟೇನೆ. ಏಲಕ್ಕಿ ಜಮೀನನ್ನು ತುಸು ವಿಸ್ತರಿಸಬೇಕೆಂಬ ಆಸೆ ಇದ್ದುದರಿಂದ ಅಲ್ಲಿನ ಬೆಟ್ಟದ ಕೆಲವು ಭಾಗಗಳಲ್ಲಿ ಬೆಳೆದ ಮರದ ದಟ್ಟಣೆ ಕಡಿಮೆ ಮಾಡುವ ಕೆಲಸವಿತ್ತು. ಅದೊಂದು ಕೆಲಸವಾದರೂ ವೇಳೆ ತುಂಬುವ ಕೆಲಸವೇ. ಅಲ್ಲಲ್ಲಿ ನೆರಳು ಹೆಚ್ಚಾಗದಂತೆ ಮರಗಳನ್ನು ಕಡಿಸಬೇಕು. ಕಡಿದ ಮರದ ತುಂಡುಗಳನ್ನು ಕೇರಿಗೆ ಸಾಗಿಸಿ, ದಾಸ್ತಾನು ಮಾಡಿಸಬೇಕು. ಏಲಕ್ಕಿ ಒಣಗಿಸಲು ಎಷ್ಟು ಕಟ್ಟಿಗೆಯದ್ದರೂ ಸ್ವಲ್ಪವೇ. ಕಡಿದ ಕಟ್ಟಿಗೆ ದೂರದಲ್ಲಿದ್ದುದರಿಂದ, ಅದನ್ನು ಸಾಗಿಸುವ ಕೆಲಸ ಹೆಚ್ಚಾಗಿತ್ತು. ಹತ್ತೆಂಟು ಗಂಡಾಳುಗಳು ಸೇರಿ, ಈ ಕೆಲಸವನ್ನು ಮಾಡುತ್ತಿದ್ದರು. ಧನಿಗಳು ಇದಕ್ಕೆ ಬೇರೆ ಪಡಿಯನ್ನು ಗೊತ್ತುಮಾಡಿದ್ದರು. ಕುತೂಹಲ ವಹಿಸಿ, ಕೆಲಸ ಮಾಡುವಂತೆ ಅವರ ಯಜಮಾನಿಕೆಗೆ ಬೂದನನ್ನು ನೇಮಿಸಿ ಹೋಗಿದ್ದರು. ಹೀಗಾಗಿ ತುಕ್ರನ ಮಾತಿಗೆ ತಂಟೆ ತಕರಾರು ಎತ್ತುತ್ತಿದ್ದ ತಿಮ್ಮನಿಗೆ, ಬೂದನೊಡನೆ ಜಗಳ ಕಾಯುವ ಸಾಹಸವೂ ಇಲ್ಲ; ಇಷ್ಟವೂ ಇಲ್ಲ. ಅವನ ಮೇಲೆ ಅಸೂಯೆಯಿದ್ದರೆ ಆತ ಕೆಂಪಿಯ ಯಜಮಾನ ಎಂಬುದರಿಂದ ಮಾತ್ರ.

ಆದರೆ ನಡೆದ ಒಂದು ಪರಿವರ್ತನೆ ಮಾತ್ರ ಅವನ ಮನಸ್ಸನ್ನು ಕೆರಳಿಸುವಂಥದ್ದಾಗಿತ್ತು. ಹಿಂದೆ ಧನಿಗಳು ಬಂದಾಗ, ನಾಲ್ಕು ದಿನ ಕೆಂಪಿ ಅವರ ಮನೆಯ ಚಾಕರಿಗೆ ಹೋಗಿ ಬಂದದ್ದೇ ಅವನಿಗೆ ತುಂಬ ಅಸಮಾಧಾನ ಉಂಟುಮಾಡಿತ್ತು. ಆದರೆ ಮಕರಸಂಕ್ರಾಂತಿ ಕಳೆದಮೇಲೆ, ಧನಿಗಳು ಇನ್ನೊಮ್ಮೆ ಬಂದಾಗ, ಇನ್ನೂ ಆಕೆಯೇ ಧನಿಗಳ ಮನೆಯ ಕೆಲಸಗಳಿಗೆ ಹೋಗುತ್ತಿದ್ದುದನ್ನು ಕಂಡು, ಮೊದಲೇ ಹುಟ್ಟಿದ ಅವನ ಅಸಮಾಧಾನ ಇನ್ನಷ್ಟು ಬಲವಾಯಿತು. ಧನಿಗಳ ಮೇಲೆ ಹೇಗೂ ಸಿಟ್ಟೇ ಇದ್ದಿತು. ಕೆಂಪಿ ಸಂಭಾವಿತಳಿರಬಹುದು—ಎಂಬ ಅವನ ಊಹೆ, ಈಗ ನಿರ್ನಾಮವಾಯಿತು. ಈ ಬಾರಿ ಆತ 'ಅಲ್ಲಿಗೇಕೆ ನೀನು ಚಾಕರಿಗೆ ಹೋಗುತ್ತೀ?' ಎಂದು

ಕೇಳುವುದಕ್ಕೆ ಹೋಗಲಿಲ್ಲ. ‘ ಹೋಗಬಾರದು ’ ಅನ್ನುವುದಕ್ಕೆ ಅವನ್ಯಾರು ? ‘ ಹೋಗುವುದು ತರವಲ್ಲ ’ ಎಂದು ಅವಳಿಗೇನೇ ತಿಳಿದಿರಬೇಕಾದ ವಿಷಯ. ಹೀಗಿದ್ದರೂ ಆಕೆ ಹೋಗುತ್ತಿರುವುದನ್ನು ಕಂಡು, ಅವಳು ತಾನಾಗಿಯೇ ಧನಿಯ ಬಲಿಗೆ ಬಿದ್ದಳು—ಎಂಬ ತರ್ಕಕ್ಕೆಡೆಕೊಟ್ಟ. ಅದು ಅಸಮಾಧಾನದ ವಿಷಯುವಾದರೂ, ಅದರಿಂದ ಆಕೆ ಸುಲಭಸಾಧ್ಯ ವ್ಯಕ್ತಿ—ಎಂಬ ಆಸೆಯೂ ಅದರ ಜತೆಗೆ ಮೂಡದೆ ಹೋಗಲಿಲ್ಲ. ಬೂದನ ಮನೆಗೆ ಅವನು ಮೊದಲಿಗಿಂತ ಹೆಚ್ಚಾಗಿ ಬಂದು ಹೋಗತೊಡಗಿದನು. ಅದಕ್ಕೆ ಕರಿಯಣ್ಣನ ಮೇಲಿನ ಗೌರವ ಮಾತ್ರ ಕಾರಣವಲ್ಲ; ಕೆಂಪಿಯನ್ನು ಮಾತನಾಡಿಸುವ ಚಪಲವೂ ಸೇರಿತ್ತು. ಮನೆಗೆ ಹೋದಾಗ ಕೆಂಪಿ ಅವನೊಡನೆ ಸಂಭಾಷಣೆಗೆ ಕಡಿಮೆ ಮಾಡುತ್ತಿರಲಿಲ್ಲ. ಹಾಗೆಂದು ತಿಳಿದು, ಅವಳೆಲ್ಲಾದರೂ ನೀರಿಗೆ ಹೋದಾಗ, ಕಾಡಿಗೆ ಹೋದಾಗ ಅವನು ಅವಳನ್ನು ಮಾತನಾಡಿಸಿದರೆ ಸಲಿಗೆ ಇಲ್ಲದವಳಂತೆಯೇ ವರ್ತಿಸುತ್ತಿದ್ದಳು. ಧನಿಗಳು ಮಲೆಯಲ್ಲಿರುವಾಗ ಅವರ ಮನೆಯ ಚಾಕರಿ ಅವಳ ಎಲ್ಲ ವೇಳೆಯನ್ನೂ ತಿನ್ನುತಿದ್ದುದರಿಂದ ಆಕೆ ತೊರೆಯ ಬಳಿಯಲ್ಲಿ ಹೆಚ್ಚು ಸಮಯ ಕಳೆಯುತ್ತಿರಲಿಲ್ಲ. ಬಿಡುವಿನಲ್ಲಿ ಅವಳನ್ನು ಕಾಣುವ ಅವಕಾಶವೂ ತಿಮ್ಮನಿಗೆ ಸಾಕಷ್ಟು ಆಗುತ್ತಿರಲಿಲ್ಲ. ಆದರೆ ಅವನ ಮನಸ್ಸಿನಲ್ಲಿ ಮಾನಕ್ಕಾಗಿಯಾಗಲೀ, ದುಮ್ಮಾನಕ್ಕಾಗಿಯಾಗಲೀ ‘ ತನಗೆ ಇಷ್ಟು ವರ್ಷ ಸಂದರೂ, ಒಂದು ಹೆಣ್ಣೂ ಒಲಿಯದೆ ಹೋಯಿತಲ್ಲ ’—ಎಂಬ ಕಿಚ್ಚು ಮಾತ್ರ ದಿನೇ ದಿನೇ ಹೆಚ್ಚುತ್ತಲಿತ್ತು.

ಮಕರಸಂಕ್ರಾಂತಿ ಕಳೆದ ಎರಡು ತಿಂಗಳಿಗೆ ಮೂಲೆಗುಂಪಿನ ದೇವಾಲಯದ ಜಾತ್ರೆ ಜರಗುತ್ತದೆ. ಕೇರಿಗೆ ಕೇರಿಯೇ ಆ ಜಾತ್ರೆಗೆ ಹೋಗುತ್ತದೆ. ಅಲ್ಲದೆ ಆ ವೇಳೆಗೇನೆ ಧನಿಯರು, ತಮ್ಮ ಆಳುಗಳಿಗೆ ಹೊಸ ಹಚ್ಚಡಗಳನ್ನು ತೆಗೆಯಿಸಿಕೊಡುವ ವಾಡಿಕೆ. ಅದಕ್ಕೆ ತಿಮ್ಮ ಹೋಗದಿರುತ್ತಾನೆಯೇ? ಆತನೂ ಈ ವರ್ಷ ಹೋಗಿದ್ದಾನೆ. ತನ್ನ ವ್ಯಕ್ತಿಪ್ರತಿಷ್ಠೆ ಬೆಳೆಯಿಸಿಕೊಳ್ಳುವುದಕ್ಕೆಂದು, ಈಗೀಗ ಹೊಸ ಗುರಿಕಾರ ಕರಿಯಣ್ಣನನ್ನು ಹಿಂಬಾಲಿಸುವುದು, ಅವನಿಗೆ ಆಗಾಗ ಆತ ಉಪದೇಶ ಮಾಡುವುದೂ ಹೆಚ್ಚು. ಕ[illegible]ಯನ ಸಂಗಾತಿ—ಕಾಳ, ಯಾವಾಗಲೂ ಅವನ ಜತೆಗೇ ಅಂಟಿಕೊಂಡಿರುವವ. ಇಬ್ಬರಿಗೂ ಸಮವಯಸ್ಸು, ಬಹುಕಾಲದ ಒಡನಾಟದಲ್ಲಿ ಇಬ್ಬರೂ ಬೆಳೆದ

ವರು. ಕರಿಯ ಒಂಟಿಯಾಗಿರುತ್ತಲಿಲ್ಲ—ಎಂಬುದು ತಿಮ್ಮನ ವ್ಯಥೆ. ಒಂಟಿಯಾಗಿದ್ದರೆ, ತನಗೆ ಬೇಕಾದಂತೆ ಅವನ ಮನಸ್ಸನ್ನು ತಿರುಗಿಸಿಕೊಂಡು, ನಾಳೆಗಾದರೂ ಯಜಮಾನನ ಬೆಂಗಾವಲಾಗಿ ಮೆರೆದಾಡುತ್ತೇನೆ—ಎಂಬ ಆಸೆಗೂ ಅವಕಾಶ ಸಾಕಷ್ಟು ದೊರೆಯುತ್ತಿರಲಿಲ್ಲ. ಆದರೂ ತನ್ನ ಹಿರಿತನ ತೋರಿಸಲು, ಇದ್ದ ಅವಕಾಶ ಬಿಡಬಾರದೆಂದು ಕರಿಯನ ಬೆಂಗಾವಲಾಗಿ ಆತ ತಿರುಗಾಡುವುದು ರೂಢಿಯಾಗಿದೆ. ಹೀಗಾಗಿ, ಜಾತ್ರೆಗೆ ಅವನ ಹಿಂದೆಯೇ ಹೋದನು.

ಜಾತ್ರೆಯಲ್ಲಿ ಆಚೀಚಿನ ನಾಲ್ಕಾರು ಮಲೆಗಳ ಕುಡಿಯರೆಲ್ಲರು ಸೇರುತ್ತಾರೆ. ಜಾತ್ರೆಯ ಎರಡು ಮೂರು ದಿನ ಅಲ್ಲಿಯೇ ಇರುತ್ತಾರೆ. ತೊರೆಯ ಮಗ್ಗುಲಲ್ಲೇ ಅಡಿಗೆ ಅಟ್ಟು, ಅಪೂರ್ವಕ್ಕೆ ಕಾಣಸಿಗುವ ಹಬ್ಬವನ್ನು ಕಂಡು ಸಂತೋಷಪಡುತ್ತಾರೆ. ಎಲ್ಲ ಜನ ಬರುತ್ತಾರೆ, ಎಂದರೆ ಎಲ್ಲ ಕುಡಿಯ ಕನ್ಯೆಯರೂ ಬರುತ್ತಾರೆಂಬುದೂ ಅರ್ಥ. ಅವರೆದುರಿಗೆ ಅಲೆದಾಡಿ, ತಾನೊಬ್ಬ ಚೆಲುವನೆನಿಸಿಕೊಂಡು, ಯಾರ ಮನವನ್ನಾದರೂ ಸೆಳೆಯಬೇಕು—ಎಂಬ ಹಂಬಲದಿಂದ ಹೊರಟವನು ತಿಮ್ಮ. ಜಾತ್ರೆಗೆ ಹೋಗುವಾಗ, ತನ್ನಿಂದಾಗುವಷ್ಟು ದುಡಿದು, ಹತ್ತೆಂಟು ಬೆತ್ತದ ಬುಟ್ಟಿ, ಪೆಟ್ಟಿಗೆಗಳನ್ನು ಮಾಡಿಕೊಂಡು ಹೋಗಿದ್ದಾನೆ. ಅವನ್ನು ಮಾರಿ ನಾಲ್ಕು ಕಾಸು ಗಳಿಸಿಕೊಂಡು, ಪರಿಷೆಗೆ ಬಂದ ಮಂಡಕ್ಕಿ, ಅವಲಕ್ಕಿ, ಬೆಲ್ಲ, ಕೊಬ್ಬರಿಗಳನ್ನು ಕೊಂಡು ಕಾಳ-ಕರಿಯರ ಜತೆಗೆ ಕುಳಿತು ಔತಣ ಮಾಡಿದ್ದೂ ಆಯಿತು. ಧನಿಗಳು ಕೊಡುವ ಹೊಸ ಹಚ್ಚಡ ಬರುವ ಮುಂಚೆಯೇ, ತಾನೇ ಒಂದು ಜತೆ ಎಣ್ಣೆಮೇಣದ ಕೆಂಪು ಎಲೆವಸ್ತ್ರವನ್ನು ಕ್ರಯಕ್ಕೆ ಕೊಂಡು, ತಲೆಗೆ ಬಿಗಿದುಕೊಂಡದ್ದೂ ಆಯಿತು. ಅದನ್ನು ಸುತ್ತಿಕೊಂಡು, ತಾನೇ ತನ್ನ ಪಾಲಿನ ಮನ್ಮಥನಾದ. ಅಲ್ಲಿ ಸೇರಿದ ಕುಡಿಯರ ಜತೆಯಲ್ಲಿ ತುಂಬ ಅಲೆದಾಡಿದ; ಯಾರ್‍ಯಾರ ಕಣ್ಣು ತನ್ನ ಮೇಲೆ ಬಿದ್ದೀತು ಎಂಬ ಸ್ವಾಭಾವಿಕವಾದ ಗಂಡಿನ ಚಪಲವನ್ನೆಲ್ಲ ತೊಟ್ಟು, ಅಲೆದಾಡಿದ.

ಜಾತ್ರೆಗೆ ಕೆಂಪಿಯೂ ಬಂದಿದ್ದಳು. ಬಿನ್ನಣಗಿತ್ತಿಯಂತೆ ತುಸು ಹೆಚ್ಚಾಗಿಯೇ ಬಂಧುಗಳಲ್ಲಿ ಕಲೆತು ಅಲೆದಾಡಿದಳು. ಕಾಡಿನ ಹೂಗಳನ್ನು ದೊಡ್ಡ ಹೊರೆಯಾಗಿ ಮುಡಿದದ್ದೂ ಸಾಲದೆ, ಮಾರಾಟಕ್ಕೆ ಬಂದ

ಸೇವಂತಿಗೆಯ ಹೂವನ್ನು ಕೊಂಡು ತಲೆಗೆ ಇರಿಸಿದ್ದಳು. ಹತ್ತೆಂಟು ಬಾರಿ ಯಾವಾವ ನೆಪದಿಂದಲೋ ತಿಮ್ಮ ಅವಳನ್ನು ಮಾತನಾಡಿಸುವ ಪ್ರಯತ್ನ ಮಾಡಿದ. "ನಿನ್ನಪ್ಪ, ಅಮ್ಮ ಬಂದಿಲ್ಲಿವೇ?" ಎಂದು ವಿಚಾರಿಸಿದ. ಒಮ್ಮೆ "ಇಂದಂತು ನೀನು ಭಾರಿ ಪಸಂದವಾಗಿ ಕಾಣುತ್ತಿಯೆ" ಎಂದು ಅವಳ ಮುಂದೆ ನಕ್ಕು ನುಡಿದ. ಆ ಮಾತನ್ನು ಕೇಳಿ ಆಕೆಗೆ ನಗು ಬಂದರೂ ಆಚೀಚಿನ ಜನಗಳನ್ನು ಕಂಡು, ಆಕೆ ಅಂಥ ನಗುವಿಗೆ ಅವಕಾಶ ಕೊಡಲಿಲ್ಲ. ಆಕೆ ಪ್ರತಿಯಾಗಿ ತನ್ನ ಎಲೆವಸ್ತ್ರದ ರುಮಾಲೆ ಕಂಡು, 'ನಿನಗೆ ಅದು ಬಹಳ ಒಪ್ಪುತ್ತದೆ' ಎಂದಿದ್ದರೆ ಎಷ್ಟು ಸಂತೋಷವಾಗುತ್ತಿತ್ತೋ ಏನೋ! ಆ ಮಾತನ್ನು ಹೇಳದವರಿಲ್ಲ ಎಂದಲ್ಲ. ಕಾಳ ಆ ಅರಿವೆಯನ್ನು ಖರೀದಿಮಾಡುವಾಗ ಅವನ ಬಳಿಯಲ್ಲೇ ಇದ್ದ.

'ಅಣ್ಣಾ, ಈ ಎಲೆವಸ್ತ್ರವಾದರೆ ನಿನ್ನ ತಲೆಗೆ ತುಂಬ ಒಪ್ಪುತ್ತೆ' ಅಂದಿದ್ದ. ಆದರೆ ಅನ್ನಬೇಕಾದವರು ಅಂಥ ಮಾತನ್ನು ಅನ್ನದಿದ್ದರೆ, ತಿಮ್ಮನಿಗೆ ಏನು ಸಂತೋಷವಾದೀತು!

ತನ್ನ ನಿರಾಶೆಗೆ ಕಾರಣವನ್ನು, ಯಾತಕ್ಕೋ ತಾನೇ ಹುಡುಕಲಾರ ತಿಮ್ಮ. ಇದೇ ಒಂದು ಮುಖ್ಯ ಕಾರಣವಲ್ಲವಾದರೂ ಸಾಕಷ್ಟು ಬಲವಾದ ಕಾರಣವೇ. ಏನಿಲ್ಲ—ಸೊಂಟದಲ್ಲಿ ಸಿಕ್ಕಿಸಿಕೊಂಡ ಕಾಸಿನಲ್ಲಿ, ಒಂದಾಣೆ ತೆಗೆದು ಮಣಿಸರಕಿನ ಒಬ್ಬ ಸಾಹೇಬನಿಗೆ ಕೊಟ್ಟು, ಒಂದು ಕನ್ನಡಿ ಕೊಂಡಿದ್ದರೆ, ಅವನ ಸಮಸ್ಯೆ ಬಹುಮಟ್ಟಿಗೆ ಪರಿಹಾರವಾಗುತಿತ್ತು. ಎಲ್ಲ ಕುಡಿಯರಂತೆ ಅವನು ಕುಳ್ಳನೇ; ಬಣ್ಣ ಎಲ್ಲರಂತೆಯೇ ಎಣ್ಣೆಗಪ್ಪು. ಶರೀರ ತುಂಬಿರದಿದ್ದರೂ ಬಣಕುಜೀವ ಅವನದ್ದಲ್ಲ. ಬೇನೆಯಿಂದ ಸೊರಗಿದ್ದೂ ಅಲ್ಲ. ಬಯನಿಯ ಮರ ಹತ್ತಿ ನುರಿತ ಅವನ ಎದೆ, ತೊಡೆ, ಭುಜದ ಮಾಂಸ ಖಂಡಗಳು ಉಬ್ಬಿಕೊಂಡಿವೆ. ಆದರೆ ಆ ಒಟ್ಟು ಶರೀರಕ್ಕೆ ಸಲ್ಲದ್ದೆಂದರೆ— ಅವನ ಮುಖ. ಅವನ ಗಲ್ಲ, ಕಪೋಲಗಳ ಎಲುಬು ಪ್ರಧಾನವಾಗಿತ್ತು. ಸಾಲದ್ದಕ್ಕೆ ಹರಿದ ಮೇಲ್ತುಟಿ ಬೇರೆ. ತುಟಿಯ ಎಡೆಯಿಂದ ಒಂದು ಹಲ್ಲಂತು ಮೊಲದ ಹಲ್ಲಿನ ಹಾಗೆ ಲೋಕಕ್ಕೇ ಕಾಣಿಸುತಿತ್ತು. ಆ ಕೊರತೆ ಅವನಿಗೆ ಕಾಣಿಸದೇ ಉಂಟೇ? ಬೆಂಗಡೆಯಲ್ಲಾದರೂ ತನ್ನನ್ನು 'ಹರಕು ಬಾಯಿ ತಿಮ್ಮ!' ಎನ್ನುತ್ತಿದ್ದ ಜನರುಂಟೆಂದು ಅವನು ಬಲ್ಲ. ಎದುರಿಗೆ ಹೇಳಿದರೆ,

ಹೇಳಿದವರ ತುಟಿಯನ್ನೇ ಹರಿದು ಹಾಕಬಲ್ಲ. ಎಳೆತನದಲ್ಲೇ ಈ ಅವಮಾನ ಸಹಿಸದ ತಿಮ್ಮ, ಮೊದಮೊದಲು ನೊಂದಿದ್ದರೂ, ಮೀಸೆ ಬೆಳೆದಮೇಲೆ ಸಮಾಧಾನ ತಾಳಿದ್ದ. ಸೊಂಪಾಗಿ ಮೀಸೆ ಬೆಳೆಯಿಸಿ, ತುಟಿಯ ಎಡೆಯ ಕಂಡಿಯನ್ನು ಮೀಸೆ ಬೆಳೆಯಿಸಿ ಮುಚ್ಚಿಸಿಕೊಂಡಿದ್ದ. ಆದರೂ ಸಮತೆ ಯಿಲ್ಲದ ತುಟಿಯ ತುಂಡುಗಳ ಮೇಲೆ, ಬೆಟ್ಟದ ಹುಲ್ಲಿನಂತೆ ಬೆಳೆದ ಆ ಮೀಸೆ ಏರುಪೇರಾಗಿ ಕಾಣಿಸುತ್ತಿದ್ದುದರಿಂದ, ಅವನ ಮುಖಕ್ಕೊಂದು ವಿಕಾರ ರೂಪವನ್ನು ಕೊಡುತ್ತಿತ್ತು. ನಿತ್ಯ ಕಾಣುತ್ತಿದ್ದವರು, ಅವನನ್ನು ಕಂಡು ನಗರಾದರೂ, ಹೊಸಬರಿಗೆ ಆ ಮುಖ ಕಂಡರೆ ತಡೆಯದ ನಗು ಬರುವುದು ಸಹಜ. ಅಪ್ರಿಯವಾದ ಮುಖವೇ ತನ್ನ ಎಲ್ಲ ಬವಣೆಗಳಿಗೆ ಕಾರಣ ಎಂದು ಆತ ಅರಿತವನಲ್ಲ. ಹೆಣ್ಣುಗಳ ಕೊರತೆ ಘಟ್ಟದಲ್ಲಿರುವಾಗ, ಅವನಂತಿರುವ ಒತ್ತಾಯದ ಬ್ರಹ್ಮಚಾರಿಗಳು ಬೇರೆಯವರೂ ಇದ್ದಾರೆ. ತನ್ನ ಒಂಟಿಜೀವ ನಕ್ಕೆ, ಅದೇ ಅವನಿಗೆ ಕಾರಣವಾಗಿ ತೋರುತ್ತಿತ್ತೇ ಹೊರತು ಬೇರೇನು ಕಾಣಿಸುತ್ತಿರಲಿಲ್ಲ. ಈ ದಿನ ಅವನು ತಲೆಗೆ ಕಟ್ಟಿದ ಹೊಸ ಎಲೆವಸ್ತ್ರದಿಂದಾಗಿ ಬಳಗದವರ ದೃಷ್ಟಿ ಅವನ ಹುಬ್ಬಿನ ಮೇಲಕ್ಕೆ ಏರಿತೇ ಹೊರತು, ಮುಖದ ಕೆಳಭಾಗ ತನ್ನಂತೆ ಇತರರಿಗೂ ಕಾಣಿಸದು—ಎಂದು ಆತ ತಿಳಿದನೋ ಏನೋ. ಅಂತು ವಿಲಾಸಿಯಂತೆ ತಿರುಗಾಡುತ್ತಲೇ ಇದ್ದ.

ಜಾತ್ರೆಯ ಒಂದು ದಿನ ಹೀಗೆಯೇ ಕಳೆಯಿತು. ಎರಡನೆಯ ದಿನ ಧನಿಗಳು ಬಂದು, ತಮ್ಮ ಆಳುಗಳಿಗೆಲ್ಲ ಪಚ್ಚಡ ಕೊಟ್ಟರು. ಅವರನ್ನು ಸಾಲಾಗಿ ನಿಲ್ಲಿಸಿ ಒಬ್ಬೊಬ್ಬರ ಹೆಸರನ್ನೆತ್ತಿ ಕೂಗಿ, ಕರೆದು, ಹಚ್ಚಡ ಹಂಚಿ ಕೊಡುವ ಅವರ ರೀತಿಯೇ ರೀತಿ. ಈತನೂ ಹೋಗಿ ಹೊಸ ಹಚ್ಚಡ ಕೊಂಡು ಹಿಗ್ಗಿ ಬಂದಿದ್ದ. ಹೆಂಗಸರಿಗೂ, ಗಂಡಸರಿಗೂ ಸಮನಾಗಿ ಬಟ್ಟೆಗಳ ವಿತರಣೆ ಯಾಯಿತು. ಬಿಳಿಯ ಪಂಚೆ ಗಂಡಸರಿಗೆ. ಎಲ್ಲರಿಗೂ ಒಂದೇ ತೆರನ ಪಂಚೆ ಕೊಟ್ಟಿದ್ದರೂ ಧನಿಯರು ಕೆಂಪಂಚಿನ ಪಂಚೆಗಳನ್ನು ಬದಿಯಲ್ಲಿರಿಸಿ ಕೊಂಡದ್ದು—ತಿಮ್ಮಗೆ ಕಾಣಿಸಿತು. ಅವನ್ನು ಯಾರಿಗೆ ಕೊಡುತ್ತಾರೆ ನೋಡುವ—ಎಂದರೆ, ಮೊದಲ ಬಹುಮಾನ ಕರಿಯನನ್ನೇ ಕರೆದು ಕೊಟ್ಟದ್ದು. ಅವನಿಗಾಗ ತುಂಬಾ ಸಂತೋಷವಾಯಿತು; ಅನಂತರ ವಯಸ್ಸಿ ನಲ್ಲಿ ಹಿರಿಯನಾದ ಚನಿಯನನ್ನು ಕರೆದರು. ಅವನಿಗೆ ಹೋಗುತ್ತದೆ

ಕೆಂಪಂಚಿನ ಬಟ್ಟೆ—ಎಂದುಕೊಂಡರೆ, ಅವನಿಗೆ ಕೊಟ್ಟದು ಸಾಮಾನ್ಯ ವಾದುದೇ. ಅನಂತರ ಒಮ್ಮೆಗೇ 'ಬೂದ, ತುಕ್ರ' ಅಂದರು. ಅಥವಾ 'ತುಕ್ರ, ಬೂದ' ಅಂದರೋ ತಿಳಿಯದು. ಇಬ್ಬರೂ ಬಂದು ನಿಂತರು. ಇಬ್ಬರಿಗೂ ಕೆಂಪಂಚಿನ ಧೋತರ ಹೋಯಿತು. ಮತ್ತುಳಿದವರಿಗೆಲ್ಲ-ಬೋಳಂಚಿನವು. ಎಲ್ಲರಿಗೂ ಸಮನಾಗಿ ಅವನ್ನು ಹಂಚಿದರು. ಅದೇ ಕೊರೆಯತೊಡಗಿತು—ತಿಮ್ಮನ ಮನಸ್ಸಿನಲ್ಲಿ. ತುಕ್ರ, ಬೂದರು ತನ್ನಿಂದೇನು ಹೆಚ್ಚು? ನ್ಯಾಯವಾಗಿ ಅದನ್ನು ಕೊಡಬೇಕಾಗಿದ್ದರೆ ಚನಿಯನಿಗಷ್ಟೆ ಕೊಡಬೇಕು. ಆತ ಹಿರಿಯ—ವಯಸ್ಸಿನಲ್ಲೂ, ಬುದ್ಧಿಯಲ್ಲೂ.

ಮುಂದೆ ಹೆಂಗುಸರು—ಮಕ್ಕಳಿಗೆ ಬಟ್ಟೆ ಹಂಚಿದರು. ಮನೆಯಲ್ಲಿದ್ದವರಿಗೂ, ಅಲ್ಲಿಗೆ ಬಂದಿದ್ದವರಿಗೂ ಎಣಿಸಿ, ಒಂದೊಂದು ಅರಿವೆ ಕೊಟ್ಟರು. ಅಲ್ಲಿ ಮಾತ್ರ ಒಡೆದು ಕಾಣುವ ತಾರತಮ್ಯ, ಇತರರಿಗೆ ಗೋಚರಿಸದಿದ್ದುದೂ ತಿಮ್ಮಗೆ ಗೋಚರಿಸದೆ ಹೋಗಲಿಲ್ಲ. ಎಲ್ಲರನ್ನೂ ಕರೆದು, ಎಣಿಸಿ ಕೊಟ್ಟ ಸೀರೆಗಳಲ್ಲಿ ಒಂದೇ ತೆರನ ಕಾಂಗು ಸೀರೆಗಳೇ ಇದ್ದುವು. ಅದಕ್ಕೆ ಆಕ್ಷೇಪವೆಂದರೇ ಒಂದೇ ಒಂದು ಕೆಂಪು ಸೀರೆ. ಅದರ ಅಂಚು ಹೊಳೆಯುವ ಅರಸಿನ ಬಣ್ಣದ್ದು. ಅದನ್ನು ಒಪ್ಪಿಸಿದ್ದು ಇನ್ನೊಂದು ಕಾಂಗು ಸೀರೆಯೊಡನೆ—ಬೂದನಿಗೆ. ಇನ್ನೆರಡು ಗಳಿಗೆಗಳಲ್ಲಿ, ಆ ರಹಸ್ಯ ಅವನಿಗಂತೂ ಹೊಳೆಯಿತು. ಧನಿಯರು ಕೊಡುವಾಗ 'ಒಂದೇ ಜಾತಿಯ ಸೀರೆ ಸಿಗಲಿಲ್ಲ ಪೂರ್ಣ. ಇದು ಆದೀತಲ್ಲ!' ಎಂದು ಆಡಿಯೇ ಆ ಕೆಂಪು ಸೀರೆ ಕೊಟ್ಟರು. ಕೊಟ್ಟದ್ದು—ಉದ್ದೇಶಪೂರ್ವಕವಾಗಿ ಕೆಂಪಿಗೇನೆ—ಎಂಬ ಭಾವ ತಿಮ್ಮನಲ್ಲಿ ಮೂಡಿತು. ಅನಂತರ, ಜಾತ್ರೆಯಲ್ಲಿ ಆ ಸೀರೆಯನ್ನು ಉಟ್ಟು ಮೆರೆದವಳು ಕೆಂಪಿಯೆ; ಬೂದನ ತಾಯಿ ಮಲೆಯನ್ನಿಳಿದೂ ಬಂದಿರಲಿಲ್ಲ.

ಆಗ ತಿಮ್ಮನ ಹೊಟ್ಟೆಯುರಿ ಹೇಳುವುದಕ್ಕಿಲ್ಲ. ಸೀರೆಯ ವಿಚಾರ ಬಹಿರಂಗವಾಗಿ ನುಡಿಯುವ ಧೈರ್ಯ ಬಾರದಿದ್ದರೂ, ಚನಿಯನ ಬಳಿಗೆ ಹೋಗಿ "ಚನಿಯಣ್ಣ, ಧನಿಗಳು ತಮ್ಮ ಆಳುಗಳಲ್ಲಿ ಹಾಗೆಲ್ಲ ಭೇದ ತೋರಿಸಬಾರದಿತ್ತು. ಈಗ ಕರಿಯಣ್ಣನಿಗೆ ಕೆಂಪಂಚಿನ ಧೋತರ ಕೊಟ್ಟದ್ದು ಸಮನೆ; ಅವನು ಗುರಿಕಾರ. ಆದರೆ ತುಕ್ರ, ಬೂದರಿಗೆ ಯಾಕೆ ಅಂಥದ್ದನ್ನು ಕೊಟ್ಟರು? ವಯಸ್ಸಿನಲ್ಲಿ ನೀನು ಎಲ್ಲರಿಗೂ ಹಿರಿಯ; ನಿನಗೆ ಅದನ್ನು ಕೊಡಬೇಕಾ

ದದ್ದು ನ್ಯಾಯವಲ್ಲವೇ ?" ಎಂದ. ಚನಿಯ ವೈರಾಗಿ—"ಅಂಚು ಗಿಂಚು ತೆಗೆದುಕೊಂಡು ಏನು ಮಾಡುತ್ತೀಯಾ ? ನೀರಿಗೆ ಹಾಕಿದರೆ ಬಿಳಿದು ಕೆಂಪು—ಒಂದೇ ಬಣ್ಣ ಆಗುತ್ತದೆ. ತಂದುದನ್ನು ಕೊಟ್ಟರು ; ಕೊಟ್ಟದ್ದನ್ನು ಕೊಂಡು ಉಟ್ಟು ಸಂತೋಷಪಡುವುದು ನಮ್ಮ ಕೆಲಸ. ನೋಡು—ಹಿರಿ ಮಲೆಯ ಕಿರಿಸ್ತಾನ ಧನಿಗಳಿದ್ದಾರಲ್ಲ. ಅವರೀಗ ಹಚ್ಚಡ ಕೊಡುವ ಕ್ರಮ ವನ್ನೇ ನಿಲ್ಲಿಸಿಬಿಟ್ಟಿದ್ದಾರಂತೆ. ಈ ವರ್ಷ ಆ ಮಲೆಯವರಿಗೆ ಕಾಸು ಎಣಿಸಿ, 'ನಿಮನಿಮಗೆ ಬೇಕಾದ ಬಟ್ಟೆ ನೀವು ನೀವೇ ಕೊಂಡುಕೊಳ್ಳಿರಿ' ಎಂದು ಕೊಟ್ಟಿದ್ದಾರೆ. ಹಾಗೆ ಮಾಡಲಿಲ್ಲವಲ್ಲ ನಮ್ಮ ಧನಿಗಳು"—ಎಂದ.

"ಅದು ಎಲ್ಲದಕ್ಕಿಂದ ಚಂದ. ಈಗ ನಾನು ನನ್ನ ದುಡ್ಡಿನಿಂದ ಎಲೆ ವಸ್ತ್ರ ತೆಗೆದುಕೊಳ್ಳಲಿಲ್ಲವೇ" ಎಂದು ಆತ ತನ್ನ ರುಮಾಲನ್ನು ತೋರಿಸಿದ. "ಕೊಟ್ಟರೆ ಎಲ್ಲರಿಗೂ ಸಮನಾಗಿ ಕೊಡಬೇಕು. ಒಬ್ಬರಿಗೆ ಹೆಚ್ಚು, ಒಬ್ಬ ರಿಗೆ ಕಡಿಮೆ ಮಾಡಿ ಕೊಡಬಾರದು" ಎಂದು ನುಡಿದು ಈಚೆಗೆ ಬಂದ

ಜಾತ್ರೆಯಲ್ಲಿ ಎಷ್ಟು ಸುತ್ತಾಡಿದರೂ ಆತನ ಮನಸ್ಸು ಸಮಾಧಾನ ಗೊಳ್ಳಲಿಲ್ಲ. ಉಳಿದವರು ಹೊಸ ಹಚ್ಚಡವನ್ನು ಉಟ್ಟರೂ, ಅವನಿಗೆ ಸಮಾ ಧಾನವಿಲ್ಲ. ಎಲೆವಸ್ತ್ರ ಕೊಂಡ ಜವುಳಿ ಅಂಗಡಿಯ ಮುಂದೆ ಹೋಗಿ ತಾಸು ಗಳಿಗೆಗಟ್ಟಲೆ ನಿಂತು, 'ಅದಕ್ಕೇನು ಬೆಲೆ, ಇದಕ್ಕೇನು ಬೆಲೆ' ಎಂದು ಕೇಳಿಯೂ ಕೇಳಿದ ಕೆಂಪಂಚಿನ ಧೋತ್ರವೊಂದನ್ನು ಖರೀದಿ ಮಾಡಿದ. ಸೊಂಟ ಮುಟ್ಟಿ ನೋಡಿದ. ಅಂಗಡಿಯವರು ಹೇಳಿದ ಬೆಲೆಗೂ ಸಿಕ್ಕಿಸಿ ಕೊಂಡ ಹಣಕ್ಕೂ ಸಂಬಂಧವಿರಲಿಲ್ಲ. "ಇದನ್ನು ಕೊಂಡು, ಅದನ್ನು ಕೊಡು ತ್ತೀರಾ ?" ಎಂದು ತನ್ನ ದರ್ಪ ತೋರಿಸಿದ.

"ನಾವು ಇಲ್ಲಿಗೆ ಬಟ್ಟೆ ಮಾರಲಿಕ್ಕೆ ಬಂದವರು; ಕೊಳ್ಳಲಿಕ್ಕಲ್ಲ" ಎಂದರು ಅಂಗಡಿಯವರು. ಆಗ ಅವನಿಗಾದ ವ್ಯಥೆ ಹೇಳತೀರದು. ರುಮಾಲೆ ಕೊಳ್ಳುವ ಬದಲು, ಅದನ್ನು ಕೊಂಡಿದ್ದರೆ ಎಷ್ಟು ಲೇಸಿತ್ತೋ— ಎಂದನಿಸಿತು. ಕೊನೆಗೆ ಅಸಮಾಧಾನದಲ್ಲಿ ಸಮಾಧಾನ ತಂದುಕೊಂಡು, ಮೈಮೇಲೆ ಹಚ್ಚಡ ಹೊದ್ದು, ಕರಿಯಣ್ಣನ ಹಿಂದೆ ಪರಿಷೆ, ತೇರುಗಳನ್ನು ನೋಡುತ್ತ ಅಲೆದಾಡಿದ. ಕರಿಯ ತನಗೆ ದೊರೆತ ಹೊಸ ಹಚ್ಚಡ ಸೊಂಟಕ್ಕೆ ಸುತ್ತಿಕೊಂಡಿದ್ದ. ತಿಮ್ಮನನ್ನು ಕಂಡು "ಯಾಕಣ್ಣಾ, ನೀನು ನಿನ್ನ ಹಚ್ಚಡ ಹೊದ್ದುಕೊಂಡಿದ್ದೀ. ಉಟ್ಟರೆ ಚೆಂದ ಕಾಣುವುದಿಲ್ಲವೇ ?" ಎಂದ.

“ ಅಂಚು ಬಂದುದನ್ನು ಉಟ್ಟರೆ ಚೆಂದ. ಇದನ್ನು ಹೊದ್ದರೂ ಒಂದೇ, ಬಿಟ್ಟರೂ ಒಂದೆ ” ಎಂದು ಹೇಳಿ, ಅದನ್ನು ಅಂಗಡಿಗೆ ಕೊಟ್ಟು ಬದಲಿಸಲು ತಾನು ಮಾಡಿದ ವ್ಯರ್ಥ ಪ್ರಯತ್ನವನ್ನು ಕುರಿತು ಅವನೊಡನೆ ಹೇಳಿದ. ಧನಿಗಳು ಮಾಡಿದ ತಾರತಮ್ಯವನ್ನು ಕುರಿತು ಟೀಕಿಸಿದ; ‘ ಅದು ಸಮ ನಲ್ಲ ’ವೆಂದ. ಅದಕ್ಕೆ ಕರಿಯ ಒಪ್ಪಬೇಕಾಯಿತು. ಅವನಿಗೆ ತಿಮ್ಮನ ಮೇಲೆ ಸಹಾನುಭೂತಿಯೂ ಹುಟ್ಟಿತು. ಅವನೇ ಬಲವಂತವಾಡಿ, ತನ್ನ ಹಚ್ಚಡ ವನ್ನು ಅವನಿಗೆ ಕೊಟ್ಟು, ಅವನದನ್ನು ತಾನು ಕಿತ್ತು ಉಟ್ಟುಕೊಂಡ. “ ನಿನ್ನ ಮನಸ್ಸು ದೊಡ್ಡದು—ಕರಿಯಣ್ಣ ” ಎಂದು ತಿಮ್ಮ ಅವನನ್ನು ಹೊಗಳಿದ; ತಾನೂ ಕೆಂಪಂಚಿನ ದೋತ್ರ ಉಟ್ಟು ಮೆರೆದಾಡುವ ಅವಕಾಶ ವನ್ನು ಗಳಿಸಿಕೊಂಡ. ಬೂದ, ಕರಿಯನನ್ನು ಕಂಡು “ ಏನು, ನಿನ್ನ ದೋತ್ರ ಅವನಿಗೆ ಕೊಟ್ಟೆಯಾ ? ಇದಕ್ಕೆ ಅದಕ್ಕಿಂದ ಎಷ್ಟೋ ಹೆಚ್ಚು ಬೆಲೆ. ಯಾಕೆ ಕೊಟ್ಟೆ ? ” ಎಂದದ್ದಕ್ಕೆ “ ಪಾಪ, ಆಸೆ ಮಾಡಿದ; ಕೊಟ್ಟೆ ” ಎಂದು ಸುಲಭ ದಲ್ಲಿ ಮುಗಿಸಿಬಿಟ್ಟ ಕರಿಯ.

ಇತ್ತ ಜಾತ್ರೆಯಲ್ಲಿ ಕೆಂಪಿ, ಕೆಂಪು ಸೀರೆಯುಟ್ಟು ಮೆರೆಯುತ್ತಿದ್ದ ವಿಷಯದಲ್ಲೇ ಅಸೂಯಾಪರನಾದ ತಿಮ್ಮ, ‘ ಅವಳಿಗೊಂದು ಚಿನ್ನದುಂಗುರ ಸಿಕ್ಕಿತಂತೆ ’ ಎಂಬ ಪಿಸುಮಾತು ಕೇಳಿ ಎಷ್ಟು ಉರಿ ತಾಳಬೇಡ ! ‘ ಚಿನ್ನವೋ ಹಿತ್ತಾಳೆಯೋ ’ ಎಂದು ಮೊದಲು ನಕ್ಕು ನುಡಿದ. ಕೊನೆಗೆ ಬೂದನ ಕೈಯಲ್ಲಿ ಅದನ್ನು ಕಂಡು, ‘ ಚಿನ್ನ ’—ಎಂಬುದು ಖಾತ್ರಿಯಾದ ಮೇಲೆ, ಏನೇನೋ ಅನಿಸಿತು ಅವನ ಮನಸ್ಸಿಗೆ.

“ ಹೌದಣ್ಣ, ಜಾತ್ರೆಗೆ ಬಂದವರಲ್ಲಿ ಯಾರ ಉಂಗುರ ಬಿದ್ದುಹೋಗಿ ದೆಯೋ ಕೇಳುವ. ಯಾರಾದರೂ ಕಳೆದುಕೊಂಡಿದ್ದಾರೋ ಎಂದು ” ಎಂದೂ ಅಂದ. ಆ ಮಾತಿಗೆ ಯಾರಿಂದಲೂ ಪುಷ್ಟಿ ಬರಲಿಲ್ಲ. ಯಾರಾದರೂ ‘ ತಾವು ಉಂಗುರ ಕಳೆದುಕೊಂಡಿದ್ದೇವೆ ’ ಎಂದು ಹೇಳಿದರೆ, ಅವರಿಗೆ ಈ ಸುದ್ದಿ ತಿಳಿಸುವ—ಎಂಬ ಮನಸ್ಸು ತಿಮ್ಮನಿಗಾಯಿತು. ಆ ಸುಸಂಧಿಯೂ ಬರಲಿಲ್ಲ. ಇದು ಅವನ ಅಸಮಾಧಾನಕ್ಕೆ ಇನ್ನಷ್ಟು ಕಾರಣವಾಯಿತು. ತಿರುಗಿ ಮಣಿ ಸರಕಿನ ಅಂಗಡಿಗಳ ಬಳಿ ಸುಳಿದಾಡಿದ. ಮಣಿಸರಕಿನವರಲ್ಲಿ ಚಿನ್ನದಂತಿ ರುವ ಉಂಗುರಗಳಿಗೆ ಬರಗಾಲವೇ ! ಒಂದೊಂದಾಣೆ ಕೊಟ್ಟು ಮೂರು

ಹಿತ್ತಾಳಿ ಉಂಗುರಗಳನ್ನು ತಿಮ್ಮ ಕೊಂಡುಕೊಂಡು ತನ್ನ ಬೆರಳುಗಳಿಗೆ ಸಿಕ್ಕಿಸಿಕೊಂಡ. ತನ್ನ ರಸಿಕತನ ಮೆರೆಯಿಸುವುದಕ್ಕೆ ಕಾಳನೊಡನೆ "ಅಣ್ಣ, ನನಗೆ ಒಂದಲ್ಲ ಮೂರು ಮೂರು ಉಂಗುರ ಸಿಕ್ಕಿವೆ" ಎಂದು ನಕ್ಕು ನುಡಿದ.

ಜಾತ್ರೆಗೆ ಬಂದ ಹಿರಿಯರು, ಅಲ್ಲಿ ಇಲ್ಲಿ ಕೂಡಿ ತಿರುಗಾಡುತ್ತಿದ್ದರು; ಹರಟೆ ಕೊಚ್ಚುತ್ತಿದ್ದರು. ಅದೇ ವೇಳೆಗೆ ಎರಡು ಮೂರು ಮಲೆಯವರು ಸೇರುವ ಸಮಯವಾದುದರಿಂದ, ಮುಂದಿನ ನಂಟುತನಗಳನ್ನು ಕುರಿತು ಮಾತಾಡುವ ಪರಿಪಾಠವೂ ಅವರಲ್ಲಿತ್ತು. ತಿಮ್ಮ—ಯಾರ್‍ಯಾರ ಮದುವೆಗಳಲ್ಲಿ ಆಸಕ್ತನೇ? ತನ್ನ ಕೇರಿಯವರಲ್ಲಿ, ಆತ ತನಗೆ ಇಷ್ಟು ವಯಸ್ಸಾಗಿದ್ದರೂ ಅಂಥ ಆಸೆ ತೋಡಿಕೊಂಡವನಲ್ಲ. 'ನನಗೊಂದು ಹೆಣ್ಣು ದೊರಕಿಸಿ' ಎಂದು ಬೇಡಿದವನಲ್ಲ. ಹೀಗಾಗಿ ಹಿರಿ ಮಲೆಯ ಪೂಜಾರಿಯ ಬೆನ್ನ ಹಿಂದೆ ಅಲೆದಾಡಿದ. ಪೂಜಾರಿಗೂ ಅವನಿಗೂ ತುಂಬ ಪರಿಚಯ. ಮಲೆಯ ವಾದವಿವಾದಗಳನ್ನೆಲ್ಲ ಅವನಲ್ಲಿಗೆ ಆಗಾಗ ಹೋಗಿ, ಕಿವಿಯ ಮೇಲೆ ಹಾಕುವ ರೂಢಿಯೂ ಇತ್ತು. ಇಂಥ ಕಿವಿಮಾತುಗಳಿಂದಲೇ ಪೂಜಾರಿಗೆ ದೈವದ ಪ್ರೇರಣೆ ಬರಬೇಕೋ ಏನೋ. ಹಾಗೆ ಅವನ ಮಾತು, ದೈವವಾಣಿ ಆಗುವಾಗ ಅದು ಯಾವ ರೂಪವನ್ನೇ ತಾಳಲಿ, ಅದರ ಹಿನ್ನೆಲೆ, ಕೇರಿಯಲ್ಲೇ ನೆಲೆಸಿದ ಅಸಮಾಧಾನಗಳ ದೆಸೆಯಿಂದ ಪ್ರೇರಿತವಾಗಬೇಕು.

ಪೂಜಾರಿಯ ಹೆಸರು ಬಿರುಮನೆಂದು; ಬಿರುಮ ಹಿರಿ ಮಲೆಯ ಪ್ರತಿಷ್ಠಿತ ವ್ಯಕ್ತಿ. ಆತ ಕುಡಿಯರಿಗೆ ಪೂಜಾರಿಯಷ್ಟೇ ಅಲ್ಲ; ಮೂರು ಹೆಂಡಿರ ಗಂಡ. ಮೂವರನ್ನೂ ಚೆನ್ನಾಗಿ ಬಾಳಿಸಿಕೊಂಡಿದ್ದ. ಜಾತ್ರೆಗೆ ದಶರಥ ರಾಯನಂತೆ ಆ ಮೂವರನ್ನೂ ಕರಕೊಂಡು ಬಂದಿದ್ದ. ಕಿರಿ ಮಲೆಯಲ್ಲೇ ಆತನಿರುತ್ತಿದ್ದಿದ್ದರೆ, 'ಇನ್ನೊಬ್ಬ ತುಕ್ರ ಇವ' ಎಂದು ತಿಮ್ಮ ತಿಳಿಯಬಹುದಾದ ಕಾಲವಿತ್ತು. ತಿಮ್ಮ ಇಂದು ಬಿರುಮನನ್ನು ಭೇಟಿಯಾಗುತ್ತಲೇ, ಅವನ ಕೆಂಪಂಚಿನ ಧೋತ್ರ, ಎಲೆವಸ್ತ್ರದ ರುಮಾಲೆಗಳನ್ನು ಕಂಡು ಪ್ರೀತಿಯಿಂದ ಸ್ವಾಗತಿಸಿದ. "ಬಾ ಅಣ್ಣ, ಎಂದು ಬಂದೆ? ಕಾಣಲೇ ಇಲ್ಲವಲ್ಲ ಜಾತ್ರೆಯಲ್ಲಿ ನಿನ್ನನ್ನು, ಈ ಎಲೆವಸ್ತ್ರ ಮಾತ್ರ ನಿನಗೆ ಪಸಂದವಾಗಿ ಒಪ್ಪುತ್ತೆ" ಎಂದು ಬೆನ್ನು ಚಪ್ಪರಿಸಿದ. ತಾನು ಕೈಯಲ್ಲಿಟ್ಟುಕೊಂಡು ತಿನ್ನುತ್ತಿದ್ದ ಹುರಿಗಡಲೆಯಲ್ಲಿ, ಒಂದಿಷ್ಟು ಅವನ ಕೈಯಲ್ಲೂ ಹಾಕಿ "ಏನು ನಿಮ್ಮ ಸಮಾಚಾರ!

ಮಲೆಯವರಿಗೆಲ್ಲ ಈಗ ರಾಜಿಯೇ ? ಅಲ್ಲ—ಮೊದಲಿನ ಹಾಗೆ ಗುರಿಕಾರ ತನದ ಕಾಳಗ ಉಂಟೇ ?" ಎಂದೂ ಕೇಳಿದ. ಹಾಗೆಯೇ ಲೋಕಾಭಿರಾಮ ನಾಗಿ ಮಾತನಾಡುತ್ತ "ಏನು ತಿಮ್ಮಣ್ಣ, ಮಾತನಾಡಿಸಿದರೆ, ಇಂದು ಭಾರೀ ಬೇಸರದ ಧ್ವನಿಯಿಂದ ಮಾತನಾಡುತ್ತೀಯಲ್ಲ?" ಎಂದ. ಈ ಸಂದರ್ಭ ವನ್ನು ಎಣಿಸಿಕೊಂಡು, ತಿಮ್ಮ ತನ್ನ ಜೀವನದ ಕಷ್ಟ ಸುಖಗಳನ್ನು ತೋಡಿ ಕೊಂಡ. "ಎಷ್ಟೆಂದರೂ ನಿತ್ಯವೂ ದುಡಿದು ತಂದು, ತಾನೇ ಅಂಬಲಿ ಅಟ್ಟು, ಅದನ್ನು ನುಂಗುವ ತನ್ನ ಬಾಳಿನಲ್ಲಿ ಗೆಲವು ಮೂಡುವ ಬಗೆಯಿಲ್ಲ" ಎಂದು ದಲ್ಲದೆ "ನಿನ್ನಿಂದಾಗಬೇಕು—ಈ ಕೆಲಸ ನನಗೊಂದು ಪ್ರಾಯ ಹೆಚ್ಚೇ, ಯೋಗ್ಯತೆ ಕಡಿಮೆಯೇ ? ನೀನು ಮೂರನೆಯ ಮದುವೆಯಾದದ್ದು ಮೊನ್ನೆ ಮೊನ್ನೆ. ನನ್ನ ಗ್ರಹಚಾರಕ್ಕೆ ಎಲ್ಲಿಯೂ ನಂಟುತನ ಕೂಡಿಬರುವುದಿಲ್ಲ. ಅದೇನು ಹೇಳು" ಎಂದು ತನ್ನ ವ್ಯಥೆಯನ್ನು ತೋಡಿಕೊಂಡ. ಅದಕ್ಕೆ ತಕ್ಕ ಸಮಾಧಾನ ಪೂಜಾರಿ ಹೇಳುವುದಾದರೂ ಹೇಗೆ? ಮುಷ್ಟಿಯೊಳಗೆ ಬಂದ ಹೆಂಗಳೆಯರನ್ನೆಲ್ಲ ಬಾಚಿ ಮದುವೆಯಾದ ಅವನು, ತಿಮ್ಮನ ಮರುಕ ತಿಳಿಯಲಾರದವನಲ್ಲ. "ಆಯ್ತಪ್ಪ, ನೋಡುವ. ಮುಂದಣ ಜಾತ್ರೆಯೊಳಗೆ ಎಲ್ಲಿಂದಾದರೂ ಒಂದು ನಂಟುತನ ಹೊಂದಿಸಲು ಬಂದೀತೇ—ಎಂದು ನೋಡುತ್ತೇನೆ" ಎಂದ. ಅದಕ್ಕೆ ತಿಮ್ಮ "ದೊಡ್ಡ ವಾಯಿದೆಯನ್ನೇ ಹಾಕಿ ಬಿಟ್ಟೆಯಲ್ಲ, ಏನಾದರೂ ನೀನು ಮಾತನಾಡುವುದಿದ್ದರೆ, ನಾಲ್ಕು ಮಲೆಯ ವರು ಬಂದು ಸೇರುವ ಈ ಜಾತ್ರೆಯ ವೇಳೆ ಸುಲಭ. ನೋಡು, ನಾನು ಬರಿಗೈಯ ನಾದಾರಿ ಎಂದು ತಿಳಿಯಬೇಡ. ದುಡಿದ ಕಾಸು ಇಷ್ಟನ್ನೂ ಹಾಳುಮಾಡಿಲ್ಲ. ಕೈಯಲ್ಲಿಷ್ಟು ರೂಪಾಯಿ ಇವೆ. ಉಳಿದವರು ಹೆಣ್ಣಿಗೆ ಎರಡು ವರಹ ಕೊಟ್ಟು ಮದುವೆಯಾದರೆ, ನಾಲ್ಕು ವರಹ ಕೊಡಬಲ್ಲೆ ನಾನು. ಇನ್ನು, ಅರಿವೆಗೋ, ಅಂಬಲಿಗೋ ಯಾವುದಕ್ಕೂ ಮನೆಗೆ ಬಂದವಳಿಗೆ ಕೊರತೆಯಾಗಲಾರದು" ಎಂದು ಬಿನ್ನವಿಸಿದ.

ಬಿರುಮು ತನ್ನ ಗೆಳೆಯನ ಪರವಾಗಿ, ಆ ಜಾತ್ರೆಯಲ್ಲಿ ಹತ್ತೆಂಟು ಜನ ರನ್ನು ಮಾತನಾಡಿಸಿಯೂ ಆಡಿಸಿದ. ಪರಿಚಿತರನ್ನೂ ಕೇಳಿದ. ಆದರೆ ಅವನ ಕೆಲಸ ಸುಲಭವಾಗಲಿಲ್ಲ. ಒಬ್ಬಿಬ್ಬರು 'ಯಾರು ಅವನಿಗೋ ? ನಿನ್ನ ಹತ್ತಿರ ನಿಂತಿದ್ದನಲ್ಲ—ಏರುಪೇರು ಮೀಸೆಯುವ; ಅವನಿಗೊ ?' ಎಂದರು. ಮೀಸೆ

ಏರುಪೇರಾದರೆ, ಸಂಸಾರ ತಲೆಕೆಳಗಾಗದೆಂದು ಬಿರುಮನಿಗೆ ತಿಳಿದಿದ್ದರೂ, ಅವನ ಕೆಲಸ ಅಷ್ಟು ಸುಲಭವಾಗಿ ಸಾಧಿಸಲಿಲ್ಲ. ನಂಟುತನ ದೈವ ಬರೆದರೆ ಆಗುತ್ತದೆ—ಎಂಬ ನಂಬಿಕೆ ಅವನದ್ದು. ಆ ಮಾತನ್ನೇ ತಿಮ್ಮನಿಗೂ ಹೇಳಿದ.

"ಆದರೂ ನೋಡುವ. ಒಂದು ವರ್ಷದೊಳಗೆ ಏನಾದರೂ ಮಾಡಿ —ಹುಡುಕುತ್ತೇನಪ್ಪ" ಎಂದು ಧೈರ್ಯ ಕೊಟ್ಟನು.

ಜಾತ್ರೆಯ ಮೂರು ದಿನಗಳು ಎಲ್ಲರ ಪಾಲಿಗೆ ತುಂಬ ಸಂತೋಷ ದಿಂದ ಸರಿದರೂ, ತಿಮ್ಮನ ಪಾಲಿಗೆ ಅವು ಗೆಲುವಿನ ದಿನಗಳಾಗಲಿಲ್ಲ. ಹೊರಗೆ ತೊಟ್ಟ—ಎಲೆವಸ್ತ್ರ, ಕೆಂಪಂಚಿನ ಧೋತ್ರಗಳು ಸಹ ಅವನ ಮನದ ಕೊರಗನ್ನು ಮರೆಯಿಸಲಿಲ್ಲ. ತಿಮ್ಮ, ಬಿರುಮ ನುಡಿದ ಮಾತನ್ನೇ ನೆನೆಯುತ್ತ ಬರಬೇಕಾಯಿತು. 'ನಂಟುತನ ಕೂಡಿಸುವುದು ದೈವದ ಕೆಲಸ' ಎಂಬ ಮಾತನ್ನು. ಆದರೆ ಹಾಗೆ ನೆನೆದಷ್ಟು ಸಮಾಧಾನ ಕೊಡಲಾರದ ಮಾತಾಯಿತದು. 'ಇದೆಲ್ಲವೂ ಒಣ ಸಮಾಧಾನ. ಬಿರುಮನಿಗೆ ದೈವ ಮೂರು ಸಾರೆ ಮದುವೆಯಾಗೆಂದು ಬರೆಯಿತೇ ? ಅಥವಾ ಮೂರು ದೈವಗಳು ಸೇರಿ, ಮೂರು ಹೆಣ್ಣುಗಳನ್ನು ಕೊಟ್ಟುವೇ. ಏನಿಲ್ಲ—ತುಕ್ರ ಮೊನ್ನೆ ಮೊನ್ನೆ ಮೂರನೆಯ ಮದುವೆಯಾದ. ಒಟ್ಟಾರೆ ಕುಡಿಯರ ಕೇರಿಯ ಜನಗಳಲ್ಲಿ ನ್ಯಾಯವಿಲ್ಲ. ಕೆಳಗಿನ ಕಣಿವೆಯಲ್ಲಿದ್ದ ಹಾಗೆ, ಒಂದು ಗಂಡಿಗೆ ಒಂದು ಹೆಣ್ಣೆಂಬ ವಾಡಿಕೆಯಿಲ್ಲ. ತಿಂದವರು ತಿಂದರೇ! ಉಪವಾಸವಿದ್ದವರು ಉಪ ವಾಸವಿದ್ದರೇ' ಎಂಬ ತೀರ್ಮಾನ ಮಾಡುತ್ತ ಮನೆಗೆ ಮರಳಿದ.

ಮನೆಗೆ ಮರಳಿದ ತಿಮ್ಮ, ತನ್ನ ಎಲೆವಸ್ತ್ರ, ಹಚ್ಚಡಗಳನ್ನೆಲ್ಲ ಜೋಪಾನವಾಗಿರಿಸಿ, ನಿತ್ಯಜೀವನದ ಕೆಲಸಗಳಲ್ಲಿ ತೊಡಗಿದ. ಧನಿಗಳ ಕೆಲಸ ಮುಗಿದರೆ, ಬೇಟೆಯ ಕೆಲಸವಂತೂ ಇದ್ದೇ ಇರುತ್ತದೆ. ಆದರೆ ಒಬ್ಬನ ಹೊಟ್ಟೆಗೆ ಎಷ್ಟು ಬೇಕಾಗುತ್ತದೆ? ತಾನೇನಾದರೂ ಹಿಡಿಯಬೇಕು, ಅದನ್ನೇ ಬೇಯಿಸಿ ತಿನ್ನಬೇಕು ತನ್ನ ಅಡುಗೆ ತನಗೆ ರುಚಿಸದಿದ್ದಾಗ, ನೆರೆ ಮನೆಯವರಿಗೆ ಬೇಕಾದಷ್ಟು ಬೇಟೆಯಾಡಿ ತಂದುಕೊಟ್ಟು, ಅವರಿಂದ ರುಚಿಯಾದ ಪದಾರ್ಥಗಳನ್ನು ಮಾಡಿಸಿ ತಿನ್ನಬೇಕು. ಇಂಥ ತನ್ನ ಬಾಳು ನಾಯಿಯ ಬಾಳೆಂದು—ಕಾಣುತಿತ್ತು ತಿಮ್ಮನಿಗೆ. ಅದರಲ್ಲೊಂದೇ

ಸಂತೋಷದ ಸಂಗತಿಯೆಂದರೆ 'ಕರಿಯಣ್ಣನಿಗೆ ತಾನು ಬೇಕಾದವನಾಗಿದ್ದೇನೆ' ಎಂಬುದು. ಎಷ್ಟೋ ಬೇಟೆಗಳಲ್ಲಿ ಅವನಿಗೆ ಇವನು ಬೆಂಬಲ; ಇವನಿಗೆ ಅವನು ಬೆಂಬಲ. ಕರಿಯನಿಗೆ ಮಲೆರಾಯನ ದರ್ಶನಕ್ಕೆ ಹೋಗುವ ಮನಸ್ಸಾದರೆ, ಈತ ಅನಿವಾರ್ಯವಾಗಿ ಅವನ ಜತೆಗೆ ಹೋಗುತ್ತಿದ್ದ. ಅವನ ಜತೆಗೆ ಕರಡಿಗಳ ಗುಹೆಯ ತನಕವೂ ಹೋಗಿ ಬರುವುದುಂಟು. ತನ್ನ ಬೇಟೆಯ ಹುಚ್ಚನ್ನೆಲ್ಲ ಕರಿಯ ಅವನಲ್ಲಿ ತೋಡಿಕೊಳ್ಳುವುದುಂಟು. ಹಿಂದೆ ತಾವು ಕರಡಿ ಮರಿ ಹಿಡಿದ ಕತೆ ಹೇಳಿ "ಪಾಪ, ಆ ಮರಿ ಏನೋ ಆಗಿ ಮೂರು ತಿಂಗಳಲ್ಲೇ ಸತ್ತಿತು; ಇಲ್ಲದೆ ಹೋಗಿದ್ದರೆ ಇಷ್ಟು ಹೊತ್ತಿಗೆ ಅದು ದೊಡ್ಡ ಕರಡಿಯಾಗುತ್ತಿತ್ತೋ ಏನೋ" ಎನ್ನುತ್ತಾನೆ. ಮೊದಲಿನಂತೆಯೇ ಹುಚ್ಚುಹುಚ್ಚಾಗಿ ದೂರ ದೂರ ಅಲೆದಾಡುವುದಕ್ಕೆ ಕರಿಯನಿಗೆ ಧೈರ್ಯ ಇಲ್ಲವೆಂದಲ್ಲ. ಬೂದ ಆಗಾಗ ಅವನನ್ನು ತಡೆಯುತ್ತಾನೆ. "ನೀನು ಹಾಗೆಲ್ಲ ಒಬ್ಬೊಬ್ಬನೇ ಹೋಗಿ ಇಲ್ಲದ ಕೆಲಸ ಮಾಡಬಾರದು; ದೊಡ್ಡವನಾದೆ. ಕೇರಿಯ ಯಜಮಾನ ನೀನು. ನಿನಗೇನಾದರೂ ಆದರೆ, ನಮಗೆ ಕೆಟ್ಟ ಹೆಸರು ಬರುತ್ತದೆ. ನೀನು ಸ್ವಲ್ಪ ಜಾಗ್ರತೆಯಿಂದಿರಬೇಕು. ಅಲ್ಲದೆ ಸಣ್ಣದಿರುವಾಗ ಹೇಗೂ ಆಗುತ್ತದೆ. ದೊಡ್ಡವನಾದಮೇಲೆ ಎಲ್ಲರ ಹಾಗೆ ಧನಿಗಳ ಕೆಲಸದಲ್ಲಿ ಸೇರಬೇಡವೇ? ದಿನವೆಲ್ಲ ಬೇಟೆಗೀಟೆ ಎಂದು ತಿರುಗಿದರೆ ಆಗುತ್ತದೆಯೇ" ಎಂದು ಅವನ ಅತ್ಯುತ್ಸಾಹಕ್ಕೆ ಇಲ್ಲದ ಬಿರಿ ಹಾಕುತ್ತಿದ್ದ. ಹಾಗಾಗಿ ಅಂತರಂಗದ ಆಸೆಯೇನಾದರೂ ಇದ್ದರೆ ಅದನ್ನು, ತಿಮ್ಮನೆದುರಿಗೆ ಆತ ತೋಡಿಕೊಳ್ಳಬೇಕಾಗುತ್ತದೆ. ಅಂಥ ಆಸೆಗಳಲ್ಲಿ ಆನೆ ಹಿಡಿಯಬೇಕು, ಪಳಗಿಸಬೇಕು, ಮಾವುತನಾಗಬೇಕು—ಎಂಬ ಆಸೆ ಸುಬ್ರಹ್ಮಣ್ಯಕ್ಕೆ ಹೋದಂದಿನಿಂದ ಒಂದೇ ಸವನೆ ಅವನಲ್ಲಿ ಕುದಿದು ಬಂದುವು. ಆ ಆಸೆಯಿಂದಲೇ ಪ್ರೇರಿತನಾದ ಕರಿಯ, ಎಷ್ಟೋ ಬಾರಿ ಅನ್ನುತ್ತಿದ್ದುದುಂಟು. "ಏನು ಗುರಿಕಾರತನವೊ ಮಣ್ಣೋ! ನನಗೆ ಅದೆಲ್ಲ ಬೇಕನ್ನುತ್ತೀಯಾ? ಆದರೆ ಆನೆಯ ಮಾವುತನಾಗಬೇಕು. ನಾಲ್ಕೂರುಗಳನ್ನು ತಿರುಗಬೇಕು— ಇದೇನು? ಕೇರಿಯಲ್ಲೇ ಹುಟ್ಟಿ, ಕೇರಿಯಲ್ಲೇ ಮಣ್ಣುಗೂಡುವ ತನಕ, ಕಂಡದ್ದನ್ನೇ ಕಾಣುವುದು, ಮಾಡಿದ್ದನ್ನೇ ಮಾಡುವುದು" ಎನ್ನುತ್ತಾನೆ. ಅಂಥ ಆಸೆಗಳಿಗೆ ಈಗೀಗ ಪುಷ್ಟಿ ಕೊಟ್ಟು, ಸಂಭಾಷಿಸುವವನೆಂದರೆ ತಿಮ್ಮ

ಒಬ್ಬನೇ. "ನೋಡುವ—ದಿನ ಬಂದೀತು. ನಾನೂ ಇದ್ದೇನೆ ನಿನ್ನ ಜತೆಗೆ. ನಾನು ಆನೆಯ ಹಿಂಡಿಲ್ಲಿರುತ್ತದೆ, ಒಂದೆರಡು ಬೇರೆ ಬೇರೆಯಾಗಿ ಅಲೆದಾಡುವುದುಂಟೇ—ಎಂದು ಹುಡುಕಿ ನೋಡುತ್ತೇನೆ. ಕರ್ಪುರಹಾಕಿ ಹಿಡಿಯಬೇಕು; ಯಾರಿಗೂ ತಿಳಿಯದ ಹಾಗೆ ಮಾಡಬೇಕು. ಏನೋ, ಈಗ ಒಂದು ಕುಣಿ ತೆಗೆಯುವುದಕ್ಕೇ ಒಂದು ವರ್ಷ ಹಿಡಿದೀತು. ಅದು ದೊಡ್ಡದಲ್ಲ—ಆದರೆ ಮರಿಯನ್ನು ಹಿಡಿದರೆ ಒಳಿತಾದೀತು. ದೊಡ್ಡ ಆನೆ ಹಿಡಿದರೆ ಸಾಕುವುದು ಹೇಗೆ? ಪಳಗಿಸುವುದು ಹೇಗೆ? ಅದೇ ಹೆದರಿಕೆ ನನಗೆ" ಎಂದು ಅವನ ಆಸೆಗಳಲ್ಲಿ ಪಾಲುಗಾರನಾಗುತ್ತಿದ್ದ. ಕರಿಯನ ಆಸೆಗೆ ಸಹಾನುಭೂತಿ ಬಯಸುತ್ತಿದ್ದ. ಕರಿಯನೀಗ ಚಿಕ್ಕವನಲ್ಲ. ಪ್ರಾಯ ತುಂಬುತ್ತ ಬಂದಿದೆ, ಚೆನ್ನಾಗಿ ತುಂಬಿದಂತೆಯೂ ಕಾಣುತ್ತದೆ. ಬಯಸಿದರೆ, ಮದುವೆಯ ಯೋಚನೆ ಮಾಡಬಹುದು. ಗುರಿಕಾರನಾದುದರಿಂದ ಒಲಿದು ಬರುವ ಹೆಣ್ಣು ದೊರಕೀತು. ಹೀಗಾಗಿ, ಹೆಣ್ಣಿನ ವಿಚಾರದಲ್ಲಿ ತಿಮ್ಮನಾಡುತ್ತಿದ್ದ ರಸಿಕತನ ಮಾತುಗಳಿಗೆ, ಕರಿಯ ತಲೆದೂಗುವುದೂ ಉಂಟು. ಆದರೆ ನಾಚಿಕೆಯಿಂದಲೋ, ಇನ್ನೇತರಿಂದಲೋ, "ಆದರೆ—ಅದಕ್ಕೇನವಸರ. ನನ್ನಷ್ಟು ಸಣ್ಣವರು ಯಾರು ಈಗ ಕೇರಿಯಲ್ಲಿ ಮದುವೆ ಆಗಿದ್ದಾರೆ! ನಿನಗೇ ಇನ್ನೂ ಆಗಿಲ್ಲ. ನನಗೇನವಸರ" ಎಂದರೆ ಸಾಕು, ತಿಮ್ಮ ಸಂಸಾರದ ಸುಖದುಃಖ ತಿಳಿಯದ ಕರಿಯನ ಮುಂದೆ ತನ್ನ ದುಃಖ ತೋಡಿಕೊಳ್ಳುತ್ತಾನೆ. ಕೊನೆಗೆ ತಾನು ಸೋತವನೆಂದು ಕಾಣಿಸಬಾರದ್ದಕ್ಕೆ "ಹಾಗೆ ನಾನು ಹೆಣ್ಣಿಗೆ ಮರುಳಾಗಿ ಮಾತನಾಡುತ್ತೇನೆಂದು ತಿಳಿಯಬೇಡ. ಅದಲ್ಲ; ಹಾಗೆ ಎಷ್ಟೆಂದರೂ ಗಂಡಸು ನಾನು. ದಿನಬೆಳಗು ಅಂಬಲಿ ಬೇಯಿಸುವುದು, ಗಂಡಸಿಗೆ ಹೇಳಿದ ಕೆಲಸವೇ?" ಎಂದು ಒಮ್ಮೆ ಅಂದರೆ, ಇನ್ನೊಮ್ಮೆ "ಏನೋ ನೋಡು, ಕರಿಯ, ಎಲ್ಲಿಯ ತನಕ ಬೂದನ ಮನೆಯಲ್ಲಿರುತ್ತೀ? ಅದು ಒಳಿತಲ್ಲ. ಬೇರೆ ಬಿಡಾರ ಹೂಡಬೇಕು. ಮದುವೆಯಾಗ, ಚೆಂದವಾಗಿ ನೀನು ಸ್ವಂತ ಬಾಳು ಬಾಳಬೇಕು" ಅನ್ನುತ್ತಾನೆ ಒಮ್ಮೆ ಮೂರನೆ ಬಾರಿ "ಅದೆಲ್ಲ ಬೇಸರ ಅಲ್ಲ—ನನಗೆ ಕಾಣುವುದು. ಮದುವೆಯಾಗದೆ ಸತ್ತರೆ ಈ ಜೀವವು ನಾಳೆಗೆ ಪ್ರೇತವೋ, ಪಿಶಾಚಿಯೋ ಆಗುತ್ತದೆ—ಅನ್ನುತ್ತಾರೆ. ನಾಳೆಗೆ ನಾನು ಸತ್ತು ಪಿಶಾಚಿಯಾಗುವುದು; ನನಗೆ 'ತಣಿವು ಕೊಡಿ', 'ನನಗೆ ಲಗ್ನ ಮಾಡಿಸಿ'

ಎಂದು ಕೇರಿಯವರನ್ನು, ನಂಟರಿಷ್ಟರನ್ನು ಕಾಡುವುದು—ಅದು ತರವಲ್ಲ. ನೋಡಿದೆಯಲ್ಲ ಮೊನ್ನೆ—ಚನಿಯಣ್ಣನ ಸತ್ತ ಮಗಳು ಬಂದು, ತಾಯಿಯನ್ನು ಮೇಲಿಂದಮೇಲೆ ಕಾಡಿ ತಿಳಿಸಿದ್ದಕ್ಕೆ, ದೂಮಣ್ಣನ ಸತ್ತ ಮಗನಿಗೂ ಅವಳ ಜಕಣಿಗೂ ಲಗ್ನಮಾಡಿದ್ದನ್ನು! ಮದುವೆಯಾಗದೆ ಯಾರೂ ಸಾಯಬಾರದು. ಸತ್ತವರು ಆಗುವುದೇ ಪ್ರೇತ. ಜೀವ ನೆಟ್ಟಗೆ ಹಿರಿಯರಿರುವಲ್ಲಿಗೆ ಹೋಗದೆ, ಕಾಡು, ಬೀಡು ಸುತ್ತಿ, ಯಾರು ಯಾರನ್ನು ಕಾಡಿ, ತನಗೆ ಲಗ್ನ ಮಾಡಿಸು—ಎಂದು ಬೇಡುವ ಪಾಡು ಚೆನ್ನಲ್ಲ ಆ ಹೆದರಿಕೆಯೇ ನನಗೆ ತುಂಬ. ಈಗೇನು ಅವಸರವಿಲ್ಲ. ಆದರೆ ಸಾಯುವುದರೊಳಗೆ ಲಗ್ನವಾಗದೆ ಸಾಯಬಾರದು" ಎನ್ನುತ್ತಾನೆ.

ಕರಿಯನಿಗೆ ತಿಮ್ಮನ ವಿಷಯದಲ್ಲಿ ನ್ಯಾಯವಾದ ಸಹಾನುಭೂತಿ ಉಂಟಾಗಿಯೇ ಉಂಟಾಗುತ್ತದೆ. ಕಾರಣ, ಕೇರಿಯ ಗುರಿಕಾರನಾದ ಅವನು ಕೇರಿಯಲ್ಲಿ ಜನಕ್ಕೆ 'ಜಕಣಿ' ಮೈಮೇಲೆ ಬರುವಾಗ—ಹಿರಿಯನಾಗಿದ್ದು, ಸಮಾಧಾನ ಹೇಳಬೇಕಾಗುತ್ತದೆ. 'ನೀನು ಯಾರು? ನಿನಗೇನು ಬೇಕು? ನೀನು ಈ ಜೀವವನ್ನು ಬಿಡು—ನಮಗೆ ಹಿಂಸೆಕೊಡಬೇಡ. ನಿನಗೆ ಆಹಾರ ಬೇಕೇ? ಕೋಳಿ ಬೇಕೇ? ಲಗ್ನ ಬೇಕೇ? ಮತ್ತೇನು ಬೇಕು?' ಎಂದು ಕೇಳಿ, ತನಿಖಿಮಾಡಿ, ತಕ್ಕ ಸಮಾಧಾನ ಹೇಳಿ ಮೈಯಾಂತುಗೊಂಡಿರುವ ಜಕಣಿ, ಪ್ರೇತಗಳನ್ನು ಕೇಳಿ ಅವನ್ನು ತೃಪ್ತಿಪಡಿಸಿ, ಬಂದ ಬಾಧೆ ನಿವಾರಿಸುವ ಕೆಲಸ ಅವನದ್ದು. ಅಜ್ಜನಿದ್ದಾಗ, ಆತ ಮಾಡುತ್ತಿದ್ದ ಈ ಹೊರೆ, ಈಗ ಅವನ ಕೊರಳಿಗೆ ಬಂದಿದೆ. ಮನುಷ್ಯರಿಗೆ ಹೆದರಲಾರದೆ ಕರಿಯ, ಪ್ರೇತಾತ್ಮರಿಗೆ ಹೆದರಿಯೇ ಹೆದರಬೇಕಲ್ಲ. ಹಾಗೆ ಹೆದರುತ್ತಿರುವ ತಿಮ್ಮನನ್ನು ಕಂಡು ಆತ ಸಹಾನುಭೂತಿ ತಾಳಲೂ ಬೇಕು.

ಇಂಥ ಪ್ರಸಂಗಗಳು ಬಂದಾಗಲೇ, ಗುರಿಕಾರನೊಡನೆ ತಿಮ್ಮ ತಮ್ಮ ಬಳಗದ ಹೆಣ್ಣು ಗಂಡಿನ ವಿತರಣೆಯನ್ನು ಕುರಿತು, ಅತೃಪ್ತಿಪಡುತ್ತಾನೆ. "ನೋಡು ಕರಿಯಣ್ಣ, ಹಾಗೆ ಈ ಮಲೆಯಲ್ಲಿ ಹೆಣ್ಣು ಕಡಿಮೆಯಾದರೆ ಆ ಮಲೆಯಲ್ಲಿ ಹೆಚ್ಚಿರಬಹುದು. ಕೊಟ್ಟು ತರುವಾಗ 'ಒಂದು ಹೆಣ್ಣಿಗೆ ಒಂದು ಗಂಡು'—ಎಂಬ ನ್ಯಾಯ ಸಂದೀತು. ಬದಲು, ಇರುವುದರಲ್ಲಿಯೇ ಕೆಲವರು ಎರಡು ಮೂರು ಲಗ್ನವಾದರೆ, ಉಳಿದವರ ಬಾಳು ಸತ್ತ ಪ್ರೇತವಾಗುವುದೇ

ಆಯಿತಲ್ಲ! ನನಗೆ ಕೇಳುವ—ಎಂದಿದೆ ಈ ಬಾರಿ ನೇಮದಲ್ಲಿ, ಈ ಪ್ರಶ್ನೆಯನ್ನು. ದೈವ ಎಲ್ಲದಕ್ಕೂ ಸಮಾಧಾನ ಹೇಳುತ್ತದೆ; ಇದಕ್ಕೇನಂದೀತು? 'ನಿನ್ನ ರಾಜ್ಯದಲ್ಲಿ ಹೀಗೆ ನಡೆಯುವುದು ಸಮನೇ?' ಎಂದು ಕೇಳಿದರೆ ಆ ಕಲ್ಕುಡ ಏನಂದಾನು?" ಎಂದರೆ, "ನೀನೆನ್ನುವುದು ನ್ಯಾಯವೇ. ಆದರೆ ಹಿಂದಿನಿಂದಲೂ ನಡೆದುಬಂದಿದೆ ಈ ರೀತಿ. ಆಗ ಕಾಲಗತಿ ಹೇಗಿತ್ತೋ, ಈಗ ಹೇಗೋ. ಆಗ ಹೆಣ್ಣು ಹೆಚ್ಚಿರಬಹುದು. ಆದರೂ ನೀನು ಕೇಳು" ಅನ್ನುತ್ತಾನೆ ಕರಿಯ.

"ನಾನು ಕೇಳುವುದರಲ್ಲಿ ಚೆಂದವಿಲ್ಲ. ಗುರಿಕಾರನಾದ ನೀನು ಕೇಳಬೇಕು. ನಾನು ಕೇಳಿದರೆ ಉಳಿದವರು ನಕ್ಕಾರು. ತನಗಿಲ್ಲದ್ದಕ್ಕೆ ಹೀಗೆ ಅನ್ನುತ್ತಿದ್ದಾನೆ ಎಂದಾರು. ನೀನಾದರೆ ಹಾಗಲ್ಲ—ಕೇರಿಯ ಯಜಮಾನ."

"ಅಯ್ಯಯ್ಯೋ, ನಾನು ಕೇಳುವುದಿಲ್ಲ ನಾಳೆ ಬೂದಣ್ಣ ಏನಾದರೂ ಅಂದಾನು. ಹಾಗೆ ಯಾಕೆ ಕೇಳಿದೆ? ಇವನಿಗೇನು ಮದುವೆಯ ಗಿರ ಹಿಡಿಯಿತಪ್ಪ—ಎಂದರೇನು ಗತಿ."

ಇಂತಹ ಮಾತುಗಳು ತೀರ್ಮಾನವಾಗುವುದುಂಟೇ? ಆದರೂ ಆಸೆ ಹಿಂಗದ ತಿಮ್ಮ ಅನೇಕ ವೇಳೆ, ಬೇಟೆಯ ಎಡೆಯಲ್ಲಿ ಅವಕಾಶ ಮಾಡಿಕೊಂಡು, 'ಹೆಣ್ಣಾನೆ ಸಿಕ್ಕೀತೆ' ಎಂದು ಅರಸಿ ಹೋದುದುಂಟು. ತೊರೆಯ ಬಳಿಗೆ ಹೋಗಿ ಕೆಂಪಿಯ ಮುಖ ಕಾಣಲು ಆಸೆಪಟ್ಟು, ಅವಳ ಉದಾಸೀನ ವೃತ್ತಿಗೆ ಗುರಿಯಾಗಿ—ನೊಂದು, ಮರಳಿದ್ದುಂಟು. ಅಂತರಂಗದಲ್ಲಿ 'ನನಗೆ ಗೊತ್ತು ಇವಳ ಸಂಪನ್ನತೆ' ಎಂದುದೂ ಉಂಟು. ಎಡೆ ಎಡೆಯಲ್ಲಿ ಹಿರಿಮಲೆಯ ಪೂಜಾರಿ ಬಿರುಮನಲ್ಲಿಗೆ ಹೋಗಿ, "ಏನು ಮಾಡಿದೆಯಣ್ಣ, ಮರೆತೇ ಬಿಟ್ಟೆಯೋ ನನ್ನನ್ನು" ಎಂದುದುಂಟು. ಬಿರುಮ ಇಷ್ಟೇ ಹೇಳುತ್ತಿದ್ದ: "ನಾನು ಮಾತಾಡಿದ್ದೇನೆ. ನನ್ನ ಮಾತಿನಲ್ಲಿ ವಿಶ್ವಾಸವಿಲ್ಲವೇ ನಿನಗೆ? ಜಾತ್ರೆಯ ವಾಯಿದೆ ಹಾಕಿದ್ದೇನಲ್ಲ. ಅವಸರ ಮಾಡಿದರೆ ಹೇಗಾಗುತ್ತೆ!" ಎಂದು.

"ಎಲ್ಲಿಯಾದರೂ ನೋಡಿದ್ದೀಯಾ—ಹೇಳು" ಎನ್ನುತ್ತಾನೆ.

"ನೋಡಿದ್ದೇನೆ, ಬಿಟ್ಟಿದ್ದೇನೆ. ಅದು ಯಾಕೆ ನಿನಗೆ ಹೇಳು? ಆಯಿತು, ಆಗುತ್ತದೆ—ಎಂದು ನಿಘಂಟಾದಮೇಲೆ ಹೇಳುತ್ತೇನಲ್ಲ ನಿನಗೆ.

ನಾನೇ ಬಂದು ಹೇಳುತ್ತೇನೆ. ಅಂಥ ದೊಡ್ಡ ಕೆಲಸವೋ ಏನದು, ಬಿಡು ಆ ಯೋಚನೆ" ಎಂದರೆ ಸಿರಾಶೆಯಲ್ಲಿ ಆಸೆ ತಾಳಿ, ಆತ ಮನೆಗೆ ಮರಳುತ್ತಾನೆ.

ಬೇಸಿಗೆಯು ಕಾಲಿರಿಸಿತು. ಕೇರಿಯ ಜನರ ಕೆಲಸ ಕುಮರಿಯ ಬೇಸಾಯಕ್ಕೆ ತಿರುಗಿತು. ವರ್ಷ ವರ್ಷ ಕಾಡು ಸುಟ್ಟು ಸುಟ್ಟು ಕುಮರಿ ಬೆಳೆಯುವ ಭೂಮಿ, ಕೇರಿಯಿಂದ ದೂರ ದೂರ ಹೋಗುತಿತ್ತು. ಈ ವರ್ಷ ಅದಿನ್ನೂ ದೂರವಾಗಿದೆ. ಗಂಡು ಹೆಣ್ಣುಗಳೆನ್ನದೆ ದುಡಿದರು, ಕಾಡು ಕಡಿದರು; ಬಿದ್ದ ಮರಗಳನ್ನು ಸುಟ್ಟರು. ನೆಲ ಅಗತೆ ಮಾಡಿದರು, ಸುತ್ತಲೂ ಬೇಲಿ ನಟ್ಟರು—ಮಳೆಗಾಲದ ಮನೆ ಹೂಡಿದರು. ಬಿಡುವಿಲ್ಲದೆ ಕೆಲಸ ಸಾಗುವಾಗ ಮನಸ್ಸಿನ ಯೋಚನೆ, ಚಿಂತನೆಗಳು ಹೆಚ್ಚಾಗಿ ಒದಗುತ್ತಿದ್ದಿಲ್ಲವಾದರೂ, ತಿಮ್ಮನ ಮಟ್ಟಿಗೆ 'ಏತರ ಬಾಳಿದು? ವರ್ಷ ವರ್ಷವೂ ಇದೇನೆ' ಎನ್ನಿಸದೆ ಹೋಗಲಿಲ್ಲ. ಇಂಥ ದಿನಗಳಲ್ಲಿ ವರ್ಷದ ಕೋಲ ನಡೆಯುವ ಏರ್ಪಾಟಾಯಿತು. ಸಂಕ್ರಾಂತಿಯ ದಿನ ಅದು ನಡೆಯುವುದೆಂದು ಗೊತ್ತಾಗಿ, ಎರಡೂ ಮಲೆಯವರೂ ಸೇರಿದರು—ಮಾತ್ರವಲ್ಲ, ಆಚೀಚಿನ ಮಲೆಯ ಬಂಧುಗಳು ಸಹ ಅದಕ್ಕೆ ದಯಮಾಡಿಸಿದ್ದರು. ಎಲ್ಲಿಲ್ಲದ ಉತ್ಸಾಹದಿಂದ ಈ ಬಾರಿಯ ಉತ್ಸವ ನಡೆದಂತೆ ಕಾಣುತ್ತದೆ. ದೈವ ಪೂಜಾರಿಗೆ, ಕಳೆದ ಬಾರಿ, ಹಿರಿ ಮಲೆಯ ಗುರಿಕಾರ ಪಟ್ಟದ ಕತ್ತಿ ಕೈಗೆ ಕೊಟ್ಟಿದ್ದರೆ ಈ ಬಾರಿ ಕರಿಯಣ್ಣ—ಆ ಗೌರವ ಪಡೆದ. ಅಲ್ಲದೆ ದೈವ ಆವೇಶದಿಂದ ಪೂಜಾರಿಯ ಬಾಯಿಯಿಂದ ನುಡಿಗಳನ್ನು ಹೊರಡಿಸುತ್ತಿದ್ದಾಗ, ವಿಶೇಷವಾದ ದರ್ಪವೇನು ಕಾಣಿಸಲಿಲ್ಲ. ಕೇರಿಯವರ ನಡೆನುಡಿ ಮೆಚ್ಚಿದಂತೆ, ತನಗೆ ತೃಪ್ತಿಯಾದಂತೆ, 'ಕಿರಿಮಲೆಯ ಗುರಿಕಾರಿಕೆ ಜಗಳ ಬಗೆಹರಿದದ್ದಕ್ಕೆ ಅತಿಸಂತೋಷ'ವೆಂದೂ ಹೇಳಿತು. ಅದರಿಂದ ಎಲ್ಲರಿಗೂ ತುಂಬ ಉತ್ಸಾಹ. ಬೂದ ಮಾತ್ರ ಕರಿಯನ ಕಿವಿಯಲ್ಲಿ "ಅಣ್ಣ, ಕಳೆದ ಬಾರಿ ಏಲಕ್ಕಿ ಕದ್ದವರಾರೆಂದು ಕೇಳು" ಎಂದು ಕೇಳಿದ. ತುಕ್ರ "ಅಯ್ಯೋ, ಮರೆತಿದ್ದೆ, ಕೇಳಲೇಬೇಕು" ಎಂದ. ಕರಿಯನಿಗೆ ಕೇಳಲಿಕ್ಕೆ ಸಂಕೋಚ. ಬೂದ ಹೇಳಿದ ಮೇಲೆ ಕೇಳದೇ ಉಪಾಯವಿಲ್ಲ. ಈ ಪಿಸು ಮಾತಾಡುವಾಗ ಕರಿಯನ ಬೆನ್ನಿಗಿದ್ದ ತಿಮ್ಮನ ಎದೆಯಲ್ಲಿ 'ಪಿಟ ಪಿಟ'ಯಾಗುತ್ತಿತ್ತು. ಸಮೀಪ

ನಿಲ್ಲುವುದಕ್ಕೂ ಧೈರ್ಯವಾಗದೆ, ಹತ್ತು ಹೆಜ್ಜೆ ಹಿಂದೆಗೆದು, ಎತ್ತೆತ್ತಲೋ ನೋಡಿ ನಿಂತ. ಕರಿಯ ಗೊತ್ತಿದ್ದೂ ಇಲ್ಲದವನಂತೆ "ನಮ್ಮ ಮಲೆಯಿಂದ ಏಲಕ್ಕಿ ಕದ್ದು ಮಾರಿದ್ದಾರೆ—ಎಂದು ಧನಿಗಳು ಅನ್ನುತ್ತಾರೆ. ಏನು ಮಾಡುತ್ತೀಯಪ್ಪ" ಎಂದು ಕೇಳಿದ. ಬೇಕೆಂತಲೇ ಕದ್ದಿದ್ದಾರೆ ಅನ್ನಲಿಲ್ಲ. 'ಕದ್ದು ಮಾರಿದ್ದಾರೆ' ಅಂದ.

ದೈವ "ಛೆ, ಛೆ. ಹಾಗೂ ಉಂಟೇ? ಹಾಗೂ ಉಂಟೇ? ನನ್ನ ರಾಜ್ಯದಲ್ಲಿ ಹಾಗಾಗುವುದೂ ಉಂಟೇ? ಇರಲಾರದು, ಇರಲಾರದು" ಎಂದು ಪ್ರಶ್ನೆಗೆ ತೇಲಿಸಿ ಉತ್ತರ ಕೊಟ್ಟಿತು. ಕೇರಿಯವರೆಲ್ಲರಿಗೂ ಇನ್ನಷ್ಟು ಸಮಾಧಾನವಾಯಿತು. ತಿಮ್ಮಗೆ 'ದೈವವೇ ತನ್ನ ಮಾನ ಉಳಿಸಿತು' ಎಂದೂ ಕಂಡಿತು. ಈಗ ಆತ ಲಘುಮನಸ್ಕನಾದ. ಆತ ಪೂಜಾರಿಯನ್ನು ಕೃತಜ್ಞತೆಯ ಕಣ್ಣುಗಳಿಂದ ನೋಡುತ್ತಿದ್ದಾಗ, ಒಮ್ಮಿಂದೊಮ್ಮೆಗೇ ದೈವ ಚೀತ್ಕಾರವೆಸಗಿತು. "ಏನು? ಏನು?" ಎಂದು ಎರಡು ಮಲೆಯವರೂ ಕೇಳಿದರು. ಬಲು ಹೊತ್ತು ಮೌನವಾಗಿದ್ದು, ಆ ಬಳಿಕ ಘೂಂಕರಿಸಿ, ಘರ್ಜಿಸಿ, "ನನ್ನ ಮಲೆಯವರು, ನನ್ನ ಕೇರಿಯವರು ಕುಲ ಬಿಟ್ಟು ಹೋದದ್ದಾದರೆ ರಕ್ತ ಕಾರಿ ಸಾಯುತ್ತಾರೆ. ಹಾಗೆ ಹೋದದ್ದಿದ್ದರೂ ಕ್ಷಮಿಸುತ್ತೇನೆ. ತಿರುಗಿ ತಪ್ಪುಕಾಣಿಕೆ ಕೊಟ್ಟು, ಬಂದು ಸೇರಲಿ. ಇಲ್ಲವಾದರೆ ಅವರ ಕುಲವನ್ನೇ ಸುಟ್ಟು ಧ್ವಂಸ ಮಾಡುತ್ತೇನೆ" ಎಂದು ಅಪ್ಪಣೆ ಕೊಡಿಸಿತು. ಪ್ರತಿಯೊಬ್ಬರೂ ಮುಖ ಮುಖ ಕಂಡರು. ಯಾರೊಬ್ಬರಿಗೂ ಏನೊಂದೂ ಅರ್ಥವಾಗಲಿಲ್ಲ. ಗುರಿಕಾರರಿಬ್ಬರೂ "ಏನು ಸಂಗತಿ" ಎಂದು ದೈವವನ್ನು ಕೇಳಿದರು. ಅದಕ್ಕೆ ದೈವ, "ಯಾರ ತಪ್ಪು—ಎಂದರೆ ಮಾಡಿದ ಅವರಿಗೆ ತಿಳಿದಿದೆ. ನಾನು ತೋರಿಸುವುದಕ್ಕೇನುಂಟು? ನನ್ನ ಮಾತು ಮಾತೇ?" ಎಂದಂದಿತು. ಆ ಬಾರಿಯ ಪೂಜೆ ವಿಚಿತ್ರವಾದೊಂದು ಒಡಪಿನಿಂದ ಮುಕ್ತಾಯಗೊಂಡು, ಅನೇಕರ ಉತ್ಸಾಹವನ್ನು ತಗ್ಗಿಸಿತು. ಬಹು ಜನಕ್ಕೆ ತಿಳಿಯದ ಸಮಸ್ಯೆಯಾಗಿತ್ತು ಅದು. ಆಚೀಚೆ ವಿಚಾರಿಸಿ, ತಿಳಿಯಲು ಮಾಡಿದ ಪ್ರಯತ್ನ ತತ್ಕಾಲಕ್ಕೆ ಸಫಲವಾಗಲಿಲ್ಲ. ತಿಮ್ಮನಂತು "ಏನಣ್ಣ ಕರಿಯ, ದೈವ ಹೇಳಿದ್ದೇನೆಂದೇ ಗೊತ್ತಾಗುವುದಿಲ್ಲವಲ್ಲ" ಎಂದು ಚರ್ಚಿಸಿ, ಉತ್ತರ ಗಳಿಸಲಾರದೆ ಹೋದ. ಮನದಲ್ಲಿ—'ಪ್ರಾಯಶಃ ಇದು ಕೆಂಪಿಗೂ ಕೆಂಪಿಯಂಥವರಿಗೂ ಹೇಳಿದ ಮಾತಿರಬಹುದು' ಎಂಬ ಊಹೆ ಕಟ್ಟಿಕೊಂಡ.

ರಾತ್ರಿಯ ಉತ್ಸವದಲ್ಲಿ ಎಲ್ಲರೂ ಭಾಗಿಗಳಾಗಿ ಮನೆಗೆ ಮರಳಿದರು. ಆಗಲೂ, ಅದರ ಮೊದಲೂ, ಉತ್ಸಾಹ ಕುಂದಿದವರಾಗಿ ಭಯಭೀತರಾಗಿ ತುಟಿಯೆತ್ತದೆ ದಿನಕಳೆದವರೆಂದರೆ, ಹಿರಿ ಮಲೆಯ ಚೋಮ, ಮತ್ತಾತನ ಹೆಂಡತಿ. ದೈವದ ಮಾತು ಅವರ ಹೃದಯವನ್ನು ನೆಟ್ಟಗೆ ನಾಟಿತು. ತಮ್ಮ ಹುಡುಗಿ ಗಿಡ್ಡಿಯ ವಿಚಾರದಲ್ಲಿ ದೈವ ನುಡಿದ ಮಾತದು. ಬೇರೆ ಯಾರಿಗೂ ತಿಳಿಯಲಾರದ ರಹಸ್ಯ ದೈವಕ್ಕೆ ತಿಳಿಯಿತು ಎಂದು ಖಂಡಿತವಾಯಿತು. ಮಗಳು ಮಾಡಿದ ಪಾಪಕ್ಕೆ, ತಾವು ತಲೆ ತೆರುವಂತಾಯಿತಲ್ಲ—ಎಂಬ ಭಯಭೀತಿಗೆ ಒಳಗಾಗದಿದ್ದಾರೆಯೇ ಅವರು? ಅದರಲ್ಲಿ ಒಂದೇ ಒಂದು ಆಸೆಯ ಕಿರಣವೆಂದರೆ—ಹೋದವಳು ಮರಳಿ ಬಂದರೆ, ತಪ್ಪುಕಾಣಿಕೆ ಕೊಟ್ಟರೆ, ದೈವ ಕ್ಷಮಿಸುವೆನೆಂದದ್ದು! ಅದೊಂದೇ ಧೈರ್ಯದ ಮಾತು. ಅದನ್ನೇ ನೆಚ್ಚಿಕೊಂಡು, ಅವರ ಮುಂದಿನ ಜೀವನ ಉಳಿಯಬೇಕು. ಇಲ್ಲದೇ ಹೋದರೆ ತಮ್ಮ ಭವಿಷ್ಯ ಒಳಿತಾಗಲಾರದೆಂದು—ಅವರು ಊಹಿಸಬೇಕಾಯಿತು.

## ಅಧ್ಯಾಯ ೧೧

ದಂಡೆಗೆ ಮೂತಿ ಚಾಚಿ ಮಲಗಿಕೊಂಡ ಅವಳಿಜವಳಿ ಮೊಸಳೆಗಳಂತೆ, ಸಹ್ಯಾದ್ರಿಯ ಉನ್ನತ ಶ್ರೇಣಿಯಿಂದ ಕವಲೊಡೆದು, ನಿಡಿದು ಚಾಚಿ ನಿಂತುವು—ಹಿರಿ ಕಿರಿಯ ಮಲೆಗಳು. ಆ ಎರಡು ಮಲೆಗಳಲ್ಲಿ ಹಿರಿ ಮಲೆ ಹೆಸರಿಗೆ ತಕ್ಕಂತೆ ಕಿರಿ ಮಲೆಗಿಂತ ತುಸು ಉನ್ನತವೂ ನೀಳವೂ ಆದದ್ದು. ಅದರ ಒಂದು ಮೈ ಇನ್ನಷ್ಟು ಕಡಿದಾಗಿದ್ದು, ಅರಣ್ಯದ ದಟ್ಟಣಿ ತುಸು ಹೆಚ್ಚಾಗಿತ್ತು. ತೀರ ಕಡಿದಾದ ಮೈಗಳಲ್ಲಿ ಹೆಬ್ಬಂಡೆಗಳು ದೆವ್ವಗಳಂತೆ ಅಲ್ಲಲ್ಲಿ ಮೂಡಿ ಕಾಣಿಸುತಿದ್ದುವು. ಆ ಬಂಡೆಗಳ ಸೆರಗು ಜೀವಜಂತುಗಳ ಓಡಾಟಕ್ಕೆ ಸಲ್ಲದ್ದು. ಗೋಡೆಗಳಂತಿರುವ ಅವುಗಳ ಮೇಲೆ, ಬೆಟ್ಟದ ನೀರು ಇಳಿದು, ಒಡೆದು ಸಿಂಬಿಯಾಗಿ, ತೆಳ್ಳಗಿನ ಬಿಳಿಯ ತೆರೆಯೊಂದನ್ನು ಗಾಳಿಗೆ ಹಿಡಿದಂತೆ ಕಾಣುವ ನೋಟ—ಬಲು ಚೆನ್ನ. ಮಳೆಗಾಲ ಕಳೆದು, ನೀರಿನ ಅಬ್ಬರ ಕಡಿಮೆಯಾಯಿತೆಂದರೆ, ಬಂಡೆಗಳ ಮೇಲಿನ ಈ ನೀರಿನ ಪರೆ ಒಣಗುತ್ತದೆ. ಅವುಗಳ ಕರಿದಾದ ಮೈ ಮಾತ್ರ ಕಾಣಿಸುತ್ತದೆ. ಅಂಚುಗಳ

ಮೇಲೆ ಬೆಳೆದಿರುವ ಉನ್ನತ ವೃಕ್ಷಗಳಿಗೂ, ಅವುಗಳಿಗೂ ಎಷ್ಟೊಂದು ಅಂತರ! ಈ ಅರಣ್ಯಗಳಲ್ಲಿ ಹುಲ್ಲುಗಾವಲಿಗೆ ಬರಗಾಲವಿಲ್ಲ. ಆಳೆತ್ತರಕ್ಕೆ ಹುಲ್ಲು ಬೆಳೆಯುತ್ತದೆ; ವರ್ಷಕ್ಕೊಮ್ಮೆ ನಿಯಮದಂತೆಂಬಂತೆ, ಕಾಡ್ಗಿಚ್ಚು ಆ ಹುಲ್ಲುಗಾವಲುಗಳನ್ನು ನುಂಗಿ ಕುಣಿದಾಡುತ್ತದೆ. ಕಿರಿ ಮಲೆಯಿಂದ ಕಾಣುವಾಗ ಆ ರುದ್ರಭಯಾನಕ ದೃಶ್ಯ ಬಣ್ಣಿಸಿತೀರದ್ದು. ಮರುದಿನವೇ —ಬೆಟ್ಟದ ಹಸುರೆಲ್ಲ ಮಾಯವಾಗಿ, ಬಂಡೆಗಳಂತೆಯೆ ಬೆಟ್ಟದ ಮೈಯೂ ಕರಿದಾಗುತ್ತದೆ. ರಸಿಕನಾದ ವ್ಯಕ್ತಿಗೆ—ಈ ಅರಣ್ಯಸೌಂದರ್ಯವೆಲ್ಲ ಮನ ಮೋಹಕವಾಗಿ ಕಾಣಿಸಬಹುದಾದರೂ, ಅದರಲ್ಲೇ ಬಾಳಿ, ಬದುಕಿ ಜೀವನ ಸಂಗರ ಸಾಗಿಸುವ ಮಲೆಕುಡಿಯರಿಗೆ ಯಾವ ಕಾವ್ಯದೃಷ್ಟಿ ಬೇಕು! ಬದಲು ಬೆಟ್ಟದ ಕೋಡುಗಳು, ಬಂಡೆಯ ನಿಲುವುಗಳು, ಆಗಾಗ ತಲೆ ದೋರುವ ಕಾಡ್ಗಿಚ್ಚುಗಳು, ಕೊಲೆ, ದೈವ, ಪ್ರೇತ ಮೊದಲಾದ ಹಲವಾರು ಅಶರೀರ ಪಿಶಾಚಗಳ ನೆನಪನ್ನು ಮಾತ್ರ ಕೆರಳಿಸುತ್ತದೆ. ಮಲೆಗೂ ಒಂದು ಆತ್ಮ; ಬೆಟ್ಟಕ್ಕೂ ಒಂದು ಆತ್ಮ; ಬೆಟ್ಟದ ಒಂದು ಕೋಡಿಗೂ ಒಂದು ಆತ್ಮ; ಗಾತ್ರವಾದ ಮರಕ್ಕೂ ಆತ್ಮ, ಹೆಬ್ಬಂಡೆಗೂ ಒಂದು ಆತ್ಮ—ಹೀಗೆಲ್ಲ ಜಡವಸ್ತುಗಳಿಗೆ ಚೈತನ್ಯ—ಪ್ರೇರಿಸಿ ಊಹಿಸುವ ಮನೋವೃತ್ತಿಯುಳ್ಳ ಆ ಜನಕ್ಕೆ ತಮ್ಮ ಸುತ್ತಲಿನ ನಿಸರ್ಗಕ್ಕೆ, ಆಳಾಗಿ ನಡೆದುಕೊಳ್ಳಬೇಕೆಂಬ ನಿತ್ಯಮನೋವೃತ್ತಿ ಉಂಟಾಗುತ್ತದೆ. ಏನಿದ್ದರೂ—ಅವರ ಕೆಚ್ಚು ಆ ರಂಗ ದಲ್ಲಿ ನಲಿದಾಡುವ ಪಶುಪ್ರಾಣಿಗಳ ಮೇಲಷ್ಟೆ.

ಈ ಮಲೆಕುಡಿಯರು ತಮ್ಮ ಧನಿಗಳಿಗಾಗಿ ಏಲಕ್ಕಿ ತೋಟದಲ್ಲಿ ಕೆಲಸ ಮಾಡಿಕೊಂಡು, ತಮ್ಮ ಹೊಟ್ಟೆಗಾಗಿ ಕುಮರಿಯ ಬೇಸಾಯ ಮಾಡು ತ್ತಾರೆ. ತಮ್ಮ ಹಸಿವೆಗಾಗಿ, ಬಾಯ ಚಪಲಕ್ಕಾಗಿ ಮಿಗ, ಬರ್ಕ, ಕೆಮ್ಮ ಬೇಟೆಯಾಡುತ್ತಾರೆ. ಅವರು ಮಲೆ ಬಿಟ್ಟು ತಿರುಗುವುದು ತೀರ ಕಡಿಮೆ. ಅದಕ್ಕೆ ಬೇರೊಂದು ಕಾರಣವೂ ಉಂಟು. ನೇರಾಗಿ—ಗ್ರಾಮ ಜನವಸತಿ ಇರುವಲ್ಲಿಗೆ ಹೋಗಿಬರುವ ಸೌಕರ್ಯ ಆ ಬೆಟ್ಟಕ್ಕಿಲ್ಲ. ಕನ್ನಡ ಜಿಲ್ಲೆಗೆ ಹೋಗಬೇಕಾದರೆ ಕಿರಿ ಮಲೆಗೆ, ಅಲ್ಲಿಂದ ಮೂಲೆಗುಂಪಿಗೆ ಬಂದೇ ಅವರು ಹೋಗಬೇಕು. ಮೈಸೂರು ಸೀಮೆಯನ್ನು ಸೇರಬೇಕಾದರೆ—ಕುರು ದಾರಿ ಹಿಡಿದು, ಹರದಾರಿ ಹರದಾರಿಗಳ ತನಕ ನಡೆದು, ಮನುಷ್ಯರ ಸುಳಿವಿಲ್ಲದ

ಪರ್ವತಾವಳಿಗಳನ್ನೂ ಹತ್ತಿ, ಇಳಿದು, ಹೋಗಬೇಕು. ಹೀಗಿದ್ದರೂ ಏಲಕ್ಕಿಯ ಮಲೆ ಸಾಗುವಳಿಯಾಗುತ್ತದೆ; ಫಸಲು ಸಂತೆಗೆ ಬರುತ್ತದೆ. ತೋಟ ನೋಡಿಕೊಳ್ಳುವ ತೊಡಕು ಹೆಚ್ಚೆನ್ನುವುದರಿಂದ, ಸಾಗುವಾಡದ ಖರ್ಚು ಹೆಚ್ಚೆನ್ನುವುದರಿಂದ, ಧನಿಯಾದವನಿಗೆ ಉಳಿತಾಯ ಕಡಿಮೆ. ಆ ತಲೆಮಾರಿನಲ್ಲೇ ಹಿರಿ ಮಲೆಯ ಒಡೆತನ ಮೂರು ಬಾರಿ ಕೈಬದಲಿಸಿತ್ತು, ಈಗ ಅದರ ಧನಿಗಳಿರುವುದು ಸಕಲೇಶಪುರದಲ್ಲಿ. ನೆಟ್ಟಗೆ ಹಾರಿಬಂದರೆ—ಅರ್ಧ ದಿನವೂ ಬೇಡ ಎಂದು ಕಾಣಿಸುವ ಈ ದೂರವನ್ನು ನಡೆದುಬರುವಾತನಿಗೆ, ಎರಡು ದಿನಕ್ಕೂ ಮಿಕ್ಕಿನ ದಾರಿಯಾದೀತು. ಹಾಗಾಗಿ ಆ ಧನಿಗಳು ತೋಟವನ್ನು ಕಾರ್ಕಳದ ತಮ್ಮೊಬ್ಬ ಗೆಳೆಯನ ಆಡಳಿತಕ್ಕೆ ಒಪ್ಪಿಸಿ, ಆತ ಕೊಡುವ ಗುತ್ತಿಗೆಯನ್ನು ಪಡೆದು, ಸುಖವಾಗಿದ್ದಾರೆ. ಆತ ಅವರ ಬಂಧು; ಹೆಸರು ವಲ್ಲಿಬ್ರಗಾಂಜಾ. 'ವಲ್ಲಿ' ಮೊದಮೊದಲು ಮೂಲೆಗುಂಪಿನ ತನಕ ಬಂದು ಅಲ್ಲಿಂದ ಮಲೆಯವರಿಗೆ ಹೇಳಿಕಳುಹಿಸಿ, ತನ್ನ ಕಪ್ಪಕಾಣಿಕೆ ಕೊಂಡು ಹೋಗುತ್ತಿದ್ದ. ಮೂಲೆಗುಂಪಿನಲ್ಲಿ ಎರಡು ದಿನ ಕುಳಿತರೆ, ಅವನಿಗೆ ಮಲೆಯ ಸಮಾಚಾರ ಸಿಕ್ಕಿಯೇ ಸಿಕ್ಕುತ್ತದೆ. ಹಿರಿ ಮಲೆಯ ತೋಟಕ್ಕೂ ಕಿರಿ ಮಲೆಗೂ ವಿಸ್ತೀರ್ಣದಲ್ಲಿ ವ್ಯತ್ಯಾಸವಿಲ್ಲದಿದ್ದರೂ, ಹುಟ್ಟುವಳಿ ಮಾತ್ರ ಕಡಿಮೆ ಏತಕ್ಕೆ—ಎಂಬ ವಿಚಾರ ಅವನಲ್ಲಿ ಉಂಟಾಯಿತು. ಹಾಗಾಗಿ ತನ್ನ ರಾಜಧಾನಿಯನ್ನು ತಿರುಮಲಭಟ್ಟರಂತೆಯೇ, ಮಲೆಯಲ್ಲೇ ಆತ ಹೂಡಿದ. ದಾರಿಯಲ್ಲಿ ಹಾಯುವಾಗ ಅವರ ತೋಟದ ಫಸಲನ್ನು ಕಂಡು, ತನ್ನ ಮಲೆಗೇನು ಧಾಡಿ—ಎಂಬ ಅಸೂಯೆ ತಾಳಿ ಮುಂದುವರಿದು, ತನ್ನ ತೋಟಕ್ಕೆ ಹೋಗುತ್ತಿದ್ದ. ಒಂದು ವರ್ಷ ತನಗಾಗಿ ಒಂದು ಗುಡಿಸಲನ್ನು ಅಲ್ಲಿ ಕಟ್ಟಿಸಿದ. ರೂಪಾಯಿ ಆಣೆಗಳ ಲೆಕ್ಕ ಚೆನ್ನಾಗಿ ಬಲ್ಲ ವಲ್ಲಿ ಬಂಗಲೆ ಕಟ್ಟುವುದಕ್ಕೆ ಹೋಗಲಿಲ್ಲ. ಊಟ ಅಡುಗೆಗೆ ಕ್ರೈಸ್ತಾತಿಗಳನ್ನು ಕರೆದುಕೊಂಡು ಹೋಗಲಿಲ್ಲ. ಕುಡಿಯರ ಬೇಟೆಯಲ್ಲಿ ಅವನೂ ಪಾಲುಗಾರ. ಅವರು ಬೆಳೆಯಿಸಿದ ಸೂಕರಗಳು ಅವನಿಗೂ ಇಷ್ಟ. ಬೆಲೆ ಕೊಡದೆ ದೊರೆಯುವ ಬಯನಿ ಹೆಂಡದಲ್ಲಿ ಅವನಿಗೂ ನಿತ್ಯಾಭಿಷೇಕ. ಅದನ್ನೆಲ್ಲ ಕಂಡರೆ ಮಲೆಯ ಜೀವನ ಸ್ವರ್ಗಜೀವನ!—ಎನಿಸುತಿತ್ತು ವಲ್ಲಿಗೆ. ಅಲ್ಲಿಗೆ ಬಂದು ಹೋಗುವುದಷ್ಟೇ ತೊಡಕಿನ ಕೆಲಸ.

ಬದಲು, ವರ್ಷವೆಲ್ಲ ಆತ ಮಲೆಯಲ್ಲಿಯೇ ಅಲ್ಲಿರಲಾರ. ಬೆಳೆ ಬೆಳೆಯುವ ಕಾಲಕ್ಕೆ, ನಾಲ್ಕು ದಿಕ್ಕಿಗೂ ಕಣ್ಣು ಚಾಚಿ ತಾನು ಕುಳಿತರೆ ಸಾಕು—ಎಂಬ ತೀರ್ಮಾನ ಅವನದ್ದಿತ್ತು. ಹೀಗಾಗಿ ಮಳೆ ಕಳೆದಮೇಲೆ ಅಲ್ಲಿಗೆ ಹೋದರೆ ಎರಡು ತಿಂಗಳ ಕಾಲ ಅಲ್ಲಿರುತ್ತಿದ್ದ. ಇನ್ನೊಮ್ಮೆ ಹೋಗುವುದು ಮೂಲೆಗುಂಪಿನ ಜಾತ್ರೆಗೆ. ಜಾತ್ರೆಯ ಕೆಲಸ ಸುಧಾರಿಸಿಬಿಟ್ಟಿದ್ದ. ಅದು ಹಿಂದೂ ಜಾತ್ರೆ. ಅವನಿಗೇನು ಉತ್ಸಾಹ! ಹಚ್ಚಡ ಕೊಂಡು, ಕುಡಿಯರಿಗೆ ಕೊಟ್ಟು ಬರುವುದಕ್ಕಿಂತ ಆಣೆ, ತಾರಗಳನ್ನು ಎಣಿಕೆಹಾಕಿ, ಹಚ್ಚಡದ ಬದಲಿಗೆ ಹಣ ಕೊಡುವ ಪರಿಪಾಠ ತೊಡಗಿದ. ಆದರೆ ಅವನಿಗೆ ಕಾಣಿಸುತ್ತಿದ್ದ ಅಂಶವೆಂದರೆ—ತಾನು ತುಂಬ ಕ್ರೈಸ್ತಭಕ್ತನಾದುದರಿಂದ, ಈ ಮಲೆಯ ಜನ 'ಹುಂಬರಲ್ಲಿ ಹುಂಬರು', ಕಲ್ಕುಡ, ಪಂಜುರ್ಲಿ ಕಲ್ಲುಕುಟಿಗರನ್ನು ನಂಬುವ ಬದಲು ತಮ್ಮ ದೇವರನ್ನು ನಂಬಬಾರದೇಕೆ—ಎಂಬ ಬಯಕೆ ಅವನದು. ತಮ್ಮೂರ ಪಾದ್ರಿಗಳಿಗೆ ಸುಲಭದಲ್ಲಿ ಯೇಸುವಿನ ಹಿರಿಮೆಯನ್ನು ಪ್ರಚಾರ ಮಾಡುವಂತೆ ಸೂಚನೆಯನ್ನೂ ಕೊಟ್ಟಿದ್ದ. ಕೊನೆಗೆ, ಮೂಲೆಗುಂಪಿನ ಈಶ್ವರಾಲಯಕ್ಕೆ ಸಮೀಪವಾಗಿ, ಒಂದು ಗುಡಿಸಲನ್ನು ಕಟ್ಟಿ, ಅದರ ಮೇಲೆ ಒಂದು ಶಿಲುಬೆ ನಟ್ಟು ಚರ್ಚ್ ಮಾಡಿದಲ್ಲಿ, ಎರಡೂ ಮಲೆಯವರು ಹೊಸ ದೇವರನ್ನು ತಬ್ಬಿಕೊಂಡಾರೆಂಬ ಆಸೆ ಅವನದ್ದು. ಆಗಲೆಲ್ಲ ಇಂಥ ಹಳ್ಳಿ ಮೂಲೆಗಳಲ್ಲಿ ಪಾದ್ರಿಮತ ಅಷ್ಟೊಂದು ಹರಡಿರಲಿಲ್ಲ. ಚಳಿಜ್ವರದ ಬೀಡುಗಳಲ್ಲಿ, ಯೇಸುವಿನ ಭಕ್ತರು ಹೋಗಿ ನಿಲ್ಲುವುದಕ್ಕೆ ಧೈರ್ಯಪಡುತ್ತಿರಲಿಲ್ಲ. ಹೀಗಾಗಿ, ಅವನ ಆ ಇಷ್ಟ ಕೈಗೂಡಲಿಲ್ಲ.

ಕೈಗೂಡದಿದ್ದರೇನು? ಮಲೆಯ ತನ್ನ ಗುಡಿಸಲಿಗೇ ಆತ ಒಂದು ಶಿಲುಬೆ ಸಿಕ್ಕಿಸಿ, ಅವಕಾಶ ದೊರೆತಾಗ ತಮ್ಮ ದೇವರ ಮಹಾತ್ಮೆ ಜನಕ್ಕೆ ಹೇಳುತ್ತಿದ್ದ. ಮಲೆಯ ಜೀವನ—ಒಂಟಿ ಜೀವನ. ಅವನು ಅಲ್ಲಿ ಎರಡು ತಿಂಗಳು ಕಳೆಯುವುದಾದರೂ ಕಾರ್ಕಳದಲ್ಲಿ ಕಳೆದಂತಲ್ಲ. ಅದು ಪೇಟೆ, ಶಹರು. ಬೇಟೆ, ಕುಡಿತ ಇವೆರಡನ್ನೂ ಬಿಟ್ಟರೆ ಬರಿಯ ಏಲಕ್ಕಿ ಎಣಿಕೆ ಹಾಕುವ ಕೆಲಸ ಮಲೆಯದು. ಆಳುಗಳು ವಂಚನೆ ಇಲ್ಲದೆ ದುಡಿಯುತ್ತಾರೆ. ಮಲೆಯ ಬೇಸಾಯ ಅವನಿಗೂ ಹೊಸತು. ಫಸಲು ಬರುವಷ್ಟೇ ಬರುತ್ತಿತ್ತು. ದುಡ್ಡಿನ ಲಾಭ ಹೆಚ್ಚಾಗಿ ಇಲ್ಲ. ಆದರೂ ಒಬ್ಬಿಬ್ಬರನ್ನು ಕರೆದು 'ಆ ಮಲೆ

ಯಲ್ಲಿ ಬೆಳೆದಷ್ಟು ಇಲ್ಲೇಕೆ ಬೆಳೆಯುವುದಿಲ್ಲ' ಎನ್ನುತ್ತಲೇ ಇದ್ದ. ಕುಡಿ ತಕ್ಕ್ಮೊ, ಬೇಟೆಗೂ, ಸೇವೆಗೂ ಹಿರಿ ಮಲೆಯ ಚೋಮ ಅವನಿಗೆ ಆಪ್ತ.

ಬೇಟೆಗೆ ಹೋದರೆ ಚೋಮ ಜತೆಗೆ ಬರಲೇಬೇಕು. ಇಲ್ಲವಾದರೆ ಕಾಡು ಸುತ್ತುವ ಧೈರ್ಯ ವಲ್ಲಿಗೆ ಇರುವುದಿಲ್ಲ. ಏಡಿ ಹಿಡಿಯಲು ಹೋದಾಗ ಅವನ ಮಗ, ಹದಿನಾರು ವಯಸ್ಸಿನ ಕುಕ್ಕ ಜತೆಗೆ ಬರಬೇಕು ಮನೆಯಲ್ಲಿ ಇವನ ನಾಲ್ಕು ಮಣ್ಣಿನ ಮಡಕೆ ತೊಳೆಯುವುದಕ್ಕೆ—ಚೋಮನ ಹೆಂಡತಿಯೋ, ಮಗಳೋ ಬರಬೇಕು. ಇವನ ಪರ್ಣಕುಟೀರಕ್ಕೆ ನೀರು ಸಾಗಿಸುವುದಕ್ಕೆ ಅವರೇ ಬೇಕು. ಈ ಎಲ್ಲ ಮೇಲುಕೆಲಸಗಳಿಗೆ—ತಾನಿರುವ ಎರಡು ತಿಂಗಳ ಕಾಲ, ತಿಂಗಳಿಗೆ ಬೆಳ್ಳಿಯ ಚವಲವೊಂದನ್ನು ಅವರಿಗೆ ಕೊಟ್ಟರೆ ಹೆಚ್ಚೆಂದು ಅವನ ಎಣಿಕೆ. ಈ ಹತ್ತಿರದ ಬಾಂಧವ್ಯ, ದುಡ್ಡಿನ ವಿಚಾರದಲ್ಲಿ ವಲ್ಲಿಬ್ರಗಾಂಜನಲ್ಲಿ ಔದಾರ್ಯವನ್ನು ಹುಟ್ಟಿಸದಿದ್ದರೂ, ಮಾತಿನ ಹಿರಿತನದಲ್ಲಿ ಅದನ್ನು ಹುಟ್ಟಿಸಿತ್ತು. ಮೇಲೆ, ಕುಕ್ಕನ ಅಕ್ಕ ಹದಿನೆಂಟು ವರ್ಷದ ಗಿಡ್ಡಿ, ಅವನ ಮನಸೆಳೆಯುವ ವಸ್ತುವಾಗಿದ್ದಳು. ಚೋಮನ ಮನೆಯವರೊಡನೆ ಆದರಿಂದಾಗಿ ಇನ್ನಷ್ಟು ಸಲಿಗೆ. ಮಲೆಗೆ ಬರುವಾಗ ಅವರಿಗೆ ಮಾತ್ರ—ಒಂದೊಂದು ಚೂರಿಯನ್ನೋ, ಮಣಿಸರವನ್ನೋ, ಕ್ರೂಜೆ ತೂಗಿದ ಜಪಮಾಲೆಯನ್ನೋ ತಂದುಕೊಡುತ್ತಿದ್ದ. ಈ ಜಪಮಾಲೆಯನ್ನು ಗಿಡ್ಡಿ ಕೊರಳಲ್ಲಿ ತೊಟ್ಟುಕೊಂಡು ತಿರುಗಾಡಿದ್ದೂ ಉಂಟು. ಜಪಮಾಲೆಯ ವಶೀಕರಣಶಕ್ತಿಯಿಂದಲೋ ಏನೊ, ಗಿಡ್ಡಿಗೂ ವಲ್ಲಿಗೂ ಸ್ನೇಹ ಪ್ರಾಪ್ತಿಸಿತು. ಆದರಿಂದ ವಲ್ಲಿಯಲ್ಲಿ ಮೊಳೆತ ಹೊಸ ಭಾವನೆಯೆಂದರೆ, ಬರಿಯ ನಾಲ್ಕಾಣೆ ವೇತನಕ್ಕೆ ಸಿಗುವ ಇಂಥ ಆಳುಗಳು, ಕಾರ್ಕಳಕ್ಕೂ ಬಂದು ವರ್ಷವೆಲ್ಲ ದುಡಿದರೆ ಒಳಿತಲ್ಲವೇ ಎಂದು.

ಒಂದು ದಿನ, ತಾನು ಊರಿಗೆ ಹೋಗುವ ನಾಲ್ಕು ದಿನಗಳ ಮುಂಚೆ, "ಚೋಮ, ನಮ್ಮ ಮನೆಯಲ್ಲಿ ಕೆಲಸದ ಜನಕ್ಕೆ ತುಂಬ ತೊಂದರೆ. ಇಲ್ಲಿ ನಿನ್ನ ಮಕ್ಕಳಿಗೇನು ಕೆಲಸ?" ಎಂದು ಹೇಳಿ, ಗಿಡ್ಡಿ ಮತ್ತು ಕುಕ್ಕರನ್ನು ತನ್ನ ಜತೆಗೆ ಕಳುಹಿಸಿಕೊಡಲು ಪ್ರೇರಣೆಮಾಡಿದ. ಅವನಿಗೆ ಕುಕ್ಕ ಅಷ್ಟೊಂದು ಬೇಕಾಗಿರಲಿಲ್ಲ. ಆದರೂ ತಂದೆ, ಮಗಳೊಬ್ಬಳನ್ನೇ ಕಳುಹಿಸಲು ಒಪ್ಪಂಬಡನೆಂದು, ಆ ಸೂಚನೆ ಮಾಡಿದ. ಕಾರ್ಕಳ ಬಹುದೂರದ ಊರೆಂದು

ಆತ ತಿಳಿದಾನೆಂದು ಅನುಮಾನಿಸಿ, "ಅಂಥಾ ದೂರವೇನಿಲ್ಲ. ಹತ್ತ್ರಿಯಡ್ಕ ದಿಂದ ಕೊಕ್ಕಡಕ್ಕೆ ಮೂರು ಗಳಿಗೆ ಹಾದಿ. ಅಲ್ಲಿಂದ ಮೂರು ಗಳಿಗೆಗೆ ಧರ್ಮಸ್ಥಳ. ಧರ್ಮಸ್ಥಳದಲ್ಲಿ ನಿಮ್ಮ ಜನರೇ ಇದ್ದಾರಲ್ಲ" ಎಂದ. ಧರ್ಮ ಸ್ಥಳದಲ್ಲಿ ಮಲೆಕುಡಿಯರು ಬಹು ಹಿಂದೆಯೇ ನೆಲೆಸಿದ್ದರು. ಅವರಿಗೂ ಇವ ರಿಗೂ ಗಂಡುಹೆಣ್ಣು ತರಲು ಆಗಿನ ಕಾಲಕ್ಕೆ ದೂರ ಎನಿಸಿದ್ದರೂ, ಮೂಲೆ ಗುಂಪಿನ ಜಾತ್ರೆಗೆ ಅವರೂ ಬರುತ್ತಿದ್ದರು.

"ಧರ್ಮಸ್ಥಳದಿಂದ ಎಷ್ಟು ದೂರ?" ಎಂದು ಕೇಳಿದ ಚೋಮ.

"ಛೀ, ದೂರವೇನು....ಒಂದೇ ಒಂದು ಮಜಲು" ಎಂದ ವಲ್ಲಿ.

ಹೀಗೆ ಹಿರಿಮಲೆಯಿಂದ ಮೂಲೆಗುಂಪಿನ ದೂರ ಹೇಳದೆ, ಧರ್ಮ ಸ್ಥಳದಿಂದ ಮುಂದಿನ ದೂರವನ್ನು ಒಂದು ಮಜಲಾಗಿ ಮಾಡಿ, ಮನೋ ವೇಗದಿಂದ ಹೋಗುವ ಸಾಮಿಪ್ಯವನ್ನು ಆ ಎರಡು ಸ್ಥಳಗಳೊಳಗೆ ಕಲ್ಪಿಸಿದ.

ಚೋಮಗೂ, ಅವನ ಹೆಂಡತಿಗೂ ಮಕ್ಕಳನ್ನು ಕಳುಹಿಸಲು ಅಷ್ಟೊಂದು ಇಷ್ಟವಿರಲಿಲ್ಲ. ಆದರೆ ಧನಿಗಳ ಮನೆಗೆ, ಸೇವೆಗೆ ಕರೆದಾಗ ಹೋಗಲಾರೆ ಎಂದರೆ ಸಮನಲ್ಲವೆಂದೂ ಕಂಡಿತು. ಹೀಗಾಗಿ ಅನುಮಾನಿಸಿ, ಅನುಮಾನಿಸಿ—ಒಂದು ಮಳೆಗಾಲ ಕಳೆಯುತ್ತಲೆ ಅವರನ್ನು ಕಳುಹಿಸಿ ಕೊಟ್ಟ. "ಮೂಲೆಗುಂಪಿನ ಜಾತ್ರೆಗೆ ಬರುವಾಗ ಅವರನ್ನು ಜತೆಗೆ ಕರೆದು ತರಬೇಕು" ಎಂದು ಧನಿಗೆ ಹೇಳಿದ. ತಿಮ್ಮ ನಿರಾಶೆಗೊಂಡ ಜಾತ್ರೆಯೇ ಅದು. ಆ ಜಾತ್ರೆಗೆ ವಲ್ಲಿ ಬಂದಿದ್ದರೂ ಆತ ಕರೆದೊಯ್ದ ಚೋಮನ ಮಕ್ಕ ಳನ್ನು ಮಾತ್ರ ಹಿಂದಕ್ಕೆ ಕರೆದು ತರಲಿಲ್ಲ. ಬದಲು ಚೋಮನೊಡನೆ— ಇಲ್ಲದ ಸಮಾಧಾನ ಹೇಳಿ "ನೋಡು, ಹೊರಡುವ ದಿನ ನಿನ್ನ ಮಗಳಿಗೆ ಜ್ವರ ಬಂದಿತ್ತು. ನಡೆಯುವುದಕ್ಕೆ ಸಾಧ್ಯವಿಲ್ಲ. ಕುಕ್ಕನನ್ನೂ ಅದಕ್ಕಾಗಿ ಬಿಟ್ಟು ಬಂದೆ. ನೀನೇನೂ ಯೋಚನೆ ಮಾಡಬೇಡ. ಅವಳೇನು ಸೊರಗಿಲ್ಲ, ಸೊಟ್ಟಾಗಿಲ್ಲ; ನಮ್ಮೂರಿನ ಹವೆ ಅವಳಿಗೆ ಚೆನ್ನಾಗಿ ಹಿಡಿಯುತ್ತೆ. ಆನೆಯ ಮರಿಯ ಹಾಗೆ ಈಗ ಬೆಳೆದಿದ್ದಾಳೆ" ಎಂದ. ತಂದೆ, ತಾಯಿಯರಿಗೆ ಅದ ರಿಂದ ಹೇಗೆ ಸಮಾಧಾನವಾಗಬೇಕು? ಅವರ ಸಮಾಧಾನಕ್ಕೆಂದು ವಲ್ಲಿ "ಇಬ್ಬರ ಸಂಬಳವನ್ನೂ ನೋಡು, ನಿನ್ನ ಕೈಯಲ್ಲೇ ಕೊಟ್ಟಿದ್ದೇನೆ" ಎಂದು

ಎರಡು ರೂಪಾಯಿಗಳನ್ನೂ ಎಸೆದ. ರೂಪಾಯಿ ಕಂಡು ಸಂತೋಷವಾದರೂ ಚೋಮನ ಮನಸ್ಸು ತೃಪ್ತಿಗೊಳ್ಳಲಿಲ್ಲ. 'ಮಗಳು ಬೇನೆ ಬಿದ್ದಿರುವಾಗ, ತಾನಾದರೂ ಹೋಗಿ ನೋಡಬೇಕು' ಎಂದು ಆತ ಧನಿಯ ಬೆನ್ನಿಗೆ ಹಟ ಹಿಡಿದು ಹೊರಟೇಬಿಟ್ಟ. ನ್ಯಾಯಕ್ಕೂ ಹೋಗುವಾಗ, ಒಂದೆರಡು ದಿನದ ಆ ಸುಲಭದ ಹಾದಿ, ನಾಲ್ಕು ದಿನಗಳ ಇಡಿಯ ಪಯಣವಾದದ್ದನ್ನು ಕಂಡು 'ಇಷ್ಟು ದೂರವೇ!' ಎನಿಸಿತು ಚೋಮನಿಗೆ.

ಕಾರ್ಕಳಕ್ಕೆ ಹೋದಮೇಲೆ, ಗಿಡ್ಡಿ ಜ್ವರದಲ್ಲಿ ಮಲ್ಲಗಿದ್ದು ಸುಳ್ಳೆಂಬುದೂ ಗೊತ್ತಾಯಿತು. ತುಂಬಿದ ಜುಟ್ಟಿದ್ದ ಕುಕ್ಕನ ತಲೆಯು ಧನಿಯ ತಲೆಯಂತೆ ಬೋಳಾದುದನ್ನು ಕಂಡು ಆತ ದಿಗಿಲಾದ. ಗಿಡ್ಡಿಯ ವೇಷವೂ ಬದಲಾಗಿತ್ತು. ಅವರನ್ನು ಪಾದ್ರಿಮತಕ್ಕೆ ಸೇರಿಸಿದ್ದಾರೆಂಬುದೂ ತಿಳಿಯಿತು. ಆಗ ಆದ ಅವನ ವ್ಯಥೆಯನ್ನು ಹೇಳುವುದಕ್ಕಿಲ್ಲ. ಮಕ್ಕಳನ್ನು ಮನೆಗೆ ಕರೆದೊಯ್ಯುವ ಹಟ ಆತ ತೊಟ್ಟ. ಆದರೆ ಅವರೇ ಇವನ ಜತೆಗೆ ಬರಲಿಷ್ಟಪಡದ ವಿಚಿತ್ರ ಕೇಳಿದ ಮೇಲೆ, ಅವನಿಗೆ ದಿಗಿಲೇ ಹಾರಿತು. ತಾನೊಬ್ಬನೇ ಮನೆಗೆ ಮರಳಿದ. ದಣಿವಿಂದಲೂ, ದುಃಖದಿಂದಲೂ ನೊಂದು ಮನೆಗೆ ಬಂದ. ಆ ದುಃಖದಲ್ಲಿ ಅವನ ಮಡದಿಯೂ ಪಾಲುಗಾರಳಾದಳು. ಈ ಕೊರಗನ್ನು ಹತ್ತು ಜನಗಳ ಮುಂದೆ ಆತ ಹೇಳುವುದಕ್ಕಿರಲಿಲ್ಲ. ಆದರೂ ಚೋಮನ ಹೆಂಡತಿ ಕುಕ್ಕೆತಿ ತಮಗಾದ ಅನ್ಯಾಯವನ್ನು ಬಿರುಮನ ಹೆಂಡತಿಗೆ ಹೇಳಿದಳು. ಹೆಂಡತಿಯಿಂದ ಗಂಡನಿಗೂ, ಅಲ್ಲಿಂದ ಕಲ್ಕುಡ ದೈವಕ್ಕೂ ಆ ಸಮಾಚಾರ ಗೊತ್ತಾಗಲೇಬೇಕಲ್ಲ.

ಕೋಲ ಮುಗಿದು ಬಂದಮೇಲೆ, ಹಿರಿ ಮಲೆಯ ಚೋಮನಿಗೆ ಬುದ್ಧಿ ಸ್ವಾಸ್ಥ್ಯವಿರಲಿಲ್ಲ. ಧನಿಯನ್ನು ಕಡಿದುಹಾಕುವೆನೆಂಬಷ್ಟು ಸಿಟ್ಟು ಉದ್ರೇಕ ವಾಗಿತ್ತು—ಅವನ ಮನದಲ್ಲಿ. ಮಡದಿಯೊಡನೆ ಬಹು ಹೊತ್ತು ಕುಳಿತು ಯೋಚಿಸಿದ. ಬಗೆಗಾಣದ್ದಕ್ಕೆ ಬಿರುಮನಿಗೇ ಶರಣುಹೋದ. ಬಿರುಮ ನಂತೂ—"ಕುಲಾಚಾರ ಬಿಟ್ಟು ನಿನ್ನ ಮಕ್ಕಳು ಪಾದ್ರಿಮತ ಹಿಡಿದದ್ದಾದರೆ, ಮಲೆಗೆ ಮಲೆಯೇ ಕೇಡುಣ್ಣುವ ಪ್ರಸಂಗ ಒದಗೀತು!" ಎಂದು ಬೆದರಿಸಿದ. ಅವನೂ ಆವರಿಗೆ ಬೆಂಬಲನಾದ. ಮುದ್ದು ಮಾಟಗಳಿಂದಲಾದರೂ ಆ ಮಕ್ಕ ಳನ್ನು ಹಿಂದಕ್ಕೆ ಕರೆತರುವ ನಿರ್ಧಾರಮಾಡಿದರು. ಕೋಲ ಮುಗಿದಮೇಲೆ

ಬಿರುವ, ಚೋಮ, ಕುಕ್ಕೆತಿ ಮೂವರೂ ಕಾರ್ಕಳಕ್ಕೆ ಹೊರಟರು. ಸುದೈವಕ್ಕೆ ಅವರು ಕಾರ್ಕಳವನ್ನು ಸೇರುವಾಗ ಬ್ರಗಾಂಜನ ಮನೆಯಲ್ಲಿ—ಅವನ ಮುದಿತಾಯಿ, ಗಿಡ್ಡಿ, ಕುಕ್ಕ ಮಾತ್ರ ಇದ್ದರು. ಮಗಳನ್ನು ತಬ್ಬಿಕೊಂಡು "ಇಂಥ ಅನ್ಯಾಯ ಮಾಡಬಹುದೇ ನೀವು" ಎಂದು ಕುಕ್ಕೆತಿ ಕರೆದ ಕಣ್ಣೀರು, ಬಿರುವ ಬಣ್ಣಿಸಿದ ಕಲ್ಕುಡನ ಬೆದರಿಕೆ, ತಮ್ಮ ಕೆಲಸ ಮಾಡಿದವು. ಆ ಮಕ್ಕಳಿಬ್ಬರೂ ಕರೆಯಲು ಬಂದವರೊಡನೆ ಆ ರಾತ್ರಿಯೇ ಓಟಹೂಡಿದರು. ಬೆಳಗಾಗುವಾಗ ಎಲ್ಲರೂ ಧರ್ಮಸ್ಥಳಕ್ಕೆ ಬಂದು, ಅಲ್ಲಿನ ದೇವರ ಮುಂದೆ ತಮ್ಮ ಗೋಳನ್ನು ಹೇಳಿ, ಈ ಅನ್ಯಾಯಕ್ಕೆ 'ಅಣ್ಣಪ್ಪ ದೈವವೇ, ನೀನೇ ಶಾಸನಮಾಡಬೇಕೆಂದು' ಹೊಯ್ಲುಕೊಟ್ಟು ಮಲೆಗೆ ಸಾಗಿಬಂದರು. ಗಿಡ್ಡಿ, ಕುಕ್ಕರ ವಿಚಿತ್ರ ಉಡುಗೆಯನ್ನು ನೋಡುವುದಕ್ಕೆ ಕೇರಿಗೆ ಕೇರಿಯೇ ಸೇರಿತು. ಚೋಮನ ದುಃಖದಲ್ಲೂ, ಆವೇಶದಲ್ಲೂ ಕೇರಿ ಸಹಭಾಗಿಯಾಯಿತು. ಜನರು ಕೆರಳಿ, ತಮ್ಮ ಸಿಟ್ಟಿನ ಭರದಲ್ಲಿ ಬ್ರಗಾಂಜನ ಗುಡಿಸಲಿಗೆ ಬೆಂಕಿ ಕೊಟ್ಟು ಸುಟ್ಟರು. ಮುಂದೆ ಯಥಾವಿಧಿಯಾಗಿ—ಪರ ಮತಕ್ಕೆ ಹೋದ ಬಗ್ಗೆ, ಗುರಿಕಾರನ ಮುಂದೆ ತಪ್ಪುಕಾಣಿಕೆ ಸಲ್ಲಿಸಿ, ಅವರನ್ನು ಬಳಗಕ್ಕೆ ಕೊಂಡುದೂ ಆಯಿತು. ಅದಾದ ಮೇಲೆಯೇ—ತಾನು ಬಂದೊಂದು ಕುತ್ತಿನಿಂದ ಪಾರಾದೆನೆಂಬ ವಿಶ್ವಾಸ ಚೋಮನಿಗಾದದ್ದು. ಮುಂದೆ, ಅವನ ಮನಸ್ಸು ಗಿಡ್ಡಿಯನ್ನು ಆದಷ್ಟು ಬೇಗ ಮದುವೆಮಾಡಿಕೊಟ್ಟು ಪಾರಾಗುವ ಅವಸರಕ್ಕೆ ತೊಡಕಿತು. ತಪ್ಪುಕಾಣಿಕೆ ಕೊಂಡು, ಬಳಗಕ್ಕೆ ಸೇರಿಕೊಂಡರೂ ಹಿರಿಮಲೆಯ ಕೇರಿಯ ಹುಡುಗರಿಗೆ—ಗಿಡ್ಡಿಯ ಪಾಣಿಗ್ರಹಣ ಇಷ್ಟವಿಲ್ಲದೆ ಹೋದುದು ಅವಳ ದುರ್ದೈವ. ಪ್ರಾಯಶಃ ಅದೇನೆ ಕಿರಿಮಲೆಯ ತಿಮ್ಮನ ಸುದೈವ.

ಮಂಗಳೂರಿಗೆ ಹೋಗಿದ್ದವಲ್ಲಿಬ್ರಗಾಂಜ ಕಾರ್ಕಳಕ್ಕೆ ಮರಳುತ್ತಲೇ ತನ್ನ ಬೇಟೆ ಅದೃಶ್ಯವಾದುದನ್ನು ಕಂಡು ತುಂಬ ಕೋಪಾವಿಷ್ಟನಾದ; ಕಳವಳಕ್ಕೊಳಗಾದ. ಅವನ ಮನಸ್ಸಿನಲ್ಲಿ ಹಲವಾರು ಕನಸುಗಳಿದ್ದುವು. ಆತ 'ಈ ಕುಡಿಯ ಜನ ಶುದ್ಧ ಹುಂಬರು. ಕೈತಪ್ಪಿದ ವಸ್ತುವಿಗಾಗಿ ಕೊರಗಿ ಗೋಳೋ ಎಂದು ಸುಮ್ಮನೆ ಕುಳಿತಾರೇ ಹೊರತು, ಜನ ಕಟ್ಟಿಕೊಂಡು ಬಂದು, ಧನಿಯಾದ ತನ್ನ ಮನೆಯಿಂದಲೇ ಆ ಮಕ್ಕಳನ್ನು

ಕರೆದುಕೊಂಡು ಹೋದಾರೆಂದು' ಎಣಿಸಿರಲಿಲ್ಲ. ಕಾರ್ಕಳದ ಸುತ್ತಲೂ ಕುಡಿಯರಲ್ಲದಿದ್ದರೂ 'ಕುಡುಬಿ'ಯರಿದ್ದಾರೆ. 'ಏನೂ ತಿಳಿಯದ ವ್ಯಕ್ತಿಯನ್ನು ಕಂಡು, ನೀನು ಕುಡುಬಿಯ ಹಾಗೆ ಮಾಡುತ್ತೀಯಲ್ಲ' ಅನ್ನುವುದುಂಟು ವಾಡಿಕೆಯಲ್ಲಿ. ಅವರಿಗಾದರೂ ನಾಗರಿಕ ಸಂಪರ್ಕವಿದೆ. ಮಲೆಯ ಕುಡಿಯರಿಗಿಂತ ಅವರು ಎಷ್ಟೋ ಮೇಲು. ಮಲೆಕುಡಿಯರು ಬಾಹ್ಯ ಪ್ರಪಂಚವನ್ನೇ ಅರಿಯದವರು. ಹೊರಗಿನ ನಾಗರಿಕತೆಯ ಸೋಂಕನ್ನು ತಳೆಯದವರು. ಹೇಳಿದ ಮಾತನ್ನು ರೂಪಾಯಿಗೆ ಹದಿನಾರಾಣೆಯ ಸತ್ಯವಾಗಿ ನಂಬುವವರು. ಆದುದರಿಂದಲೇ ಅವನ ಕೆಲಸ ಅಷ್ಟು ಸುಲಭವಾಗಿತ್ತು. ತಾನು ಮಾಡಿದ ಅವಸರ ವಲ್ಲಿಬ್ರಗಾಂಜನಿಗೆ ಹೊಳೆದಿರಲಿಲ್ಲ. ತಂದ ಬಾಲಕರನ್ನು ಮೆಲ್ಲಗೆ ಒಲಿಸಿಕೊಂಡು, ಆತ ತನ್ನ ಕೆಲಸ ಸಾಧಿಸಬಹುದಾಗಿತ್ತೋ ಏನೋ. ತಂದು—ಎರಡು ತಿಂಗಳಾಗುವುದರೊಳಗೇನೆ ಅವರ ಉಡುಗೆ ಬದಲಿಸಿದ, ಮತ ಬದಲಿಸಿದ. ಗಿಡ್ಡಿ ಕೆಂಪು ಚೌಕುಳಿ, ನಡುಬಟ್ಟೆಯನ್ನುಡುವಂತೆ ಮಾಡಿ, ಮೇಲೆ ಉದ್ದ ಕೈಯ ಕುಪ್ಪಸ ತೊಡಿಸಿ, ಚರ್ಚಿಗೆ ಕೊಂಡುಹೋದ. ಕುಕ್ಕ, ಒಳ್ಳೆನೆಂದರೂ—ಇಲ್ಲಿನ ಹವೆಗೆ ಜುಟ್ಟು ತೆಗೆಯುವುದೇ ಲೇಸೆಂದು ಕ್ಷೌರ ಮಾಡಿಸಿದ. ಕ್ರಿಸ್ತದೇವಾಲಯದ ವೈಭವ, ಸಾಂತಮಾರಿ ಹಬ್ಬದ ಬೆಡಗುಗಳನ್ನು ತೋರಿಸಿ, ಅವರ ಮನಸ್ಸಿನಲ್ಲಿ ಈ ನಾಗರಿಕ ದೇವರುಗಳ ಹೆಚ್ಚಳವನ್ನು ಹೊರಿಸಿ, ಮನ ಒಲಿಸಿದ್ದಂತು ನಿಜ. ಮತಗಿತಗಳ ವಿಚಾರ ಆ ಹುಡುಗರಿಗೆ ತಿಳಿದದ್ದು ಕಡಿಮೆ. ಕಲ್ಕುಡ, ಮಲೆರಾಯ ಮೊದಲಾದ ದೆವ್ವಗಳ ಭೀತಿಯನ್ನು ತಪ್ಪಿಸುವುದಕ್ಕೆ ಆತ ಕ್ರೂಜೆಯನ್ನು ಅವರ ಕೊರಳಿಗೆ ಕಟ್ಟಿ, ಅದರ ಸತ್ವ, ಪರಾಕ್ರಮಗಳನ್ನು ಕುರಿತು ಬಣ್ಣಿಸಿದ. ತಾನು ಕೈಯಲ್ಲಿ ಕ್ರೂಜೆ ಹಿಡಿದು—ದೆವ್ವದ ಕಲ್ಲನ್ನೇ ಮೆಟ್ಟಿ ಬರುತ್ತೇನೆ—ಎಂಬ ಪರಾಕ್ರಮ ತೋರಿಸಿದ. ವೇಷಪಲ್ಲಟದೊಂದಿಗೆ ಅವರ ನಾಮಕರಣದ ಅವಸರವೂ ಸೇರಲೇಬೇಕಷ್ಟೆ. ತಾನು ಶುದ್ಧ ದೇಶೀಯನಾದರೂ, ಪೋರ್ಚುಗೀಸ ಕುಲದವರಂತೆ 'ಬ್ರಗಾಂಜಾ' ಎಂದು ಮೇಲುಹೆಸರು ಹಾಕಿಕೊಂಡಂತೆ ಅವರಿಗೂ ಹೊಸ ಕುಲನಾಮ ತನ್ನಷ್ಟಕ್ಕೆ ನಿರ್ಧರಿಸಿದ. ಗಿಡ್ಡಿ 'ಪೌಲಿನ್' ಆದಳು; ಕುಕ್ಕ 'ಪೌಲು' ಆದನು. ಇವು ಅಂಕಿತನಾಮಗಳು. ಬ್ರಗಾಂಜಾ ಎಂಬ ಕುಲನಾಮ ಸಪ್ತಸಮುದ್ರ

ಗಳನ್ನು ದಾಟಿ ಅವನ ಹಿರಿಯರ ಮೇಲೆ ಬಂದೆರಗಿದಂತೆ, ಪೌಲು ಪೌಲಿನ ರಿಬ್ಬರೂ 'ಮಾರ್ತಾ' ಕುಲನಾಮ ತಾಳಿದರು. ಇಷ್ಟೆಲ್ಲ ಅವಸರವೇಕೆಂದರೆ —ಗಿಡ್ಡಿಯನ್ನು ಆತ ಮನಮುಟ್ಟಿ ಮೆಚ್ಚಿದ್ದಕ್ಕೆ; ಆಕೆ ನಾಳೆ, ತನ್ನ ಶಾಸ್ತ್ರೋಕ್ತ ಗೃಹಿಣಿಯಾಗಬೇಕೆಂಬ ಆಸೆಯಿಂದ. ದುರಾಶೆಯೇನಲ್ಲ ಅದು. ಪಾದ್ರಿಗಳ ಮೆಚ್ಚಿಗೆ, ಹರಕೆಯನ್ನು ಪಡೆಯೇ ಆತ ಮಾಡಿದ ಕೆಲಸ. ಪೌಲಿನಳ ಸಲುವಾಗಿ ಬೆಳ್ಳಿ ಕಟ್ಟಿದ ಬಾಚಣಿಗೆ ಮಾಡಿಸಲು ಕೊಟ್ಟಿದ್ದ; ಬಿಲ್ಲಿಗಾತ್ರದ ಬೆಂಡೋಲೆಯನ್ನೂ ಮಾಡಿಸಲು ಹಾಕಿದ್ದ. ಇಷ್ಟೆಲ್ಲ ನಿಶ್ಚಯ ವಾಗಿ, ಆಕೆಯೂ ಮದುವೆಗೆ ಒಪ್ಪಿದ್ದನ್ನು ಕಂಡು, ಅವಳ ಮೋಹಕ್ಕೆ ಬಲಿಯಾದ ವಲ್ಲಿ, ಕೊಂಕಣಿ ಮಾತಿನಲ್ಲಿ ಹೇಳುವಂತೆ, ಕಳವಳದಿಂದ 'ವಲ್ಲಿ'ಯೇ (ಒದ್ದೆ) ಆದನು. ಮನೆಗೆ ಬಂದಾಗ ಅವರು ಓಡಿಹೋದರೆಂದು ಕೇಳುತ್ತಲೇ, ಒಂದು ಗಳಿಗೆಯ ರೋಷಕ್ಕೆ, ನೆಟ್ಟಗೆ ಪೊಲೀಸ್ ಠಾಣೆಗೆ ಹೋಗಿ 'ತನ್ನ ನಾಳಿನ ಹೆಂಡತಿಯನ್ನೂ, ಭಾವನನ್ನೂ ಕಳ್ಳತನದಿಂದ ಯಾರೋ ಸಾಗಿಸಿದ್ದಾರೆ'—ಎಂಬ ದೂರನ್ನು ಕೊಟ್ಟನು. ಅವನ ಮನಸ್ಸಿ ನಷ್ಟೇ ತಳಮಳ, ಆ ಅರ್ಜಿಯನ್ನು ಕೊಡುವಾಗಲೂ ವ್ಯಕ್ತಮಾಡಿದ್ದು ಅಲ್ಲಿದ್ದ ಪೊಲೀಸ್ ಸಬ್ ಇನ್ಸ್‌ಪೆಕ್ಟರಿಗೆ ಕಂಡು, ಅವರು "ಯಾರು, ಏನು?" ಎಂದು ಒಂದೊಂದೇ ತನಿಖಿ ಮಾಡತೊಡಗಿದನು. ಇವನು ಹೇಳಿದ 'ವಯಸ್ಸಿ'ನಿಂದಾಗಿ ಅವರಿಬ್ಬರೂ ಅಪ್ರಾಯಸ್ಥರಿರಬಹುದು— ಎಂಬ ಅನುಮಾನ ಅವನಿಗುಂಟಾಯಿತು. ಆಮೇಲೆ ಕದ್ದುಕೊಂಡುಹೋದ ವರು ಮಕ್ಕಳ ತಂದೆ ತಾಯರೇ—ಎಂದು ಕೇಳಿದಮೇಲೆ, ಇನ್ನಷ್ಟು ಅನು ಮಾನವಾಯಿತು. "ಹೋಗಿ; ಈ ಅರ್ಜಿ ಹಿಂದಕ್ಕೆ ತೆಕ್ಕೊಂಡು ಹೋಗಿ. ನಾಳೆ, ಬೇರೆ ಯಾರಾದರೂ ಇದರಲ್ಲಿ ಸೇರಿಕೊಂಡರೆ, ಅವರಿಬ್ಬರನ್ನೂ ನೀವು ಕದ್ದುತಂದು ಮತಾಂತರಗೊಳಿಸಿದ್ದಕ್ಕೆ ನಿಮ್ಮ ಮೇಲೆ ಕ್ರಿಮಿನಲ್ ದಾವೆ ಹೂಡಿಯಾರು" ಎಂದು ಬೆದರಿಸಿ ಕಳುಹಿಸಿದ. 'ಹೊಳೆಯ ತನಕ ಓಟ, ದೊರೆಯ ತನಕ ದೂರು'—ಕೊಡಬೇಕಾಗಿದ್ದ ವಲ್ಲಿ, ಅರ್ಧ ನಿರಾಶೆಗೊಂಡು ಚರ್ಚಿಗೆ ಬಂದ. ಚರ್ಚಿನಲ್ಲಿ ಪಾದ್ರಿಗಳೊಡನೆ ದೂರು ಕೊಟ್ಟರೂ ಅವರು ತತ್ಕಾಲಕ್ಕೆ ಏನೂ ಹೇಳದಾದರು. ಆದರೂ ಹುಡುಗಿಯ ಮೇಲೆ ವಲ್ಲಿಯ ಪ್ರಭಾವವುಂಟಾಗಿತ್ತು—ಎಂಬುದನ್ನು ಬಲ್ಲ ಅವರು "ಯಾಕೆ ನೀನು ಅಷ್ಟು

ಯೋಚನೆ ಮಾಡುತ್ತೀ. ಇನ್ನೊಮ್ಮೆ ನೀನಾಗಿ ತೋಟಕ್ಕೆ ಹೋದರೆ ನಿನ್ನ ಕೆಲಸವಾಗುತ್ತೆ. ಅವಳಾದರೂ ನಿನ್ನ ಹಿಂದೆ ಓಡಿ ಬಂದಾಳು" ಎಂದು ಪ್ರೋತ್ಸಾಹ ಕೊಟ್ಟರು.

ಮರಳಿ ಆತ ಹಿರಿ ಮಲೆಗೆ ಹೋಗುವ ಆಸೆಯಿದ್ದರೂ ಹೋಗುವ ಧೈರ್ಯ ಅಷ್ಟು ಸುಲಭದಲ್ಲಿ ಬ್ರಿಗಾಂಜನಿಗೆ ಬರಲಿಲ್ಲ. 'ಹೋಗುತ್ತೇನೆ, ಹೋಗುತ್ತೇನೆ' ಅಂದುಕೊಂಡು ದಿನ ಕಳೆದ. ಅವನ ತಾಯಿಯ ಮುಂದೆ ಪೂಜಾರಿ ಬಿರುಮ ಇಲ್ಲದ ಶಾಪ ಕೊಟ್ಟುದುದರಿಂದ, ಮಲೆಯವರು ತನ್ನ ಮೇಲೆ ತಿರುಗಿಬಿದ್ದಾರು—ಎಂಬ ಭೀತಿಯೂ ಉಂಟಾಯಿತು. ಮನಸ್ಸೆಲ್ಲ ಗಿಡ್ಡಿಯ ಮೇಲುಳಿದರೂ, ಅವನ ಮೈ ಮಾತ್ರ ಕಾರ್ಕಳದಲ್ಲೇ ಉಳಿಯ ಬೇಕಾಯಿತು.

ತನ್ನ ದೂತರನ್ನಾದರೂ ಮಲೆಗೆ ಅಟ್ಟೋಣ—ಎಂದು ಯೋಚಿಸಿದ. ಒಮ್ಮೆಂದೊಮ್ಮೆ ತೊಡಗಿದ ಮಳೆಗಾಲ, ಅವನ ಆಸೆಯನ್ನು ಕಡಿದು ಹಾಕಿತು. ಚೋಮ ಸಕುಟುಂಬಿಯಾಗಿ ಮಲೆಗೆ ಸೇರಿದ ಮರುದಿನವೇ ಬಾನಿನ ಆರ್ಭಟೆ ಬಿರುಸಾಗತೊಡಗಿತು. ಮುಂಗಾರು ಮಳೆಯ ವಿರಾಟ ರೂಪವೆಲ್ಲ ಮಲೆಯನ್ನಾವರಿಸಿತು. ಅಷ್ಟೊಂದು ಜೋರಿಂದಲ್ಲದಿದ್ದರೂ, ಕಾರ್ಕಳದಲ್ಲಿ ಮುಂಗಾರುಮಳೆಯ ಗುಡುಗಿನ ಘರ್ಜನೆ ಕೇಳಿಸಬೇಕಾಯಿತು. ಆ ಮಳೆಗಾಲವನ್ನೆಲ್ಲ, ತನ್ನ ಮೆಚ್ಚಿನ ಪೌಲಿನ್ ಮಾರ್ತಾಳನ್ನು ಕುರಿತಾದ ನಿತ್ಯಜಪವನ್ನು ಮಾಡುತ್ತಲೇ ಕಳೆದ. ತನ್ನ ದೇವರಿಗೂ ಬಹುವಾಗಿ ಹೇಳಿ ಕೊಂಡ. ನಂಬದ ಜನಕ್ಕೆ ಸದ್ಗತಿ ಕೊಡುವ ದಾರಿಯಲ್ಲಿ ತಾನು ನಡೆದಾಗ, ತನಗೆ ಬೆಂಬಲವಾಗು—ಎಂದು ಬೇಡಿದ. ಜೆರುಸಲೇಮಿನ ತನಕ ಅವನ ದೂರು ಹೋಗದಿದ್ದರೂ, ಊರ ಪಾದ್ರಿಯ ತನಕ ಮುಟ್ಟಿದ್ದರಿಂದ, ಅವರ ಸಹಾನುಭೂತಿಯಂತು ದೊರೆತೇ ದೊರೆಯಿತು.

ಮಳೆಗಾಲದಲ್ಲಿ ಎಂದೂ ಮಲೆ-ಕಾರ್ಕಳಗಳ ನಡುವಣ ಹಾದಿ ಪಯಣಕ್ಕೆ ಸುಗಮವಲ್ಲ. ತೊರೆ, ಹೊಳೆಗಳೆಲ್ಲ ನೀರು ನೆರೆಗಳಿಂದ ಕೊಬ್ಬಿ ಹೋಗುತ್ತವೆ. ಬೆಟ್ಟಗಳೆಲ್ಲ ಮಂಜಿನ ಮುಸುಕಿನಲ್ಲಿ ಮಾಯವಾಗುತ್ತವೆ. ಮಲೆಯ ನೆಲವೆಲ್ಲ ರಕ್ತ ಹೀರುವ ಇಂಬಳುಗಳಿಂದ ನಡೆಯದಾಗುತ್ತದೆ. ಅಂಥ ಮಳೆಗಾಲದ ಉದ್ದಕ್ಕೂ ವಲ್ಲಿಗೆ ಚಿಂತೆಯೇ ಚಿಂತೆ! ಮಳೆ ಬಿಟ್ಟ

ಮರುದಿನವೇ ಮಲೆಗೆ ಹೋಗುತ್ತೇನೆ, ಅಂದುಕೊಂಡ. ಕಾರ್ತಿಕಮಾಸ ಕಳೆಯುತ್ತಲೇ, ಮಳೆಯ ಭರ ಕಡಿಮೆಯಾಯಿತು. ಇನ್ನು ಒಂದು ತಿಂಗಳ ಕಾಲದಲ್ಲಾದರೂ ಏಲಕ್ಕಿಯ ಆಸೆಯಿಂದ ಆತ ಮಲೆಗೆ ಹೋಗಲೇಬೇಕು. ಆದರೂ ಹೋಗುವ ಧೈರ್ಯವಿಲ್ಲ. ಒಬ್ಬಂಟಿಗನಾಗಿ ಎಂದೂ ಹೋಗಲಾರ. ಹಾಗೆಂದು, ಇಬ್ಬಿಬ್ಬರು ಕಲ್ಲಿವಿಾಸೆಯ ಗೆಳೆಯರನ್ನು ಕಟ್ಟಿಕೊಂಡು ಮೂಲೆ ಗುಂಪಿನ ತನಕ ಹೋದ ಮುಂದೆ ತಾನೇ ಹೋಗಲು ಅಂಜಿಕೆಯಾಗಿ, ಗೆಳೆಯರಾದ ಪಾಸ್ಕು ಮತ್ತು ಗಾಬ್ರು ಇಬ್ಬರನ್ನು ತನ್ನ ರಾಯಭಾರಿಗಳಾಗಿ ಹಿರಿ ಮಲೆಗೆ ಕಳುಹಿಸಿದ. ಮಲೆಗೆ ಅವರು ಹೊಸಬರು. ಹೇಗೋ ಹೇಗೋ ಅವರು ಕಿರಿ ಮಲೆಗೆ ಹೋಗಿ, ಅಲ್ಲಿಂದ ಮಲೆಗೆ ಬಂದು ಕುಳಿತ ತಿರುಮಲ ಭಟ್ಟರ ನೆರವನ್ನು ಯಾವುದಕ್ಕೆಂದು ತಿಳಿಸದೆಯೆ ಬೇಡಿ, ಒಬ್ಬ ಆಳನ್ನು ಕರೆದುಕೊಂಡು, ಹಿರಿ ಮಲೆಗೆ ಹೋದದ್ದಾಯಿತು. ಆಗ ಕುಮರಿಯಿಂದ ಕೇರಿಗೆ ಮಲೆಯ ಜನರು ಮರಳಿದ್ದರಷ್ಟೆ. ಅಲ್ಲಿನ ಗುರಿಕಾರನನ್ನು ಕಂಡರು. "ಧನಿಗಳ ಬಗ್ಗೆ ನಾವು ಬಂದಿದ್ದೇವೆ. ಏಲಕ್ಕಿ ಹೇಗಾಗಿದೆ ಈ ವರ್ಷ? ಕೊಯ್ಯುವುದಕ್ಕಾಯಿತೇ?" ಎಂದು ಮಾದನನ್ನು ವಿಚಾರಿಸಿದರು. ಗುರಿಕಾರ ಮಾದ ಮೊದಲೇ ರೇಗಿದ್ದ. 'ವಲ್ಲಿ' ಧನಿ ಬಂದು ಆ ಬಗೆಯಲ್ಲಿ ತಮ್ಮಾವ ರನ್ನು ವಂಚಿಸಿ, ಮಕ್ಕಳಿಬ್ಬರನ್ನು ಮತಾಂತರ ಮಾಡಿದ ಸಿಟ್ಟು ಅವನಲ್ಲೂ ಇತ್ತು. "ಯಾರೋ, ಏನೋ ನೀವು! ಧನಿಗಳು ಇಲ್ಲಿಗೆ ಬಂದರೆ ಬರಲಿ, ಮತ್ತೆ ನೋಡುವ. ಮೂಲೆಗುಂಪಿನ ತನಕ ಬಂದವರಿಗೆ ಇಲ್ಲಿಯ ತನಕ ಬರಲಿಕ್ಕಾಗದೇನು?" ಎಂದ.

"ಅವರಿಗೆ ಕಾಲು ಉಳುಕಿದೆ. ಹೀಗಾಗಿ ಮೂಲೆಗುಂಪಿನಲ್ಲಿ ನಿಂತಿದ್ದಾರೆ" ಎಂದ ಪಾಸ್ಕು.

"ಅದಕ್ಕೇನಾಗಬೇಕು? ಕಂಬಳಿ ಕಟ್ಟಿ, ಒಂದು ಮಂಚಲು ಮಾಡಿಕೊಂಡು ಅವರನ್ನು ಹೊತ್ತು ತರುವ. ಅಂದರೆ ನೋಡಿ—ಹಿಂದೆಲ್ಲ ಅವರು ಮೂಲೆಗುಂಪಿನಲ್ಲಿ ಬಂದಿರುತ್ತಿದ್ದರು. ನಾವು ನಾವೇ ಏಲಕ್ಕಿ ಒಣಗಿಸಿಕೊಂಡು ಹೋಗಿ ಅವರಿಗೆ ಅಲ್ಲಿ ಕೊಟ್ಟರೆ ಸಾಕಿತ್ತು. ಈಗ ಧನಿಗಳೇ ಬಂದು ಏಲಕ್ಕಿಯನ್ನು ಇಲ್ಲಿಯೇ ಒಟ್ಟುಮಾಡಿಸಿ, ಒಣಗಿಸುವ ಏರ್ಪಾಟು ಮಾಡಿದ್ದರಿಂದ, ಅವರೇ ಇದ್ದು ಆ ಕೆಲಸ ಮಾಡಿಸಬೇಕು" ಎಂದ.

ಮಲೆಗೆ ಬಂದ ಪಾಸ್ಕು, ಗಾಬ್ರು ಇಬ್ಬರೂ ಕೇರಿಯಲ್ಲಿ ಆತಿಥ್ಯವಿಲ್ಲದೆ ಉಳಿಯಬೇಕಾಯಿತು. ಅಕ್ಕಿ ಬೇಡಿದರು. 'ಕುಮರಿ ಕಟಹೋಗಿದೆ' ಎಂದರು ಜನಗಳು. ಧನಿಗಳ ಮನೆ ತೋರಿಸೆಂದರೆ—ಗುರಿಕಾರ ಎಲ್ಲರನ್ನೂ ಬಿಟ್ಟು ಆ ಕೆಲಸಕ್ಕೆ ಚೋಮನನ್ನು ಕಳುಹಿಸಿದ. ಚೋಮಗೆ ಎದೆಯ ಉರಿ ಇನ್ನೂ ತಣಿದಿರಲಿಲ್ಲ. ಆತ ಮಾತನಾಡದೆ ಅವರನ್ನು ಕರೆದುಕೊಂಡು "ನಿಮ್ಮ ಧನಿಗಳಿದ್ದದ್ದು ಇಲ್ಲಿ" ಎಂದು ಹಾಳುಬಿದ್ದ ತಾವೊಂದನ್ನು ತೋರಿಸಿದ. ಅಲ್ಲಿ ಗುಡಿಸಲಿನ ತಳಪಾಯವಲ್ಲದೆ ಇನ್ನೇನೂ ಉಳಿದಿರಲಿಲ್ಲ. ಬಂದವರಿಗೆ ಆಶ್ಚರ್ಯವಾಯಿತು. 'ಹೊಸ ಬಂಗಲೆಯಿದೆ. ಗುರುತಿಗೆ ಕ್ರೂಜೆ ನಟ್ಟಿದ್ದೇನೆ. ಹತ್ತು ಜನ ಇರಬಹುದು' ಎಂದು ಹೇಳಿ ಕಳುಹಿಸಿದ್ದವಲ್ಲಿ. ಈಗ ಆ ತಾವನ್ನು ಕಂಡು ಏನನ್ನಬೇಕು! "ಮನೆ ಎಲ್ಲಿ, ಮನೆ ಎಲ್ಲಿ?" ಎಂದು ಕೇಳುತ್ತಾರೆ. "ಅನೇ" ಎಂದು ಚೋಮ ಸುಟ್ಟ ಮನೆಯ ತಳವನ್ನು ತೋರಿಸುತ್ತಾನೆ. "ಮನೆ ಏನಾಯಿತು?" ಎಂದು ಅವರು ಕೇಳಬೇಕಾಯಿತು. "ಆ ಮನೆ, ಏಲಕ್ಕಿ ಸುಡುವ ಮನೆ—ಎರಡೂ ಸುಟ್ಟು ಬೂದಿಯಾಗಿವೆ. ಇನ್ನು ನಿಮ್ಮ ಧನಿಗಳು ಬಂದರೂ ಅವರಿಗೂ ಅದೇ ಗತಿ" ಎಂದ ಚೋಮ. ಬಂದ ಇಬ್ಬರು ಮಿತ್ರರಿಗೂ ಜ್ಞಾನೋದಯವಾಯಿತು. ತಮ್ಮಗೆಳೆಯ ಮಾಡಿದ ಕೆಲಸಕ್ಕೆ ಕುಡಿಯರು ರೇಗಿದ್ದಾರೆ—ಎಂಬುದು ಖಾತ್ರಿಯಾಯಿತು. ಆ ಮಾತನ್ನೇ ಬಿಟ್ಟರು. "ಹೋಗಲಿ ಅಣ್ಣ, ಧನಿಗಳ ವಿಚಾರ ಅವರವರೇ ನೋಡಿಕೊಳ್ಳಲಿ. ನಮಗ್ಯಾಕೆ! ಈಗ ನಾವು ಬಂದದ್ದಕ್ಕೆ ಹಸಿದು ಹೋಗಬಾರದಲ್ಲ ಮಹಾರಾಯ. ಬಯನಿ ಹೆಂಡವಾದರೂ ಇದ್ದರೆ ಒಂದಿಷ್ಟು ಕೊಡಿಸು" ಎಂದು ಬೇಡಿದರು. "ಅಲ್ಲೇ ನಾಲ್ಕು ಮಾರಿನಾಚೆಗೆ ದಂಬೆಯ ನೀರುಂಟು" ಎಂದ ಚೋಮ. ಅವನ ಮಾತು ಒಳಗಿನ ಸಿಟ್ಟನ್ನು ಮೆಲ್ಲಮೆಲ್ಲಗೆ ಮೇಲಕ್ಕುಕ್ಕಿಸುತಿತ್ತು. ಗಾಬ್ರು ಮತ್ತು ಪಾಸ್ಕು ಕೊಂಕಣಿ ಭಾಷೆಯಲ್ಲಿ ತಂತಮ್ಮಲ್ಲೇ ಗೊಣಗಿದರು. ನೀರಡಿಕೆ ಸಹಿಸದ್ದಕ್ಕೆ ದಂಬೆಯ ಬಳಿಗೆ ಹೋಗಿ, ಆ ತಣ್ಣೀರನ್ನು ಕುಡಿದು ಬಂದರು. 'ತಾವು ಆ ದಿನ ಅಲ್ಲೇ ಉಳಿದರೆ, ತಮ್ಮ ಪಾಡೇನಾಗುತ್ತದೊ' ಎಂಬ ಭೀತಿಯುಂಟಾಯಿತು. ತಮ್ಮ ಜತೆಗೆ ಬಂದ ಕಿರಿ ಮಲೆಯ ಕುಡಿಯನಿಗೆ ಈ ನೀತಿಯ ಅರ್ಥವೇ ಹೊಳೆಯಲಿಲ್ಲ. ಅವರೆಲ್ಲರೂ ನಿರಾಶೆಯಿಂದ

ತಿರುಮಲಭಟ್ಟರಲ್ಲಿರುವಲ್ಲಿಗೆ ಹೋದರು. ಅವರ ದಯೆಯಿಂದ, ಒಂದಿಷ್ಟು ಕೂಳನ್ನು ಕಂಡು, ಪಾಸ್ಕು ಗಾಬ್ರು ಮೂಲೆಗುಂಪಿಗೆ ಮರಳಿದರು.

ವಲ್ಲಿಬ್ರಗಾಂಜನ ಕಳವಳ ಒಂದಕ್ಕೆರಡಾಯಿತು. ನಾಲ್ಕು ತಿಂಗಳ ವಿರಹದಿಂದ, ಅವನಿಗೆ ಪೌಲಿನಳ ಮೇಲಿನ ಹುಚ್ಚು ತಲೆಗೆ ಅಡರಿತ್ತು. ಈ ರಾಯಭಾರತ್ವ ಫಲಿಸದೆಯೆ 'ಧನಿಗಳು ಬಂದರೂ ಸುಟ್ಟುಹಾಕುತ್ತೇವೆ' ಎಂಬ ಬೆದರಿಕೆಯ ಮಾತು ಅವನನ್ನು ರೇಗಿಸಿತು. 'ಧನಿಯಾದ ನನಗೆ ಅನ್ನುವ ಮಾತೇ ಅದು! ಏನಿಲ್ಲ, ಊರಿಗೆ ಹೋಗಿ ಹತ್ತೆಂಟು ಜಾತಿಯ ಬಂಧುಗಳನ್ನು ಕರೆದುಕೊಂಡು—ಬಂದೂಕು ಸಹಿತನಾಗಿ ಬಂದು, ಮಲೆಯಲ್ಲಿ ಕುಳಿತು, ಏಲಕ್ಕಿಯ ಕಪ್ಪ ಗಳಿಸುತ್ತೇನೆ' ಎಂದು ಕೊಚ್ಚಿದ. ಗೇಣಿಯನ್ನು ಅವರು ಕೊಡದಿದ್ದರೆ, ಸಕಲೇಶಪುರದ ತನ್ನ ಬಂಧುಗಳಿಗೆ ಅವನು ಗೇಣಿ ಕೊಡುವುದು ಶಕ್ಯವಿದ್ದಿಲ್ಲ—ಎಂಬುದು ಗೊತ್ತು. ತನ್ನ ಕೋಪ ಎಷ್ಟಿದ್ದರೂ, ಶೌರ್ಯ ಎಷ್ಟಿದ್ದರೂ—ಕುಡಿಯರ ಕೇರಿಯಲ್ಲೇ ನಿಂತು, ಅಬ್ಬರದಿಂದ ತನ್ನ ಕೆಲಸ ಜರಗಿಸುತ್ತೇನೆ, ಏಲಕ್ಕಿ ತರುತ್ತೇನೆ, ತನಗೊಲಿದ ಹೆಣ್ಣು ತಂಜೆತಾಯರನ್ನು ಬಿಟ್ಟು ಕುನ್ನಿಯಂತೆ ಬರುತ್ತಾಳೆ—ಎಂದು ನಂಬಿ ಮನೆಯಿಂದ ಹೊರಟ. ವಲ್ಲಿಯ ಮಾತಿಗೆ ಪಾಸ್ಕು, ಗಾಬ್ರು ಇಬ್ಬರೂ ಪುಷ್ಟಿಕೊಡಲಿಲ್ಲ. "ವಲ್ಲಿ, ಹೋದವರನ್ನೇ ಅವರು ಕೊಂದುಹಾಕಿ ಹೂತರೆ, ಹೊರಗಿನ ಲೋಕಕ್ಕೆ ಸುದ್ದಿ ತಿಳಿಯುವಾಗ ತಿಂಗಳಾದೀತು. ಅದೆಲ್ಲ ಸಲ್ಲದ ಆಟ" ಎಂದು ಅವರೇ ಬೋಧಿಸಿದರು. ಹುಣ್ಣಿನ ಮೇಲೆ ಬರೆ ಇಟ್ಟಂತಾಯಿತು ಆತನಿಗೆ. ಬೇರೆ ದಾರಿ ಕಾಣಿಸಲಿಲ್ಲ. ತಿರುಮಲಭಟ್ಟರನ್ನು ಹಿಡಿದು, ಹಿರಿ ಮಲೆಯ ಗುರಿಕಾರನನ್ನು ಕರೆಯಿಸಿ, ಸಂಧಾನ ಹೂಡುವುದೊಂದೇ ಉಪಾಯ—ಎಂದು ಅವನಿಗೂ ತೋರಿತು. ಅಲ್ಲಿಗೇನೆ ಮೂವರು ಹೋದರು. ಅವರಲ್ಲಿ ಒಬ್ಬರಾದರೂ ತಾವು ಹುಡುಗಿ ಹಾರಿಸಿದ ಪ್ರಕರಣವನ್ನು ಕುರಿತು ಹೇಳಬೇಕೇ! ಬದಲು "ನನಗೆ ಬಿಡಲಾರದ ಒಳಜ್ವರ—ಈ ವರ್ಷ. ಮಲೆಗೆ ಹೋಗಿ ಇರಲಿಕ್ಕಾಗುವುದಿಲ್ಲ. ನಿಮ್ಮಲ್ಲೆಲ್ಲ ಏಲಕ್ಕಿ ಕೊಯ್ಯಲು ತೊಡಗಿಯಾಯಿತು. ಅಲ್ಲಿನ್ನೂ ಕೆಲಸವನ್ನೇ ತೊಡಗಿಲ್ಲ. ಅವರಾಗಿಯೇ ಅದನ್ನು ತಂದುಕೊಡುವ ಏರ್ಪಾಟು ಮಾಡಿಸಬೇಕು. ನಿಮ್ಮ ಮೆಹನತ್ತಿಗೆ ಹತ್ತು ಮಣಕ್ಕೆ ಒಂದು ಮಣದ ಹಾಗೆ ದಲಾಲಿ

ಕೊಡುವ” ಎಂದರು. ಮಲೆಯ ಲೆಕ್ಕ ಹೇಳಿದರು; ಹುಟ್ಟುವಳಿ ಹೇಳಿದರು. ಕಳಿತಲ್ಲಿಯೇ ಸುಮಾರು ಹತ್ತು ಮಣ ಏಲಕ್ಕಿಯಷ್ಟು ದಲಾಲಿ ಸಿಗುವ ಆಸೆಯನ್ನು ಭಟ್ಟರಿಗೆ ತೋರಿಸಿದರು. “ಆಯಿತು, ನೋಡುವ” ಎಂದರು ತಿರುಮಲಭಟ್ಟರು. ತಮ್ಮ ದೂತನಾಗಿ ಬೂದನನ್ನು ಅವರು ಹಿರಿ ಮಲೆಯ ಗುರಿಕಾರರಲ್ಲಿಗೆ ಕಳುಹಿಸಿದರು. ಬಂದವರು ಎರಡು ದಿನ ಕಾಲ ಭಟ್ಟರು ಕೊಟ್ಟ ಅನ್ನವನ್ನುಂಡು, ಬಿಟ್ಟಿ ದೊರೆತ ಬಯನಿ ಹೆಂಡವನ್ನು ಕುಡಿದು, ಚಿಂತೆ ಮರೆತರು.

ಬೂದ ಬೆಳಗ್ಗೆ ಹೋದವ—ಬೇಕೆಂದೇ ಆ ಸಂಜೆ, ಕತ್ತಲು ಮಾಡಿಕೊಂಡು ಬಂದ. ಆ ಮೂವರು ಮಲಗಿ ಗೊರಕೆ ಹೊಡೆಯುವ ಧ್ವನಿ ಕೇಳಿದ ಮೇಲೆಯೇ ಧನಿಗಳನ್ನು ಕೂಗಿ, ಎಚ್ಚರ ಮಾಡಿ, ಮನೆಯಿಂದ ಹೊರಕ್ಕೆ ಕರೆಯಿಸಿಕೊಂಡು, ತಾನು ಹಿರಿ ಮಲೆಯಲ್ಲಿ ಕೇಳಿದ ಪುರಾಣವನ್ನೆಲ್ಲ ಹೇಳಿದ. “ಹೋ, ಇಷ್ಟೆಲ್ಲ ಆಗಿದೆಯೋ ಅಲ್ಲಿ! ಅವರು ಆ ಕುಡಿಯಿತಿಯನ್ನು ಹಾರಿಸಿ, ಅವರಿಗೆ ತೊಂದರೆ ಕೊಟ್ಟು, ಸಿಟ್ಟು ಬರಿಸಿ, ಅಲ್ಲಿಗೆ ಹೋಗದ ಹಾಗೆ ಮಾಡಿಕೊಂಡಿದ್ದಾರೋ ಈಗ? ಅವನ ಮನೆಯನ್ನು ಸುಟ್ಟಾಯಿತೋ? ಹಾಗೆಯೇ ಆಗಬೇಕು” ಎಂದಂದು ತಿರುಮಲಭಟ್ಟರು ಸಂತೋಷಗೊಂಡೇ ಸುದ್ದಿ ಕೇಳಿ ಮಲಗಿಕೊಂಡರು. ಬೆಳಗ್ಗೆ ಎದ್ದು “ಹೌದಯ್ಯ ಪಬ್ಬುಗಳೆ, ನೀವು ಮಾಡಬಾರದ ಕೆಲಸ ಮಾಡಿದ್ದೀರಂತೆ. ಈಗ ಆಗಬಾರದ್ದಾಯಿತು. ನನ್ನ ಮಾತಿಗೂ ಆ ಗುರಿಕಾರ ಬೆಲೆ ಕೊಡುವ ಹಾಗಿಲ್ಲ. ನೋಡುತ್ತೇನೆ—ಪ್ರಯತ್ನ ಮಾಡುತ್ತೇನೆ. ಅವನಿಗೆ ಒಳ್ಳೇ ಮಾತಿನಿಂದ ಹೇಳುತ್ತೇನೆ. ನಿಮಗಾಗಿ ನಾನೇ ಅಲ್ಲಿಗೆ ಹೋಗುತ್ತೇನೆ. ಆದರೆ ಇಷ್ಟೇ ಏಲಕ್ಕಿ ಬಂದೀತು—ಎಂದು ನಾನು ಭರವಸೆ ಕೊಡಲಾರೆ. ನನ್ನ ನಂಬಿಕೆಯಿದ್ದರೆ ತಿಂಗಳು ಕಳೆದು ನೀವು ಇನ್ನೊಮ್ಮೆ ಬನ್ನಿ. ಸಿಕ್ಕಿದ ಏಲಕ್ಕಿಯನ್ನು ಇಲ್ಲೇ ತರಿಸಿ ಇರಿಸುತ್ತೇನೆ” ಎಂದರು. ಭಟ್ಟರ ಮೂಲಕ, ಸಂಧಾನದಿಂದ ಬರುವಷ್ಟೇ ಏಲಕ್ಕಿ ತಮ್ಮ ಭಾಗ್ಯ—ಎಂದು ತಿಳಿದು ವಲ್ಲಿ ಜತೆಗಾರನೊಡನೆ ಕಾರ್ಕಳಕ್ಕೆ ಮರಳಬೇಕಾಯಿತು.

ಎಷ್ಟೆಂದರೂ ಏಲಕ್ಕಿ. ಆದರ ಕಂಪು, ವಾಸನೆ ಹೆಚ್ಚು. ಒಳ್ಳೆಯ

ಬೆಲೆ ಇರುವ ಪದಾರ್ಥ. ಸಿಕ್ಕಿದ್ದನ್ನು ಬಿಡಬಾರದು—ಎಂದುಕೊಳ್ಳ ಬೇಕಾಯಿತು ವಲ್ಲಿ. ಆಬರಿ ಬರುವ ಉತ್ಪನ್ನದಲ್ಲಿ ಖೋತಾ ಬರುತ್ತ ದೆಂಬುದು ಗೊತ್ತು. ಹೀಗಾಗಿ ಸಕಲೇಶಪುರಕ್ಕೆ ಆತ ಮೊದಲೇ ಕಾಗದ ಬರೆದು ಹಾಕಿದ. 'ತೋಟಕ್ಕೆ ಹೋಗಿ ಬಂದಿದ್ದೇನೆ. ರೂಪಾಯಿಗೆ ನಾಲ್ಕಾಣೆ ಏಲಕ್ಕಿ ಈ ವರ್ಷ ಕೈಗೆ ಬರುವುದು ಕಷ್ಟ!' ಎಂದು ತಿಳಿ ಸುವ ಮುಂಜಾಗ್ರತೆ ವಹಿಸಿದ.

ಇತ್ತ ತಿರುಮಲಭಟ್ಟರು ಬೂದನನ್ನು ನಾಲ್ಕಾರು ಬಾರಿ ಅಲ್ಲಿಗೆ ಅಟ್ಟಿ ಸಂಧಾನವೆಸಗಿದರು. 'ತಾನು ಒಳಗೇಣಿಗೆ ಮಲೆಯನ್ನು ವಹಿಸಿಕೊಂಡಿ ದ್ದೇನೆ. ಇನ್ನು ಹಳೆಯ ಧನಿಗಳು ನಿಮ್ಮ ತೋಟಕ್ಕೇನೇ ಬರಲಾರರು— ಎಂದು ಹೇಳಿಕಳುಹಿಸಿ, ಬಳಿಕ ಒಂಬು ದಿನ ತಾವೇ ಮಲೆಗೆ ದರ್ಶನಕೊಟ್ಟು ಬಂದರು. ಅಲ್ಲಿನ ಗುರಿಕಾರ ಅವರಿಗೆ ಹೊಸಬನಲ್ಲ. ನ್ಯಾಯ ವಿಧಾರುವವ ನಲ್ಲ. ಇವರ ಪ್ರೇರಣೆಯಂತೆ ತಿರುಗಿ ಏಲಕ್ಕಿ ಒಣಗಿಸುವ ಮನೆ ಕಟ್ಟಿ "ನಿಮಗಾಗಿ, ನಿಮಗಾಗಿ ಈ ಕೆಲಸ ಮಾಡುತ್ತೇವೆ" ಎಂದ. ಆತ ಏಲಕ್ಕಿ ಕೊಯ್ಯಿಸಿದ; ಒಣಗಿಸಿದ; ಫಸಲನ್ನು ಕಿರಿ ಮಲೆಯವರೆಗೆ ಸಾಗಿಸಿಕೊಟ್ಟ. ಈ ಸದವಕಾಶದಲ್ಲಿ ಬ್ರಗಾಂಜನ ಓಟಕ್ಕೆ ಕಾರಣಳಾದ ಗಿಡ್ಡಿಯ ದರ್ಶನ ವನ್ನೂ ಒಮ್ಮೆ ತಿರುಮಲಭಟ್ಟರು ಮಾಡಿಕೊಂಡು ಬಂದರು. ದಾರಿಯಲ್ಲಿ ಬೂದನೊಡನೆ "ಆ ಪಬ್ರುಗೆ ತಲೆ ಕುಂಬು. ಅಲ್ಲದಿದ್ದರೆ ಅವಳೇನು ಅಂಥ ಮಹಾ ರಂಭೆಯೋ! ಅಪ್ಸರೆಯೋ! ಅವಳನ್ನು ಹೊತ್ತುಕೊಂಡು ಹೋಗಿ ಪಾದ್ರಿ ಮತಕ್ಕೆ ಸೇರಿಸುವುದಕ್ಕೆ" ಎಂದರು.

ನಿಜಕ್ಕೂ ಆ ವರ್ಷ ತುಸು ತಡವಾಗಿ ಏಲಕ್ಕಿ ಹೆಕ್ಕಿದ್ದರಿಂದ, ಸ್ವಲ್ಪ ವೇನೋ ನಷ್ಟವಾಗಿತ್ತು. ಹೆಚ್ಚಿನ ನಷ್ಟವೇನಿಲ್ಲ. ಪದ್ಧತಿಯಂತೆ ದೊರೆತ ಯಾವತ್ತು ಏಲಕ್ಕಿ, ಭಟ್ಟರ ಉಗ್ರಾಣಕ್ಕೆ ಬಂದು ದಾಸ್ತಾನಾಯಿತು. ತಿಂಗಳು ಕಳೆಯುತ್ತಲೆ ಬ್ರಗಾಂಜಾ ಕಳೆಗುಂದಿದ ಮೋರೆಯವನಾಗಿ ಅಲ್ಲಿಗೆ ಬಂದಾಗ ಮಾತ್ರ, "ಏಲಕ್ಕಿ ಫಸಲು ರೂಪಾಯಿಗೆ ಎಂಟೇ ಆಣೆಯಾಯಿತು" ಎಂದರು. ಅದರಲ್ಲಿಯೂ ಸೇಕಡಾ ಹತ್ತರಂತೆ ದಲಾಲಿ ಸಲ್ಲಿಸಿ, ಉಳಿದದ್ದನ್ನು ವಲ್ಲಿ ಹೊರಿಸಿಕೊಂಡು ಮೂಲೆಗುಂಪು ಸೇರಬೇಕಾಯಿತು. ಈ ಬಾರಿಯೂ ಅವನ ನಿರಾಶೆ ಹೇಳತೀರದು. ರಾತ್ರಿವೇಳೆ ತಾನು ಕದ್ದಾದರೂ ಹಿರಿ ಮಲೆಗೆ

ಹೋಗಿ, ಮಲೆಯಲ್ಲಡಗಿ ಕುಳಿತುಕೊಂಡು, ತನ್ನ ಪ್ರೇಯಸಿಯ ದರ್ಶನ ಪಡೆದು, ಅವಳನ್ನು ಕರೆದು ತರೋಣ—ಎಂಬ ಆಸೆ ಅವನ ಅಂತರಂಗ ಕ್ಕಿದ್ದರೂ, ಎದೆಯು ಕೆಚ್ಚು ಬಯನಿ ಹೆಂಡ ಬಿದ್ದಾಗಲಷ್ಟೇ ಉಳಿಯುತಿತ್ತು.

ಹೀಗಾಗಿ ಮೂಲೆಗುಂಪಿಗೆ ಬಂದ ಬ್ರಗಾಂಜಾ ಬಂದಂತೆಯೇ ಮರ ಳಿದ. ತಿರುಮಲಭಟ್ಟರು ಓರಿ ಮಲೆಗೆ ಹೋದರು. ಅಲ್ಲಿನ ಜನಕ್ಕೆ "ಇದನ್ನು ನಾನೇ ಒಳಗೇಣಿಗೆ ಕೊಂಡಿದ್ದೇನೆ. ವಾಡಿಕೆಯಂತೆ ನಿಮಗೆ ಕೊಡುವ ಮರ್ಯಾದೆ, ಕೊಡುವವ ನಾನು. ಆ ಪರ್ಬುವಿನ ಹಾಗೆ—ಬಟ್ಟೆಯ ಬದಲು ದುಡ್ಡು ಕೊಡುವವನಲ್ಲ. ನಮ್ಮ ಮಲೆಯುವರಂತೆ ನಿಮ್ಮನ್ನು ನಡೆಯಿಸಿಕೊಳ್ಳು ತ್ತೇನೆ" ಎಂದು ಪ್ರಚಾರಮಾಡಿ ಬಂದರು. ಅವರ ಅಂತರಂಗದಲ್ಲಿ, ಈ ಸಂಧಿಯನ್ನು ಸ್ವರ್ಣಸಂಧಿಯಾಗಿ ಮಾಡಬೇಕೆಂಬ ಆಸೆ ಮೂಡಿತು. ಬರುವ ಗೇಣಿ ತಪ್ಪಿಸಿ, ಈ ಮಲೆಯನ್ನೇಕೆ ನಾವು ಕಟ್ಟಿಕೊಂಡೆವಪ್ಪ ಎಂದು ಅವರ ಒಡೆಯರಿಗೆ ತೋರುವಂತೆ ಮಾಡಿದರೆ, ತಾನದನ್ನು ಬೆಲೆಗಾಗಲಿ, ನಿಡು ವಾಯಿದೆಯ ಗೇಣಿಗಾಗಲಿ—ಪಡೆಯಬಹುದೆಂಬ ಆಸೆ ಉದಯಿಸಿತು. ಆ ವರ್ಷ ದೊರೆತ ಏಲಕ್ಕಿಯನ್ನು ಸಾಗಿಸಿ, ಮಂಗಳೂರು ಬಂದರದಲ್ಲಿ ಒಳ್ಳೆಯ ಬೆಲೆಗೇ ಮಾರಿದರು. ಓರಿ ಮಲೆಯ ಅರ್ಧ ಉತ್ಪನ್ನ ಅವರ ಕಿಸೆಗೆ ಬಿದ್ದಿತು. ಆದರಿಂದ ಆಸೆ ಹೆಚ್ಚಿ, ಜೋಡೆತ್ತಿನ ಗಾಡಿ ಮಾಡಿಕೊಂಡು, ಮೂರು ದಿನಗಳ ಪಯಣ ಬೆಳೆಸಿ, ಸಕಲೇಶಪುರಕ್ಕೆ ಹೋದರು. ನಡು ದಾರಿಯಲ್ಲಿ ಕಿರಿ ಮಲೆಯಿಂದ ಬೂದನನ್ನು ತಮ್ಮ ಜತೆಗೆ ಕರೆಯಿಸಿಕೊಂಡರು. ಇಬ್ಬರೂ ಸೇರಿ ಮೂಲಧನಿಗಳ ಮನೆಗೆ ಹೋದರು. ಆ ಧನಿ 'ಮಥಾ ಯುಸ'ನೆಂಬಾತ ಮುದುಕ. ಮಂಜರಾಬಾದಿನಲ್ಲಿ ಈಗಷ್ಟೆ ಕಾಫಿತೋಟ ನಡಿಸಿದ್ದಾನೆ. ಮತ್ತು ಅದರ ಸುತ್ತುಮುತ್ತು ಸ್ವಲ್ಪ ಏಲಕ್ಕಿ ತೋಟಗಳೂ ಇವೆ. ಅಲ್ಲಿಗೆ ಹೋಗಿ "ಹ್ಯಾಗೆ ಈ ವರ್ಷದ ಬೆಳೆ!" ಎಂದು ಮಾತ ನಾಡಿಸಿದರು. ತಮ್ಮ ಪರಿಚಯವನ್ನು ತಾವೇ ಮಾಡಿಕೊಟ್ಟರು. ಆ ಪ್ರಸಂಗ ಬರುತ್ತಲೇ ಮಥಾಯುಸರು ವಲ್ಲಿಬ್ರಗಾಂಜಾ ತನಗೆ ಬರೆದ ಕಾಗದವನ್ನು ತೋರಿಸಿದರು. "ಈ ವರ್ಷ ರೂಪಾಯಿಗೆ ನಾಲ್ಕಾಣೆ ಬಂದದ್ದು, ಒಂದಾಣೆ ಅವನಿಗೆ, ಮೂರಾಣೆ ನಮಗೆ." "ಹೀಗೆ ಆದರೆ ತೀರ ಕಷ್ಟ. ಅಲ್ಲಿಗೆ ಬೇರೆಯೇ ಏರ್ಪಾಟು ಮಾಡಬೇಕು" ಎಂದು

ತಮ್ಮ ವ್ಯಥೆಯನ್ನು ಅವರು ತೋಡಿಕೊಂಡಾಗ, ತಿರುಮಲಭಟ್ಟರು ಕುಡಿಯರು ಸಿಟ್ಟಾಗಿದ್ದರೆಂದು ಹೇಳಿದರು. ಬೂದ ಅದಕ್ಕೆ ಸಾಕ್ಷಿ ನುಡಿದ. ಇಬ್ಬರೂ ಸೇರಿ, "ಈ ವರ್ಷ ನಿಮಗೆ ಇಷ್ಟಾದರೂ ಬಂತಲ್ಲ, ಬರುವ ವರ್ಷ ಅದು ಬರುವುದೂ ಕಷ್ಟ" ಅಂದರು.

ಯಾಕೆ, ಏನು ಎಂಬ ಪ್ರಸ್ತಾಪ ಬಾರದಿರುತ್ತದೆಯೇ? "ವಲ್ಲಿ ಬ್ರಾಂಜರು ಅಲ್ಲಿಗೆ ಹೋಗುವ ಹಾಗಿಲ್ಲ. ಮಾತ್ರವಲ್ಲ, ಇನ್ನೊಂದು ನಾಲ್ಕಾರು ವರ್ಷ, ಅಲ್ಲಿನ ಕುಡಿಯರು ಈ ಪ್ರಕರಣ ಮರೆಯುವ ತನಕ ನಿಮ್ಮ ಜನ ಬಂದರೇನೆ ಸಿಟ್ಟಾಗುತ್ತಾರೆ. ಅಲ್ಲದೆ, ಮೊನ್ನೆ ಹೋದಾಗ ನನಗೇ ಅನ್ನುತ್ತಿದ್ದರು—ಈ ವರ್ಷ ಬೆಳೆದದ್ದನ್ನು ನಮ್ಮ ಮುಖ ಕಂಡು ಕೊಡುತ್ತೇವೆ. ಬರುವ ಮಳೆಗಾಲದಲ್ಲಿ ತೋಟಕ್ಕೆ ತೋಟವನ್ನೇ ಕಿತ್ತು ತಲೆಕೆಳಗೆ ಮಾಡಿಡುತ್ತೇವೆ. ಎಂದಿಗೂ ಈ ಪಾದ್ರಿಯ ಹಿಂಡೇ ಅಲ್ಲಿಗೆ ಬರ ಬಾರದು ಎಂದು ಸಿಟ್ಟುಗೊಂಡಿದ್ದಾರೆ ಆ ಜನ" ಎಂಬ ಹೆಚ್ಚಿನ ಬೆದರಿಕೆ ಹುಟ್ಟಿಸಿದರು. ಮುದುಕ ಮಥಾಯಸರು, ಎಟುಕಿನಿಂದ ಬಹುದೂರವಿರುವ ಆ ತೋಟವನ್ನು ಅವರೇ ಪ್ರತ್ಯಕ್ಷ ನೋಡುವಂತಿಲ್ಲ. ನಿಯಮಿಸಿದ ರಾಯ ಭಾರಿಯ ಪಾಡು ಹೀಗಾಯಿತು. ಅವರು ತೀರಾ ಚಿಂತೆಗೀಡಾದರು. ಭಟ್ಟ ರಿಗೆ ಯಾವ ಭರವಸೆಯನ್ನೂ ಕೊಡಲಿಲ್ಲ. ಭಟ್ಟರು ತಮಗೆ ಅದನ್ನು ಕೊಡಿ ಎಂದು ಕೇಳಲೂ ಇಲ್ಲ. "ಹಾಸನ ಜಾತ್ರೆಗೆ ಹೊರಟವರು ನಾವು; ಹಾಗೆಯೇ ನಿಮ್ಮನ್ನು ನೋಡಿಕೊಂಡು ಬರುವ ಎಂದು ಬಂದೆವು" ಎಂದು ಹೇಳಿದರು.

ಅವರ ಉಪಾಯವೇನೋ ಸಾಧಿಸಿತು. ಮಥಾಯಸರು ಪತ್ರ ಬರೆದು ವಲ್ಲಿಯನ್ನು ತಮ್ಮಲ್ಲಿಗೆ ಕರೆಸಿಕೊಂಡರು. ಅವನಿಗೆ ಮುಖ ತುಂಬ ಬೈದರು. ತಮಗಾದ ನಷ್ಟ ಹೇಳಿಕೊಂಡರು. "ಹ್ಯಾಗೂ ಆಗಲಿ. ಭಟ್ಟರಿಗೆ ಅದು ಸಮೀಪದ್ದಾದರೆ ಏನಾದರೂ ಮಾಡಿ, ವಾಯಿದೆಗಾದರೆ ವಾಯಿದೆಗೆ, ಕ್ರಯ ಕ್ಕಾದರೆ ಕ್ರಯಕ್ಕೆ—ಮಾತನಾಡಿ ಅವರ ತಲೆಯ ಮೇಲೆಯೇ ಹಾಕುವ" ಎಂದು ಅದಕ್ಕೆ ತಮ್ಮ ಕರಾರುಗಳನ್ನು ಹೇಳಿದರು. ವಲ್ಲಿಯ ಮುಖಭಂಗ ವಾಗುವುದಕ್ಕೆ ಬೇರೆ ಪ್ರಸಂಗ ಬೇಕಿರಲಿಲ್ಲ. ಅದೂ—ಇಲ್ಲಿಯ ತನಕ, ತನ್ನನ್ನು ನಂಬಿದ ಬಂಧುಗಳಿಂದಲೇ ಆಯಿತೆಂಬ ವ್ಯಥೆ. ಅಷ್ಟಾದರೂ ತನ್ನ

ತಪ್ಪಿನ ಪಾತ್ರವನ್ನು ಆತ ಎಣಿಸುವಂತಿರಲಿಲ್ಲ. ಅಥವಾ ಒಂದಲ್ಲ ಒಂದು ದಿನ, ಮಲೆಗೆ ಹೋಗಿ ಪೌಲಿನಳನ್ನು ಕರೆದುತಂದೇನೆಂಬ ಆಸೆಯನ್ನೂ ಬಿಟ್ಟಿರಲಿಲ್ಲ. ಅಲ್ಲಿಂದ ಊರಿಗೆ ಮರಳಿದ ಮುಂದೆ ಮೂರು ತಿಂಗಳಕಾಲ— ಪತ್ರವ್ಯವಹಾರ, ಓಡಾಟಗಳಲ್ಲೇ ಕಳೆದ. ಕಾರ್ಕಳ, ಸಕಲೇಶಪುರ, ಮಂಗಳೂರು, ಕಿರಿ ಮಲೆಗಳ ಈ ಅಂತರವನ್ನೆಲ್ಲ ನಡೆದು, ಗಾಡಿಯಲ್ಲಿ ಸಂಚರಿಸಿ ತುಳಿದು ತುಳಿದು ದಣಿದ.

ಕಿರಿ ಮಲೆಗೆ ಬಂದಾಗ ಒಂದು ಬಾರಿ ತಿರುಮಲಭಟ್ಟರು ಹಿರಿ ಮಲೆಯ ಗುರಿಕಾರನನ್ನು ಕರೆಯಿಸಿದರು. ಆತ "ಬರುವ ವರ್ಷ ನಿಮ್ಮ ತೋಟದ ಕುರುಹೇ ಕಾಣಲಾರದು" ಎಂದು ವಲ್ಲಿಯ ಮುಖಕ್ಕೇನೆ ನುಡಿಯುವಂತೆ ಮಾಡಿದರು.

ಹೀಗೆಲ್ಲ ನಡೆದು, ವಲ್ಲಿಬ್ರಗಾಂಜಾ ಮಾನ ಕಳೆದುಕೊಂಡರೂ ಬಂಧುಗಳ ನಿಂದೆಯಿಂದ ಪಾರಾಗಬೇಕೆಂದು ಸಂಧಾನ ನಡೆಯಿಸಿ, ನಡೆಯಿಸಿ, ತಿರುಮಲಭಟ್ಟರನ್ನೇ ಆ ಭೂಮಿ ಕೊಳ್ಳುವಂತೆ ಕೇಳಿದ. ವಾಯಿದೆ ಕ್ರಯ ಚೀಟಿಗೆ ಅವರನ್ನು ಒಪ್ಪಿಸಿ, ಮಥಾಯಸರನ್ನು ಬರಮಾಡಿಕೊಂಡು ಉಪ್ಪಿನಂಗಡಿಯ ಪುಣ್ಯಕ್ಷೇತ್ರದಲ್ಲಿ, ಕಾಗದಪತ್ರಗಳನ್ನು ಪೂರ್ತಿಗೊಳಿಸಿದನು. ಮಥಾಯಸರು ತಾವು ಒಂದು ಇಕ್ಕಟ್ಟಿನಿಂದ ಪಾರಾದೆವೆಂದು ತಿಳಿದು ಸಕಲೇಶಪುರಕ್ಕೆ ಮರಳಿದರು. ಬ್ರಗಾಂಜಾ ಮಾತ್ರ ಕಾರ್ಕಳಕ್ಕೆ ತುಂಬ ವ್ಯಥೆಯಿಂದ ಮರಳಿದ. ಅವನಿಗನಿಸಿತು—ತನ್ನ ಇನಿಯಳ ದರ್ಶನ ಆ ಜನ್ಮದಲ್ಲಿ ದೊರೆಯಲಾರದೆಂದು. ಆದರೂ ಒಳಗಿಂದೊಳಗೆ ಒಂದು ಆಸೆಯ ತುಣುಕು ಮಾತ್ರ ಕುಣಿದಾಡುತಿತ್ತು. 'ಮಲೆಗೆ ಹೋಗಲಾರದಿದ್ದರೆ ಪೌಲಿನಳ ಯೋಚನೆ ಬಿಡಬೇಕೆ? ಮುಂದಣ ವರ್ಷದ ಮೂಲೆಗುಂಪಿನ ಜಾತ್ರೆಗೆ ಹೋಗುತ್ತೇನೆ. ನೆಪಕ್ಕೊಂದು ಅಂಗಡಿ ಹಾಕಿ ಕುಳಿತುಕೊಳ್ಳುತ್ತೇನೆ. ಕುಡಿಯರ ಕುಲ ಅಲ್ಲಿಗೆ ಬಂದೇ ತೀರಬೇಕು. ಖಂಡಿತವಾಗಿಯೂ ಪೌಲಿನ್ ಬರುತ್ತಾಳೆ. ಬಂದದ್ದಾದರೆ—ಅವಳನ್ನು ಕಟ್ಟಿ ಹೊತ್ತುಕೊಂಡಾದರೂ ಊರಿಗೆ ಮರಳಿಯೇನು! ಒಮ್ಮೆ ಅವಳನ್ನು ಮದುವೆಯಾದೆನೆಂದರೆ, ಕುಲದವರ ಹಕ್ಕು ಹಿಂದೆ ಉಳಿಯಿತು. ಅಂಥ ಪ್ರಸಂಗ ಒದಗಿದಲ್ಲಿ ಪೋಲೀಸರನ್ನು ಕರೆದೊಯ್ದು, ಜಬರ್ದಸ್ತಿ ಮಾಡಿ, ತನ್ನ ಹೆಂಡತಿಯನ್ನು ತಾನು

ತಂದೇನು. ತಾನು ಹಿಂದೆಯೇ ಈ ಕೆಲಸ ಮಾಡಬೇಕಿತ್ತು. ಚಿನ್ನ ಅಲಂಕಾರಗಳಿಗೆ ಅಕ್ಕಸಾಲಿಯಲ್ಲಿ ಓಡುವ ಬದಲಿಗೆ, ಅವಳನ್ನು ತಮ್ಮ ಮತಕ್ಕೆ ಸೇರಿಸಿಕೊಂಡ ದಿನವೇ ಮದುವೆಯಾಗಿದ್ದರೆ, ಏಲಕ್ಕಿ ತೋಟ ಹೋದರೂ ಹೆಂಡತಿಯಾದರೂ ಉಳಿಯುತ್ತಿದ್ದಳು, ಈಗಿನಂತಾಗುತ್ತಿರಲಿಲ್ಲ —ಎಂದು ತಲೆ ತುರಿಸುವ ಯೋಚನೆಗಳಿಂದ ಊರಿಗೆ ಮರಳಿದ.

## ಅಧ್ಯಾಯ ೧೨

ಕಾರ್ಕಳಕ್ಕೆ ಬಂದ ತಂದೆತಾಯಿಯರ ಕಣ್ಣೀರಿನ ಕರೆ, ಆ ದಿನ ಗಿಡ್ಡಿಯ ಮನವನ್ನು ಗೆದ್ದು ಊರಿಗೆ ಕರೆದುತಂದಿತು. ಆದರೂ ಹೊಸತಾಗಿ ಬೆಳೆದ ಪ್ರಣಯ ಪ್ರಭಾವ ವಲ್ಲಿಯ ಕಡೆಗೂ ಅವಳನ್ನು ಸೆಳೆಯುತಿತ್ತು. ವಯಸ್ಸು ಚಿಕ್ಕದು, ಅನುಭವ ಅದಕ್ಕೂ ಕಿರಿದು. ಹೀಗಾಗಿ ಅವಳ ಮನಸ್ಸು ಎರಡು ಪ್ರೇಮಪ್ರವಾಹಗಳ ಸೆಳೆತದಲ್ಲಿ ಸಿಕ್ಕಿ ಒದ್ದಾಡುತ್ತಲಿತ್ತು. ವಲ್ಲಿ ತಮ್ಮ ಮಲೆಗೆ ಬಂದು, ಬಿಡಾರ ಹೂಡಿ, ತೋಟದ ಯಜಮಾನಿಕೆ ನಡೆಸುತ್ತಿದ್ದಾಗಲೇ ಅವನ ಮೇಲೆ ಅವಳಿಗೆ ಇಲ್ಲದ ಗೌರವ ಪ್ರಾಪ್ತವಾಗಿತ್ತು. ತಮ್ಮ ಜನಕ್ಕೂ ಅವನಿಗೂ ಅಂತರವನ್ನು ಕಾಣುತ್ತಾಳೆ. ಮೇಲೆ 'ಆತ ಹಣ ಕಾಸಿರುವವ'—ಎಂಬ ನಂಬಿಕೆ ಬೇರೆ. ಅವನ ಮನೆಯ ಕೆಲಸಗಳಿಗೆ ಆಳಾಗಿ ಹೋದಾಗಲೇ, ವಲ್ಲಿಯ ಕಣ್ಣಿನ ಸೆಳೆತಕ್ಕೆ ಅವಳ ತುಂಬು ಯೌವನ ಬಲಿಯಾದಂತೆ, ದಿನೇ ದಿನೇ ಅವಳ ಮನವು ಅವನ ಕಡೆಗೆ ಒಲಿಯ ತೊಡಗಿತು. ಆತ—ತನ್ನ ಕಾರ್ಕಳದ ಊರಿನ ವೈಭವವನ್ನೂ, ಅಲ್ಲಿನ ಸೌಕರ್ಯಗಳನ್ನೂ, ಇಗರ್ಜಿಯ ಉತ್ಸವಗಳನ್ನೂ, ತಮ್ಮ ದೇವರ ಹಿರಿತನ ವನ್ನೂ ಹೊಗಳಿ ಬಣ್ಣಿಸುವಾಗ ಅಂಥ ಒಂದು ನಾಗರಿಕತೆ ಉಂಟೆಂಬ ಅರಿವಾದುದು ಆಗಲೇನೆ. ತಾನು ತನ್ನ ಮಲೆಯಲ್ಲಿ ಊಹಿಸಲಾರದ, ಕನಸಿನಲ್ಲೂ ಕಾಣಲಾರದ, ಹಲವಾರು ಚಿತ್ರಗಳನ್ನು ಆತ ಬರೆದಿದ್ದಾನೆ. ಕಲ್ಕುಡನ ಭಕ್ತಳಾದ ಅವಳ ಮುಂದೆ, ಏಸುವಿನ ಉದಾರ ಜೀವನ ಬಣ್ಣಿಸಿದ್ದಾನೆ! ತಮ್ಮ ಕಾರ್ಕಳ ಇಗರ್ಜಿಯ ಪಾದ್ರಿಯನ್ನು ಕುರಿತು, ದೇವರ ಪ್ರತ್ಯಕ್ಷ ಪ್ರತಿನಿಧಿ ಎಂಬಂತೆ ಬಣ್ಣಿಸಿದ್ದಾನೆ. ಇವೆಲ್ಲವನ್ನು ಆಶ್ಚರ್ಯದ ನೋಟದಿಂದ ಕೇಳಿದವಳು ಗಿಡ್ಡಿ.

‘ ನಿನ್ನಂಥವಳು ಈ ಕಾಡಿನಲ್ಲಿರುವುದೇ ? ’ ಎಂದು ಅವಳನ್ನು ಸೆಳೆದು ಮೈದಡವಿಕೊಂಡ ವಲ್ಲಿ, ಅವಳ ಪಾಲಿಗೆ ಒಬ್ಬ ಅಪೂರ್ವದ ವ್ಯಕ್ತಿಯಾಗಿ ಕಾಣಿಸಿದನು. ಮೆಲ್ಲಮೆಲ್ಲನೆ ಅವನ ಮೇಲಿನ ಅಭಿಮಾನ ಹೆಚ್ಚಿದಂತೆ, ಸ್ಪರ್ಶಪ್ರೇರಿತವಾದ, ವಯಸ್ಸಹಜವಾದ ಕಾಮುಕತೆಯೂ ಅವಳನ್ನು ವಲ್ಲಿಯ ಸ್ನೇಹಕಾಂಕ್ಷಿಯಾಗಿ ಮಾಡಿತು. ಆತನ ಹಿಂದೆ ಹೋಗುವ ಆಸೆ ಫಲಿಸೀತೇ—ಎಂದು ಅವಳೂ ಬಯಸಿದಳು. ಅದಕ್ಕೆ ತಕ್ಕ ಉಪಾಯವನ್ನು ಅವನೂ ಸೂಚಿಸಿದ ಒಬ್ಬಳನ್ನೇ ತಂದೆ ಹೋಗಗೊಡಲಾರನೆಂದು ತಿಳಿದು ದಕ್ಕೆ ತಮ್ಮ ಕುಕ್ಕನನ್ನೂ ಕರೆದೊಯ್ಯುವ ಹಂಚಿಕೆ ಹೇಳಿದನು. ನಿಜಕ್ಕೂ ಅವನ ಹೊಂತು, ಅವಳ ಹೊಂತೂ ಆಗಿ, ಮೂವರೂ ಕಾರ್ಕಳವನ್ನು ಸೇರಿದರು. ಗಿಡ್ಡಿ, ಕುಕ್ಕರು ವಲ್ಲಿಯ ಜತೆಗೆ ಹೋದದ್ದು ತಿಂಗಳು ಎರಡು ತಿಂಗಳ ಮಾತಿಗೆ ಅವನ ಮನೆಯ ಕೆಲಸಕ್ಕೆ. ಧನಿಯ ಒತ್ತಾಯ, ಹಂಗುಗಳಿಂದ ತಂದೆತಾಯರು ಮಕ್ಕಳನ್ನು ಬೀಳ್ಕೊಟ್ಟರು.

ಹೊಸ ಊರಿನ ಹುಚ್ಚು, ಗಂಡಿನ ಬಯಕೆಯೊಂದಿಗೆ ಬೆರತು, ಉಳಿದೆಲ್ಲ ಬೆದರಿಕೆಗಳು ಕ್ಷೀಣಿಸಿತು. ಅನುರಾಗ ಬಲಿತು, ತಾಯಿ, ತಂದೆ, ಕುಲ, ಸಂಸ್ಕೃತಿ ಇವೆಲ್ಲ ಅಲ್ಪವೆನಿಸಿತು ಅವಳಿಗೆ.

ಕಾರ್ಕಳದಲ್ಲಿ ಅವಳನ್ನು ತನ್ನ ಬಲೆಗೆ ಕೆಡವಿದಷ್ಟು ಸುಲಭವಾಗಿ ಕುಕ್ಕನನ್ನು ಮಂಕಾಗೊಳಿಸುವ ಕೆಲಸ ವಲ್ಲಿಗೆ ಆಗಲಿಲ್ಲ. ಅಲ್ಲಿ ಕಾಮಪ್ರೇರಣೆಯ ಬೆಂಬಲವಿಲ್ಲ ಆದರೂ ಹುಡುಗ ನಿಧಾನವಾಗಿ ಪೇಟೆಯ ಆವರಣಕ್ಕೆ, ಬೆಡಗಿಗೆ ಮನಸೋತ. ವಲ್ಲಿ ಅವನ ಕೈಮೇಲಿರಿಸುತಿದ್ದ ಕಾಸು ದುಗ್ಗಾಣಿಗಳಿಗಾಗಿ ಸೋತ; ಕಟ್ಟಕೊನೆಗೆ ಹೊಸ ರಾಜ್ಯದಲ್ಲಿ ತಾನೊಬ್ಬ ಬೇರೆಯೇ ಮನುಷ್ಯನಾಗುತ್ತೇನೆ—ಎಂದು ಅನಿಸಿತು ಅವನಿಗೆ. ಅವರಿಬ್ಬರನ್ನೂ ಮತಾಂತರಗೊಳಿಸುವಾಗ, ಕುಕ್ಕಗೆ ತನ್ನ ಜುಟ್ಟು ಹೋದುದರ ಬಗ್ಗೆ ಹೆಚ್ಚಿನ ವ್ಯಥೆ ಉಂಟಾಗಲಿಲ್ಲ. ಸುತ್ತುಮುತ್ತಲಿನವರು ತನ್ನಂತೆ ಜುಟ್ಟು ಕತ್ತರಿಸಿಕೊಂಡವರಾದುದರಿಂದ, ಚಿಂತೆಯಾಗಲಿಲ್ಲ. ಆದರೆ ವಲ್ಲಿ, ತನಗೆ ಹೊಸ ಹೆಸರಿಟ್ಟುದರ ಬಗ್ಗೆ ವಿಸ್ಮಯ, ಅಸಮಾಧಾನವಾಯಿತು. ಪೌಲಿನ ನಾಳೆ ವಲ್ಲಿಯನ್ನು ಮದುವೆಯಾದಾಳೆಂಬ ರಹಸ್ಯ, ಆ ಪ್ರಣಯಿಗಳಿಬ್ಬರಿಗೇ ಗೊತ್ತಿತ್ತು ಹೊರತು, ಕುಕ್ಕನಿಗೆ ತಿಳಿದಿರಲಿಲ್ಲ. ಅವಳನ್ನು ಪೌಲಿನ್ ಎಂದು

ವಲ್ಲಿ ಕರೆಯುವಾಗ, ಆಕೆ ನಕ್ಕು ಉತ್ತರಿಸುತ್ತಿದ್ದರೂ ತನ್ನನ್ನು 'ಪೌಲು' ಎಂದು ಕರೆಯುವಾಗ 'ನಾನಲ್ಲ ಪೌಲು. ನಾನು ಕುಕ್ಕ' ಎಂದೇ ಅನ್ನುತ್ತಿದ್ದ. ಆ ಮತಾಂತರದ ಮಹತ್ವ, ಅವನ ಹೆಡ್ಡು ಬುದ್ಧಿಗೆ ಹೊಳೆದಿರಲಿಲ್ಲ. ಗಿಡ್ಡಿ ಮಾತ್ರ ಮದುವೆಯ ದಿನವನ್ನು ನಿರೀಕ್ಷಿಸುತ್ತಿದ್ದಳು. ಅದೊಂದು ದಿನ ಕಳೆದರೆ, ತನ್ನ ಭೀತಿ ತೊಲಗಿತೆಂದು ತಿಳಿದಿದ್ದಳು. ಅಷ್ಟರೊಳಗೆ ತಂದೆ ತಾಯರು ಬಂದು ವಿಘ್ನಕಾರಿಗಳಾಗುವರೆಂದು ಅವಳು ಊಹಿಸುವುದಕ್ಕೆ ಕಾರಣವಿದ್ದಿರಲಿಲ್ಲ.

ಆದರೆ ಅವರು ಬಂದೇ ಬಂದರು. ವಲ್ಲಿ ಇಲ್ಲದಾಗಲೇ ಬಂದರು. ತಾಯಿ ಬಂದು—ದೈವ ಕೊಟ್ಟ ಶಾಪವನ್ನು ಅವಳ ಮುಂದೆ ಬಿತ್ತರಿಸಿದಾಗ, ತನಗೂ ತನ್ನ ಕುಲದವರಿಗೂ ಎಂತಹ ವಿಪತ್ತು ಬಂದೀತು!—ಎಂಬ ಭೀತಿ ಮೊಳಗಿತು. ಮನಸ್ಸು ಚಂಚಲವಾಯಿತು. ಕಾರ್ಕಳ ಇಗರ್ಜಿಯ ದೇವರು ಕಲ್ಕುಡನ ಶಕ್ತಿಯಿಂದ ತನ್ನನ್ನು ಉಳಿಸಲಾರನೆಂಬ ಬೆದರಿಕೆಯೂ ಆಯಿತು. ಅಲ್ಲದೆ ಪ್ರತ್ಯಕ್ಷವಾಗಿ, ತನ್ನನ್ನು ಸಾಕಿ ಸಲುಹಿದ ತಂದೆ, ತಾಯರು ಕಂಬನಿಗರೆದು 'ಬಾ' ಎಂದು ಬೇಡುವಾಗ ಆಕೆ ಅಳುಕಿ ಅವರನ್ನು ಹಿಂಬಾಲಿಸಬೇಕಾಯಿತು.

ದಾರಿಯಲ್ಲಿ ಆಕೆ ತಾನು 'ನಿರಾಪರಾಧಿನಿ' ಎಂದು ತೋರಿಸಿಕೊಳ್ಳಬೇಕಾಯಿತು. ಆದರೂ ಅವರ ಬದಲಿಸಿದ ಉಡುಗೆತೊಡುಗೆ, ತನ್ನ ಕತೆ ಹೇಳದಿರುತ್ತದೆಯೇ? "ಅಷ್ಟೆಲ್ಲ ಮಾಡುವಾಗ, ನೀವಿಬ್ಬರೂ ಕದ್ದು ಓಡಿ ಬಂದರೇನಾಗುತಿತ್ತು?" ಎಂದೆನ್ನುವಾಗ, ಒಳಗುಟ್ಟನ್ನು ತಿಳಿಯದ ಕುಕ್ಕ ಮತಾಂತರದ ಕತೆಯನ್ನೆಲ್ಲ ಹೇಳಿದ. ಈ ಎಲ್ಲ ಕೆಲಸಗಳು ಮಕ್ಕಳ ಒಪ್ಪಿಗೆಯಿಲ್ಲದೆ ಎಂದೂ ಆಗಲಾರದೆಂದು ಬಿರುಮ ವಾದಹೂಡಿದ. ಅವನ ವಾದಕ್ಕೆ ಪ್ರತಿಯಾಗಿ—ತಮ್ಮ ಸಂಭಾವಿತತನ ಉಳಿಸುವುದಕ್ಕೆ ಇಬ್ಬರೂ ಪ್ರಯತ್ನಿಸಿದರು. ಕುಕ್ಕ 'ತಾವು ಕಾರ್ಕಳಕ್ಕೆ ಬಂದಮೇಲೆ ಎಲ್ಲಿಗೆ ಹೋಗುವುದಕ್ಕೂ ಹೆದರಿಕೆ! ಹೊಸ ಊರಾದುದರಿಂದ ಯಾರಿಗು ದೂರು ಹೇಳುವುದಕ್ಕೂ ಧೈರ್ಯವಿರಲಿಲ್ಲ. ಒಂದಲ್ಲ ಒಂದು ಜನ ತಮ್ಮ ಮೇಲೆ ಕಾವಲಿತ್ತು'— ಎಂದು ಏನೇನೋ ಕಂತೆಪುರಾಣ ಹೇಳಿ, ತಮ್ಮ ತಪ್ಪನ್ನು ಮುಚ್ಚಿಕೊಂಡರು. ಕುಕ್ಕನ ವಿಚಾರದಲ್ಲಿ ಸ್ವಾರ್ಥವೇನಿರಲಿಲ್ಲ. ಬರಿಯ ಅಜ್ಞಾನವಷ್ಟೆ, ಸ್ವಲ್ಪ ಮಟ್ಟಿನ ಬೆದರಿಕೆಯಷ್ಟೆ ಅವನ ಬೆಪ್ಪುತನಕ್ಕೆ ಕಾರಣವಾಗಿತ್ತು.

"ಅಂಥ ಪ್ರಸಂಗದಲ್ಲಿ ಯಾರಾದರೂ ಏನು ಮಾಡಬಹುದು? ಪಾಪದ ಮಕ್ಕಳು. ಜೀವದ ಆಸೆಗೆ ಹೆದರಿ, ಆ ಕಳ್ಳ ಹೇಳಿದಂತೆ ತಲೆ ತಗ್ಗಿಸಿ, ನಡೆದುದರಲ್ಲಿ ಆಶ್ಚರ್ಯವಿಲ್ಲ" ಎಂಬ ತೀರ್ಮಾನಕ್ಕೆ ಪೂಜಾರಿ ಬಿರುಮನೂ ಬರಬೇಕಾಯಿತು.

ಹೊರಟವರಿಗೆ ಮಲೆಯನ್ನು ಸೇರಲು ಮೂರು ದಿವಸ ಹಾದಿ. ನಡೆದು, ದಣಿದು, ಅಲ್ಲಲ್ಲಿ ಕುಳಿತು, ತಂಗಿ, ವಿಶ್ರಮಿಸಿ ಹೋಗುವಾಗ ಹರಟೆಯ ಮಾತು ಬೇಕೇ ಬೇಕು. ಅಲ್ಲದೆ ಗಿಡ್ಡಿ, ಬಂದೊದಗಿದ ವಿಪತ್ತಿನಿಂದ ಸಂಪೂರ್ಣ ಪಾರಾಗುವುದಕ್ಕೆ ಆಕೆಯ ಮದುವೆ ಬೇಗನೆ ಆಗಬೇಕೆಂಬ ಮಾತೂ ಬಂದಿತು. ಚೋಮ, ಆ ವಿಷಯದಲ್ಲಿ ಧೈರ್ಯಗೆಟ್ಟಿದ್ದಾನೆ. ಮತಾಂತರಗೊಂಡ ತನ್ನ ಮಗಳನ್ನು ಜನ ಕೂಡು ಕಟ್ಟಿಗೆ ಸೇರಿಸಿ ಕೊಂಡರೂ, ಮದುವೆಯಾಗಲು ಯಾರಾದರೂ ಮುಂದೆ ಬಂದಾರೆಯೇ— ಎಂಬ ಭೀತಿ ಅವನಿಗೆ. ಬಿರುಮ ಅದನ್ನರಿತು ಸಮಾಧಾನ ಹೇಳುತ್ತಾನೆ. "ಯಾಕೆ ಚೋಮ, ಆ ಹೆದರಿಕೆ? ಹುಡುಗರಿಲ್ಲ ಎಂಬ ಹೆದರಿಕೆಯೇ? ಹುಡುಗರಿಗೆ ತಕ್ಕಷ್ಟು ಹುಡುಗಿಯರಿಲ್ಲ—ಎಂಬುದು ತಿಳಿಯದೇ?" ಎಂದು ಸಮಾಧಾನ ಹೇಳಿ, ತಾನೇ ನಂಟುತನ ದೊರಕಿಸಿ ಕೊಡುವ ಭರವಸೆ ಕೊಟ್ಟು 'ವರ ತಾನಾಗಿಯೇ ಅರಸಿ ಬರುವ ಹಾಗೆ ಮಾಡುತ್ತೇನೆ' ಎಂದೂ ಅಂದ.

ಹಿರಿಯರ ಈ ಮಾತುಗಳು ಗಿಡ್ಡಿಯನ್ನು ಅಂತರ್ಮುಖಿಯನ್ನಾಗಿ ಮಾಡಿದುವು. ಕುಲ, ಕಟ್ಟಲೆ, ಕಲ್ಯಾಣ—ಇಂಥವುಗಳ ವರ್ಚಸ್ಸಿಗಿಂತ ಅವಳ ಹೆಣ್ಣುತನ ವಲ್ಲಿಗೆ ಮಾರುಹೋದ ಕಾಮಪ್ರೇಮಗಳ ವರ್ಚಸ್ಸಿಗಿಂತ ಹೆಚ್ಚೇ! ಒಮ್ಮೊಮ್ಮೆ ಅವಳಿಗೆ—ತನ್ನಂಥ ಕನ್ಯೆಯನ್ನು ನೆಲ ತಪ್ಪಿಸಿ, ಮತಾಂತರ ಗೊಳಿಸಿದ್ದು ಕೇವಲ ಮೋಸ, ವಂಚನೆ—ಎಂದನಿಸುತ್ತಿದ್ದು, ತನ್ನ ಜೀವ ಆಗಾಗ ಅವನಿಗಾಗಿ ಹಂಬಲಿಸುತ್ತಿದೆ—ಎಂದು ಅರಿತವಳು ಅವಳು.

ಮೂರು ದಿನ ನಡೆದು, ದಣಿದು ನಾಲ್ಕನೆಯ ದಿನ ಅವರು ಕೇರಿ ಯನ್ನು ಸೇರಿದರು. ಚೋಮ ಗುರಿಕಾರ ಮಾದನ ಮುಂದೆ ಮಕ್ಕಳಿಂದ ತಪ್ಪೊಪ್ಪಿಗೆ ಒಪ್ಪಿಸಿದ. ಕಟ್ಟಲೆಯ ಶುದ್ಧಿ ಸಂಸ್ಕಾರವಾಯಿತು. ಆದರೆ ಗಿಡ್ಡಿಗೆ ವಲ್ಲಿಯ ಮರವೆಯಾಗಲಿಲ್ಲ. ಅವನನ್ನು ಎಂದು ಕಂಡೇನು— ಎಂಬ ಹಂಬಲ ಅವಳ ಮನಸ್ಸಿನಿಂದ ಹೋಗಲೂ ಇಲ್ಲ. ಆದರೆ ಅವನನ್ನು

ಕಾಣುವ ಅವಕಾಶ ಮಾತ್ರ ದೊರೆಯಲಿಲ್ಲ. ಏಕೆಂದರೆ ಅನಂತರ ತೊಡ ಗಿದ್ದೇ ಮಳೆಗಾಲ. ಮಲೆಯನ್ನೂ, ಅವನ ಮನವನ್ನೂ ಏಕ ಕಾಲದಲ್ಲಿ ಚಳಿ, ಮಳೆ, ಮುಗಿಲುಗಳಿಂದ ಕವಿದ ಗಾಢಾಂಧಕಾರ. ಇತ್ತ ಅವನ ನಿವಾಸ ಕೇರಿಯಿಂದ ಕುಮರಿ ಬೆಳೆಯುವ ಅರಣ್ಯಪ್ರದೇಶಕ್ಕೆ ಸರಿಯಿತು. ಅಲ್ಲಿಯ ಜೀವನ ಮತ್ತಷ್ಟು ಕಷ್ಟದ್ದು. ಮರಗಳ ದಟ್ಟಣೆಯನ್ನೂ ಮೀರಿಸಿ ಮೈಯನ್ನು ಚುಚ್ಚಿ ತಿವಿಯುವ ಶೀತವಾದ ಗಾಳಿ.

ಹಿಂದಣ ಬೇಸಗೆಯಲ್ಲಿ ಪಟ್ಟಣವೊಂದರಲ್ಲಿ ಕಾಡಿಂದ ಬಯಲಿಗೆ ಬಂದು ಕುಣಿಯುವ ನವಿಲಿನಂತೆ, ಹೊಸ ಉಡುಗೆ ತೊಟ್ಟು ನಲಿದಾಡಿ ದವಳು ಅವಳು. ಈಗಲೋ—ನಿತ್ಯವೂ ಮಂಜು, ಮಳೆ, ಮುಗಿಲು, ಗಾಳಿ ಗಳ ಕುಗ್ಗಿಸುವ ಆವರಣದಲ್ಲಿ ತನ್ನದೇ ಚಿಂತೆ ಹೊತ್ತು ಯೋಚಿಸುವ ಗಳಿಗೆ ಬಂದಿದೆ. ತನ್ನ ಜನದ ಅನಾಗರಿಕತೆ ಇನ್ನಷ್ಟು ಅವಳ ಕಣ್ಣಿಗೆ ಕಾಣುತ್ತದೆ. ಆ ಮನೆ, ಕೇರಿ, ಕಾನನ ಯಾವುದೂ ತನಗೆ ಹಿತವಲ್ಲ—ಎನಿಸುತ್ತದೆ. ನಾಳೆಯ ದಿನ ಯಾವನೊಬ್ಬ ಕುಡಿಯನನ್ನು ತಾನು ಮದುವೆಯಾದರೂ, ಹೋಗಿ ಇರಬೇಕಾದದ್ದು ಅಂಥ ಮಲೆಯಲ್ಲೇ. ಅಲ್ಲೂ ತನಗೆ ಸುಖ ದೊರ ಕೀತೆಂದು ಊಹಿಸಿಕೊಳ್ಳಲಾರಳು. ಹೊಸ ಉಡಿಗೆ ಉಟ್ಟು ಆಕೆ ಕೇರಿಗೆ ಬಂದಾಗ, ತಮ್ಮ ವಿಚಿತ್ರ ವೇಷವನ್ನು ಕಂಡೇ ಜನರು 'ಕುಲಗೆಟ್ಟ ಮಕ್ಕಳು' ಎಂದಿದ್ದರು. ಆ ಉಡುಗೆಯನ್ನು ಕಿತ್ತೊಗೆದು ಎಲ್ಲ ಕುಡಿಯಿತಿ ಯರಂತೆ ವೇಷ ಧರಿಸಿದರೂ, ಒಬ್ಬಿಬ್ಬರಾದರೂ 'ಕುಲಗೆಟ್ಟವ'ಳೆಂದೇ ಅವಳನ್ನು ಕರೆದಿದ್ದಾರೆ. ತಪ್ಪುಕಾಣಿಕೆ ಒಪ್ಪಿಸಿ, ಪುನೀತರಾದಮೇಲೆಯೂ ಕೆಲವರ ನಾಲಿಗೆ ಅವಳ ವಿಷಯದಲ್ಲಿ ಕಟುವಾಗಿಯೇ ಇತ್ತು. ಹೀಗಾಗಿ ಅವಳ ಮನಸ್ಸು ಉಳಿದವರ ವಿಷಯದಲ್ಲಿ ಕಹಿಯಾಗಿತ್ತು.

ಇತ್ತ ತಂದೆ ಚೋಮನಿಗೂ ಚಿಂತೆಯೇ. ಬಿರುಮ ಇನ್ನೂ ನಂಟು ತನ ಸಾಧಿಸಿಲ್ಲ. ಹಾಗೆಂದು ತಾನೇ ಒಬ್ಬಿಬ್ಬರನ್ನು ಮಾತನಾಡಿಸಿದರೆ 'ಗಿಡ್ಡಿಯೆ!' ಎನ್ನುತ್ತಾರಂತೆ ಹುಡುಗರು. ತನ್ನ ಮಗಳು ಅಷ್ಟೊಂದು ತಾತ್ಸಾರವಾಗಿ ಬಿಟ್ಟಳಲ್ಲ ಜನಕ್ಕೆ! 'ಆ ಪುಣ್ಯಾತ್ಮ ಅವಳನ್ನು ಕೊಂಡೊಯ್ದು ಅಷ್ಟೊಂದು ಕೆಲಸ ಮಾಡಿಬಿಟ್ಟನಲ್ಲ' ಎಂಬ ವ್ಯಥೆಗೆ ಕೊರಗುವಂತಾಯಿತು.

ಬಿರುಮ ಎಣಿಸಿಕೊಂಡ, ಗಂಡನ್ನೂ ಕರೆದು ತಂದು, ಚೋಮನೊಡನೆ

ಭೇಟಿ ಮಾಡಿಸುವ ಕೆಲಸ ಆ ಮಳೆಗಾಲದಲ್ಲಿ ಅಷ್ಟೊಂದು ಸುಲಭವಾಗಲಿಲ್ಲ. ಅದಕ್ಕೆ ಕಾರಣ ಅವನಲ್ಲ; ಮಲೆಯ ಅಬ್ಬಿಗಳ ಸೊಕ್ಕು. ಹಿರಿ ಕಿರಿಯ ಮಲೆಗಳ ನಡುವೆ ಹರಿಯುತ್ತಿದ್ದ ತೊರೆಯ ಸೇತುವೆ ಒಂದು ದಿನ ನೆರೆಗೆ ಬಳಿದೇ ಹೋಯಿತು. ಹಿಂದೆ ಅದಕ್ಕೆ ಸೇತುವೆ ಹಾಕಿಸಿದವನು ಬೂದ. ಈಗ ತಿಮ್ಮನ ಸಲುವಾಗಿ ಆ ಕೆಲಸ ಮಾಡುವವರಾರು? ತಿಮ್ಮನಿಗಂತು ಯೋಚನೆಯೇ ಯೋಚನೆ. ಬಿರುಮನ ಮನೆಗೆ ಹೊರಟು, ತೊರೆಯ ಸೇತುವೆ ನಷ್ಟವಾದುದನ್ನು ಕಂಡು, ನಿರಾಶೆಗೊಂಡು ಕೇರಿಗೆ ಬಂದವನು ತಿಮ್ಮ. ಅವನಿಗೆ ನಿರಾಶೆ ಅಂಥಿಂಥದಲ್ಲ. ಗುರಿಕಾರ ಕರಿಯನ ಹಿಂದೆ ಸುತ್ತಿ, ಸುಳಿದು ಇನ್ನೊಂದು ಸೇತುವೆ ಹಾಕಿಸಲು ಅವನು ಮಾಡಿದ ಪ್ರಯತ್ನ ಬಹು ದಿನಗಳ ತನಕ ಕೈಗೂಡಲಿಲ್ಲ. ಕಾರಣ—ಆ ಕೆಲಸಕ್ಕೆ ನಾಲ್ಕೆಂಟು ಮಂದಿ ಸೇರಬೇಕು. ಯಾರನ್ನು ಕೇಳಿದರೂ 'ಅವಸರವೇನು? ಮಳೆಗಾಲ, ಹೋಗಿ ಮಾಡುವ ಕೆಸಲವೇನಿದೆ? ಆಗುತ್ತದೆ ಮೆಲ್ಲಗೆ' ಎನ್ನುತ್ತಾರೆ. ಅಂತು ಕರಿಯನನ್ನು ಪೀಡಿಸಿ, ಪೀಡಿಸಿ ಆ ಕೆಲಸ ನೆರವೇರಿಸಿ, ತೊರೆ ದಾಟುವಾಗ ಎರಡು ತಿಂಗಳೇ ಸಂದಿತು. ಆದರೆ ಅದನ್ನು ದಾಟಿ, ಈ ವರ್ಷ ಅವರು ಕುಮರಿ ಬೆಳೆದ ತಾವಿಗೆ ಹೋಗುವುದಕ್ಕೆ ಇನ್ನೂ ಎರಡು ಅಬ್ಬಿಗಳಿವೆ—ಎಂಬುದನ್ನು ತಿಳಿದುಕೊಂಡ. ನೀರಿನ ಭರದಿಂದ ತುಂಬಿದ ಅವುಗಳನ್ನು ದಾಟಲಾರದೆ ಹಿಂದಕ್ಕೆ ಬಂದ. ಏನಾದರೂ ಮಳೆ ಬಿಟ್ಟ ದಿನ ದಾಟುವುದಕ್ಕೆ ಸಾಧ್ಯವಾಗುತಿತ್ತೋ ಏನೋ. ಅಲ್ಲಿಗೆ ಸೇತುವೆ ಹಾಕಲು ಯಾರೂ ಬರಲಾರರು—ಎಂಬುದು ಗೊತ್ತು. ಆದುದರಿಂದ ಮಳೆಯ ನೀರು ಇಳಿದ ಗಳಿಗೆಯನ್ನೇ ಹುಡುಕಿ ಹೋಗಬೇಕಾದವನು ಅವನೇ. ಹಾಗೆ ಅವನು ಅವರ ಕೇರಿಗೆ ಹೋಗುವಾಗ ಮೂರು ತಿಂಗಳ ಮಳೆಗಾಲ ಸಂದು ಹೋಗಿತ್ತು. ತಡವಾದರೇನು, ಸಂತೋಷದ ದಿನಗಳು. ಕುಮರಿಯ ಪೈರು ಹೊನ್ನಿನ ಬಣ್ಣ ತಾಳಿ, ಮಲೆಯ ಮೈಯಲ್ಲಿ ನಿಂತು ಚಾಮರ ಬೀಸುತ್ತಿರುವ ಸೊಬಗಿನ ನೋಟ ಕಂಡು, ಉಬ್ಬು ಮನಸ್ಸಿನಿಂದ ಬಿರುಮನ ದರ್ಶನ ಪಡೆದ.

ಬಿರುಮನೂ ಅವನ ಬರವನ್ನು ಕಾದಿದ್ದ. ಕುಮರಿಯ ಹೊಲದ ಬಳಿಯ ಅವನ ಗುಡಿಸಲು ಮನೆಯೆಂದರೆ ತುಂಬ ನಿಗ್ಗಾದ ಸ್ಥಳ. ಹತ್ತಿರ

ಹತ್ತಿರ ಗುಡಿಸಲುಗಳು. ಯಾರು ಬಂದು ಹೋದರೂ ಕೇರಿಯವರಿಗೆ ತಿಳಿದೇ ತಿಳಿಯುತ್ತದೆ. ಮನೆಯಲ್ಲಾಡುವ ಮಾತು ನೆರೆಮನೆಗೆ ಗಾಳಿಯಿಂದಲೇ ಹೋಗಿ ಸೇರುತ್ತದೆ. ಆದುದರಿಂದಲೇ ಬಿರುಮ ಅವನನ್ನು ಕರೆದುಕೊಂಡು, ತನ್ನ ಕೇರಿಯ ಮನೆಗೆ ಬಂದ. ತಾನು ಅವನಿಗಾಗಿ ಹುಡುಕಿ ಇರಿಸಿದ ಚೆಲುವೆ ಇಂಥವಳೆಂದೂ ಹೇಳಿದ. ಆದರೆ "ಮದುವೆಯ ವಿಚಾರದಲ್ಲಿ ಅವಸರ ಮಾಡಬೇಡ. ನಿನಗೆ ಮೊದಲು ಚೋಮನ ಗುರುತು ಮಾಡಿಕೊಡುತ್ತೇನೆ"—ಎಂದೂ ಅಂದ. ಪರಿಚಯವೇನೋ ಆ ಬಾರಿಗೆ ಮಾಡಿಕೊಟ್ಟ. ಆದರೆ ತಿಮ್ಮ ಆ ಮಲೆಯಿಂದ ಈ ಮಲೆಗೆ ಬಂದ ಉದ್ದೇಶವನ್ನು ಬಿರುಮ ಚೋಮನೊಡನೆ ಒಮ್ಮೆಗೇ ಬಿಡಿಸಿ ಹೇಳಲಿಲ್ಲ. ಆತ ಅಷ್ಟೊಂದು ಲೌಕಿಕ ಅರಿಯದವನಲ್ಲ. ಬದಲು ಹೀಗೆ ಪರಿಚಯ ಮಾಡಿಕೊಟ್ಟ "ತಿಮ್ಮಗೆ ಕಾಣಲು ಹೆಚ್ಚು ಪ್ರಾಯವಾದಂತೆ ಕಂಡರೂ, ನಿಜಕ್ಕೂ ಅಷ್ಟೇನೂ ಹೆಚ್ಚು ವಯಸ್ಸಾಗಿಲ್ಲ" ಎಂದು ಅವನ ಗುಣಾತಿಶಯಗಳನ್ನು ಬಣ್ಣಿಸಿದ. ಕುಡಿಯರ ಕುಲಕ್ಕೆ ಅಂಕೆ ಸಂಖ್ಯೆಗಳ ಎಣಿಕೆ ಬಂದುದಲ್ಲ. 'ಇಪ್ಪತ್ತು ಹೆಚ್ಚೇ, ನಾಲ್ವತ್ತು ಹೆಚ್ಚೇ' ಅಂದರೆ ಉತ್ತರ ಕೊಡಲಾರದ ಜನ ಅವರು. ಹೀಗಿರುತ್ತ ಪ್ರಾಯ, ವಯಸ್ಸು—ಇವೆಲ್ಲ ಒಂದು ಅಂದಾಜಿನ ಮಾತು. ಮೀಸೆ ಬರುವ ಮೊದಲು ಹುಡುಗ; ಬಂದ ಮೇಲೆ ಜವ್ವನಿಗ. ಬಂದು ಬಿಳಿದಾದರೆ ಮುದುಕ. ಆ ಮಟ್ಟಿಗೆ ಹೇಳುವಲ್ಲಿ ಸುದೈವದಿಂದ ತಿಮ್ಮ ನಡುವಣ ಹಂತಿಯಲ್ಲಿರುವ ಹರೆಯ. ಹೈದನೂ ಅಲ್ಲ, ಮುದುಕನೂ ಅಲ್ಲ.

ಇನ್ನೊಮ್ಮೆ ತಿಮ್ಮ ಹಿರಿಮಲೆಗೆ ಬಂದಾಗ ಕೇರಿಯವರು ಕೇರಿಯಲ್ಲೇ ವಾಸವಾಗಿದ್ದರು. ಏಲಕ್ಕಿಯ ಬೇಸಾಯ ತೊಡಗಿತ್ತು. ಕುಮರಿಯ ಫಸಲು ಊರು ಸೇರಿತ್ತು. ಬಿರುಮ ಅವನನ್ನು ನೇರಾಗಿ ಚೋಮನ ಮನೆಗೇ ಕರೆದೊಯ್ದ. ಆ ದಿನ ಅವನಿಗೆ ಅಲ್ಲಿ ಸಮ್ಮಾನವೇ ಸಮ್ಮಾನ. ಹೀಗೆಂದು ತಿಮ್ಮನಾಗಿ 'ಹುಡುಗಿ ಕೇಳಲು ಬಂದೆ' ಎನ್ನಲಿಲ್ಲ. ಆ ಆತುರವನ್ನು ತಂದೆ ತಾಯಿಗಳು ತಾಳಿದರು. ಬಿರುಮ ಇದಕ್ಕೆ ಬೇಕಾದ ಪೂರ್ವ ಪೀಠಿಕೆ ಹಾಕಿದ್ದ. ಈಗ ಭಾವೀ ಅಳಿಯನ ಮನ ಒಲಿಸುವ ಪ್ರಶ್ನೆ ಒಂದೇನೆ ಉಳಿದಿದೆ. ಎಲೆ, ಅಡಿಕೆ, ಬಯನಿ ಹೆಂಡಗಳನ್ನು ಸಾಕ್ಷಿಯಾಗಿರಿಸಿಕೊಂಡು, ಸಂತೋಷದ

ಮಾತುಕತೆಗಳೇನೋ ನಡೆದುವು. ತಿಮ್ಮನ ಅಸಮಾಧಾನವೆಂದರೆ—ಆ ದಿನವೆಲ್ಲ ಅಲ್ಲಿದ್ದರೂ ತನ್ನ ಭಾವೀ ಮಡದಿಯನ್ನು ಕಣ್ತುಂಬ ಕಾಣಲಾರದ್ದು. ಅದಕ್ಕಾಗಿಯೇ ಆತ ಆಸೆಪಟ್ಟು ಇನ್ನೂ ಎರಡು ದಿನ ಕಾಲ ಬಿರುಮನ ಮನೆಯಲ್ಲಿ ಉಳಿದುಕೊಂಡ. ಕುಕ್ಕನ ಸ್ನೇಹ ಮಾಡಿದ. ಅವನೊಡನೆ ಆಚೀಚೆ ಬೇಟೆಯಾಡಲು ಹೋದ. ಅವನ ಜತೆಗೆ ಅಬ್ಬಿಯ ದಂಡೆಯೊಂದಕ್ಕೆ ಹೋದಾಗ ಅಲ್ಲಿ ಅವನ ತಂಗಿ ಕಲ್ಲುಗಳನ್ನೆತ್ತುತ್ತಾ ಏಡಿ ಹಿಡಿಯುವುದು ಕಾಣಿಸಿತು. ಇವನನ್ನು ಆಕೆಯೂ ತಲೆ ಎತ್ತಿ ಕಂಡಳು. ಮುಖವನ್ನೂ ದಿಟ್ಟಿಸಿ ನೋಡಿದಳು. ಮನೆಯಲ್ಲಿ ಕಾಣದ ಪೂರ್ಣ ನೋಟ ಈಗ ಕಾಣಿಸಿತು. ತಿಮ್ಮನ ತುಟಿ ಹರಿದಿದೆ. ಮೇಲಿನ ಮೀಸೆಯ ಪಂಕ್ತಿ ಓರೆಕೋರೆಯಾಗಿದೆ—ಎಂಬುದು ಕಂಡಿದೆ. ಮನೆಯ ಗುಸುಗುಸು ಮಾತುಗಳಿಂದ ಅವಳು, ತಾನಾರ ಪಾಲಿಗೋ ವಧುವಾಗಿ ಸಲುತ್ತೇನೆ, ವಲ್ಲಿಯ ಆಸೆ ಮುಗಿದಂತೆಯೇ—ಎಂದು ಎಣಿಸಿಕೊಂಡಿದ್ದಳು. ತಿಮ್ಮ ಬಂದುದು ಅವಳ ನಿರಾಶೆಗೆ ಮುದ್ರಿಕೆಯೊತ್ತಿದಂತಾಯಿತು. ಅವನನ್ನೇ ಜುಳುಜುಳು ನೋಡಿದಳು. ತಿಮ್ಮ ಮೊದಲ ಬಾರಿಗೆ ಕಣ್ತುಂಬ, ಮನ ತಣಿಯುವಂತೆ ತನ್ನವಳಾಗುವ ಕನ್ಯೆಯನ್ನು ನೋಡಿ ಅತ್ಯಾನಂದಪಟ್ಟ. ಪೂಜಾರಿ ಬಿರುಮ ತನ್ನ ಸಲುವಾಗಿ ವನದೇವತೆಯೊಬ್ಬಳನ್ನೇ ಗೊತ್ತುಮಾಡಿರುವ—ಎಂಬ ಅಭಿಮಾನ ಅವನಲ್ಲಿ ಮೂಡಿತು.

"ದಿನ ಎಂದು, ದಿನ ಎಂದು" ಎಂಬ ಆತುರ ತಿಮ್ಮನಿಗೆ. ಅದಕ್ಕೆ ಬಿರುಮ "ಮೊದಲು ನಿನ್ನ ಗುರಿಕಾರನನ್ನು ಕೇಳು" ಎಂದು ಉಪದೇಶಿಸಿದ. ಕುಲದ ಪ್ರಶ್ನೆ ಅಡಚಣೆಯಾಗಿ ನಿಲ್ಲಬಾರದೆಂದು ಆತ ಹೀಗೆ ಸೂಚನೆ ಕೊಟ್ಟ. ಆ ಸಂದೇಶವನ್ನು ಹೊತ್ತು, ವನದ ಚಿಗರಿಯಂತೆ ಆ ಸಂಜೆಯೇ ತಿಮ್ಮ ಮಲೆಗೆ ಮರಳಿದ. ಆ ರಾತ್ರಿಯೇ ಕರಿಯಣ್ಣನ ಗುಡಿಸಲಿಗೆ ಹೋಗಿ ತನ್ನ ಅಂತರಂಗದ ಆಸೆ ಪೂರ್ಣವಾಗುವ ಗಳಿಗೆ ಬಂತೆಂಬ ಶುಭಸಮಾಚಾರ ಹೇಳಿದ. ಕರಿಯನಿಂದ 'ಭಾಪು, ಭಲರೆ!' ಎನಿಸುವ ನಿರೀಕ್ಷೆ ಅವನದು. ಕರಿಯ ಅನುಮಾನಿಸಿ ನುಡಿದ "ಬೂದಣ್ಣ ಹೇಳಿದವಳೇ! ಆ ಮಲೆಯಲ್ಲಿ ಯಾರೋ ಒಬ್ಬಳು ಬೇರೆ ಜಾತಿಯವನ ಹಿಂದೆ ಹೋಗಿ ಕುಲ ಬಿಟ್ಟವಳಿದ್ದಾಳಂತೆ. ಆ ದಿನ ಇದ್ದೆಯಲ್ಲ ನೀನು—ಕೋಲದ ದಿನ. ದೈವ ಹೇಳಿದ್ದನ್ನು ಕೇಳಿದ್ದೀಯಲ್ಲ. ಅವಳೇನಲ್ಲವಲ್ಲ" ಎಂದ.

ಫಕ್ಕನೆ ತಲೆಗೆ ಬಡಿದಂತಾಯಿತು ತಿಮ್ಮನಿಗೆ. ತಾನು ಕಂಡು ಸಿಕ್ಷಯಿಸಿದ ಕನ್ಯೆ ಅವಳೇ ಇರಬಹುದೇ—ಎಂಬ ಅನುಮಾನವಾಯಿತು. ಆದರೂ ' ಛೆ, ಅದಿರಲಾರದು. ಇದು ಪೂಜಾರಿ ಬಿರುಮ ತಲಾಸಿ ಮಾಡಿದ್ದು. ಅವರ ಮನೆಗೂ ನಾನು ಹೋಗಿದ್ದೆನಲ್ಲ. ಆಚೀಚೆ ತಿರುಗಾಡಿಕೊಂಡೂ ಬಂದಿದ್ದೆ. ಆ ಮನೆಯವರು ಕುಲದ ಹೊರಗಿನವರ ಹಾಗೆ ನನಗೆ ಕಾಣಿಸಲೇ ಇಲ್ಲ. ಬಿರುಮನೂ ಬಂದಿದ್ದ. ನಮ್ಮಿಬ್ಬರನ್ನು ಊಟಕ್ಕೆ ಕರೆದಿದ್ದರು ' ಎಂದು ಈ ಹೊಸ ಅನುಮಾನವನ್ನು ನಿವಾರಿಸುವ ಪ್ರಯತ್ನ ಮಾಡುತ್ತಿದ್ದ.

"ಅವಳ ಅಪ್ಪನ ಹೆಸರು ಏನು ಹೇಳು ? ಅಂಪರೆ ನೋಡು, ಬೂದಣ್ಣ, ಕಾಳನಿಗೂ ನನಗೂ ಲಗ್ನವಾಗಿ—ಎಂದು ಹೇಳುತ್ತಲೇ ಇದ್ದಾನೆ. ನಾನು—ನನಗೆ ಈಗ ಬೇಡ ಮುಂದೆ ನೋಡುವ ಎನ್ನುತ್ತಲೇ ಇದ್ದೇನೆ. ಆದರೆ ಬೂದಣ್ಣಗೆ ಕಾಳನ ಲಗ್ನ ಈ ವರ್ಷವೇ ಹೇಗಾದರೂ ಮಾಡಬೇಕೆಂಬ ಹಟ. ಅವನೂ ಆ ಮಲೆಗೆ ಹೋಗಿದ್ದ, ಒಂದು ಹದಿನೈದು ದಿನಗಳ ಹಿಂದೆ. ಅಲ್ಲಿ ಚೋಮನ ಮಗಳು ಚೆಂದವಾಗಿದ್ದಾಳೆ—ಎಂದು ಕೇಳಿ ಹೋಗ ಬೇಕೆನ್ನುವಾಗಲೇ, ಅವನ ಮಾವ ತಡೆದನಂತೆ. ' ಆ ಸಂಬಂಧ ಬೇಡ. ಎಷ್ಟೆಂದರೂ ಒಂದು ಸಾರಿ ಜಾತಿಯಿಂದ ಹೋದವಳು. ಒಡೆದ ಗಡಿಗೆ ಕೂಡಿಸಿದ ಹಾಗೆ ಅದು ' ಎಂದನಂತೆ."

" ಚೋಮನ ಮಗಳು—ಜಾತಿ ಬಿಟ್ಟಿದ್ದು ! " ಎಂದು ಉದ್ಗರಿಸಿದ ತಿಮ್ಮ.

" ಅಪ್ಪು ನಿಜ. ನೀನನ್ನುವುದು ಅವಳನ್ನೇನು ? "

" ಹೌದು " ಎಂದು ತುಂಬ ಚಂಚಲನಾದ ತಿಮ್ಮ. ಆ ಗಳಿಗೆಯಲ್ಲಿ ಅವನ ನಿರಾಶೆಯನ್ನು ಹೇಳಿತೀರದು. " ಹಾಗಾದರೆ ನಾನು ಈ ಜನ್ಮದಲ್ಲೇ ಮದುವೆಯಾಗುವ ಮಾತು ಮುಗಿದ ಹಾಗೆ " ಎಂದ ಆತ. ಕಣ್ಣಿಂದೊಂದು ತೊಟ್ಟು ನೀರೂ ಉದುರಿತು. ಕರಿಯನಿಗೆ ಅವನ ಮೇಲೆ ಉಂಟಾದ ಸಹಾನು ಭೂತಿ ಈ ದುಃಖಕ್ಕೆ ಸಮನಾಗಿತ್ತು. ತಿಮ್ಮ ಸುಮ್ಮನಿರಲಾರದೆ, ತನ್ನ ಜೀವನದ ಬಹುಕಾಲದ ನಿರಾಶೆಯ ಕತೆಯನ್ನು ಹೇಳಿದ. ಕೊನೆಗೆ, ತಾನು ಜೋತುಕೊಂಡಿದ್ದ ಈ ಒಂದು ಆಸೆಯ ಹಗ್ಗವೂ ಹರಿದು ಹೋಗುವುದಾದರೆ ತಾನಿನ್ನು ಬಾಳುವುದೇತಕ್ಕೆ—ಎಂಬ ವ್ಯಥೆಯನ್ನು ತೋಡಿಕೊಂಡ.

ಕರಿಯನಿಗೆ ಬಲು ದುಃಖವಾಯಿತು. ಹೀಗೆಯೇ ದಿನ ಸರಿದರೆ ತಿಮ್ಮ ಹೆಣ್ಣಿಗಾಗಿ ಹಲುಬಿ ಹಲುಬಿ ಬುದ್ಧಿ ಕೆಡಿಸಿಕೊಳ್ಳುವುದು ನಿಜ—ಎಂದೂ ತೋರಿತು. ಕುಲದ ಆಚಾರ ವಿಚಾರಗಳ ಹೊಣೆ, ಚಿಕ್ಕವನಾದರೂ ಅವನ ಕೈಯ ಮಾತು. ಅದಕ್ಕಾಗಿ ಅವನೆಂದ "ತಿಮ್ಮ, ಆದರೂ ಒಂದುಂಟು. ಆ ದಿನ ದೈವ ಹೀಗೂ ಅಂದಿತ್ತು—ತಿರುಗಿ ಬಂದರೆ, ತಪ್ಪುದಂಡ ಕೊಟ್ಟರೆ ಕ್ಷಮಿಸುತ್ತೇನೆ—ಎಂದಿತ್ತು. ಅಷ್ಟು ಮಾಡಿದ್ದಾರೆಯೋ? ಮಾಡದೆ ಕೂಡು ಕಟ್ಟಿನಲ್ಲಿ ಸೇರಿಸಿಕೊಳ್ಳಲಾರರು. ಸೇರಿಸಿಕೊಳ್ಳದೆ ಬಿರುವ ಅಲ್ಲಿಗೆ ಊಟಕ್ಕೂ ಹೋಗಿರಲಾರ. ದೊಡ್ಡ ಮಾತಲ್ಲ ಬಿಡು. ಆ ವಿಚಾರದಲ್ಲಿ ಹೀಗೂ ಕೇಳಿದ್ದೇನೆ—ಅವಳು ಬುದ್ಧಿಯಿಂದ ಹೋದವಳಲ್ಲ. ಪುಸಲಾಯಿಸಿ, ಮನೆಯ ಕೆಲಸಕ್ಕೆಂದು ಅವರ ಕ್ರಿಸ್ತಾನ ಧನಿ ಕೊಂಡೊಯ್ದಿದ್ದಂತೆ. ಆ ಸುದ್ದಿ ತಿಳಿದ ಮರುದಿನವೇ ಜೋಮ ಅವರನ್ನು ಹಿಂದಕ್ಕೆ ಕರಕೊಂಡು ಬಂದಿದ್ದಾನಂತೆ. ನೀನು ಲಗ್ನವಾಗು. ಹಲ್ಲುದುರಿದ ಮೇಲೆ ಮದುವೆಯೇ?"

"ನಾಸೀಗ ತೀರ ಮುದುಕ ಅನ್ನುತ್ತೀಯಾ?"

"ಅಲ್ಲ ತಿಮ್ಮ, ಮುದುಕ ಆದಮೇಲೆ ಮದುವೆ ಆಗುವುದಲ್ಲ. ಆಗುವುದಾದರೆ ಬೇಗ ಆಗು ಅಂದೆ."

"ಅದಕ್ಕೇ ನಾನು ಒದ್ದಾಡಿದ್ದು. ಆದರೆ ನೋಡು—ನೀನು ಗುರಿಕಾರ. ಲಗ್ನಕ್ಕೆ ಬಂದು ನಡೆಯಿಸಿ ಕೊಡಬೇಕಾದವ. ಕೇರಿಯವರು ಏನು ಮಾಡಿಯಾರು—ಎಂಬ ಧೈರ್ಯ ನನಗಿಲ್ಲ. ಆದರೆ ನೀನು ನನ್ನ ಕೈಬಿಡುವುದಿಲ್ಲ—ಎಂದರೆ ಆಗುತ್ತೇನೆ."

"ಅದರಲ್ಲಿ ತಪ್ಪೇನಿಲ್ಲ. ದೈವವೇ ಕ್ಷಮಿಸುತ್ತೇನೆ ಅಂದ ಮೇಲೆ ಗುರಿಕಾರ ಏನು ಹೆಚ್ಚಿನವ—ಆಗಲಿ" ಎಂದ ಕರಿಯ.

ಕರಿಯನ ಮಾತಿನಿಂದ ತಿಮ್ಮನಿಗೆ ಹೋದ ದಿಗಿಲು ಬಂದಂತಾಯಿತು. ಆ ದಿನ ಆತ ತನ್ನ ಮನೆಗೆ ಹೋಗಿ, ಒಂಟಿಯಾಗಿ ಚಾಪೆಯಲ್ಲಿ ಹೊರಳುತ್ತಿದ್ದಾಗೆಲ್ಲ—ಆಸೆ ನಿರಾಶೆಗಳ ತೆರೆ ಅವನ ಮುಂದೆ ಕವಿಯುತ್ತಲೇ ಇತ್ತು. ಕೆಂಪಿಯಂತೆ ನದಿ ದಂಡೆಯಲ್ಲಿ ಏಡಿ ಹುಡುಕುತ್ತಿದ್ದ ಕನ್ಯೆಯನ್ನು ಕಂಡು ತಾನಷ್ಟು ಭಾಗ್ಯಶಾಲಿ ಎಂದು ತಿಳಿದ ಮನಸ್ಸು, 'ಕುಲಗೆಟ್ಟ ಹೆಣ್ಣು' ಎಂಬ ಮಾತಿನಿಂದ ನೋಯುತ್ತಲೇ ಇತ್ತು. ನಾಳೆ ಅವಳನ್ನು ಮದುವೆ

ಯಾಗಿ, ಅವಳನ್ನು ಇಲ್ಲಿ ಕರೆದು ತಂದರೆ—ತುಕ್ರನಂಥವರು ಏನು ನಂಜು ಕಾರಬಹುದು, ಏನು ಸುದ್ದಿ ಹಬ್ಬಿಸಬಹುದು—ಎಂಬುದನ್ನು ಊಹಿಸಲಾರ. ಹಾಗೆಂದು ಆ ಯೋಚನೆಯನ್ನೇ ಬಿಟ್ಟರೋ—ಬಾಳುವ ಯೋಚನೆಯನ್ನೇ ಬಿಟ್ಟಹಾಗೆ—ಎಂದನಿಸುತ್ತದೆ. ಹೀಗಾಗಿ ಮದುವೆಯ ಸುದ್ದಿಯನ್ನು ತನ್ನ ಕೇರಿಯವರಿಗೆ ತಿಳಿಸುವ ಧೈರ್ಯ ಅವನಿಗೆ ಬಾರದೆ ಹೋಯಿತು.

ಮಳೆಗಾಲ ಕಳೆಯಿತು; ಚಳಿಗಾಲದ ಗಾಳಿ ಬೀಸತೊಡಗಿತು. ಆಸೆಯ ಕನಸು ಮತ್ತಷ್ಟು ಉಜ್ವಲವಾಗಿ ಉರಿಯತೊಡಗಿತು. ತಿಮ್ಮ ಬಿರುಮನ ಮನೆಗೆ ಇನ್ನೊಮ್ಮೆ ಹೋದ. ಕನ್ಯೆಯ ಕುಲಗೋತ್ರದ ವಿಚಾರ ದಲ್ಲಿ ತನ್ನ ಅನುಮಾನ ತೋಡಿಕೊಂಡ. ಬಿರುಮ ಧೈರ್ಯ ಹೇಳಿದ. "ಏನನ್ನುತ್ತೀಯಾ ನೀನು? ಬೇರೆಯವರ ಮನೆಯ ಕೆಲಸಕ್ಕೆ ಹೋದರೆ ತಪ್ಪಾಯಿತೆ? ಪರವೂರಿಗೆ ಹೋದರೆ ಅಂಜಿಕೆಯೇ. ಧರ್ಮಸ್ಥಳದ ಸುತ್ತ ಮುತ್ತ ನಮ್ಮ ಜಾತಿಯವರಿಲ್ಲವೇ? ಆಚೀಚೆ ಮನೆ ಬಿಟ್ಟು ಅವರು ತಿರುಗುತ್ತಲಿಲ್ಲವೇ? ಹೊರಗೆ ಹೋದದ್ದು ತಪ್ಪಿದ್ದರೂ, ತಪ್ಪುಕಾಣಿಕೆ ಕೊಟ್ಟವರಲ್ಲವೇ? ದೈವವೇ ಕ್ಷಮಿಸುತ್ತೇನೆ—ಎಂದಿಲ್ಲವೇ. ಹಗ್ಗ ನೋಡಿ ಹಾವೆಂದು ಹೆದರಿದರೆ ಹೇಗೆ ನೀನು? ಚಿನ್ನದಂಥ ಹುಡುಗಿ ಗಿಡ್ಡಿ. ರೂಪ ದಲ್ಲೂ ಹಾಗೆಯೇ, ಗುಣದಲ್ಲೂ ಹಾಗೆಯೆ. ಅವಳ ತಂದೆ ತಾಯರು ಅಷ್ಟೇ ಯೋಗ್ಯರು" ಎಂದು ತಿಮ್ಮನ ಅನುಮಾನ ಬಗೆಹರಿಸಿ, ಧೈರ್ಯವನ್ನು ಕೊಟ್ಟ. ಅಂದೇನೆ ಮದುವೆಯ ದಿನ ಗೊತ್ತುಮಾಡಿದರು. ತಿಮ್ಮನ ಮನಸ್ಸಿಗೂ ಧೈರ್ಯವಾಯಿತು. ಎಂದು ತನ್ನ ಪತ್ನಿಯನ್ನು ಕರೆದುಕೊಂಡು ಕಿರಿ ಮಲೆಗೆ ಬಂದೇನೆಂಬ ಆತುರವೂ ಉಂಟಾಯಿತು.

ದಿನ ನಿಶ್ಚಯಿಸಿದ; ಊರಿಗೆ ಮರಳಿದ. ಗುರಿಕಾರ ಕರಿಯನಲ್ಲಿಗೆ ಹೋಗಿ "ಮದುವೆ ನಡೆಯಿಸಿಕೊಡು" ಎಂದೂ ಪ್ರಾರ್ಥಿಸಿದ. ಮದುವೆ ಯಾಗಿ ಬಂದ ಮೇಲೆಯೇ ಕೇರಿಗೆ ತಿಳಿಸುವುದು ಒಳಿತೆಂದು ಅವನಿಗೆ ಕಂಡಿತು. ಮದುವೆಗೆ ಮುಂಚಿತವಾಗಿಯೇ ಇಲ್ಲದ ತೊಡಕು ತಕರಾರುಗಳು ಬೇಡವೆಂದು ಕರಿಯನಿಗೂ ತೋಚಿತು. ಇಬ್ಬರೂ ಜತೆಯಲ್ಲಿ ಹಿರಿ ಮಲೆಗೆ ಹೋದರು. ಅಲ್ಲಿ ತಿಮ್ಮನೊಡನೆ ಗಿಡ್ಡಿಯ ವಿವಾಹ ನಡೆದು, ಇಬ್ಬರೂ ತಮ್ಮ ಮಲೆಗೆ ಬಂದುದೂ ಆಯಿತು. ತಿಮ್ಮನ ಮನದಲ್ಲಿ 'ತನ್ನಷ್ಟು ಭಾಗ್ಯ

ಶಾಲಿಗಳು ಯಾರೂ ಇಲ್ಲ' ಎಂಬ ಸಂತೋಷ ಉಂಟಾಯಿತು. ಕರಿಯ ನಿಗಂತು ಆತ ತುಂಬ ಕೃತಜ್ಞತೆಯ ಮಾತುಗಳನ್ನಾಡಿದ. ಆದರೆ ಕೇರಿಯಲ್ಲಿ ಅವನಿಗೆ ಸಂಭ್ರಮದ ಸ್ವಾಗತ ದೊರೆಯುವಂತಿರಲಿಲ್ಲ. ಮದುವೆಗೆ, ತಮಗೆ ತಿಳಿಸದೆ ಹೋದ ನೆಪವನ್ನೇ ಮುಂದಿಟ್ಟುಕೊಂಡು, ಜನ ಅವನನ್ನು ದೂರ ತೊಡಗಿದರು. ಕರಿಯ ಅವನ ಜತೆಗೆ ಹೋದ ಸುದ್ದಿ ತಿಳಿದಮೇಲೆ ಬೂದ ಸುಮ್ಮನೇ ಕುಳಿತಾನೆಯೇ? ಅವನನ್ನು ಆಪ್ತವಾಗಿ ಕರೆದು "ಏನು ಕರಿಯ, ನೀನೂ ಈ ಕೆಲಸಕ್ಕೆ ಸೇರುವುದೇ? ಆಕೆ ಊರು ಬಿಟ್ಟವಳು ಮಾತ್ರವಲ್ಲ, ಯಾವನೋ ಪರಜಾತಿಯವನ ಹಿಂದೆ ಹೋದವಳು. ನಾನು ಸಹ ಆ ಸಂಬಂಧವನ್ನು ಮುರಿದು ಮನೆಗೆ ಬಂದದ್ದು ಗೊತ್ತು. ಹೀಗಿರುತ್ತ ನೀನು...."

"ಆ ಮಲೆಯವರು, ಅಲ್ಲಿನ ಯಜಮಾನ ಪ್ರತಿಯೊಬ್ಬರೂ ತಪ್ಪು ಕಾಣಿಕೆ ತೆಗೆದುಕೊಂಡು, ಕುಲಕ್ಕೆ ಸೇರಿಸಿಕೊಂಡಮೇಲೆ, ಅಂಥ ಮಾತು ಎಲ್ಲಿ ಉಳಿಯಿತು" ಎಂದ ಕರಿಯ.

"ಆ ಮಲೆಯವರು ಏನೂ ಮಾಡಿಯಾರು. ಆದರೆ ನಾವು ನಮ್ಮ ಕುಲದ ಹಿರಿತನ ಕಾಪಾಡಬೇಡವೇ? ಮಾಂಸಕ್ಕಾಗಿ ಹಸಿದ ಹುಲಿಯ ಹಾಗೆ, ತಿಮ್ಮ ಹೆಣ್ಣು ಸಿಕ್ಕಿದರೆ ಸಾಕು—ಎನ್ನಬಹುದು. ಆದರೆ ನೀನು, ಅವನ ಪಂಗಡ ವಹಿಸಿ ಹೋದದ್ದು ಸಮನೇ? ಕೇರಿಯವರೊಬ್ಬರಿಗೂ ತಿಳಿಸದೆ ಮದುವೆಗೆ ಹೊರಟಾಗ?"

"ಮಾವ, ಆ ಕೇರಿಯವರು ಕಡಿಮೆ, ನಾವು ಹೆಚ್ಚು ಎಂದರೆ ಹೇಗೆ? ತಿಮ್ಮ ಇಲ್ಲರಿಗೂ ಹೇಳುತ್ತಿದ್ದ. ಹೇಳಬಾರದು ಎಂಬವನಲ್ಲ. ಅವನು ಹೆದರಿದ. ಮದುವೆಗೆ ಮುಂಚೆ ವಿಘ್ನ ಬಂದೀತೋ—ಎಂದು ಅಂಜಿದ. ನೀನೇ ನೋಡು, ಕೆಂಪಿಯನ್ನು ಲಗ್ನವಾಗುವಾಗ ಯಾರಿಗೆ ಹೇಳಿದ್ದೆ? ಯಾರಾದರೂ ನಿನ್ನನ್ನು ದೂರಿದರೇ? ಸಂದರ್ಭ ಹಾಗಿತ್ತು. ಹೇಳಲಿಲ್ಲ ನೀನು."

"ಅದೂ ಇದೂ ಸಮವೇ?"

"ಈಗ ಅವನು ಮದುವೆಯಾಗಿ ಬಂದನಲ್ಲ. ನಾಳೆ ಕೇರಿಯವರನ್ನು ಕರೆಯಿಸಿ ಊಟ ಹಾಕುತ್ತಾನೆ. ಹಾಗೆ ಮಾಡಬೇಕು—ಅಂದಿದ್ದೇನೆ ನಾನು. ಏನನ್ನುತ್ತೀ ನೀನು."

" ಹಾಕಲಿ, ಬಿಡಲಿ. ಹೋಗುವವರು ಹೋಗುತ್ತಾರೆ, ಹೋಗದಿರುವವರು ಇಲ್ಲ."

" ಅಂದರೆ ನೀನು ? "

" ಛಿ ನಾನೇನು ದೊಡ್ಡವ. ನನಗೂ ಅವನಿಗೂ ಮೊದಲಿಂದಲೂ ಇರುವ ಹಿತವಾರೆ ಅಷ್ಟಕ್ಕಷ್ಟೆ. ನಾನು ಹೋದರೂ ಒಂದೆ ; ಬಿಟ್ಟರೂ ಒಂದೆ."

ಈ ವಿಚಾರದಲ್ಲಿ ಬೂದಣ್ಣ ಹೇಳಿದ ಮಾತು, ತಾಳಿದ ನೋಟ, ಕರಿಯನನ್ನು ಸಮಾಧಾನಪಡಿಸಲಿಲ್ಲ. ಮದುವೆಯ ಔತಣಕ್ಕೆ ತಿಮ್ಮ ಎಲ್ಲರಿಗೂ ಹೇಳಿಕೆ ಮಾಡಿದ. ಊಟಕ್ಕೆ ಜನರೂ ಬಂದಿದ್ದರು. ಬರಬೇಕಾಗಿದ್ದ ಎಲ್ಲರೂ ಬರಲಿಲ್ಲ ಬೂದನಂತು ಬಂದಿದ್ದ—ಕರಿಯ ಸಿಟ್ಟಾಗಬಾರದೆಂದು. ಬಂದವರು ಉಂಡು, ಮನೆಗೆ ಹೋಗುವಾಗ ಒಂದೊಂದು ಅಭಿಪ್ರಾಯ ಕೊಂಡುಹೋದರು. ಕೆಲವರು ' ಏನೇ ಆಗಲಿ, ಇಷ್ಟು ದಿನ ಕಾದದ್ದಕ್ಕೆ ತಿಮ್ಮಗೆ ಚೆಂದದ ಹೆಂಡತಿಯೇ ದೊರಕಿದಳು ' ಎಂದವರುಂಟು. ' ಕುಲ ಬಿಟ್ಟ ಹೆಣ್ಣಿಗೆ ಚೆಂದವಿದ್ದರೂ ಒಂದೆ, ಇಲ್ಲದಿದ್ದರೂ ಒಂದೆ ' ಎಂದವರುಂಟು. ಕೆಂಪಿಯೂ ಊಟಕ್ಕೆ ಹೋದಳು, ಹೋಗಿ ಅಸೂಯೆ ಪಟ್ಟುಕೊಂಡು ಬಂದಳು. ಹೋಗುವಾಗ ' ತಿಮ್ಮಗೆ ಎಂಥ ಹೆಣ್ಣು ಸಿಕ್ಕೀತು—ಒಂದು ತುಟಿ ಹರಿದ ಗಂಡಿಗೆ ಎರಡು ತುಟಿ ಹರಿದ ಹೆಂಡತಿ ಗಂಟು ಬಿದ್ದಾಳು '—ಎಂದು ನಿರೀಕ್ಷಿಸಿ ಹೋದರೆ, ತನ್ನ ಚೆಲುವನ್ನು ಮೀದಲಿಸುವ ರೂಪ ಅವಳಲ್ಲಿದ್ದಿತ್ತು. ಅದರಿಂದ ತುಂಬ ಅಸಮಾಧಾನವಾಯಿತು. ಇತ್ತ ಅವಳ ತಂದೆ ತಾಡನಿಗೂ, ಗಿಡ್ಡಿಯ ತಂದೆ ಚೋಮನಿಗೂ ಸ್ನೇಹಸಂಬಂಧ ಚೆನ್ನಾಗಿರಲಿಲ್ಲ. ಇವೆಲ್ಲವುಗಳ ಒಟ್ಟು ಪರಿಣಾಮ, ಕೆಂಪಿಯ ನಾಲಿಗೆಯಲ್ಲಿ ಕುಣಿದಾಡುವಂತಾಯಿತು.

" ಗಿಡ್ಡಿ ಒಳ್ಳೆ ಗರ್ಭಿಣಿ ಹಾಗೆ ಮೈತುಂಬಿ ಕಾಣುತ್ತಾಳಲ್ಲವೆ ? " ಎಂದಳು ಅವಳು. ಆ ಮಾತಿಗೆ ಕತ್ತುರಿಯ ಕಂಪು ದೊರೆಯಿತು ಕೇರಿಯಲ್ಲಿ. ಮದುವೆಯಾಗಿ ಬಂದ ಹತ್ತು ದಿನಗಳೊಳಗಾಗಿಯೇ, ಪ್ರತಿಯೊಬ್ಬರ ಬಾಯಿಯಿಂದಲೂ ಆ ನುಡಿ ವಿಚಿತ್ರ ರೂಪುಗಳನ್ನು ಹೊತ್ತು ಪ್ರಚಾರವಾಯಿತು. ಊಟಕ್ಕೆ ಅವನಲ್ಲಿ ಬಂದವರು ಸಹ ಮುಂದೆ ಅವರ ಸಂಸರ್ಗದಿಂದ ದೂರವಾದರು.

ತಿಮ್ಮ ಮದುವೆಯಾಗಿ ಬಂದ ಸಮಾಧಾನ ಕ್ಷಿಪ್ರದಲ್ಲಿಯೇ ನಶಿಸಿ ಹೋಯಿತು. ಮನೆಗೆ ಬಂದ ಮೇಲೆ ಅವನ ಜೀವನ ಇನ್ನಷ್ಟು ನಿರಾಶೆಯಿಂದ ತುಂಬಿತು. ಅದಕ್ಕೆ ಬೇರೆ ಕಾರಣವೂ ಉಂಟು. ಮದುವೆಯ ದಿನದಿಂದಲೂ ಅರಳದಿತ್ತು ಗಿಡ್ಡಿಯ ಮುಖ. ತಿಮ್ಮ ನಕ್ಕು ಎಷ್ಟೇ ನಲ್ಮೆಯ ನುಡಿಗಳನ್ನೇ ಆಡಲಿ, ಅವಳ ಪ್ರತ್ಯುತ್ತರ ರಸಹೀನವಾಗಿದ್ದುವು. ಚುಟುಕಾಗಿದ್ದುವು. ತನ್ನ ರೂಪು ವಯಸ್ಸು ಎರಡೂ ಆಕೆಯ ಮನಸ್ಸಿಗೆ ಬಂದಿರಲಾರದು—ಎಂಬ ಭಾವನೆ ತಿಮ್ಮಗೆ ಉಂಟಾಯಿತು. ಆದರೆ ತನ್ನ ಪಾಲಿನ ನಡವಳಿಕೆಯಲ್ಲಿ, ಪ್ರೀತಿ, ಜೆಡಗು, ಬಿನ್ನಾಣಗಳೊಂದಕ್ಕೂ ಕಡಿಮೆಮಾಡಲಿಲ್ಲ. ಹಗಲಾದರೂ ಗಿಡ್ಡಿ ಅವನೊಡನೆ ಸಾಕಷ್ಟು ಮಾತನಾಡುತ್ತಾಳೆ, ರಾತ್ರೆ ಅದೂ ಅಲ್ಲ. ಮನೆಗೆ ಬಂದ ಒಂದೆರಡು ದಿನಗಳಲ್ಲೇ ಮೈಕೈ ನೋವು, ಜ್ವರ, ಸಂಕಟ, ಎಂದು ಏನೇನೋ ನೆಪ ಹಿಡಿದು ಗಂಡನ ಸನಿಯ ಹೋಗುವುದಕ್ಕೆ ಇಷ್ಟಪಡುತ್ತಿರಲಿಲ್ಲ. 'ಊರವರ ಕಣ್ಣಿನ ಕುದಿ ತನ್ನ ಗಿಡ್ಡಿಗೆ ನಾಟಿದೆ. ಆ ಸೋಂಕು ಹೋಗದೆ ಅವಳು ಚೇತರಿಸಲಾರಳು' ಎಂದು ತಿಳಿದ ತಿಮ್ಮ. 'ಕೇರಿಯವರ ನಂಜಿನ ಮಾತಿಗೆ ಆಕೆ ನೊಂದಿರಬಹುದು' ಎಂದು ಸಮಾಧಾನ ಹೇಳಿದ ಕರಿಯ. ಒಳಗಿನ ಆವರಣ ಹೀಗಾದರೆ, ಹೊರಗೆ ಅವರಿಬ್ಬರನ್ನೂ ಜನ ದೂರ ಇರಿಸುತ್ತ ಬಂದುದು ಮತ್ತಷ್ಟೂ ನೋವಿಗೆ ಕಾರಣವಾಯಿತು.

ಹೀಗೆ ದಿನ ತಿಂಗಳು ಸರಿಯಿತು. ತಿಮ್ಮನ ಮೈಯ ಹಂಬಲವಾಗಲೀ, ಮನದ ಹಂಬಲವಾಗಲೀ, ತೃಪ್ತಿಗೊಂಡಂತೆ ಕಾಣುವುದಿಲ್ಲ. ಅವನ ದುಃಖವನ್ನೆಲ್ಲ ಅರಿತ ಕರಿಯ ತಾನೇ ಅವರಲ್ಲಿಗೆ ಹೋಗಿ ಆಗಾಗ ಮಾತನಾಡಿಸುತ್ತಾನೆ. ತಾನು ಕೊಟ್ಟ ಭರವಸೆಯಿಂದ ತಿಮ್ಮ ಲಗ್ನವಾದವನು. ಆ ಗಂಡ ಹೆಂಡಿರನ್ನು ಸಂತೈಸುವುದು ತನ್ನ ಕರ್ತವ್ಯ ಎಂದು ಅವನಿಗೆ ತೋರುತಿತ್ತು. ಹಾಗಾಗಿ ಹೋದಾಗಲೆಲ್ಲ "ತಿಮ್ಮ, ನಾಲ್ಕು ದಿನ ಕಳೆದ ಮೇಲೆ ಎಲ್ಲವೂ ಸರಿಹೋಗುತ್ತೆ. ಜನ ಈ ದ್ವೇಷ ಮರೆತಾರು" ಎಂದು ಧೈರ್ಯ ಹೇಳುತ್ತಾನೆ. ಒಂದು ದಿನ ಅದಕ್ಕೆ ತಿಮ್ಮನೆಂದ "ನನಗೆ ಅದಲ್ಲ ಚಿಂತೆ. ಅವಳ ಯೋಚನೆಯೇ ಬಲವಾಗಿದೆ. ಅವಳು ಏನೇನೂ ಗೆಲವಾಗಿಲ್ಲ. ಬಂದಂದಿನಿಂದ ಮೈ ಚೆನ್ನಾಗಿಲ್ಲ, ಒಳಜ್ವರ ಅನ್ನುತ್ತಿದ್ದಾಳೆ" ಎಂದ.

ನಿತ್ಯವೂ ಮನೆಗೆ ಬಂದು ಹೋಗುತ್ತಿದ್ದ ಗುರಿಕಾರ ಕರಿಯನಲ್ಲಿ ಗಿಡ್ಡಿ ನಾಲ್ಕು ಮಾತನಾಡಿದರೆ ಆಡಬೇಕು. ಅಲ್ಲದೆ ತಿಮ್ಮಗೂ, ಕರಿಯಗೂ ಆಪ್ತತೆ ಇರುವುದರಿಂದ ತನ್ನ ಭೀತಿಗಳೇನಾದರೂ ಇದ್ದರೆ ಅವನಲ್ಲಿ ಹೇಳಬಹುದೇ —ಎಂಬ ಆಸೆ ಹುಟ್ಟಿಸುತಿತ್ತು. ಮದುವೆಯಾಗಿ ಬಂದ ತಿಂಗಳಲ್ಲೇ 'ತವರಿಗೆ ತಾನು ಹೋಗಿ ಬರಲೇ ಒಂದು ಹತ್ತು ದಿನಕ್ಕೆ' ಎಂಬ ಬಯಕೆ ತೋಡಿಕೊಂಡಳು ಗಂಡನೊಡನೆ.

"ಏನು ಕಡಿಮೆಯಾಗಿದೆ ನಿನಗಿಲ್ಲಿ? ಬೇಕಾದ ಮದ್ದು ಮಾಡಿಸುವ. ಅದಕ್ಕೇನಂತೆ" ಎಂದೂ ಮದ್ದು ಗಿದ್ದನ್ನು ಬೇಡಿ ತಂದ. ಅವಳದನ್ನು ಕುಡಿದಳೋ, ಬಿಟ್ಟಳೋ, ಅಂತೂ ಅವಳ ಸ್ಥಿತಿ ಮೊದಲಿನಂತೆಯೆ.

ತಿಂಗಳ ಸರೆ ಕಳೆಯಿತು. ಗಿಡ್ಡಿಯ ಮನಸ್ಸು ಮಾತ್ರ ಕಾತರಭರಿತವಾಗಿತ್ತು. ತಿಮ್ಮನ ಸ್ನೇಹ ಸಾಮೀಪ್ಯಗಳು ಅವಳಿಗೆ ಸಹಿಸುತ್ತಿರಲಿಲ್ಲ. ಪಾಲಿಗೆ ಬಂದ ಕಷ್ಟವನ್ನೂ, ಸುಖವನ್ನೂ ಅನುಭವಿಸುತ್ತೇನೆಂದು ಎದೆಗಟ್ಟಿಮಾಡಿಕೊಂಡು ಅವಳು ಬಾಳಿದರೂ, ಆ ಎದೆಯಲ್ಲಿ ನೋವಲ್ಲದೆ ಬೇರೇನೂ ತುಂಬಿರಲಿಲ್ಲ. ಕೆಂಪಿ ಆಡಿದ ಚುಚ್ಚು ನುಡಿ, ಕೇರಿಯವರು ಎತ್ತಿ ಹಾರಿಸಿದ ವಿನೋದದ ಚೆಂಡು, ಅವಳ ಅನುಮಾನವನ್ನು ಹೆಚ್ಚಿಸಿ, ಎದೆಯನ್ನು ಕೊರೆಯುತಿತ್ತು. ಮೂರು ನಾಲ್ಕು ತಿಂಗಳಿಂದ ಅವಳು ಹೊರಗೆ ಕುಳಿತಿರಲಿಲ್ಲ. ಈ ಕೇರಿಗೆ ಬಂದಮೇಲೆ ಅಪವಾದದಿಂದ ದೂರಾಗುವುದಕ್ಕೆ ಹೊರಗೆ ಕುಳಿತು ಬಂದಳು. ಇನ್ನು ಸಾವಕಾಶ ಮಾಡಿದರಾಗದು. ತವರಿಗೆ ಹೋಗಿ ತನ್ನ ದುರ್ದೈವಕ್ಕೆ ಚಿಕಿತ್ಸೆ ಪಡೆಯಬೇಕು—ಎಂಬ ಭೀತಿ ಅವಳದ್ದು. ತಿಮ್ಮ ಬೆಪ್ಪನಾದುದರಿಂದಲೋ ಏನೋ, ದೂರಿನ ಮಾತುಗಳನ್ನು ಕೇಳಿಯೂ ನಂಬಿರಲಿಲ್ಲ. ಆದರೆ ಗಿಡ್ಡಿಗೆ ಹಾಗಲ್ಲ. ದೇಹದ ಗಾತ್ರ ಬೆಳೆಯುತ್ತಿರುವುದನ್ನು ಕಂಡು, ಬೆದರಿ, ಮೇಲಿಂದಮೇಲೆ ತವರಿಗೆ ಹೋಗುವ ಹಟ ಹಿಡಿದಳು.

ಅವನ ಮನದಲ್ಲಿ ಗಿಡ್ಡಿ ತನ್ನನ್ನು ಒಲಿದಿಲ್ಲ—ಎಂಬ ನೋವು; ಅವಳ ಮನದಲ್ಲಿ ಗಂಡನಿಗೆ ತಾನು ತಿಳಿಸಲಾರದ ವಿಪತ್ತು ಒದಗಿದೆ—ಎಂಬ ನೋವು. ಇದರಿಂದ ಅವಳ ಮುಖವಂತು ತೀರ ಕಳೆಗುಂದಿತು. ಕಣ್ಣುಗಳು ಸದಾ ಭಯಗ್ರಸ್ತವಾದುವು ತಿಮ್ಮ ಕರಿಯನೊಡನೆ ಇದನ್ನೆಲ್ಲ ಕಂಡು

"ಏನೋ ಸೋಂಕು ಹಿಡಿದಿದೆ ಅವಳಿಗೆ. ತವರಿಗೆ ಕಳುಹಿಸು ಅನ್ನು ತ್ತಿದ್ದಾಳೆ. ಅವಳನ್ನು ಬಿಟ್ಟಿರಬೇಕೆಂದರೆ ಕಷ್ಟವಾಗುತ್ತದೆ. ಏನು ಮಾಡ ಬೇಕೆಂದೇ ಗೊತ್ತಾಗುವುದಿಲ್ಲ."

"ಕಳುಹಿಸು. ಚಿಕ್ಕವಳು, ತಾಯಿಮನೆ ಯೋಚನೆ ಬರುತ್ತಿರ ಬಹುದು."

"ಹಾಗಾದರೆ ನಾನೂ ಜತೆಗೆ ಹೋಗತ್ತೇನೆ. ತಿಂಗಳುದಿನವಾದರೂ ಅಲ್ಲಿರಬೇಕಂತೆ ಅವಳಿಗೆ. ನಾನೂ ಹೋಗಿರಲೇ? ಆದರೆ ಏಲಕ್ಕಿಯ ಶ್ರಾಯದಲ್ಲಿ ಬಿಟ್ಟು ಹೋದರೆ ಧನಿಗಳು ಸಿಟ್ಟಾದಾರು."

"ನಿಜ, ನಿಜ. ನೀನು ಹೋಗಬೇಕಾದ ಕೆಲಸವೇನು? ಬಿಟ್ಟುಬರು ವುದಕ್ಕೆ ಹೋಗಿ ಬಾ. ಅವಳು ಹುಷಾರಾಗಿ, ಗೆಲವಾದ ಮೇಲೆ ಕರೆದು ತಾ."

ಈ ಮಾತುಗಳೆಲ್ಲ ಗಿಡ್ಡಿಯ ಸಮ್ಮುಖದಲ್ಲೇ ನಡೆದುವು. ಬಹು ಹೊತ್ತಿನವರೆಗೆ ಚರ್ಚೆ ನಡೆಯಿತು. ಆದರೆ ಕರಿಯಣ್ಣ ಹೊರಟು ಹೋದ ಮೇಲೆ ತಿಮ್ಮನ ಮಾತಿನ ಸರಣಿ ಮೊದಲಿನಂತೆ ಆಯಿತು. ಹೆಂಡತಿಯನ್ನು ಗಳಿಗೆಯೂ ಬಿಟ್ಟಿರಲಾರದ ತಿಮ್ಮ "ನಾನೂ ಬರುತ್ತೇನೆ, ಹೋಗುವ. ಬಂದಿದ್ದರೆ ನಿನ್ನ ತಂದೆಗೆ ಸಿಟ್ಟಾಗದಷ್ಟೆ?" ಎಂದ ತಿಮ್ಮ. ಅದರಿಂದ ಗಿಡ್ಡಿ ಇನ್ನಷ್ಟು ಚಕಿತಳಾದಳು. ಸಾಲದುದಕ್ಕೆ ಆ ರಾತ್ರಿ ತಿಮ್ಮ "ಒಳಜ್ವರ ಅನ್ನುತ್ತೀ. ಚಳಿಜ್ವರವೋ ಏನೋ. ಹೊಟ್ಟೆಯೂ ಊದಿಕೊಂಡ ಹಾಗಿದೆ" ಎಂದುಬಿಟ್ಟ. ಆತನಾಡಿದ ಮಾತು ಅವಳ ಎದೆಯನ್ನೇ ತಿವಿಯಿತು. ಆದರೆ ತನ್ನ ಬದುಕಿನ ಭವಣೆಯನ್ನಾಗಲೀ, ಹರಿಹಂಚಾದ ತನ್ನ ಮನ ವನ್ನಾಗಲೀ, ಕಡು ಪ್ರೀತಿಯಿಂದ ತನ್ನನ್ನು ಮಾತನಾಡಿಸುವ ಗಂಡನ ಮುಂದೆಯೂ ತೋಡಿಕೊಳ್ಳಲಾರದೆ ಹೋದಳು.

ಒಂದೆರಡು ದಿನ ಕಳೆದುವು. ತಿಮ್ಮ ಗಟ್ಟಿ ಮನಸ್ಸು ಮಾಡಿ ಧನಿ ಗಳಲ್ಲಿಗೆ ಹೋಗಿ, "ಅಯ್ಯ, ನನ್ನವಳಿಗೆ ಮೈ ಚೆನ್ನಾಗಿಲ್ಲ. ಅವಳ ಉಪ ಚಾರಕ್ಕೆ ಇಲ್ಲಿ ಯಾರೂ ಇಲ್ಲ. ತವರಿಗೆ ಕರೆದುಕೊಂಡು ಹೋಗಿ ಬಿಟ್ಟು ಬರಬೇಕೆಂದಿದೆ. ಮದ್ದು ಗಿದ್ದು ಮಾಡಿಸಲು ನಾಲ್ಕು ದಿನ ನಿಲ್ಲಬೇಕಾದರೂ ನಿಲ್ಲಬೇಕಾದೀತು" ಎಂದು ಸೂಟಿಯನ್ನು ಬೇಡಿಕೊಂಡು ಬಂದ. ಆ ಶುಭ ವಾರ್ತೆಯನ್ನು ಅವಳಿಗೆ ಸಲ್ಲಿಸಿ, "ಇನ್ನೇನು ಹೆದರಿಕೆಯಿಲ್ಲ. ಧನಿಗಳಿಗೂ

ಹೇಳಿದ್ದೇನೆ, ಬರಲು ನಾಲ್ಕು ದಿನ ತಡವಾದೀತೆಂದು. ಇಂದು ಮಧ್ಯಾಹ್ನವೇ ಹೊರಡುವ" ಎಂದ. "ಇಂದು ವಾರ ಯಾವುದು?" ಎಂದಳು ಅವಳು. "ಶನಿವಾರ, ಚೆನ್ನಾಗಿಲ್ಲ ಬೇಡ. ನಾಡಿದ್ದು ಹೋಗುವ. ಹೇಗೂ ಇಷ್ಟು ದಿನ ಕಳೆದಾಯಿತು" ಎಂದು ಹೊರಡುವ ದಿನ ಬದಲಾಯಿಸಿದಳು. ತಿಮ್ಮ ಒಪ್ಪಿಕೊಂಡ. ಆಕೆ ದಿನ ಬದಲಿಸಿದ್ದು ವಾರ ಚೆನ್ನಾಗಿಲ್ಲದ್ದಕ್ಕೆ ಅಲ್ಲ; ತನ್ನ ಭವಿಷ್ಯವನ್ನು ಕುರಿತು ಅನುಮಾನಿಸಿ!

ಪಾಪದ ಗಿಡ್ಡಿಗೆ ಈ ಕುತ್ತಿನಿಂದ ಪಾರಾಗುವ ದಾರಿ ಕಾಣಿಸಲಿಲ್ಲ ಅವಳ ಮುಂದಿನ ಭವಿಷ್ಯವೆಲ್ಲ ಭಯಭೀತಿಗಳಿಂದ ತುಂಬಿದೆ ತನ್ನ ಅಂತರಂಗದ ನೋವನ್ನು ಹೇಳಲು, ಯಾರನ್ನೂ ನಂಬಲಾರಳು ಅವಳು. ಕೊನೆಗೆ ಯೋಚಿಸಿ, ಯೋಚಿಸಿ ಪಡೆದ ಹೆಸರು ಕರಿಯಣ್ಣನನು. ಕೇರಿಯುವರ ದೂರಿನ ಮಾತುಗಳನ್ನು ಕೇಳಿಯೂ ತಮ್ಮ ಮೇಲೆ ಕೃಪೆ, ಕರುಣೆ ತೋರಿದವ ಅವನೊಬ್ಬನೆ. ಅವನಿಗೇ ಶರಣು ಹೋಗುತ್ತೇನೆ—ಎಂದು ಯೋಚಿಸಿದಳು. ಕರಿಯಣ್ಣ ಒಬ್ಬನೇ ಮನೆಗೆ ಬಂದ ವೇಳೆ ಸಾಧಿಸಿ, ನೆಟ್ಟಗೆ ಅಪನ ಕಾಲುಗಳನ್ನು ಹಿಡಿದು ಕಂಬನಿಗರೆಯತೊಡಗಿದಳು. ಕರಿಯುಗೆ ದಿಗಿಲಾಯಿತು ಏನು ಸಂಗತಿಯೆಂದೇ ಆತ ಊಹಿಸಲಾರ. ಹಾಗಾಗಿ "ಯಾಕೆ ಹೀಗೆ ಮಾಡುತ್ತೀ ಗಿಡ್ಡಿ, ತಿಮ್ಮ ಬೈದನೇ" ಎಂದು ಕೇಳಿದ.

"ಬೈದಿಲ್ಲ; ಬೈಯುವವರೂ ಅಲ್ಲ. ಅವರ ಮೇಲೆ ದೂರಿಲ್ಲ. ನಾನು ಪಾಪಿಯಾದರೆ ಯಾರು ಏನು ಮಾಡಿಯಾರು" ಎಂದು ಮತ್ತೂ ಮತ್ತು ಅತ್ತಳು, 'ಏನು ಏಕೆ?' ಎಂದು ಕರಿಯ ಪ್ರಶ್ನಿಸುತ್ತಲೇ ಇದ್ದ.

"ನೀವು ಗುರಿಕಾರರು—ನನ್ನ ಜೀವ, ಮಾನ ನಿಮ್ಮ ಕೈಯಲ್ಲಿದೆ. ಪಾರು ಮಾಡಿದರೆ ನೀವು ಮಾಡಬೇಕು. ಇಲ್ಲವಾದರೆ ನಾನಿಲ್ಲ" ಎಂದಳು. ಕರಿಯನ ಎಳೆಯ ಅನಾನುಭವಿಕ ಮನಸ್ಸಿಗೆ ಈ ಮಾತಿನ ಗೂಢ ಒಂದೂ ಹೊಳೆಯದೆ ಹೋಯಿತು.

"ಏನು? ಏನು?" ಎಂದು ಕೇಳಿದ.

"ಆಣೆ ಮಾಡಿ ಭರವಸೆ ಕೊಡಬೇಕು. ನೀವೇ ನನಗೆ ಗತಿ. ನಾನೂ ಒಂದು ಜೀವ; ಬದುಕಲಿ—ಪಾಪ, ಎಂದಿದ್ದರೆ" ಎನ್ನುತ್ತಾಳೆ ಅವಳು.

ಅಷ್ಟು ಧೈರ್ಯ ಕರಿಯ ಕೊಟ್ಟ ಬಳಿಕ ಆಕೆ "ಆಚೀಚೆ ಯಾರಿಲ್ಲ

ವಷ್ಟೆ" ಎಂದು ಹೇಳಿದ್ದಕ್ಕೆ, ಕರಿಯ ಹೊರಗೆ ಹೋಗಿ ಯಾರೂ ಇಲ್ಲವೆಂದು ನೋಡಿಕೊಂಡ ಬಂದ. ಈ ರಹಸ್ಯವೇನೆಂದು ತಿಳಿಯದ ಅವನ ಮುಂದೆ ಗಿಡ್ಡಿ ಅಳುತ್ತಾ "ನಾನು ಗರ್ಭಿಣಿ" ಎಂದಳು.

"ಅದಕ್ಕೇಕೆ ಹೆದರಿಕೆ" ಎಂದ ಕರಿಯ.

ಆಗ ಅವಳು ತನ್ನ ಹಳೆಯ ಬಾಳಿನ ಕೆಟ್ಟ ಕತೆ ಹೇಳಿದಳು. "ಅವರು ಬರುವುದು ಬೇಡ. ನಾನು ಈ ನಾಚಿಕೆ ಕಟ್ಟಿಕೊಂಡು ಕೇರಿಗೆ ಹೋಗಬೇಕಾಗಿದೆ. ಮದುವೆಯಾದ ಅವರೇ ಜತೆಗೆ ಬಂದರೆ ನಾನೇನು ಮಾಡಬಲ್ಲೆ. ನನ್ನ ಮರ್ಯಾದೆ ಕಾಪಾಡಿಕೊಳ್ಳುವ ದಾರಿ ಕಾಣಬೇಡವೇ? ಅವರಿಗೆ ನಾನು ಹೇಗೆ ಹೇಳಲಿ? ಮುಂದೆ ಹೇಗೆ ಬದುಕಲಿ?"

"ನಾನೇನು ಮಾಡಬೇಕನ್ನುತ್ತೀ ನೀನು?" ಎಂದ ಕರಿಯ ದಾರಿಗಾಣದೆ.

"ಏನೂ ಬೇಡ. ಅವರನ್ನು ತಡೆಯಿರಿ. ಅವರು ಬರುವುದು ಬೇಡ. ನಾನು ಹೋಗಿ ಅಮ್ಮನ ಕಾಲಿಗೆ ಬಿದ್ದು ನನ್ನ ಗೋಳು ತೋಡಿಕೊಳ್ಳುತ್ತೇನೆ. ಪಾರಾದರೆ ಹಿಂದೆ ಬರುತ್ತೇನೆ. ಇಲ್ಲವಾದರೆ ಇಲ್ಲ."

"ಅಷ್ಟು ಮಾಡಿದರೆ ಸಾಕೇ?"

"ಸಾಕು."

ಕರಿಯ ಆ ದಿನ, ಮರುದಿನವೆಲ್ಲ ತಿಮ್ಮನಿಗೆ ಎಷ್ಟೆಷ್ಟೋ ಹೇಳಿದ. "ನೀನು ಅವಳನ್ನು ಕಳುಹಿಸಿಬಿಟ್ಟು ಬಾ ಅವಳ ಜತೆಗೇ ಅಲ್ಲಿ ಹೋಗಿ ಕೂತರೆ ಕೇರಿಯವರು ಮತ್ತಷ್ಟು ನಕ್ಕಾರು. ಅದಕ್ಕೆ ಹೆಣ್ಣು ಕಾಣದೆ ಹುಚ್ಚು ಹಿಡಿದಿದೆ—ಎಂದಾರು. ಹೋಗು, ಹೋದ ದಿನವೇ ಬಾ" ಎಂದು ಬೋಧಿಸಿದ. ಗಿಡ್ಡಿಯ ಚಿಂತೆ ಅರ್ಧಕ್ಕರ್ಧ ಕಡಿಮೆಯಾಗಿ ಅವಳು ತವರನ್ನು ಸೇರಿದಳು. ಕರಿಯನ ಚಿಂತೆ ಮಾತ್ರ ಹೆಚ್ಚಿತು.

ಈ ವಿಚಾರದ ಸೂಚನೆಯನ್ನು ತಿಮ್ಮನಿಗೆ ಕೊಡಲೇ, ಬಿಡಲೇ ಎಂಬ ಅನುಮಾನ. ಕೊಟ್ಟು ಅವನ ಮನಸ್ಸು ಕೆಟ್ಟಿತೆಂದರೆ, ಗಿಡ್ಡಿಯನ್ನು ನಡು ನೀರಲ್ಲಿ ಬಿಟ್ಟಂತಾದೀತು—ಎಂಬ ಭಯವಾಯಿತು. ಹೇಳದೆ ಹೋದರೋ ಆಕೆ ತವರಿಗೆ ಹೋಗಿ ತಿಂಗಳು ತುಂಬಿ, ಹಡೆದಳೆಂದರೆ ಆಗ ತನ್ನ ಗೆಳೆಯನ ಮತ್ತು ಗಿಡ್ಡಿಯ ಮರ್ಯಾದೆ ಉಳಿಯುವುದು ಕಷ್ಟ. ಆ ಲಗ್ನವನ್ನು ಹರಸಿದ, ತನ್ನ ಮಾನಕ್ಕೂ ಕುಂದು—ಎಂಬ ಭೀತಿಗೆ ಒಳಗಾದ.

ಗಿಡ್ಡಿ ತವರಿಗೆ ಹೋದ ಆ ಒಂದು ತಿಂಗಳಕಾಲ ತಿಮ್ಮ ಉನ್ಮತ್ತವಿರಹಿಯಾಗಿದ್ದ. ಅವನ ಕೆಲಸವೆಲ್ಲ ಏನೇನೊ. ಬೇಟೆಯಲ್ಲೂ ಉತ್ಸಾಹವಿಲ್ಲ, ಕೆಲಸದಲ್ಲಂತು ಮೊದಲೇ ಹುಮ್ಮಸವಿಲ್ಲ. ಕರಿಯ ಅವನ ಬಳಿಯಲ್ಲಿದ್ದು ಹುರುಪಿನ ನಾಲ್ಕು ಮಾತುಗಳನ್ನಾಡುತ್ತಿದ್ದರೂ, ಯಾವೊಂದು ಪ್ರಯೋಜನವಾಗದೆ ಹೋಯಿತು. ತಿಂಗಳಿಗೆ ದಿನಗಳೆಷ್ಟು—ಎಂದು ಎಣಿಕೆ ಹಾಕುತ್ತಲಿದ್ದ ತಿಮ್ಮ. ತಿಂಗಳೆಂದರೆ ತಿಂಗಳೇ. ಮೂವತ್ತನೆಯ ದಿನಕ್ಕೆ ಹಿರಿ ಮಲೆಗೆ ಹೊರಟ. ಅದನ್ನು ಕಂಡ ಕರಿಯ ಅವನನ್ನು ತಡೆಯಲು ಎಲ್ಲಿಲ್ಲದ ಉಪಾಯ ಹೂಡಿದ. "ನಾಡಿದ್ದು ಹೋಗುವ. ನನಗೂ ಆ ಮಲೆ ನೋಡುವ ಆಸೆಯಿದೆ. ಧನಿಯರು ಸೀಗೆಕಾಯಿ ಒಟ್ಟು ಮಾಡಲು ಹೇಳಿದ್ದಾರೆ. ಆ ಕೆಲಸ ಮುಗಿಸಬೇಕಲ್ಲ. ಮೊದಲೇ ಹೊರಟರೆ ಹೇಗೆ?" ಎಂದ.

ಧನಿಯರು ಹೇಳದಿದ್ದರೂ, ವಾಡಿಕೆಯಂತೆ ಸೀಗೆಕಾಯಿ ಒಟ್ಟು ಮಾಡುವುದಕ್ಕೆ ತಿಮ್ಮನನ್ನು ಕಟ್ಟಿಕೊಂಡು ಅಲೆದಾಡಿದ. ಅವನಿಗಿಷ್ಟು ಶರೀರ ಶ್ರಮ ಕೊಟ್ಟ; ತಾನೂ ದಣಿದ ಕೊನೆಗೊಂದು ರಾತ್ರಿ ಸೂಟಿ ಹಿಡಿದುಕೊಂಡು ತಾನೊಬ್ಬನೇ ಹಿರಿ ಮಲೆಗೆ ಪಯಣ ಮಾಡಿದ. ಚೋಮನ ಮನೆಗೆ ಹೋಗಿ ಗಿಡ್ಡಿಯನ್ನು ಕಂಡು ಮಾತನಾಡಿಸುವ ತನಕ ಅವನಿಗೆ ಧೈರ್ಯದ ತುಣುಕೂ ಇದ್ದಿರಲಿಲ್ಲ.

ಹೋಗಿ "ಹೇಗಿದ್ದೀಯಾ?" ಎಂದು ಗಿಡ್ಡಿಯನ್ನು ಕೇಳಿದ.

"ಹುಶಾರಿದ್ದೇನೆ ಅಣ್ಣ" ಎಂದು ತಲೆತಗ್ಗಿಸಿ ನುಡಿದಳು ಅವಳು.

"ಮುಂದಲ ವಾರಕ್ಕೆ ಬರುತ್ತಾಳೆ" ಎಂದಳು ಅವಳ ತಾಯಿ.

ಕರಿಯನಿಗೆ ಧೈರ್ಯ, ಸಂತೋಷ ಎರಡೂ ಆಯಿತು. ತನ್ನ ಕೇರಿಯ ಕಡೆಗೆ ಹೊರಟ. ಚೋಮನ ಮನೆಯಲ್ಲಿ ಬರಿಯ ವೀಳೆಯವನ್ನಷ್ಟೆ ತಿಂದು ಕೇರಿಗೆ ಧಾವಿಸಿದ. ಹಿರಿ ಮಲೆಯ ಕೇರಿ ಕಳೆದು, ನಾಲ್ಕು ಹೆಜ್ಜೆ ಹೋದಾಗ ಗಿಡ್ಡಿ ಅವನಿಗಾಗಿ ದಾರಿಯಲ್ಲಿ ಕಾದು ನಿಂತಿದ್ದಳು. "ಅಣ್ಣ, ನಿನ್ನ ಉಪಕಾರ ಎಂದೂ ಮರೆಯಲಾರೆ. ಒಂದು ಸಾರಿಗೆ ಪಾರಾದೆ. ಇನ್ನೆಂದೂ ಹೀಗೆ ಹೊಂಡದಲ್ಲಿ ಬೀಳಲಾರೆ" ಎಂದು ನುಡಿದಳು. ಅವಳ ಕಣ್ಣುಗಳಿಂದ ಕೃತಜ್ಞತೆಯ ಮಳೆ ಸುರಿಯುತ್ತಿದ್ದಿತು.

ಕರಿಯನ ಎಳೆಯ ಮನಸ್ಸು ಸಂತೋಷಗೊಂಡಿತು. ತಾನೊಂದು

ಬದುಕನ್ನು ಕಾಪಾಡಿತೆ—ಎಂಬ ಹರ್ಷವೂ ಅವನಿಗುಂಟಾಯಿತು. ಜತೆಯಲ್ಲಿ ಗಿಡ್ಡಿ ಹೇಗೆ ಪಾರಾದಳು—ಎಂಬ ಕುತೂಹಲ ಉಂಟಾಗದರಲಿಲ್ಲ. ಒಂದು ದಿನ ಅವಳೇ ಹೇಳಿಯಾಳು—ಎಂದಂದುಕೊಂಡು ಹೊತ್ತೇರುವುದರೊಳಗಾಗಿ ತನ್ನ ಮಲೆಯನ್ನು ಸೇರಿದ. ಆ ದಿನವೂ ಸೀಗೆಕಾಯಿ ಒಟ್ಟು ಮಾಡುವ ಕೆಲಸ ಸಾಗಿಯೇ ಸಾಗಿತು. ಕೆಲಸದಲ್ಲಿ ಬೇಸರ ಬಂದ ತಿಮ್ಮ "ಏನಣ್ಣ, ಇದು ಮನೆ ಉಪಯೋಗಕ್ಕೋ, ಮಾರಾಟಕ್ಕೋ" ಎಂದೂ ಅಂದ. ಕರಿಯ "ಯಾವ ಮಣ್ಣಿಗೊ. ಸಾಕಾದರೆ ಸಾಕು, ಬಿಡು" ಎಂದು ಕೆಲಸ ಮುಗಿಸಿ, ಕೊಯ್ದ ಸೀಗೆಯನ್ನು ಧನಿಗಳ ಮನೆಗೆ ಹಾಕಿ, ಹಿಂದಕ್ಕೆ ಬರುವಾಗ ಗೆಳೆಯನೊಡನೆ "ನಾಳೆ ಹೋಗುವುದಾದರೆ ಹೋಗು—ಮಾವನ ಮನೆಗೆ" ಎಂದ.

"ನೀನು ಬರುವುದಿಲ್ಲವೆ?"

"ಬೇಡ ಮಹಾರಾಯ. ನಾಳೆ ಕೇರಿಯವರು—ಏನು ಈ ಕರಿಯ ಆ ಗಂಡಹೆಂಡಿರನ್ನು ತಲೆಯ ಮೇಲೆ ಕೂಡ್ರಿಸಿಕೊಂಡಿದ್ದಾನೆ—ಎಂದರೆ! ಈಗಲೇ ಅನ್ನುತ್ತಿದ್ದಾರೆ" ಎಂದು ತನ್ನ ಪ್ರಯಾಣವನ್ನು ತಪ್ಪಿಸಿಕೊಂಡ.

ತಿಮ್ಮ, ಕ್ರಿರಿ ಮಲೆಗೆ ಹೋದ. ಮಾವನ ಮನೆಯಲ್ಲಿ ನಾಲ್ಕಾರು ದಿನ ಕುಳಿತು, ಬೇಕಷ್ಟು ಸನ್ಮಾನ ಮಾಡಿಸಿಕೊಂಡು, ಗಿಡ್ಡಿಯನ್ನು ಕರೆದು ತಂದ. ಈ ಬಾರಿ ಅವನಲ್ಲಿ ಉತ್ಸಾಹ ನಿಜಕ್ಕೂ ತುಂಬಿಕೊಂಡಿತ್ತು. ಮನೆಗೆ ಬಂದರೆ—ಮನೆಯ ಒಲೆಯಿಂದ ಸೂಸುತಿದ್ದ ಬೆಳಕಿಗಿಂತ ಹೆಚ್ಚಿನ ಬೆಳಕು ಗಿಡ್ಡಿಯ ಹಲ್ಲು, ಮುಖಗಳಲ್ಲಿ ಕಾಣುತ್ತದೆ—ಎನ್ನತೊಡಗಿದ. 'ಗಿಡ್ಡಿಯ ತವರಿನ ಚಿಂತೆ ಹೋದ ಹಾಗೆಯೇ. ತುಂಬ ಗೆಲವಾಗಿದ್ದಾಳೆ' ಎಂದು ತಿಮ್ಮ ಕರಿಯನ ಮುಂದೆಯೂ ಹೇಳಿದ. ಗಿಡ್ಡಿಯಲ್ಲಿ ಲಘುತನ ಪ್ರಾಪ್ತಿಸಿ, ಹೊಸ ಬಾಳಿನಲ್ಲಿ ಬೆರೆಯುವ ಆತುರ ಹೆಚ್ಚಾದುದು, ತಿಮ್ಮನ ಒಂದೊಂದು ಮಾತು, ಒಂದೊಂದು ಭಂಗಿಯಲ್ಲಿಯೂ ವ್ಯಕ್ತವಾಗುತಿತ್ತು.

## ಅಧ್ಯಾಯ ೧೩

ಕಿರಿ ಮಲೆಯ ಬೆಟ್ಟಗಳ ಮೇಲೆ ಬೆಳ್ಮುಗಿಲು ನಲಿದಾಡುತ್ತಿರಲಿ, ಬಾನು ಬರಿದಾಗಿರಲಿ, ಇಲ್ಲವೇ ಕಾರ್ಮೋಡಗಳು ದಟ್ಟಣಿಸಿ, ವಿರಾಟರೂಪ

ವನ್ನು ತೋರಿಸುತ್ತಿರಲಿ— ಎಲ್ಲವೂ ಒಂದೇ ಪರಿಣಾಮವನ್ನುಂಟು ಮಾಡು ವಂತಾಯಿತು—ತಿಮ್ಮನ ಸಂಸಾರಿಕ ಬಾಳಿನಲ್ಲಿ. ಈಗೀಗ ಆತ ಕೇರಿಯ ನಂಜನ್ನು ಸಹಿಸಲಾರದವನಾಗಿ, ಅವನಿಗೆ ತನ್ನವರ ಸಹವಾಸವೇ ಬೇಡವಾ ಗಿದೆ. ಮದುವೆಯಾಗುವ ತನಕ ಆತ ಇದಕ್ಕಿಂತ ಎಷ್ಟೋ ಸುಖಿಯಾಗಿದ್ದ ನೆನ್ನಬಹುದು. ಒರಟುತನಕ್ಕೆ ಸಮನಾದ ದರ್ಪವಿತ್ತು. ಬಾಳಿಯೇನು, ಬದುಕಿಯೇನು, ಎಲ್ಲರಂತೆ ಸಂಸಾರ ಮಾಡಿಕೊಂಡು ಸುಖಿಸಿಯೇನು ಎಂಬ ಕೆಚ್ಚೂ ಅವನಲ್ಲಿತ್ತು. ತನ್ನನ್ನೊಲಿದು ಬರುವ ಪ್ರೇಯಸಿ ಇಲ್ಲವೆಂದಿಷ್ಟೇ ಕೊರಗು ನಟ್ಟಿತ್ತು ಮನದಲ್ಲಿ. ಅದರಿಂದ ಹುಳಿಗೊಂಡಿತ್ತು ಮನಸ್ಸು. ಆದರೂ ನಿತ್ಯದ ಬೇಟೆ, ದುಡಿಮೆ, ಆಟಗಳಲ್ಲಿ ಈತ ಉಳಿದವರಿಗೆ ಕಡಿಮೆ ಯಾಗದಂತೆ ನಡೆಯುತ್ತಿದ್ದ. ತನ್ನ ನೋವನ್ನೆಲ್ಲ ಸಹಿಸಿಕೊಂಡು, ಮದುವೆ ಯಾಗಿ ಬಂದನೆಂದರೆ, ತನ್ನ ಬಾಳೆಲ್ಲ ಸ್ವರ್ಗಸುಖದಲ್ಲಿ ತುಂಬಿಹೋಗುತ್ತದೆ— ಎಂದೆಣಿಸಿಕೊಂಡಿದ್ದ. ಅವನ ಆ ಆಸೆಗಳೆಲ್ಲ ಮದುವೆಯಾಗಿ ಬಂದಂದಿ ನಿಂದಲೆ ಮೂಲೆಪಾಲಾದುವು. ಗಿಡ್ಡಿ ತವರುಮನೆಗೆ ಹೋಗಿ, ಎರಡನೆಯ ಬಾರಿ ಬರುವಾಗ ಗೆಲು ಮುಖದಿಂದ ಬಂದಿದ್ದಳು. ಅವನ ಒಲುಮೆ, ಆದರ ಗಳಿಗೆ ಪ್ರತಿಯಾಗಿ, ನಗುವಿನ ಕಾಣಿಕೆ ಸಲ್ಲಿಸಲು ಶಕ್ತಳಾಗಿಯೇ ಬಂದಿ ದ್ದಳು. ಮನಸ್ಸಿನ ತಾಪ, ಪ್ರೇಮದ ಹರಿಹಂಚಾಟ ಯಾವ ಬಗೆಯಲ್ಲಿ ದ್ದರೂ ಒಂದೇ ಒಂದು ಕಟು ನುಡಿಯನ್ನಾಗಲೀ, ಬಿರುಸಿನ ಮಾತನ್ನಾಗಲೀ ತನ್ನ ವಿಷಯದಲ್ಲಿ ಆಡದೆ—ತನ್ನನ್ನೇ ನೆಚ್ಚಿ ಬದುಕಿನ ಸ್ವರ್ಗ ನಿಂತಿದೆ— ಎಂದು ವರ್ತಿಸುತ್ತಿರುವ ತಿಮ್ಮನ ಮೇಲೆ, ಪ್ರತಿ ಮಮತೆ ಸಲ್ಲಿಸುವುದಕ್ಕೂ ಕಲಿತುಕೊಂಡಳು. ಆದರೇನು ? ಆ ಪ್ರೇಮ, ನಗುಗಳನ್ನೆಲ್ಲ ತನ್ನ ಗುಡಿ ಸಲಿನ ಒಳಗೇನೆ ತುಂಬಿಸಿಡಬೇಕಿತ್ತು—ಅವಳು. ಮನೆಯ ಹೊರಗೆ, ಇತರ ದಂಪತಿಗಳಂತೆ ನಲಿದಾಡುವ ದಿಟ್ಟತನ ಬಾರದಾಯಿತು, ಅವಳ ಪಾಲಿಗೆ. ತನ್ನ ಪೂರ್ವ ಪ್ರಣಯದ ಫಲ, ತನ್ನನ್ನು ಸಮಾಜದ ದೃಷ್ಟಿಯಲ್ಲಿ ಕೀಳಾ ಗಿಸಿ, ತನ್ನನ್ನೂ, ತನ್ನ ಗಂಡನನ್ನೂ ಇತರರ ದೃಷ್ಟಿಯಲ್ಲಿ ಕಡಿಮೆಯಾಗಿ ಮಾಡೀತೆಂದು ಅವಳು ಎಣಿಸಿರಲಿಲ್ಲ. ಇತರರಾರೂ ಅವರ ಮನೆಗೆ ಬಂದು ಹೋಗದಿದ್ದರೂ, ಗುರಿಕಾರ ಕರಿಯ ಬಂದುಹೋಗುತ್ತಾನೆ. ಆತ ತನ್ನ ಸಹಾನುಭೂತಿಯನ್ನು ವ್ಯಕ್ತಪಡಿಸುತ್ತಾನೆ. "ಆಡುವವರಾಡಲಿ; ಅವರ

ನಾಲಿಗೆಗೆ ಸುಂಕ ಉಂಟೇ ? ನೀನೇಕೆ ಅದನ್ನೆಲ್ಲ ಮೈಮೇಲೆ ಹಾಕಿಕೊಳ್ಳು ತ್ತೀಯಾ ? ನಾಲ್ಕು ದಿನ ಕಳೆದರೆ ಎಲ್ಲ ಮರೆತು ಬಿಡುತ್ತಾರೆ" ಎನ್ನುತ್ತಿದ್ದ ಕರಿಯ. ಅವರಿಬ್ಬರೂ 'ಜನ ಮರೆತಾರು, ತಾವು ಇತರರನ್ನು ನೋಯಿಸ ದಿದ್ದರೆ ನಾಳೆಗಾದರೂ ತಮ್ಮೊಡನೆ ಕೂಡಿ ಬೆರೆತಾರು' ಎಂದೂ ನಂಬಿದರು.

ಗಿಡ್ಡಿ, ತನ್ನ ಹೊಟ್ಟೆಯ ಭವಣೆ ಕಳೆದುಕೊಂಡು, ಮುಖದ ಕಾಂತಿ ಯನ್ನು ತುಸು ಕಳೆದುಕೊಂಡರೂ, ತವರುಮನೆಯ ವಿಶ್ರಾಂತಿದಿನಗಳನ್ನು ಕಡಿಮೆ ಮಾಡಿ, ಉಲ್ಲಾಸಪೂರಿತಳಾಗಿಯೇ ಗಂಡನ ಮನೆಗೆ ಮರಳಿದಳು. ಮರಳಿದ ಮೇಲೆ—ಅವರ ಮಲೆಯಲ್ಲಿ ಅವರಿಗೆ ನಗುವಿನ ಸ್ವಾಗತವನ್ನು ಒಡ್ಡಿದವರೆಂದರೆ—ಕರಿಯನೊಬ್ಬನೇ ಉಳಿದವರು ತಿಮ್ಮನೊಡನೆ ಹೆಚ್ಚು ಕಡಿಮೆ ಮಾತುಕತೆ ಬಿಟ್ಟವರಂತೆ ನಟಿಸುತ್ತಿದ್ದರು. ಅದು ಅವನಿಗೂ ತಿಳಿ ಯುತಿತ್ತು. "ಕರಿಯಣ್ಣ, ನೀನೊಬ್ಬನಾದರೂ ಇದ್ದೀಯಲ್ಲ—ಈ ತಿಮ್ಮ ನೊಬ್ಬ ಮನುಷ್ಯನೆಂದು ತಿಳಿಯುವುದಕ್ಕೆ" ಎನ್ನುತ್ತಿದ್ದ ಆತ. ಆದರೆ ಗಿಡ್ಡಿಯ ಜೀವನ ಮಾತ್ರಷ್ಟು ಕಷ್ಟವಾಯಿತು. ಅವಳ ಸ್ತ್ರೀಪ್ರಪಂಚದ ಬಾಳು, ತೀರ ಒಂಟಿ ಜೀವನವಾಯಿತು. ಕಟ್ಟೆಗೆ ತಲು ಹೋಗಲಿ, ಸೀರೆಗೆ ಹೋಗಲಿ, ಮತ್ತಿನ್ನೇನು ಕೆಲಸಕ್ಕೇ ಹೋಗಲಿ, ತಲೆ ತಗ್ಗಿಸಿ ಹೋಗ ಬೇಕಿತ್ತು ಅವಳು ಸ್ನೇಹದಿಂದ ಮಾತನಾಡುವ ವ್ಯಕ್ತಿಗಳು ಇಲ್ಲದಿದ್ದರೂ ಅವಳಿಗೆ ಬೇಸರವಿರಲಿಲ್ಲ. ಆಚೀಚೆ ಇದ್ದೂ, ಇಲ್ಲದವರಂತೆ ನಟಿಸಿದರೂ, ಅವಳನ್ನುದ್ದೇಶಿಸಿದ ವಾಗ್ಬಾಣಗಳನ್ನು ಎಸೆಯುತ್ತಲಿರುವ ಜನರ ಮುಂದೆ, ಅವಳ ಎದೆ ನಡುಗಬೇಕಾದದ್ದು ಅನಿವಾರ್ಯವಾಯಿತು. ಇಂಥ ಮಾತು ಗಳ ಮೊನೆಗಳಿಂದ ಅವಳನ್ನು ಸದಾ ಚುಚ್ಚುತ್ತಿರುವ ವ್ಯಕ್ತಿಗಳಲ್ಲಿ ಕೆಂಪಿ ಅಗ್ರಗಣ್ಯಳಾಗಬೇಕೇ! ಎಷ್ಟೋ ಬಾರಿ ಗಿಡ್ಡಿ, ಅಂಥ ನಂಜಿನ ಮಾತು ಗಳನ್ನು ತನ್ನಲ್ಲೇ ಬಚ್ಚಿಟ್ಟುಕೊಂಡು, ಅದರ ನೋವನ್ನೆಲ್ಲ ನುಂಗುತ್ತಿದ್ದಳು. ಅದು ತೀರ ಅಸಹನೀಯವಾದಾಗ, ಕರಿಯಣ್ಣನನ್ನು ಕಂಡು "ನಾನು ಈ ನೋವನ್ನೆಲ್ಲ ನುಂಗಿಕೊಂಡು ಹೇಗೆ ಬಾಳಿಯೇನು ?" ಎಂದು ಅನ್ನುತ್ತಿ ದ್ದಳು. ಕರಿಯ ಯಾವುದಕ್ಕೂ ಹೇಳುವ ಸಮಾಧಾನ ಒಂದೇ ಬಗೆ ಯಾಗಿತ್ತು—"ಹೋಗಲಿ ಗಿಡ್ಡಿ, ಅನ್ನುವವರನ್ನಲಿ, ಬೇರೆಯವರ ಮಾತನ್ನು ಕಟ್ಟಿಕೊಂಡು ಏನು ಮಾಡುತ್ತೀಯಾ ? ತಿಮ್ಮಣ್ಣ ಹೆಚ್ಚುಕಡಿಮೆ ಅಂದರೆ

ಒಂದು ಲೆಕ್ಕ. ಅವನು ಚೆನ್ನಾಗಿ ನೋಡುತ್ತಾನಲ್ಲ ನಿನ್ನನ್ನು" ಎಂದು ಸಮಾಧಾನ ಹೇಳುವ. "ಅವರೇ? ಅವರ ಪ್ರೀತಿ ದೇವರಿಗೆ ಸಮಾನವಾದುದು. ನನ್ನ ಯೋಗ್ಯತೆಗೆ ಮೀರಿ ನನ್ನನ್ನು ಪ್ರೀತಿಸುತ್ತಿದ್ದಾರೆ. ಆದರೂ ಕಿವಿಗೆ ಮೇಣ ಮುಚ್ಚಿಕೊಂಡು, ಈ ಕೇರಿಯಲ್ಲಿ ಎಷ್ಟು ದಿನ ಬಾಳಿಯೇವು?" ಎನ್ನುತ್ತಾಳೆ ಅವಳು.

ಈ ದಂಪತಿಗಳ ದುಃಖಮಯ ಜೀವನಕ್ಕೆ ಕೆಂಪಿ ಪ್ರಧಾನಕಾರಣಳೆಂದರೂ ಅನ್ನಬಹುದು. ಸದಾ ತುರಿಸುವ ನಾಲಿಗೆ ಅವಳದ್ದು. ಏನಾದರೂ ಯಾವ ವಿಷಯದಲ್ಲಾರೂ ಅನ್ನುತ್ತಲೇ ಇರಬೇಕು. ತನ್ನ ವಿಷಯದಲ್ಲೇ ಜನ ಹಿಂದೆ ಏನಂದಿದ್ದರು, ಒಡೆಯರ ಮನೆಯ ಚಾಕರಿಯಲ್ಲಿದ್ದಾಗ ಏನಂದಿದ್ದರು—ಎಂಬುದರ ಗೊಡವೆ ಅವಳಿಗಿಲ್ಲ. ಯಾಕೋ, ಗಿಡ್ಡಿಯ ವಿಚಾರದಲ್ಲಿ ಅವಳಿಗಷ್ಟು ಅಸೂಯೆ; ತಿಮ್ಮನ ವಿಚಾರದಲ್ಲಿ ಅಷ್ಟು ತಾತ್ಸಾರ. ತಿಮ್ಮನ ಪ್ರತಿಯೊಂದು ಒಲುಮೆಯ ನೋಟವನ್ನೂ ನಕ್ಕು ಮೂದಲಿಸಿದವಳವಳು. ಆತನೂ, ಸುದ್ದಿಗೆ ಬಾಯಿ ತೆರದದ್ದಾದರೆ, ತನ್ನ ಮರ್ಯಾದೆಯ ತೂಕ ಹಾಗ ಅರ್ಧ ಹಾಗದಷ್ಟೂ ಉಳಿಯಲಾರದೆಂದು ಆಕೆ ಬಲ್ಲವಳಾದರೂ, ತನ್ನ ಚೆಲುವಿನ ರೂಪ ಎಲ್ಲಕ್ಕೂ ಕ್ಷಮೆ ಎಂದು ತಿಳಿದಿದ್ದಳು. ನಿಜ, ಅದಕ್ಕಲ್ಲವೇ—ಅಂಥ ಘಟ್ಟದ ಕೆಳಗಿನ ಧನಿಯರು ಅವಳ ಕುಡಿನೋಟಕ್ಕೆ ಸೆರೆಯಾಗಿ ಪ್ರಸನ್ನರಾದದ್ದು! ಇತರ ಕುಡಿತಿಯರ ಕೈ, ಮೈಯಲ್ಲಿ ಕಾಣಿಸದ ಒಂದೆರಡು ಬಂಗಾರದ ತುಣುಕುಗಳು ಅವಳ ಮೈಮೇಲೆ ನಲಿದಾಡದೊಡಗಿದ್ದು, ತನ್ನ ವೈರಿಯಾದ ತುಕ್ರನ ಮೇಲಿನ ಅಧಿಕಾರದ ಪಟ್ಟ, ತನ್ನ ಚೆಲುವಿನ ವಯಸ್ಸಿನಲ್ಲೇ ಕಡಿಮೆಯಾಗಿ, ಕ್ರಮೇಣ ಬೂದನ ಪಾಲಿಗೆ ಆ ಯಜಮಾನಿಕೆ ದೊರೆತದ್ದು. ಅಂಥ ಬನದ ಸಿಂಗಾರಿ ತಾನು—ಎಂದು ಬಲ್ಲವಳು, ತಿಮ್ಮನಂತಹ ಸುಡು ಮೋರೆಯುವ ತನ್ನನ್ನು ಹಂಬಲಿಸಿದರೆ ನಗುವನ್ನು ಬೀರಳೇ? ಅವನನ್ನು ಕಸಕ್ಕಿಂತಲೂ ಕಡೆಯಾಗಿ, ಪರಿಹಾಸ್ಯದಿಂದ ತೇಲಿಸಿ, ಮೂದಲಿಸಿ, ನಲಿದಾಡಿದವಳು ಅವಳು. ಯಾವ ವ್ಯಕ್ತಿ ಅಂಥ ಅನಾದರಕ್ಕೆ ಪ್ರಾಪ್ತನಾದನೋ, ಆ ವ್ಯಕ್ತಿಯ ಬೆನ್ನು ಹಿಡಿದು ಬರುವ ನಾರಿ ಯಾರೆಂದು ತಿಳಿಯುವ ಕುತೂಹಲವಿತ್ತು ಅವಳಿಗೆ. ಬಂದವಳು ಗಿಡ್ಡಿ.

ಆ ಲಗ್ನವನ್ನು ಹರಸಿದವನು, ತಾನು ನೀಡಿದ ಅನ್ನದಿಂದಲೇ ಬೆಳೆದ ಕರಿಯ. ಅವನು ಈಗ ಗುರಿಕಾರ. ಅವನಿಗೇನೂ ಅನ್ನುವಂತಿಲ್ಲ. ಆದರೆ ಗಂಡನಿಗೆ ಹೇಳಿ, ಕರಿಯನ ಸ್ನೇಹ ತಿಮ್ಮನಿಂದ ಕಡಿಯುವುದು ಸಾಧ್ಯ ವೆಂದು ತಿಳಿದಿದ್ದಳು. ಇದರ ಕಾರಣ—ಊಹೆಗೆ ಮೀರಿತ್ತು. ಕೆಂಪಿ, ಗಿಡ್ಡಿಯರಿಬ್ಬರೂ ಒಂದೇ ಕೇರಿಯಿಂದ ಬಂದವರು. ಅವಳ ತಂದೆ ತೌಡ; ಇವಳ ತಂದೆ ಚೋಮ. ಇವರಿಬ್ಬರೂ ಒಂದೇ ಕೇರಿಯಲ್ಲಿ ಬಾಳಿದರೂ, ಯಾಕೋ ಒಹುದಿನದ ವೈರಿಗಳಂತೆ ವರ್ತಿಸುತ್ತಿದ್ದರು. ಇದರಿಂದಾಗಿ ಗಿಡ್ಡಿಯನ್ನು ಮೂದಲಿಸಲು ಬೇಕಾದಾಗ ಅವಶ್ಯವಿರುವ ಸುದ್ದಿಯ ಬಾಣ ಗಳನ್ನೆಲ್ಲ, ತವರುಮನೆಯಿಂದಲೇ ದೊರಕಿಸಲು ಕೆಂಪಿ ಶಕ್ತಳಾಗುತ್ತಿದ್ದಳು. ಆದರೆ ಈ ನಂಜಿಗೆ, ದೂರಿಗೆ, ಪರಮತದವನೊಬ್ಬನ ಬೆನ್ನ ಹಿಂದೆ ಗಿಡ್ಡಿ ಓಡಿಹೋದಳೆಂಬುದು ಕಾರಣವೇ? ಅವಳ ಅಂತರಂಗವೇ ಅದನ್ನು ಹೇಳಬೇಕು. ಅವಳಿಗನಿಸುವ ಸಂಗತಿ ಬೇರೆ ಇರಬಹುದು. ಯಾರ ಕಣ್ಣಿಗೂ ಕಾಣಿಸಬಹುದಾದ ಸಂಗತಿ—ಕೆಂಪಿಗಿಂತ ಗಿಡ್ಡಿಯೇ ಹೆಚ್ಚಿನ ಚೆಲುವೆ ಎಂದು. ಕೆಂಪಿ ಹಿಂದೊಂದು ಕಾಲದಲ್ಲಿ, ಕುಡಿಯರ ಕುಲದಲ್ಲೇ ಸ್ವಪ್ನ ಸುಂದರಿಯಾಗಿದ್ದಿರಬಹುದು. ಈಗಲೂ ಕಡಿಮೆ ಸೌಂದರ್ಯ ಅವಳದ್ದಲ್ಲ. ಆದರೆ ವಯಸ್ಸು ಕಳೆದಂತೆ, ಮೈ ತುಂಬಿ ಬರುತ್ತದೆ, ಕೊಬ್ಬು ಸೇರಿಕೊಳ್ಳು ತ್ತದೆ; ನಡಿಗೆ ಜಡವಾಗುತ್ತದೆ; ವಯ್ಯಾರ ಮರೆಯಾಗುತ್ತದೆ. ಗಿಡ್ಡಿಯ ಮುಖದಲ್ಲಿ ಕಂಡುಬರುವ ಚೆಲುವು, ಅವಳಲ್ಲಿ ಉಳಿಯದೆಹೋಗಿದೆ. ಮುಖ ಕಿರಿದಾಗಿ ಕಾಣಿಸಿದರೂ ಮೈ ಮುದ್ದಾನೆಯ ರೂಪ ತಾಳಿದೆ.

ಗಿಡ್ಡಿ ಕೆಂಪು ಬಣ್ಣದವಳಲ್ಲ, ನಸುಗೆಂಪಾದವಳು. ಯೌವನ ತುಂಬಿ ಲಾವಣ್ಯ ಸೂಸುವ ಶರೀರ. ನಡಿಗೆಯಲ್ಲೊಂದು ವಿಧವಾದ ಲಘುತೆ, ಲಾಲಿತ್ಯ ತುಂಬಿದ ಜೀವ. ಇಬ್ಬರನ್ನೂ ಸಮೀಪ ನಿಲ್ಲಿಸಿ, ಯಾರು ಚೆಲು ವೆಂದು ಕೇಳಿದ್ದಲ್ಲಿ ಆ ಬಿರುದೆಲ್ಲ ಗಿಡ್ಡಿಗೇ ಇಂದು ಸಲ್ಲಬೇಕು. ಮಲೆಗೆ ಬಂದಾಗ—ಮದುವಣಗಿತ್ತಿಯಾಗಿದ್ದು, ಒಳಗಿನ ನೋವಿನಿಂದ ಆಕೆ ತಲೆ ತಗ್ಗಿಸಿ ನಡೆದರೂ, ಎಡಬಲದ ಮಗ್ಗುಲಲ್ಲಿ ನಿಂತು, ಕಂಡವರಿಗೂ ಆಕೆ ಅಪೂರ್ವ ಸುಂದರಿ ಎಂದು ಗೋಚರಿಸದೆ ಹೋಗದು. ಏನೇನೋ ಅಸೂಯೆ ಮೂಡಿತು—ಕೆಂಪಿಯಲ್ಲಿ. ಅವಳ ಆಗಮನವೇ ತನ್ನ ಹಿರಿತನ

ಕ್ಕೊಂದು ಕುಂದು ಎಂದು ಕಾಣಿಸಿತೋ ಏನೋ. ತೀರ ಎಳೆಯಳಾಗಿದ್ದಾಗ ಆ ಮಗುವನ್ನು ತವರೂರಿನಲ್ಲಿ ಅವಳು ಕಾಣದವಳಲ್ಲ. ಈ ಮಾಲೆಗೆ ಬಂದ ಮೇಲೆ ತನಗೆ ಅವಳು ಪ್ರತಿಸ್ಪರ್ಧಿ ಎನ್ನುವ ಭಾವ ಅಥವಾ ಅಸೂಯೆ ಬೇರೂರಿತೋ ಏನೋ! ನೀರಿಗೆ ಹೋದ ಅವಳು ಗಿಡ್ಡಿಯನ್ನು ಅಮೂಲಾಗ್ರವಾಗಿ ನೋಡಿ ನಕ್ಕಳು, ಅಸೂಯೆಗೊಂಡಳು, ನಂಜು ಸೂಸಿದಳು. ಶರೀರದ ಮಧ್ಯಭಾಗವನ್ನೇ ನಿರುಕಿಸಿ, ತನಗೆ ಬೇಕಾದ ನಂಜನ್ನು ಎತ್ತಿಕೊಂಡಳು. ಕುಡಿಯ ಗೆಳತಿಯರು "ತಿಮ್ಮನ ಮಡದಿ ಮೈನಾಗಿದ್ದಾಳೆ, ಸಾಪಾಗಿದ್ದಾಳೆ" ಎಂದರೆ, "ಹೂಂ, ಮೈ ತುಂಬಿದೆ, ಗಲ್ಲ ತುಂಬಿದೆ, ಬಸುರಿಯಾಗಿ ಕಾಣುತ್ತಾಳೆ" ಎಂದು ಆಕೆ ಚುಚ್ಚಿ ನುಡಿದಳು.

'ಅವಳು ಬಸಿರಿಯೇ' ಎಂದೂ ಸೂಚಿಸಿದಳು. ಮುಂದೆ ಅದನ್ನೇ ಪೋಣಿಸಿ, ಗೆಳೆಯ ಗೆಳತಿಯರಲ್ಲಿ ಹೆಚ್ಚಿನ ಸುದ್ದಿ ಹರಡುವುದು. ಇದಕ್ಕೂ ಕಾರಣವಿಲ್ಲದೆ ಇಲ್ಲ. ಗಿಡ್ಡಿಯ ದುರ್ದೈವ ಮೊದಲ ಕಾರಣ—ನಿಜ. ಆದರೆ ಅಂಥ ಕಾರಣ—ಹಿಂದಾಗಲಿ, ಇಂದಾಗಲಿ, ಕುಡಿಯರ ಕುಲದಲ್ಲಿ ನಡೆಯದ್ದಲ್ಲ. ಮನುಷ್ಯಕುಲದಲ್ಲೇ ಸಂಭವಿಸಲಾರದ್ದಲ್ಲ. ತಮಗೆ ಬೇಡವಾದವರಲ್ಲಿ ಅದು ಸಂಭವಿಸಿದರೆ, ಅದನ್ನು ಬೆಟ್ಟವಾಗಿ ಮಾಡುವುದು ಮನುಷ್ಯಸ್ವಭಾವ. ಕೆಂಪಿ ತನ್ನ ಯೌವನದ ಸೆರೆಯಲ್ಲಿ, ಕಾಮದ ಬಲೆಯಲ್ಲಿ ಯಾರನ್ನೇ ಕೆಡೆದರೂ, ವಿಜಯಶಾಲಿಯಾಗಿ ಮಕ್ಕಳ ಭಾಗ್ಯ ಪಡೆದವಳಲ್ಲ. ಹೊಟ್ಟೆಯ ಕೂಸಿನ ಸುಖ, ನಗು, ಆನಂದ—ಯಾವುದನ್ನೂ ಕಂಡವಳಲ್ಲ. 'ತಾಯಾದೇನು, ಆಗಬೇಕು' ಎಂದು ಹಂಬಲಿಸಿ, ದಿನ ವರ್ಷಗಳನ್ನು ಕಳೆದರೂ, ಅದೊಂದು ಆಸೆ ಕೈಗೂಡದ್ದರಿಂದ, ಅವಳ ಜೀವನ ಅತೃಪ್ತವಾಗಿತ್ತು. ನಿಜಕ್ಕೂ ಗಿಡ್ಡಿಯನ್ನು ಕಂಡಾಗ, ಅವಳನ್ನು ಆರೋಪದಿಂದ ನೋಡಿದ್ದಕ್ಕಿಂತ ಹೆಚ್ಚಾಗಿ, ತನಗಿಲ್ಲದ ಭಾಗ್ಯ ಆಕೆಯಲ್ಲಿ ಕಾಣಿಸಿದ್ದೇ ಹೆಚ್ಚಿನ ಅಸೂಯೆಯನ್ನು ಕೆರಳಿಸಿತು. ಅವಳ ಮೊದಲ ನಂಜಿನ ಮಾತು, ಕೇರಿಯ ಗಾಳಿಯಲ್ಲಿ ಸೇರಿ, ಗಿಡ್ಡಿಯ ಕಿವಿಗೂ ಮುಟ್ಟಿ, ಒಂದು ತಿಂಗಳಕಾಲ ಅವಳನ್ನು ನೋವಿನ ಮಂಚದಲ್ಲಿ ಮಲಗಿಸಿತು. 'ಎಂದು ನಾನಿದರಿಂದ ಪಾರಾದೇನು? ಹೇಗೆ ಪಾರಾದೇನು?' ಎಂದು ಇಲ್ಲದ ಚಿಂತೆಗೆ ಗಿಡ್ಡಿ ಗುರಿಯಾದಳು. ಆ ಹಂಬಲದಿಂದ, ತಾಯ ಮನೆಗೋಡಿದಳು. ಅಲ್ಲಿಯೂ

ತಾಯಿಯ ಹೆದರಿಕೆ ಇದ್ದಿಲ್ಲವೆಂದಿಲ್ಲ. ಆದರೂ ತನ್ನ ಪೂರ್ವ ಇತಿಹಾಸವನ್ನೆಲ್ಲ ಬಲ್ಲ ತಾಯಿ, ತನ್ನನ್ನು ಕ್ಷಮಿಸಿಯಾಳು, ಈ ಸಂಕಟದಿಂದ ಪಾರು ಮಾಡಿಯಾಳು—ಎಂದು ಹೋದಳು. ಪಾರುಮಾಡುವವರು ಅವಳಲ್ಲದೆ ಬೇರೆ ಯಾರು? ಅಲ್ಲಿ ಬಂದೊದಗಿದ ವಿಪತ್ತಿನಿಂದ ಪಾರಾದಳು; ತಪ್ಪಿಗೆ ತಕ್ಕ ಸಂಕಟವನ್ನು ಅನುಭವಿಸಿದಳು. ಆದರೂ ತಾಯಿಯ ಸಹಾನುಭೂತಿಯಿಂದ, ಕಳೆದ ಗೆಲುವನ್ನು ತಿರುಗಿ ದೊರಕಿಸಿಕೊಂಡು, 'ವಲ್ಲಿ'ಯ ಸ್ವಪ್ನಗಳನ್ನೆಲ್ಲ ಮರೆತು, ಹೊಸ ಬಾಳನ್ನು ತಿಮ್ಮನೊಡನೆ ಹೂಡಿಯೇನು—ಎಂಬ ಭರವಸೆಯಿಂದ ಅವನನ್ನು ಹಿಂಬಾಲಿಸಿ ಕಿರಿ ಮಲೆಗೆ ಬಂದಳು.

ಕೇರಿಗೆ ಬಂದ ಎಂಟು ದಿನಗಳೊಳಗಾಗಿ ನಾಲ್ಕೆಂಟು ಬಾರಿ ನೀರಿಗೆ ಹೋದಾಗ, ಕೆಂಪಿಯ ನಂಜಿನ ನೋಟಕ್ಕೆ ಗುರಿಯಾದಳು.

"ಬಂದುಬಿಟ್ಟೆಯಾ, ಅಷ್ಟು ಬೇಗ? ತುಂಬ ಸೊರಗಿದ್ದೀಯೆ. ಮೈ ತುಂಬ ಇಳಿದು ಹೋಗಿದೆ. ಏನಾಯಿತು?" ಎಂದು ಗಿಡ್ಡಿಯ ಪ್ರತ್ಯುತ್ತರ ನಿರೀಕ್ಷಿಸದೆ ನಂಜಿನ ನಾಲಿಗೆಯಿಂದ, ತಿವಿದುಹೋದಳು. 'ತನ್ನ ಅಪರಾಧಕ್ಕೆ ತಕ್ಕ ಪ್ರಾಯಶ್ಚಿತ್ತ ಇದು' ಎಂದು ತೋರಿತು ಗಿಡ್ಡಿಗೆ. ಆ ಮಾತನ್ನು ಒಬ್ಬರಿಗೂ ಹೇಳದೆ ತಾನೇ ನುಂಗಿಕೊಂಡಳು. ಇತ್ತ ಕೆಂಪಿ ಬೂದಣ್ಣನೊಡನೆ "ಕರಿಯಣ್ಣ ನಾವಿದ್ದೂ ಇಲ್ಲದ ಹಾಗೆ ಮಾಡುತ್ತಾನೆ. ತಾನು ದೊಡ್ಡ ಗುರಿಕಾರ—ಎಂದು ಅವನ ತಲೆಗೆ ಹೋಗಿರಬೇಕು. ನೀವಿಲ್ಲದಿದ್ದರೆ ಅವನ ಗುರಿಕಾರಿಕೆ ನರಿ ನಾಯಿ ತಿಂದುಹೋಗುತ್ತಿತ್ತು. ಅಲ್ಲವಾದರೆ ಕೇರಿಯವರು ಹೊರಗಿರಿಸಿದ ತಿಮ್ಮ ಗಿಡ್ಡಿಯರ ಮನೆಗೆ ದಿನಕ್ಕೆ ಅವನು ಹತ್ತು ಸಾರಿ ಹೋಗಿಬರುವುದೆಂದರೇನು?" ಎಂದಳು.

ಬೂದ ಹಿಂದೆಯೇ ಕರಿಯನಿಗೆ ಆ ವಿಚಾರದಲ್ಲಿ ಬುದ್ಧಿ ಹೇಳಿದ್ದ. ಆದರೆ ಕರಿಯನ ನಡತೆ ಬದಲಾಗಲಿಲ್ಲ. ಇನ್ನೊಮ್ಮೆ ತನ್ನ ಹೆಂಡತಿಯ ಮಾತನ್ನು ಕೇಳಿ "ಕರಿಯಣ್ಣ, ನೀನು ತಿಮ್ಮನೊಡನೆ ಮಾತನಾಡಬಾರದು ಅನ್ನುವುದಲ್ಲ ನಾನು. ನೀನು ಗುರಿಕಾರನಾದರೂ ಜನರು ನೀನು ಮಾಡಿದ್ದನ್ನೆಲ್ಲ ಒಪ್ಪುತ್ತಾರೆಯೇ, ಸಹಿಸುತ್ತಾರೆಯೇ? ಏನೇನೆಲ್ಲ ಅನ್ನುತ್ತಾರೆ. ತಿಮ್ಮನ ಮನೆಗೆ ಹೋಗುವುದನ್ನು ಸ್ವಲ್ಪ ಕಡಿಮೆ ಮಾಡು" ಎಂದ.

ಕರಿಯನಿಗೆ ಕೋಪವೂ ಉಂಟಾಯಿತು, ಆಶ್ಚರ್ಯವೂ ಆಯಿತು.

"ಏನು ಮಾವ, ನೀನು ಹೀಗೆನ್ನುತ್ತೀಯಾ? ಅವರು ಅಂಥ ತಪ್ಪು ಏನು ಮಾಡಿದರು? ಪಾಪ. ಊರವರೆಲ್ಲ, ಈ ಒಂದು ಮದುವೆಯಾದದ್ದಕ್ಕೆ, ಹೊಲೆಯರ ಹಾಗೆ ಅವರನ್ನು ಕಂಡರೆ ಅವರು ಬಾಳುವುದು ಹೇಗೆ? ಬದುಕುವುದು ಹೇಗೆ?" ಎಂದ.

"ಕರಿಯ, ನೀನು ಗುರಿಕಾರ. ಆದರೆ ಸಣ್ಣವ. ಬೇರೆಯವರು ನಿನ್ನೆದುರಿಗೆ ಏನನ್ನದಿದ್ದರೂ, ನಮ್ಮೆದುರಿಗೆ ಅನ್ನುತ್ತಾರಲ್ಲ—ನಾವದನ್ನು ಕೇಳಿಕೊಂಡಿರಬೇಕಲ್ಲ?"

"ಅಂಥದೇನನ್ನುತ್ತಾರೆ? ಅಷ್ಟು ದೊಡ್ಡ ಸಂಗತಿಯಿದ್ದರೆ, ಕೂಡುಕಟ್ಟಿನ ಸಭೆ ಮಾಡಿ ಕೇಳಿಕೊಳ್ಳಬಹುದು ತಂತಮ್ಮಷ್ಟಕ್ಕೆ ಕುಳಿತು ಪಾಪದವನ ಮೇಲೆ ಒಳಗಿಂದೊಳಗೆ ಕತ್ತಿ ಮಸೆಯುವುದು ಸಮವಲ್ಲ."

"ಹಾಗಾದರೆ ಕೇಳು—ಗಿಡ್ಡಿ ಬರುವಾಗಲೇ ಬಸಿರಿಯಾಗಿ ಬಂದಿದ್ದಳು—ಎಂದಿದ್ದರು ಹಿಂದೆ. ಈಗ ಅವಳು ಊರಿಗೆ ಹೋಗಿ ಏನೋ ಮಾಡಿಕೊಂಡು ಬಂದಿದ್ದಾಳೆ ಅನ್ನುತ್ತಾರೆ. ಅದು ಹ್ಯಾಗೂ ಇರಲಿ. ಅಂಥವಳೇ ಬೇಕು—ಎಂದಿದ್ದರೆ ಅದು ತಿಮ್ಮನಿಗೆ ಬಿಟ್ಟ ವಿಚಾರ. ಆದರೆ ನೀನಲ್ಲಿಗೆ ಹೋಗಿಬರುವುದರಿಂದ, ನಿನ್ನ ಮೇಲೂ ಕೆಟ್ಟ ಮಾತು ಬಂದರೆ ನನಗೆಷ್ಟು ಬೇಸರವಾಗಲಿಕ್ಕಿಲ್ಲ."

"ನನ್ನ ಮೇಲೆ ಕೆಟ್ಟ ಮಾತೇ? ಅದನ್ನೂ ಹೇಳಿಬಿಡು. ಏನಾಡುತ್ತಾರೆಂದು ನನಗೂ ಗೊತ್ತಾಗಲಿ."

"ನಾನು ಹೇಳಬೇಕೆ? ನಿನಗೆ ತಿಳಿಯುವುದಿಲ್ಲವೇ?"

"ತಿಳಿಯದ್ದಕ್ಕೆ ಕೇಳುತ್ತಿದ್ದೇನೆ."

"ಗಿಡ್ಡಿಯ ಮೇಲಿನ ಆಸೆಗೆ ನೀನಲ್ಲಿಗೆ ಹೋಗುತ್ತಿದ್ದೀಯಾ ಅನ್ನುತ್ತಿದ್ದಾರೆ. ಆ ದೂರನ್ನೆಲ್ಲ ನಾವೇಕೆ ಕೇಳಬೇಕು?"

"ಒಹೋ, ಹಾಗೂ ಉಂಟೇ? ಹಾಗಾದರೆ ನನ್ನ ಮನಸ್ಸು ಏನು ಹೇಳುತ್ತದೆಂದು ನನಗೆ ಗೊತ್ತುಂಟು. ಹೇಳುವವರಿಗೆ ಧೈರ್ಯವಿದ್ದರೆ ನನ್ನೆದುರಿಗೆ ಬಂದು ಹೇಳಲಿ. ಜನಕ್ಕೆ—ಆಡುವ ನಾಲಿಗೆ ಉಂಟು; ಆಡುತ್ತಾರೆ. ಜನ ಯಾರ ವಿಷಯದಲ್ಲಿ ಏನು ಆಡಿಲ್ಲ?" ಎಂದು ಹೆಚ್ಚಿನ ಮಾತಿಲ್ಲದೆ ಹೊರಟೇಹೋದ.

ಕರಿಯಣ್ಣನ ಮನಸ್ಸು, ಬೂದನಾಡಿದ ನುಡಿಗಳಿಂದ ತುಂಬ ಉದ್ವೇಗಗೊಂಡಿತು. ತಾನು ಮರುಕದಿಂದ ಎಲ್ಲರೂ ಕೈಬಿಟ್ಟ ಆ ದಂಪತಿಗಳನ್ನು, ಸಹಾನುಭೂತಿಯಿಂದ ನೋಡಿದ್ದು ತಪ್ಪೆಂದು ಆತ ತಿಳಿಯಲಾರ. ಆದರೆ ಆ ಸಹಾನುಭೂತಿ ತನ್ನ ಕೀರ್ತಿಗೆ ವಕ್ರವಾಗಿ ಬಂದೀತೆಂದು ಆತ ಎಣಿಸಿರಲಿಲ್ಲ. ಮನಸ್ಸು ತುಂಬ ನೋವುಗೊಂಡಿತು. ತನ್ನ ಜನ ಅಂಥ ನಿರ್ದೋಷಿಗಳೇ, ಯಾರೂ ದೂರಲಾರದ ನಡತೆಯುವರೇ—ಸ್ವತಃ ತನಗೆ ಅನ್ನ ಬಡಿಸಿದ ಕೆಂಪಿಯ ಕೀರ್ತಿಯೂ ನಿಷ್ಕಳಂಕವಾದದ್ದೇ? ಹೀಗಿರುತ್ತ, ಎಳೆವಯಸ್ಸಿನ ಗಿಡ್ಡಿ, ಯಾವುದೋ ಒಂದು ಗಳಿಗೆಯಲ್ಲಿ ತಪ್ಪುಮಾಡಿದ ಅಪರಾಧಕ್ಕೆ, ಈ ಬಗೆಯಲ್ಲಿ ಚುಚ್ಚುತ್ತಿದ್ದಾರಲ್ಲ!—ಎಂದು ಮರುಕವಾಯಿತು.

ಒಂದೆರಡು ಬಾರಿ, ತಡೆಯಲಾರದ ನೋವಿಗೆ, ಗಿಡ್ಡಿ ಕರಿಯಣ್ಣನೊಡನೆ ಬಾಯಿಬಿಟ್ಟು "ಬೂದನ ಹೆಂಡತಿ ಹೀಗೆಂದಳು, ಹಾಗೆಂದಳು ನನಗೆ" ಎಂದು ತಿಳಿಸಿದ್ದಳು. ಈಗ ಅವನಿಗೆ ಸ್ಪಷ್ಟವಾಯಿತು—ಬೂದ ಸಹ ಕೆಂಪಿಯ ಪ್ರೇರಣೆಯಿಂದ ನಡೆದದ್ದು ಎಂದು—ಮನಸ್ಸು ತುಂಬ ಸಿಡಿಮಿಡಿಗೊಂಡಿತು. ಬೂದಣ್ಣನಿಗೆ ಪ್ರತಿನುಡಿ ಆಡಲಾರ; ಕೆಂಪಿಯೂ ತನ್ನನ್ನು ಸಾಕಿದವಳು ಆದರೆ ಅವರಂದದ್ದನ್ನೆಲ್ಲ ಒಪ್ಪುವ ಮನಸ್ಸಾಗಲಿಲ್ಲ. ತಾನು ಅಜ್ಜ ತೀರಿಕೊಂಡಂದಿನಿಂದ ಅವರ ಆಶ್ರಯದಲ್ಲಿ ಬೆಳೆದಿದ್ದರೂ, ಇನ್ನು ಆ ಹಂಗು ಬೇಡ—ಎಂದು ತೋರಿತು. ಆ ರಾತ್ರಿ ಬೂದನ ಮನೆಗೆ ಊಟಕ್ಕೂ ಹೋಗಲಿಲ್ಲ. ನೇರಾಗಿ ತಿಮ್ಮನ ಮನೆಗೆ ಹೋದ. ಹಸಿವೆ ಇಲ್ಲವೆಂದು ಮುಖ ಸಪ್ಪಗೆ ಮಾಡಿಕೊಂಡು ಮಲಗಿಕೊಂಡ. ಗಿಡ್ಡಿ ಹತ್ತು ಬಾರಿ "ಏನಣ್ಣ, ಒಂದಿಷ್ಟು ಅಂಬಲಿ ಕುಡಿ. ಉಪವಾಸ ಮಲಗಿಕೊಳ್ಳಬೇಡ" ಎಂದೆಷ್ಟು ಬೇಡಿಕೊಂಡರೂ, ಮಾತನಾಡದೆ ಮಲಗಿಕೊಂಡ. ಮರುದಿನ ಬೆಳಗ್ಗೆ ಎದ್ದವನೇ ಬೂದನಲ್ಲಿಗೆ ಹೋದ. ಬೂದ "ಏನು ಕರಿಯಣ್ಣ, ರಾತ್ರಿ ಊಟಕ್ಕೂ ಬರಲಿಲ್ಲ. ಮಲಗಲಿಕ್ಕೂ ಬರಲಿಲ್ಲ" ಎನ್ನುವಾಗಲೇ ಕೆಂಪಿ, "ಅಂಬಲಿ ಇಟ್ಟಲ್ಲೇ ಇದೆ. ಮೊಲ ತಂದಿದ್ದರು. ಮಾಂಸದ ಪದಾರ್ಥವೂ ಹಾಗೆಯೇ ಇದೆ. ಉಣ್ಣುತ್ತೀಯಾದರೆ ಉಣ್ಣು. ರಾತ್ರೆ ಬೇಟೆಗೆ ಹೋಗಿದ್ದಿಯಾ?" ಎಂದು ಉಪಚರಿಸಿದಳು.

"ಯಾಕೋ ಬರಲಿಲ್ಲ ನಿನ್ನೆ. ಇನ್ನು ನನಗೋಸ್ಕರ ನೀವು ಅಡಿಗೆ

ಮಾಡುವುದು ಬೇಡ. ನಾನಂಥ ಕೆಟ್ಟವನಾದ ಮೇಲೆ, ನನ್ನಿಂದಾಗಿ ನಿಮಗೂ ಕೆಟ್ಟ ಹೆಸರು ಬರುವುದು ಬೇಡ" ಎಂದು ತನ್ನ ಕತ್ತಿ, ಚಾಪೆ, ಒಂದೆರಡು ಹರಕಲು ಬಟ್ಟೆಗಳನ್ನು ಸುರುಳಿಮಾಡಿ ಹಿಡಿದುಕೊಂಡ. ಬೂದ ಅವನನ್ನು ತಡೆಯಲು ಬಂದ. "ಏನು ಹೀಗೆ ಮಾಡಿದರೆ? ಏನೋ ನಾಲ್ಕು ಬುದ್ಧಿಯ ಮಾತು ಹೇಳಿದರೆ, ಸಿಟ್ಟು ಮಾಡಿಕೊಂಡು ಹೊರಡುವುದೇ ?" ಎಂದ.

"ಹ್ಯಾಗೂ ಅನ್ನುವುದನ್ನು ಅನ್ನುತ್ತಾರೆ ಜನ. ಇನ್ನೇನಾಗಬೇಕು—ನನಗೆ. ತಮ್ಮ ಗುರಿಕಾರರ ಘಟಿಂಗ ಅಂದಾರು. ಚೆನ್ನಾಗಿ ಅಂದುಕೊಳ್ಳಲಿ. ಯಾರ ಹಂಗೂ ನನಗೆ ಬೇಡ" ಎಂದು ಹೊರಟೇಬಿಟ್ಟ. ಬೂದ ಅವನನ್ನು ತಡೆಯಲು ಹೋದದ್ದೂ ಪ್ರಯೋಜನವಾಗಲಿಲ್ಲ. ಕೆಂಪಿ ಅಸೂಯಾಪರಳಾಗಿ "ನಾವು ಹೇಳಿದರೆ ಯಾಕೆ ಕೇಳಿಯಾನು? ಗಿಡ್ಡಿ ಕರೆದಿರಬೇಕು ಅವನನ್ನು" ಎಂದೇಬಿಟ್ಟಳು.

"ಗಿಡ್ಡಿಯೇ, ಹೌ ಗಿಡ್ಡಿಯೇ! ಹೌದು, ನನಗೆ ಗೊತ್ತಕ್ಕ. ಗಿಡ್ಡಿಯನ್ನು ಎಲ್ಲರ ಕಣ್ಣಲ್ಲಿ ಪಾಪಿಯಾಗಿ ಮಾಡಿದವಳು ಯಾರೆಂದು ಗೊತ್ತು. ನಾನು ಯಾರ ಮನೆಗೂ ಹೋಗುವುದು ಬೇಡ. ನನಗೆ ಪ್ರಾಯವಾಯಿತು. ಬೇರೆಯೇ ಗುಡಿಸಲು ಕಟ್ಟಿ ನನ್ನ ಅಂಬಲಿ ನಾನು ಬೇಯಿಸಿಕೊಂಡು ಇರುತ್ತೇನೆ—ಎಂದಿದ್ದೆ. ಇಂದು, ನೀನೇ ಅಂದೆಯಲ್ಲ—ಗಿಡ್ಡಿಯ ಮನೆಗೆ ಹೋಗುತ್ತೇನೆಂದು. ಹಾಗಾದರೆ ನಾನು ಹೋಗುತ್ತೇನೆ—ಅಲ್ಲಿಗೇ. ಅಲ್ಲಿಗೇ ಹೋಗುತ್ತೇನೆ. ಇನ್ನು ನಿನಗೆ ಧೈರ್ಯವಾಗಿ ಹೇಳಬಹುದಲ್ಲ. ಗಿಡ್ಡಿಗೆ—ಒಬ್ಬರಲ್ಲ, ಇಬ್ಬರು ಗಂಡಂದಿರೆಂದು" ಎಂದು ಕಿಡಿ ಕಾರಿ ಹೊರಟುಹೋದ. ಅವನ ನೋವನ್ನು ಹೇಳತೀರದು. ಕಣ್ಣಲ್ಲಿ ಕೋಪದ ಕಿಡಿ ಹಾರಿತು; ಕಂಬನಿ ಸುರಿಯಿತು. ಇಂಥ ಅಪವಾದ ತನ್ನ ಮೇಲೆ ಬಂದೀತೆಂದು ಆತ ಎಣಿಸಿರಲಿಲ್ಲ—ತನ್ನನ್ನು ಅಕ್ಕರೆಯಿಂದ ಮಾತನಾಡಿಸಿ, ದೊನ್ನೆ ತುಂಬ ಬಯನಿ ಹೆಂಡ ಕೊಟ್ಟು, ಉಪಚರಿಸಿದ ತಾಯಿಗೆ ಸಮಾನಳಾದ ಕೆಂಪಿಯಿಂದ.

ಬೂದನಂತು, ತುಂಬ ಕಳವಳಗೊಂಡ. "ಏನು ಕೆಂಪಿ, ಅವನೆದುರಿಗೇ ಹಾಗೆಲ್ಲ ಅಂದುಬಿಟ್ಟೆಯಾ? ಯಾರಿಗಾದರೂ ಸಿಟ್ಟು ಬಾರದಿರುತ್ತದೆಯೇ? ಯಾರಾದರೂ ಹಾಗೆ ಎದುರಿಗೆ ಅಂದುಬಿಡುತ್ತಾರೆಯೇ?" ಎಂದು ಹೇಳಿದ.

ಬೂದನ ಈ ಮಾತಿಗೆ ಕೆಂಪಿ ಸಿಟ್ಟುಗೊಂಡು "ನೀವು ಗಂಡಸರಿಗೆಲ್ಲ ಏನು ಹೇಳಿದರೂ ಒಂದೇ. ತಪ್ಪು ಕಾಣುವುದು ನಮ್ಮಲ್ಲಿ. ನೀವು ಮಾಡಿದ್ದೆಲ್ಲ ಚೆನ್ನ. ಇದ್ದದ್ದನ್ನು, ಕೇಳಿದ್ದನ್ನು ಹೇಳಬಾರದು ನಾವು" ಎಂದಳು.

ಬೂದನ ಮನೆಯಿಂದ ಹೊರಟ ಕರಿಯ, ನೆಟ್ಟಗೆ ತಿಮ್ಮನ ಮನೆಗೆ ಹೋಗಿ, ಹಾಸಿಗೆ ಸುರುಳಿಯನ್ನು ಅಲ್ಲಿ ಎಸೆದು, ಅಲ್ಲಿಯೂ ಅಂಬಲಿ ಊಟಕ್ಕೆ ನಿಲ್ಲದೆ, ಕತ್ತಿ ಹಿಡಿದುಕೊಂಡು ಕಾಡಿಗೆ ಹೊರಟ. ಅವನ ಮನಸ್ಸಿನ ಸ್ಥಿತಿ ಹೇಗಿತ್ತೆಂದು ಯಾರಿಗೂ ತಿಳಿಯಲು ಅವಕಾಶವಾಗಲಿಲ್ಲ. ಆ ಸಂಜೆ—ಒಂದು ಹೊರೆ ಬಿದಿರನ್ನು ಹೊತ್ತುಕೊಂಡು, ದಣಿದು ಕಂಗಾಲಾಗಿ ಕೇರಿಗೆ ಬಂದ. ಒಂದು ಮೂಲೆಯಲ್ಲಿ ಅದನ್ನೆಸೆದು, ಹಸಿವು ತಾಳಲಾರದ್ದಕ್ಕೆ ತಿಮ್ಮನ ಮನೆಗೆ ಹೋದ. ತಿಮ್ಮ ಸ್ವಾಗತಿಸಿದ. ಈತ ಮೊದಲ ಮಾತಿಗೆ "ತಿಮ್ಮಣ್ಣ, ಒಂದೆಂಟು ದಿನ ನನಗಿಲ್ಲಿ ಕೂಳು ಹಾಕುತ್ತೀಯಲ್ಲ" ಎಂದ. ಆ ಧ್ವನಿ ವಿಚಿತ್ರವಾಗಿದ್ದುದನ್ನು ಕಂಡು ತಿಮ್ಮ "ಏನಾಯಿತಣ್ಣ, ಏನು ಸಂಗತಿ? ಬೆಳಿಗ್ಗೆ ಹಾಸಿಗೆ ಸುರುಳಿ ತಂದು ಎಸೆದು ಹೋದೆಯಂತೆ. ನಿನಗೆ ಯಾರಾದರೂ ಏನಾದರೂ ಅಂದರೇ?" ಎಂದ.

ಗಿಡ್ಡಿ ಮೆಲುಧ್ವನಿಯಿಂದ "ಬೆಳಿಗ್ಗೆ ಅಂಬಲಿ ಕುಡಿದಿಲ್ಲ, ಅಲ್ಲವೇ? ನಾನು ಕೇಳುವ ಎಂದು ಹೊರಗೆ ಬರುವುದರೊಳಗೆ, ಹೊರಟು ಹೋಗಿದ್ದಿರಿ. ಬೂದಣ್ಣನ ಹೆಂಡತಿ ಅನ್ನುತ್ತಿದ್ದಳಂತೆ—ಸಣ್ಣ ಗುರಿಕಾರರು ಇನ್ನು ತಿಮ್ಮನ ಮನೆಯಲ್ಲೇ ಇರುವುದು ಎಂದು."

ತಿಮ್ಮ "ಏನು, ಏನು?" ಎಂದು ಬಲವಂತಪಡಿಸಿದ್ದಕ್ಕೆ "ಏನಿಲ್ಲ ತಿಮ್ಮ, ಮೊದಲು ನೀವಿಬ್ಬರೇ ಕೇರಿಗೆ ಬೇಡವಾದವರಾದಿರಿ. ಈಗ ನಾನೂ ನಿಮ್ಮ ಸಾಲಿಗೆ ಬಂದೆ" ಎಂದು ಅಂದನೇ ಹೊರತು, ಬೇರೇನೂ ಹೇಳಲಿಲ್ಲ. ಆದರೂ ಅವನ ಈ ನಡತೆಯನ್ನು ಅರಿಯಲಾರದವರ ಸಮಾಧಾನಕ್ಕಾಗಿ, "ಸಾಕೆನಿಸಿತು—ಪರರ ಹಂಗಿನ ಊಟ. ಅನ್ನ ಹಾಕಿದ್ದಕ್ಕೆ ಏನೂ ಅನ್ನುವ ಹಕ್ಕು ಬರುತ್ತದೆ. ಯಾಕೆ ಆ ಅನ್ನ? ನನಗೆ ವಯಸ್ಸಾಗಿದೆ. ಬೇರೆ ಗುಡಿ ಕಟ್ಟಿಕೊಂಡು ಬದುಕಬೇಕಾದ್ದು ನ್ಯಾಯ. ನಮ್ಮಜ್ಜ ಎಷ್ಟು ಕಾಲ ತನ್ನ ಅಂಬಲಿಯನ್ನು ತಾನೇ ಬೇಯಿಸಿಕೊಂಡು ಬದುಕಲಿಲ್ಲ" ಎಂದು ತನ್ನ ಸ್ವಗೃಹ ನಿರ್ಮಾಣದ ಯೋಚನೆಯನ್ನು ತಿಮ್ಮನ ಮುಂದೆ ತೋಡಿಕೊಂಡ.

ತಾನು ಕೇಳಿದ ಮಾತುಗಳಲ್ಲಿ, ಅವರ ಸುಖ ತಗ್ಗಿಸುವ ಯಾವ ಸುದ್ದಿಯನ್ನೂ ಹೊರಗೆಡಹದೆ, ಆ ದಿನ ಸಂಭಾಷಣೆ ಮುಗಿಸಿದ. ಆದಾದ ಏಳೆಂಟು ದಿನಗಳ ತನಕ ಅವನ ದಿನವೆಲ್ಲ, ಸ್ವಂತ ಗುಡಿಸಲು ಕಟ್ಟುವ ಕಾರ್ಯದಲ್ಲೇ ಸಾಗಿತು. ದಿನಕ್ಕೆರಡು ಬಾರಿ ಗಿಡ್ಡಿಯ ಮನೆಗೆ ಅಂಬಲಿ ಕುಡಿಯುವುದಕ್ಕೆ ಮಾತ್ರ ಹೋಗಿ ಬರುತ್ತಿದ್ದ.

ಕುಡಿಯರ ಕೇರಿಯೆಂದರೆ—ನಗರವೇನಲ್ಲ, ಪಟ್ಟಣವೇನಲ್ಲ. ಕಾಡಿನ ಮಧ್ಯದ ಒಂದು ಎಕ್ರೆಯಷ್ಟು ಸಪಾಟು ಮಾಡಿದ ಜಾಗ. ಆ ಏರು ತಗ್ಗಿನಲ್ಲೇ ಹತ್ತಿಪ್ಪತ್ತು ಮನೆಗಳಿವೆ. ಕರಿಯ ತನ್ನಜ್ಜನು ವಾಸವಾಗಿದ್ದ ಮನೆಯ ಹಳೆಯ ಅಸ್ತಿವಾರದ ಮೇಲೆಯೇ, ನಾಲ್ಕು ಕಂಬಗಳನ್ನು ನಟ್ಟು, ಒಂದು ಜೋಪಡಿಯ ನಿರ್ಮಾಣಕ್ಕೆ ತೊಡಗಿದ. ಅವನ ಬೆನ್ನಿಗೆ, ತಿಮ್ಮ ಜವಿ ಶ್ರಾಂತವಾಗಿ ಬಂದು ದುಡಿದ. ಗೆಳೆಯನ ಸಲುವಾಗಿ ಕಾಳನೂ ಬಂದು ಸೇರಿದ. ಗುರಿಕಾರ ಬೇರೆ ಮನೆ ಮಾಡುತ್ತಾನೆಂದ ಮೇಲೆ ಕೇರಿಯ ಬೇರೆ ಒಬ್ಬಿಬ್ಬರು, ಕರೆಯದೆಯೂ, ಬೇಡವೆಂದರೂ ಅವನ ಕೆಲಸಗಳಿಗೆ ನೆರವಾಗಿ, ಗುಡಿಯ ಕೆಲಸ ಪೂರೈಸಿದರು.

ಚಿಕ್ಕ ಗುಡಿಸಲೊಂದು ನಿರ್ಮಾಣವಾಯಿತು ಒಳ್ಳೆಯ ದಿನ ಒಂದನ್ನು ನೋಡಿ, ಕೇರಿಯವರೆಲ್ಲರಿಗೂ ಹೇಳಿಕೆ ಮಾಡಿ, ಮನೆಯ ಒಕ್ಕಲು ನಡೆಸಿದ ಕರಿಯ. ಒಕ್ಕಲಿನ ದಿನ ಕೇರಿಯ ಜನ, ಕರಿಯನಿಗೆ ನೇರವಾಗಿ ಊಟ ಅಡುಗೆಯನ್ನು ಮಾಡಿದರು. ಅದಕ್ಕೆ ಬಾರದವರೆಂದರೆ ಕೆಂಪಿ ಮತ್ತು ಗಿಡ್ಡಿಯರಿಬ್ಬರೇ. ಒಬ್ಬಳು ಅಳುಕಿನಿಂದ; ಇನ್ನೊಬ್ಬಳು ಸಿಡುಕಿನಿಂದ. ಮೊದಲು ತಿಮ್ಮ ಬರುವುದಕ್ಕೂ ಅಂಜಿಕೊಂಡಿದ್ದ. “ನೀನೇ ಬರದಿದ್ದರೆ ಹೇಗೆ?”—ಎಂದು ಕರಿಯ ಬಲವಂತ ಮಾಡಿದುದರಿಂದ, ಆತ ಬರಬೇಕಾಯಿತು. ಆತ ಬಂದನೆಂದು ಉಳಿದವರು ಪ್ರತ್ಯಕ್ಷವಾಗಿ, ಆ ದಿನದ ಔತಣವನ್ನು ಬಹಿಷ್ಕರಿಸದೆ ಇದ್ದುದೇ ಆಶ್ಚರ್ಯ. ಗುರಿಕಾರ ಸ್ವಂತ ಮನೆ ಮಾಡಿಕೊಂಡದ್ದು, ಬೂದನಿಗೆ ಮಾತ್ರ ತುಸು ಬೇಸರವಾಯಿತಾದರೂ, ಬಹು ದಿನ ಆ ಬೇಸರ ಉಳಿಯಲಿಲ್ಲ. ಆದರೆ ಈ ಮನೆಯಾಗಿ ಕರಿಯ ತೀರ ಸ್ವತಂತ್ರನಾದ ಮೇಲೆಯೂ, ಆತ ತಿಮ್ಮನ ಮನೆಗೆ ಹೋಗಿ ಬರುವುದು ಕಡಿಮೆಯಾಗಲಿಲ್ಲ ದಿನ ಹೋದಂತೆ, ಒಂದು ಬಗೆಯ ಕಟು ಭಾವನೆ ಅವ

ನಲ್ಲಿ ಬೆಳೆದು ಬಂದದ್ದೇ ಅದರ ಕಾರಣ. 'ಮಾಡದ್ದನ್ನು ಅನ್ನುವ ಜನರಿಗೆ ಏತಕ್ಕೆ ತಾನೇ ಅಂಜಿ ನಡೆಯಬೇಕು? ಹೆಚ್ಚೆಂದರೆ ತನ್ನನ್ನೂ ಗುರಿಕಾರಿಕೆ ಯಿಂದ ತಳ್ಳಿಹಾಕಬಹುದು. ಆ ಪದವಿ ತನಗೆ ಕೊಟ್ಟ ಸೌಭಾಗ್ಯವಾದರೂ ಅಷ್ಟೇನೆ. ವಯಸ್ಸಿನ ಬೆಂಬಲವಿಲ್ಲದೆ ತನ್ನನ್ನು, ಇನ್ನೂ ಕೇರಿಯ ಜನ ಹುಡುಗನೆಂದೇ ತಿಳಿದಿದ್ದಾರೆ. ತನಗದರಿಂದ ಲಾಭವೂ ಇಲ್ಲ; ನಷ್ಟವೂ ಇಲ್ಲ'—ಎಂದಂದುಕೊಂಡ. ಇತ್ತ ಗಿಡ್ಡಿಯ ಜೀವನದಲ್ಲಿ ನಾಲ್ಕಾರು ಪ್ರಿಯ ಮಾತುಗಳನ್ನಾಡಿದರೆ, ಅವಳ ಬಾಳು ಸಹನೀಯವಾದೀತೆಂದು ತಿಳಿದು ತಿಮ್ಮನ ಮನೆಗೆ ಆತ ಆಗಾಗ ಹೋಗಿ ಬರುತ್ತಿದ್ದ. ಹೋಗದಿದ್ದುದು ಬೂದನ ಮನೆಗೆ ಮಾತ್ರ. ಕೆಂಪಿಯೂ ಅದರಿಂದ ನೊಂದುಕೊಂಡಂತಿಲ್ಲ. ಅವಳ ನಿಡು ನಾಲಿಗೆಗೆ ಅದೂ ಒಂದು ಆಹಾರವಾಯಿತಷ್ಟೆ.

ಮಲೆಯ ಜೀವನದಲ್ಲಿ, ಗಿಡ್ಡಿ ತಿಮ್ಮನೊಡನೆ ದಾಂಪತ್ಯ ನಡೆಸಿ, ಸುಖ ದುಃಖಗಳಿಗೆ ಭಾಗಿನಿಯಾಗಿ ಎರಡು ವರ್ಷಗಳು ಸಂದುವು. ಆಕೆಯಲ್ಲಿ ತಾಯ್ತನದ ಲಕ್ಷಣಗಳು ಕಾಣಿಸತೊಡಗಿದುವು. ಅವಳ ಚೆಲುವು ಇದರಿಂದ ಇಮ್ಮಡಿಸಿತು. ಮುಖದಲ್ಲಿ ಕಾಂತಿ ಮಿನುಗತೊಡಗಿತು. ಅದನ್ನರಿತ ತಿಮ್ಮನ ಬಾಳಿನಲ್ಲಿ ಹೊಸ ಸೊಬಗೇ ಉದಯಿಸಿತು. ಆ ಸಂತೋಷದ ಹಿಗ್ಗಿನಲ್ಲಿ, ಅವನ ಪಾಲಿಗೆ ಕಹಿಯಾಗಿ ಕಂಡ ಒಂದು ಅನುಭವವನ್ನು ಮಾತ್ರ ಹೇಳಲೇ ಬೇಕಾಗುತ್ತದೆ.

ಆ ವರ್ಷ ತಿರುಮಲಭಟ್ಟರು ನವರಾತ್ರಿಯನ್ನು ಕಳೆದು ಬಂದವರು, ಮಲೆಯಲ್ಲಿ ನಾಲ್ಕು ತಿಂಗಳಕಾಲ ವಾಸಿಸಿದರು. ಈ ಬಾರಿ ತಮ್ಮ ಹಳೆ ಮನೆಯನ್ನು ಬಿಟ್ಟು, ಹೊಸ ಮನೆ ಕಟ್ಟುವ ಹಂಚಿಕೆ ಮಾಡಿದರು. ಹಿರಿ ಕಿರಿಯ ಮಲೆಗಳೆರಡೂ ಈಗ ಅವರದ್ದಾಗಿದ್ದುವು. ಮಲೆಯಲ್ಲಿರಬೇಕಾದ ದಿನಗಳ ಅವಧಿಯೂ ಹೆಚ್ಚಿತು. ಕಿರಿ ಮಲೆಯ ಪಾರುಪತ್ಯಕ್ಕೆ ಬೂದನನ್ನು ನೇಮಕ ಮಾಡಿದ್ದಾರೆ. ಆಗಾಗ ಕೆಳಗಿನ ಕಾಡುಗಳಿಗೆ ನಾಟ ಸಿಗಿಯುವಲ್ಲಿ ಓಡಾಡುತ್ತಿದ್ದ ತುಕ್ರನನ್ನು, ಹಿರಿ ಮಲೆಗೆ ಹೋಗಿ ಬರುವ ರಾಯಭಾರಿ ಯಾಗಿ ಮಾಡಿದ್ದಾರೆ. ಆತ ಹಿರಿಮಲೆಯಲ್ಲಿ ಅಷ್ಟೊಂದು ಪ್ರತಿಷ್ಠಿತ ವ್ಯಕ್ತಿ ಅಲ್ಲವಾದರೂ, ಆದಷ್ಟು ಜಾಣ್ಮೆಯಿಂದ ಆ ಮಲೆಯವರ ಸ್ನೇಹ ಸಂಪಾದಿಸಿ ದನು. ಧನಿಗಳ ಕೆಲಸ ಕೆಡಬಾರದೆಂದು, ಆಗದವರನ್ನು ಒಲಿಸಿಹನು.

ಎಂದಿನಂತೆ ಕ್ರಮ ತಪ್ಪದೆ ಮಲೆಯ ಏಲಕ್ಕಿ ಧನಿಗಳಿಗೆ ಬರುವಂತೆ ಮಾಡಿದನು.

ಇತ್ತ ಹೊಸ ಮಲೆಯ ಕೆಲಸ ಸಣ್ಣದಲ್ಲ, ಪುಟ್ಟದಲ್ಲ ತಮ್ಮ ಪ್ರತಿಷ್ಠೆಗೆ ಸಮನಾದ ಬಂಗಲೆ ಕಟ್ಟಿಸುವ ಕೆಲಸ ಭಟ್ಟರದು. ಮೊದಲಿನ ಅವರ ಮನೆ ಸಣ್ಣ ಬಿದಿರಿನ ಗುಡಿಸಲಂತಿತ್ತು. ಈಗ ಹಾಗಿಲ್ಲ. ಕನ್ನಡ ಜಿಲ್ಲೆಯಿಂದ ಬಡಗಿಗಳು ಬಂದರು, ಔಡಾರಿಗಳನ್ನು ಕರೆಸಿದರು, ಮರ ಸಿಗಿಯುವವರು ಬಂದರು. ಬರಿಯ ನಾಲ್ಕು ತಿಂಗಳ ಅವಧಿಯಲ್ಲಿ, ಮೊದಲಿನ ಮನೆಗೆ ಸಮೀಪವಾಗಿ ಚಂದವಾದೊಂದು ಬಂಗಲೆಯನ್ನೇ ನಿರ್ಮಿಸಿದರು. ಮನೆಯ ಕೆಲಸವೆಂದರೆ ಸಣ್ಣ ಕೆಲಸವಲ್ಲ; ಮಣ್ಣು ತರಬೇಕು, ಕಲ್ಲು ಹೇರಬೇಕು, ಚಿಕ್ಕ ಪುಟ್ಟ ಹಲವಾರು ದುಡಿಮೆಗಳಲ್ಲಿ ಕೇರಿಯ ಗಂಡಸರು, ಹೆಂಗುಸರು ನೆರವಾಗಬೇಕು. ಆ ಮಟ್ಟಿಗೆ ಯಾರೂ ತಲೆ ತಪ್ಪಿಸಿಕೊಳ್ಳುವಂತಿಲ್ಲ. ಗುರಿಕಾರ ಕರಿಯ, ಅವನ ಮಾವ ಬೂದ, ತಿಮ್ಮ ಇವರೆಲ್ಲ ನೆರವಾದಂತೆ, ಕೇರಿಯ ಹೆಂಗುಸರು, ಮಣ್ಣು ಹೊರುವ ಕೆಲಸಕ್ಕೋ, ಮನೆ ಮುಗಿದ ಮೇಲೆ ಅಂಗಳ ಸಾರಣೆ ಮಾಡುವ ಕೆಲಸಕ್ಕೋ ನೆರವಾಗಬೇಕು. ಹೀಗಾಗಿ ಗಿಡ್ಡಿ ಸಹ ಗಂಡನಂತೆ, ತನ್ನೊಡನೆ ಹೆಚ್ಚು ಮಾತಾಡದ ಬಂಧುಗಳ ಸಮುದಾಯದಲ್ಲಿ, ಸೇರಿ ದುಡಿಯಬೇಕಾಯಿತು. ಅವರಲ್ಲಿ ಕೆಂಪಿಯೊಬ್ಬಳು ಧನಿಯ ಮನೆಯ ಪರಿಚಾರಿಕೆಯಲ್ಲಿ ನಿರತಳಾಗಿದ್ದುದರಿಂದ ಆ ಕೆಲಸಕ್ಕೆ ಬರುತ್ತಿರಲಿಲ್ಲ. ಆದರೆ ಹತ್ತು ಗಜ ದೂರದಲ್ಲಿ ನಿಂತು—ನಡೆಯುವ ಕೆಲಸದಲ್ಲಿ ಯಾರೆಲ್ಲ ಸೇರಿದ್ದಾರೆ, ಸೇರಿಲ್ಲ—ಎಂದು ಕಾಣುವ ಕಣ್ಣು ಅವಳಿಗೆ ಇದ್ದೇ ಇತ್ತು. ಬಿಡುವಾದಾಗಲೆಲ್ಲ ಬೇಕಾಗಿಯೂ, ಬೇಡವಾಗಿಯೂ ಆ ಕಡೆ ಹಾಯ್ದು ಹೋಗುತ್ತಿದ್ದಳು. ಧನಿಗಳು ಚಾವಡಿಯಲ್ಲಿ ಕುಳಿತು, ಎಲೆ ಅಡಿಕೆ ಮೆಲ್ಲುತ್ತ 'ಹಾಗೆ ಮಾಡಿ, ಹೀಗೆ ಮಾಡಿ' ಎನ್ನುವಾಗ ಕೆಂಪಿಯ ಕಣ್ಣು ಧನಿಯರನ್ನು ಹೊಂಚು ಹಾಕುತಿತ್ತು—ಎನ್ನುವುದರಲ್ಲಿ ತಪ್ಪಿಲ್ಲ. ಕೆಲಸ ಮಾಡುತ್ತಿರುವ ಯಾವಾಕೆಯ ಮೇಲೆ ದೃಷ್ಟಿ ನಟ್ಟರೂ, ಯಾರ ಬಳಿಯಲ್ಲಿ 'ಹಾಗಲ್ಲ, ಹೀಗೆ ಮಾಡು' ಎಂದರೂ, ಅವರ ಮೇಲೆ ಹಾರುತಿತ್ತು— ಕೆಂಪಿಯ ನೋಟ. ದುಡಿಯುವ ಹೆಂಗುಸರಲ್ಲಿ ಅಸಾಮಾನ್ಯವಾಗಿ ಕಾಣುತಿದ್ದ ವ್ಯಕ್ತಿ ಗಿಡ್ಡಿ. ಆಕೆಯನ್ನು ಕಂಡು ಭಟ್ಟರು ಯಾರೆಂದು ಕೇಳಿದರು.

ಕೇಳಿದ್ದು ಬೂದನೊಡನೆ. "ಅದು, ಆ ಪರಜಾತಿಗೆ ಹೋದಳಲ್ಲ—ಅವಳು. ನಮ್ಮ ತಿಮ್ಮ ಅವಳನ್ನು ಮದುವೆಯಾಗಿ ಬಂದಿದ್ದಾನೆ" ಎಂದು ತಾತ್ಸಾರದ ನುಡಿಯನ್ನಾತ ಆಡಿದರೂ, ಅವಳ ರೂಪರಾಶಿ ಭಟ್ಟರ ಮನಸ್ಸಿನಲ್ಲಿ ಅವಳನ್ನು ಕುರಿತಾದ ತಾತ್ಸಾರ ಹುಟ್ಟಿಸಲಿಲ್ಲ. ಉಳಿದವರೆಲ್ಲ ಹರಟೆಮಲ್ಲಿಯರಂತೆ ಕೆಲಸ ಮಾಡುತ್ತಿದ್ದರೂ, ಮೂಕಿಯಂತೆ ಇರುತ್ತಿದ್ದವಳು ಗಿಡ್ಡಿ. ಆದರೂ ಧನಿಯ ನೋಟ, ಅವಳ ಕಡೆಗೇ ಹರಿಯುತಿತ್ತು. ಪರ್ಯಾಯವಾಗಿ—'ಅಲ್ಲಿ ಮಣ್ಣು ಹಾಕಬಾರದಿತ್ತು. ಇಲ್ಲಿ ನೀರು ಹೆಚ್ಚಾಯಿತು' ಎಂದು ಯಾರನ್ನಾದರೂ ಉದ್ದೇಶಿಸಿ ಅವರು ಮಾತನಾಡಿದರೆ, ಅದು ಗಿಡ್ಡಿಯ ಕುರಿತೇ ಆಡುತ್ತಾರೆ. ಅದನ್ನು ತಿಳಿದೂ ತೋರಿಸಿಕೊಳ್ಳದೆ, ತನ್ನ ಪಾಲಿನ ಕೆಲಸ ನಡೆಸುತ್ತಿದ್ದಳು ಆಕೆ. ಅವರ ಇಂಥ ಒಂದು ಚರ್ಯೆ ಕೆಂಪಿಯ ನೋಟಕ್ಕೆ ಬಿತ್ತೆಂದರೆ, ಅವಳ ಹೊಟ್ಟೆಯ ಬಣವೆಗೆ ಬೆಂಕಿ ಬಿದ್ದಂತಾಗುತಿತ್ತು. ತನ್ನ ಈ ಪ್ರತಿಸ್ಪರ್ಧಿಯನ್ನು ಕೇರಿಯಿಂದಲೇ ತಾನು ಓಡಿಸದಿದ್ದರೆ ತನಗೆ ಸುಖವಿಲ್ಲ—ಎಂದಂದುಕೊಳ್ಳುವಳು ಅವಳು.

ಮುಂದೊಂದು ದಿನ ಕೆಂಪಿಗೆ ಮೈ ಸ್ವಸ್ಥವಿಲ್ಲವಾಯಿತು. ಆಗಲೂ, ಆಕೆ ತಿಂಗಳಾಗಿ ಮುಟ್ಟಿನ ಮನೆ ಸೇರಿದಾಗಲೂ, ತನ್ನ ಬದಲು ಧನಿಯ ಮನೆಯ ಪರಿಚಾರಿಕೆ ಮಾಡಿದವಳು ಗಿಡ್ಡಿ—ಎಂದು ತಿಳಿದ ಮೇಲೆ, ಅವಳಿಗಾದ ಕೋಪ ಅಷ್ಟಿಷ್ಟಲ್ಲ. ಅನಂತರ ಮೈ ಚೆನ್ನಾಗಿಲ್ಲದಿದ್ದರೂ, ಆ ದಣಿವನ್ನಡಗಿಸಿಕೊಂಡು, ಆ ಕೆಲಸಕ್ಕೆ ಗಿಡ್ಡಿ ಬಾರದಂತೆ, ಮಾಡಲು ತಾನೇ ಕೆಲಸಕ್ಕೆ ಹೋಗತೊಡಗಿದಳು. ನೆಗಡಿ ಬರಲಿ, ಶೀತವಿರಲಿ, ಜ್ವರವಿರಲಿ—ಚೆನ್ನಾಗಿರುವವಳಂತೆ ನಟಿಸಿ, ಪರಿಚಾರಿಕೆ ಮಾಡುತ್ತಾಳೆ. ತಾನು ಹೊರಗಾದ ದಿನ, ತನ್ನ ಅತ್ತೆಯನ್ನು ಒತ್ತಾಯಿಸಿ ಕಳುಹಿಸುತ್ತಾಳೆ. ಒಂದು ದಿನ ಇಬ್ಬಿಬ್ಬರು, ಅಂದರೆ ಬೂದನ ತಾಯಿ ಮತ್ತು ಗಿಡ್ಡಿ ಇಬ್ಬರೂ ಕೆಲಸ ಮಾಡಬೇಕಾಯಿತು. ಇಂಥ ಒಂದೊಂದು ಸಂಗತಿ—ಕೆಂಪಿಯ ಮನದಲ್ಲಿ ಹುಣ್ಣಿಗಿಟ್ಟ ಬರೆಯಂತೆ. ಕೆಂಪಿಯ ಮನ ಇದರಿಂದಾಗಿ ಇಲ್ಲದ ಉದ್ವೇಗ ತಾಳಿತು. ಆದರೆ ತನ್ನ ಸಿಡುಕು ಧನಿಯ ಆಸೆಗಳಿಗೆ ಅಡ್ಡಬರಲಾರವು—ಎಂಬ ಯೋಚನೆಯೂ ಮೂಡಿತು. ಆದರಿಂದಲೇ ಅವಳು ದಾರಿ ಬದಲಿಸಿದಳು. ಎಲ್ಲಿಲ್ಲದ ಕ್ಷಮೆ, ಪ್ರೇಮ ತೋರಿಸತೊಡಗಿದಳು. ಗಿಡ್ಡಿಯೊಡನೆಯೂ,

ತಿಮ್ಮನೊಡನೆಯೂ ತಿರುಗಿ ತಾನಾಗಿ ಮಾತುಕತೆಗೆ ತೊಡಗಿದಳು. ಧನಿಯ ಮನೆಗೆಲಸ ಸಂಪೂರ್ಣವಾಯಿತು. ಮನೆ ಒಕ್ಕಲ ದಿನ, ಹಿರಿಯ ಔತಣ ವಾದಾಗ, ಹೆಂಗುಸರ ಸಾಲಿನಲ್ಲಿ ಗಿಡ್ಡಿ ಮತ್ತು ಕೆಂಪಿ ಬಳಿಯಲ್ಲೇ ಕುಳಿತು ಮಾತನಾಡುತ್ತ ಉಣ್ಣುತ್ತಿದ್ದ ನೋಟ ಕೇರಿಯವರಿಗೆ ಆಶ್ಚರ್ಯವನ್ನುಂಟು ಮಾಡಿತು. ಧನಿಯರ ಕಣ್ಣಿಗೂ ಅದು ಬೀಳದೆ ಹೋಗಲಿಲ್ಲ. ಇಷ್ಟಿದ್ದರೆ, ತಿರುಮಲಭಟ್ಟರ ಕಾಮುಕ ಆಸೆಗಳಿಗೆ ಇನ್ನಷ್ಟು ಪ್ರೇರಣೆ ಬರುತಿತ್ತು. ಅವರು ತಿಮ್ಮನೊಡನೆ ಮೊದಲಿಗಿಂತ ಎಷ್ಟೋ ಸರಳವಾಗಿ ಮಾತನಾಡು ತ್ತಿದ್ದರು. ತಿಮ್ಮ ಅವರ ಮುಂದೆ ಹೆಚ್ಚಾಗಿ ಹಾಯುತ್ತಿರಲಿಲ್ಲ. ಮಾತ್ರವಲ್ಲ, ಗಿಡ್ಡಿಗೆ ಧನಿಗಳ ಮನೆಯ ಬಳಿ ಓಡಾಡುವಾಗ 'ಎಚ್ಚರವಾಗಿರು' ಎಂದೂ ಅನ್ನುತ್ತಿದ್ದ.

ಮನೆಯ ಕೆಲಸ ಮುಗಿದು, ಧನಿಗಳು ಆ ವರ್ಷಕ್ಕೆ ಮಲೆಯನ್ನು ಬಿಟ್ಟು ಹೊರಟುಹೋದರು. ಇನ್ನವರ ಭೇಟಿ ಕೇರಿಯ ಜನಕ್ಕೆ, ಮೂಲೆ ಗುಂಪಿನ ಜಾತ್ರೆಯ ವೇಳೆಗೆ. ಜಾತ್ರೆಗೆ ಅವರು ಬಂದರು. ಕೇರಿಯ ಕುಡಿಯ ರೆಲ್ಲ ಎಂದಿನಂತೆ ಅಲ್ಲಿಗೆ ಹೋಗಿದ್ದರು. ಮದುವೆಯಾದಮೇಲೆ, ತಿಮ್ಮನ ಪಾಲಿಗೆ ಅದು ಎರಡನೆಯ ಜಾತ್ರೆ, ಮೊದಲನೆಯ ಜಾತ್ರೆಗೆ ಗಿಡ್ಡಿ ಬಂದಿರ ಲಿಲ್ಲ. ಕೇರಿಯವರ ನಂಜಿನ ಮಾತುಗಳಿಂದ ನೊಂದು, ಮನೆಯಲ್ಲೇ ಹಬ್ಬ ಮಾಡಿದಳು. ಈ ಬಾರಿ ತಿಮ್ಮ ಕರೆದುಕೊಂಡು ಹೋಗಿದ್ದ, ತನ್ನ ಮನಸ್ಸು ತಡೆಯಲಾರದೆ. ಮೊದಲ ದಿನ ಧನಿಗಳು ಹಚ್ಚಡ ಹಂಚುವಾಗ ಅವನಿಗು ಸಹ ಬೂದ, ತುಕ್ರರಿಗೆ ಕೊಟ್ಟಂತೆ ಸ್ವಲ್ಪ ಹೆಚ್ಚು ಬೆಲೆಯ ವಸ್ತ್ರ ಕೊಟ್ಟರು. ಅದರಿಂದ ತಿಮ್ಮ ಪ್ರಸನ್ನನಾಗಿದ್ದ. ಆದರೆ ಕೆಂಪಿ ಗಿಡ್ಡಿಯ ರಿಬ್ಬರೂ ಒಂದೇ ಬಗೆಯ ಉಡುಗೊರೆಯನ್ನು ಪಡೆದು, ಆ ಸೀರೆಗಳನ್ನು ಉಟ್ಟು ನಲಿದಾಡಿದಾಗ ಅವನೆದೆಯ ರೋಷ ಉಲ್ಬಣಿಸಿತು. ಗಿಡ್ಡಿ, ಕೆಂಪಿ ಯೊಡನೆ ಹಳೆಯ ವೈರವನ್ನು ಮರೆತು ನಲಿದಾಡಿದಳು. ತಾನು ಕೊಂಡ ತಿಂಡಿಯನ್ನು ಅವಳಿಗೆ ಕೊಟ್ಟಳು; ಅವಳು ಕೊಟ್ಟಿದ್ದನ್ನು ತಾನು ತಿಂದು ನಲಿದಳು. ಆ ದಿನ ಅವಳು ತುಂಬ ಸಂತೋಷವಾಗಿದ್ದಳು. ಹಿರಿ ಮಲೆ ಯಿಂದ ಅವಳ ತಾಯ್ತಂದೆಯರೂ ಬಂದಿದ್ದರು. ಎಲ್ಲರೊಡನೆಯೂ ಒಡ ನಾಟವಾಡಿ, ಉತ್ಸವವನ್ನೆಲ್ಲ ನೋಡಿಕೊಂಡು, ತನ್ನ ಬಳಗದವರೊಂದಿಗೆ—

ಗದ್ದೆಯ ಮಗ್ಗುಲೊಂದರಲ್ಲಿ ಚಾಪೆ ಬಿಡಿಸಿ ಮಲಗಿಕೊಂಡಳು. ದೂರದಲ್ಲಿ ಇಡಿಯ ರಾತ್ರಿ ಹೊಲೆಯರ ದುಡಿಗಳು ಗೀತನಿನಾದವನ್ನು ಮೊಳಗಿಸುತ್ತಿದ್ದುವು. ನಿದ್ರೆ ಬಾರದ ಜನವೃಂದ, ಇನ್ನೂ ರಾತ್ರೆಯಲ್ಲಿ ಅಲೆದಾಡುತ್ತಿತ್ತು. ಮಾತನಾಡುತ್ತಿತ್ತು. ಅಗ್ಗಿಷ್ಟಿಕೆ ಹಾಕಿ, ಸುತ್ತುವರಿದು ಕುಳಿತು ಹರಟುತ್ತಿದ್ದರು. ಹೀಗೆ ಕುಡಿಯರೆಲ್ಲರೂ ಸುಖಸ್ವಪ್ನದಲ್ಲಿ ತೇಲುತ್ತಿದ್ದಾಗ—ಒಮ್ಮಿಂದೊಮ್ಮೆಗೆ ಸುಖಶಾಂತಿಯ ನಗು ಕಳೆದುಕೊಂಡವಳು, ವೇದನೆಯಲ್ಲಿ ನರಳಿದವಳು ಗಿಡ್ಡಿಯೊಬ್ಬಳೇ. ಯಾಕೋ ಏನೋ—ತಡೆಯಲಾರದ ಹೊಟ್ಟೆನೋವು ಅವಳಿಗೆ ತೊಡಗಿತು. ಮಲಗಿದ ಚಾಪೆಯಲ್ಲೇ ಕಿರುಚಾಡತೊಡಗಿದಳು. ಬಳಿಯಲ್ಲಿದ್ದ ಗಿಡ್ಡಿಯ ತಾಯಿಗೆ ಗಾಬರಿಯಾಯಿತು. ಆಕೆ ಮಗಳನ್ನು ಎರಡು ಮೂರು ಬಾರಿ ಹೊರಗೆ ಕರೆದುಕೊಂಡು ಹೋದಳು. ವಾಂತಿಯಾಯಿತು; ಭೇದಿಯೂಯಿತು. ಕತ್ತಲಲ್ಲೇ ಏನೇನೊ ಬೇರುಗಳನ್ನು ತಂದು, ಅವಳಿಗೆ ಅರೆದುಕೊಟ್ಟರು. ವಾಂತಿಭೇದಿಯ ಚಿಹ್ನೆ ಗುಣವಾದರೂ ಹೊಟ್ಟೆಯ ನೋವಡಗಲಿಲ್ಲ. ತಿಮ್ಮ ದಿಗಿಲುಗೊಂಡ; ಕರಿಯಣ್ಣನನ್ನು ಕರೆದು ತಂದ. ತಿಮ್ಮನಿಗೆ ತನ್ನ ಹೆಂಡತಿ ಆ ಗಳಿಗೆಗೋ, ಇನ್ನೊಂದು ಗಳಿಗೆಗೋ ಸತ್ತಾಳು—ಎಂಬ ಬೆದರಿಕೆಯಾಯಿತು. “ಅಣ್ಣಾ, ಏನಾದರೂ ಆಗಲಿ, ಅವಳನ್ನು ಮನೆಗೆ ಹೊತ್ತುಕೊಂಡು ಹೋಗುವ. ನಸುಕು ಹರಿದಾಯಿತು” ಎಂದು ಆತುರಪಟ್ಟ. ನಾಲ್ವರು ಬಂಧುಗಳು ಸೇರಿ, ಬೆಳಕು ಹರಿಯುವುದರೊಳಗೇನೆ, ಅವಳನ್ನು ಹೊತ್ತುಕೊಂಡು ಬೆಟ್ಟ ಏರಿದರು. ಕಿರಿ ಮಲೆಯನ್ನು ಸೇರಿದರು. ಇನ್ನೂ ಗಿಡ್ಡಿ ನೋವಿನಿಂದಲೇ ನರಳುತ್ತಿದ್ದಳು. ಆ ದಿನ, ಗಿಡ್ಡಿಯ ಹೊಟ್ಟೆಯಲ್ಲಿ ಉದಯಿಸಿದ ಚಿಕ್ಕ ಜೀವವೊಂದು ಬೆಳೆಯುದೆ ಬೆಳಕು ಕಂಡಿತು; ಅವಳ ಪ್ರಾಣವೇನೋ ಉಳಿಯಿತು. ಆದರೆ ಅದು ತಿಮ್ಮನ ಹಿರಿಯಾಸೆಯನ್ನೆಲ್ಲ ಒಡೆದು ಪುಡಿ ಮಾಡಿತು. ತಾಯಿಯ ಆರೈಕೆಯಲ್ಲಿ, ನಾಲ್ಕೆಂಟು ದಿನಗಳ ಔಷಧೋಪಚಾರದಲ್ಲಿ ಗಿಡ್ಡಿಯು, ಬಂದ ಈ ವಿಪತ್ತಿನಿಂದ ಪಾರಾದಳು.

ಇತ್ತ ಜಾತ್ರೆಗೆ ಹೋದ ಜನರೆಲ್ಲ ಮೆಲ್ಲನೆ ಮನೆಗೆ ಮರಳಿದರು. ಕೆಂಪಿ ಸಹ ಗಿಡ್ಡಿಯ ಮನೆಗೆ ಬಂದಳು. “ಏನಾಯಿತಕ್ಕ? ಏನಾಯಿತಕ್ಕ?” ಎಂದು ಅವಳನ್ನು ಉಪಚರಿಸಿದಳು. ತನ್ನ ಸಂತೋಷದ ಮೊಳಕೆ ಕುಡಿ

ಯೊಡೆಯುವ ಮುನ್ನವೇ, ಮುರಿಯಿತೆಂಬ ನೋವು ಗಿಡ್ಡಿಯ ಮನದಲ್ಲಿ ಕಂಡು ಬಂದಿತು. ಕೆಂಪಿ ಅದನ್ನು ತಿಳಿಯದೆ ಹೋಗಲಿಲ್ಲ. "ಪುಣ್ಯಕ್ಕೆ ನೀನು ಬದುಕಿದ್ದೀಯಲ್ಲ. ಅಷ್ಟಾದರೂ ಆಯಿತಲ್ಲ" ಎಂದು ಕೆಂಪಿಯೂ ಉಪಚಾರದ ನಾಟಕ ಹೂಡಿದಳು.

ಗಿಡ್ಡಿಗೆ ಬೇನೆಯಾದಾಗಲೂ, ಆಮೇಲೆಯೂ ತಿಮ್ಮ ಅವಳನ್ನು ಕೇಳುತ್ತಿದ್ದ—"ಏನು ತಿಂದೆ, ಏನು ತಿಂದೆ? ಅಜೀರ್ಣವಾಯಿತೋ ಏನೋ" ಎಂದು. ಅಜೀರ್ಣದಿಂದ ವಾಂತಿಭೇದಿ ತೊಡಗುತ್ತದೆಂದು ಅವನ ಅನುಭವವಾದರೂ, ಗಿಡ್ಡಿ—ಕೆಂಪಿಯ ಕೈಯಿಂದ ಖರ್ಜೂರವನ್ನು ಕೊಂಡು ತಿಂದಿದ್ದಾಳೆಂದು ಕೇಳುತ್ತಲೇ ಅವನ ಮನಸ್ಸು ಬೇರೆಯೇ ವಿಧದ ಯೋಚನೆ ಮಾಡಿತು. ಕರಿಯನನ್ನು ಕೇಳಿದ—"ಖರ್ಜೂರ ತಿಂದರೆ ಅಜೀರ್ಣವಾಗಬಹುದು, ಗರ್ಭ ಹೋದೀತೇ" ಎಂದು. ಕರಿಯ ಅದನ್ನೇನು ಉತ್ತರಿಸಬಲ್ಲ! ಆತ ಮದ್ದುಗಾರಿಕೆ ಬಲ್ಲ ಹಿರಿಯರನ್ನು ಕೇಳಿದ. ಅವರೂ ಏನೂ ಹೇಳದಾದರು. "ಖರ್ಜೂರ ಗರ್ಮಿಯೋ ಏನೋ" ಎಂದರು.

ತಿಮ್ಮನ ಮನಸ್ಸಿನಲ್ಲಿ—ಅಪೂರ್ವದ ನಂಟುತನ ನಟಿಸಿ, ಕೆಂಪಿ ಖರ್ಜೂರದಲ್ಲಿ ಸೇರಿಸಿಕೊಟ್ಟ ಯಾವುದೋ ಮದ್ದಿನ ಫಲವಾಗಿ ಹೀಗಾಯಿತು—ಎಂಬ ಅನುಮಾನ ಬೇರೂರಿತು. ಹಿರಿ ಮಲೆಗೆ ಹೋಗಿ ಪೂಜಾರಿ ಬಿರುಮನಲ್ಲಿ ಆತ ಇದನ್ನು ಬಿನ್ನವಿಸಿಕೊಂಡಾಗ, ಅವನ ನಿಮಿತ್ತ್ಯದ ಫಲ "ಯಾರೋ ಮಾಟ ಮಾಡಿದ್ದಾರೆ" ಎಂದೇ ಸಾರಿತು. ತಿಮ್ಮ ಮನೆಗೆ ಬಂದ. ಹೆಂಡತಿಯೊಡನೆ "ಏನೂ ಇರಲಿ ಗಿಡ್ಡಿ, ನೀನು ಜೀವ ಹೋದರೂ, ಅವಳೇನನ್ನು ಕೊಟ್ಟರೂ ಇನ್ನು ಮುಂದೆ ತಿನ್ನಬಾರದು" ಎಂದು ಆಜ್ಞೆ ಮಾಡಿದ. ಆದರೂ ಗಿಡ್ಡಿಗೆ, ಕೆಂಪಿಯ ಇತ್ತೀಚಿನ ವರ್ತನೆಯ ಮೇಲಿಂದ ಅವಳಂತಹ ದುಷ್ಟೆ ಇರಲಾರಳು ಎಂದೇ ಅನಿಸಿತು.

ಮತ್ತೊಂದು ದಿನ—ಇಂಥದೇ ಇನ್ನೊಂದು ಚಮತ್ಕಾರ ನಡೆಯಿತು. ಸಂಜೆಗೆ ಮೊದಲು ಗಂಜಿ ಬೇಯಿಸಿ, ಗುಡಿಯಿಂದ ಹೊರಬಿದ್ದು, ಗಿಡ್ಡಿ ನೀರು ತರಲು ಹೋದಳು. ನೀರ ದಂಬೆಯಲ್ಲಿ ಮಿಂದು, ನಿಂತು, ಹೊರಡುವುದರೊಳಗಾಗಿ ಕೆಂಪಿ ಬಂದು ಅವಳನ್ನು ಮಾತನಾಡಿಸಿದಳು. ಆ ದಿನ ಆಕೆ ಮನೆಗೆ ಬಂದ ಮೇಲೆ, ಗಂಜಿಯ ಪಾತ್ರೆಯನ್ನು ಈಚೆಗೆ ಇಳಿಸಿ, ಅದರ

ಮುಚ್ಚಳವನ್ನು ತೆಗೆದು ನೋಡಿದಾಗ ಏನೋ ಒಂದು ಕಪ್ಪು ವಸ್ತು ಅದರಲ್ಲಿ ಕಾಣಿಸಿತು. 'ಅರೆ! ಮುಚ್ಚಿ ಇರಿಸಿದ ಹಾಗೆಯೇ, ಇದೇನು ಬಿದ್ದದ್ದು!' ಎಂದಳು. ಈಚೆ ಬೆಳಕಿಗೆ ಪಾತ್ರೆಯನ್ನು ತಂದು ತೆಗೆದು ನೋಡಿದರೆ, ಗಂಜಿಯಲ್ಲಿ ಬಿದ್ದುದು ಒಂದು ಓತಿಕೇತ! ನೀರಿಡುವಾಗಲೇ, ಎಸರಿಕ್ಕುವಾಗಲೇ ಅದು ಬಿದ್ದಿತ್ತೋ ಏನೋ ಎಂದು ಊಹಿಸಿ, ಸುಮ್ಮನಾದಳು. ಬೇರೆಯೇ ಗಂಜಿಯನ್ನು ಬೇಯಿಸಿದಳು. ತಿಮ್ಮ ಬರುವಾಗ ಹೊಸ ಗಂಜಿ ಬೆಂದಿರಲಿಲ್ಲ. "ಏನೋ, ಯಾಕಿಷ್ಟು ತಡ" ಎಂದಾಗ ಕಾರಣವನ್ನು ಹೇಳಿದಳು ಗಿಡ್ಡಿ. ತಿಮ್ಮನ ಅಂತರಂಗಕ್ಕೆ, ತಮ್ಮನ್ನು ಕೇರಿಯಿಂದ ಓಡಿಸಲು ವಿಷ ಉಣ್ಣಿಸುವ ಸಾಧನೆಯಲ್ಲಿ ಯಾರೋ ಇದ್ದಾರೆ—ಎಂಬ ಅನುಮಾನ ಖಾತ್ರಿಯಾಯಿತು. ಆತ ಗಾಬರಿಗೊಂಡ; ಕೋಪಗೊಂಡ. ಗಂಜಿಯ ಮಡಕೆಯನ್ನು ಹೊತ್ತು, ಕತ್ತಲಲ್ಲಿ ಎತ್ತಿಕೊಂಡು ಹೋಗಿ, ಗುರಿಕಾರ ಕರಿಯನ ಮುಂದೆ ಇರಿಸಿ ನಡೆದ ಸಂಗತಿಯನ್ನೆಲ್ಲ ಹೇಳಿದ. ಅದನ್ನು ಕಂಡು ಉದ್ದೇಶಪೂರ್ವಕವಾಗಿಯೇ ಯಾರಾದರೂ ಹಾಗೆ ಮಾಡಿರಬಹುದೆಂಬ ಅನುಮಾನ ಕರಿಯನಿಗೆ ಬಾರದೆಹೋದರೂ, ಮುಚ್ಚಿದ ಪಾತ್ರೆಯಲ್ಲಿ ಓತಿಕೇತ ಹೇಗೆ ಬಿದ್ದಿತೆಂದು ಅವನೂ ಊಹಿಸಲಾರದಾದ. "ಓತಿಕೇತ ಮನೆಯೊಳಗೆ ಹೇಗೆ ಬಂತು? ಮನೆಯೊಳಗೆ ಹಲ್ಲಿ ಬೀಳಬಹುದು. ಓತಿ ಬಂದೀತೇ? ಅದೂ ಇಷ್ಟು ದೊಡ್ಡದು! ಮೊದಲೇ ಬಿದ್ದಿದ್ದರೆ ಕಾಣಿಸುತ್ತಿರಲಿಲ್ಲವೇ" ಎಂದು ತಿಮ್ಮ ಆತನ ಅನುಮಾನ ಸಮರ್ಥನೆ ಮಾಡಿದ. ಅನಂತರ ಯೋಚಿಸಿ, "ಏನೂ ಇರಲಿ ತಿಮ್ಮ, ಅವಳಿಗೆ ಹೇಳು—ಮನೆಗೆ ಬಂದು ಹೋಗುವವರ ವಿಷಯದಲ್ಲಿ ಸ್ವಲ್ಪ ಕಣ್ಣಿಟ್ಟು ನೋಡಿಕೋ ಎಂದು" ಎಂದು ಉಪದೇಶಿಸಿ ಕಳುಹಿಸಿದ. ಮರುದಿನ ತಿಮ್ಮ ಇನ್ನೊಮ್ಮೆ, ಓರಿ ಮಲೆಗೆ ಹೋಗಿ ಪೂಜಾರಿಯೊಡನೆ ನಿಮಿತ್ತ್ಯ ಕೇಳಿದ; ತನ್ನ ಸಂದೇಹವನ್ನು ಅವನ ನುಡಿಯಿಂದ ಹೆಚ್ಚಿಸಿಕೊಂಡು ಬಂದ. ಅಲ್ಲಿಂದ ಅವನ ಮನಸ್ಸು—ತಾವು ಇನ್ನಿನ್ನು ಆ ಮಲೆಯಲ್ಲಿದ್ದರೆ, ಸುಖವಾಗಿ ಬಾಳಲಾರೆವು. ತಾವು ಬದುಕುವುದೇ ಇಷ್ಟವಿಲ್ಲದವರು ಅಲ್ಲಿದ್ದಾರೆ—ಎಂದು ಅನ್ನಿಸತೊಡಗಿತು. ಇದಾದ ಅನಂತರವೂ ಅವರು ಆರು ತಿಂಗಳಕಾಲ ಮಲೆಯಲ್ಲಿದ್ದುದಾದರೆ, ಅದು ಕರಿಯನ ಸ್ನೇಹಕ್ಕೂ ಮಾತಿಗೂ ಕಟ್ಟುಬಿದ್ದು; ಅವನ ಧೈರ್ಯ ನೆಚ್ಚಿ

ಕೊಂಡು. ಆ ಅವಧಿಯಲ್ಲಿ ಇನ್ನಾವ ಅನುಮಾನಕರ ಸಂಗತಿ ನಡೆದಿಲ್ಲ ವೆಂಬುದು ನಿಜ.

## ಅಧ್ಯಾಯ ೧೪

ಹೊರಗಿನವರ ಕಣ್ಣಿಗೆ, ತಿಮ್ಮನ ಸಂಸಾರ ತೊಡಕಿಲ್ಲದೆ ಸಾಗುತ್ತಿದೆ ಎಂದು ತೋರಿದರೂ ಸಂಶಯುಮನೋಗ್ರಸ್ತರಾದ ಅವರ ಪಾಲಿಗೆ, ಕಳೆದ ಪ್ರತಿಯೊಂದು ದಿನವೂ, ಮುಳ್ಳಿನ ಹಾಸಿಗೆಯಂತಾಗಿತ್ತು. ಯಾರು ತಮ್ಮ ಮನೆಯನ್ನು ಸಮೀಪಿಸಿದರೂ ಅನುಮಾನವೇ; ಯಾರು ಏನು ತಿನ್ನಲು ಕೊಟ್ಟರೂ ಅನುಮಾನವೇ. ಸ್ವತಃ ತಾವೇ ಅಡಿಗೆ ಅಟ್ಟು ಉಣ್ಣುವಾಗಲೂ—ಯಾರಾದರೂ ಏನಾದರೂ ವಿಷವಸ್ತುವನ್ನು ಬೆರೆಸಿರಬಹುದೇ—ಎಂಬ ಭೀತಿ. ಇವುಗಳು ಸಾಲದೆಂಬುದಕ್ಕೆ ಇತರ ತೊಡಕುಗಳೂ ಬಂದು ಸೇರಿದುವು ಮಳೆಗಾಲ ಕಳೆಯಿತು; ನವರಾತ್ರಿಯೂ ಕಳೆಯಿತು. ವಾಡಿಕೆಯಂತೆ ತಿರುಮಲಭಟ್ಟರು ಏಲಕ್ಕಿ ಮಲೆಯ ಪಾರುಪತ್ಯಕ್ಕಾಗಿ ಅಲ್ಲಿ ಬಂದು ವಾಸವೆಸಗಿದರು. ತಮ್ಮ ಹೊಸ ಮನೆ ದೊಡ್ಡದಾಗಿದ್ದುದರಿಂದ ಪರಿಚಾರಕರಿಗೆ ಇಬ್ಬಿಬ್ಬರಾದರೂ ಹೆಣ್ಣಾಳು ಬೇಕೆಂದು ತೋರಿತು. ಕೆಂಪಿ ಬಹುದಿನಗಳಿಂದ ಕೆಲಸಕ್ಕೆ ಬರುತ್ತಿದ್ದವಳು, ಅವಳ ಜತೆಗೆ ಗಿಡ್ಡಿಯೂ ಸೇರಬೇಕೆಂಬ ಕರೆ ಬಂದಿತು. ಅದು ತಿಮ್ಮನಿಗೆ ತೀರ ಹೆಚ್ಚಿನ ಅಸಮಾಧಾನವನ್ನುಂಟು ಮಾಡಿತು. ಆತ ಆಕೆಯನ್ನು ಕಳುಹಿಸಿಕೊಡಲಿಲ್ಲ. ಬದಲು ತಾನೇ ಹೋಗಿ "ಅವಳಿಗಷ್ಟು ಮೈ ಚೆನ್ನಾಗಿಲ್ಲ. ನಾಲ್ಕು ದಿನ ಕಳೆದು ಬರುವುದಕ್ಕಾದೀತೋ ಏನೋ. ಅಲ್ಲದೆ ಅವಳು ಬಸುರಿ ಇದ್ದಂತೆ ಕಾಣುತ್ತದೆ. ಮನೆಕೆಲಸ, ಈ ಕೆಲಸ ಎರಡನ್ನೂ ಮಾಡುವುದು ಹೇಗೋ" ಎಂದು ಅನುಮಾನ ಸೂಚಿಸಿ ಬಂದ. ಬಳಿಯಲ್ಲೇ ನಿಂತಿದ್ದ ಕೆಂಪಿ "ಯಾಕಯ್ಯ, ಇಬ್ಬರಿಬ್ಬರು. ನಾನಿಲ್ಲವೆ—ಗಟ್ಟಿಮುಟ್ಟಾಗಿದ್ದೇನೆ. ಇಂಥ ಹತ್ತು ಮನೆಯ ಕೆಲಸ ಮಾಡಿಯೇನು" ಎಂದು ಧನಿಯರ ಮುಂದೆ ನಗುತ್ತ ನುಡಿದಳು. ತಿಮ್ಮನಿಗೆ ಬೇಕಾದದ್ದು ಅದೇನೆ. ಹೀಗಾಗಿ ರಾಯರು, ಅವನನ್ನು ಬಲವಂತ ಮಾಡದೆ ಹೋದರೂ, ಅವರ ವಿಷಯದಲ್ಲಿ ಅವನ ಅಸಮಾಧಾನ ಮಾತ್ರ ಅಳಿಯಲಿಲ್ಲ. ಈ ಮಲೆಯಲ್ಲೇ ಇನ್ನೂ ಇದ್ದರೆ ಗಿಡ್ಡಿಯ ಬೆನ್ನಿಗೆ ತಾನು ಕಾವಲಿರಬೇಕಾದ ಪಾಡು ಬಂದೀತೆಂದು ತಿಮ್ಮ ಖಿನ್ನಮನಸ್ಕನಾದ.

ಅವನ ಯೋಚನೆ ಹೇಗೂ ಇರಲಿ, ಕೆಂಪಿಯ ಮನದಲ್ಲಿ ಮಾತ್ರ ಒಂದು ರೀತಿಯ ಅಸೂಯೆ ಕಾಡುತ್ತಲೇ ಇತ್ತು. ತನಗಿಂತ ಗಿಡ್ಡಿ ಚೆನ್ನಾಗಿ ಕಾಣಿಸಿದಳಲ್ಲ ಧನಿಗಳಿಗೆ—ಎಂಬ ಹೊಟ್ಟೆಕಿಚ್ಚು ಅವಳಿಗೆ. ಅಲ್ಲಿಗೆ ಬರುವಾಗಲೆಲ್ಲ ವಯ್ಯಾರಿಯಂತೆ ಹೂ ಮುಡಿದು, ಮನೆಯೆಲ್ಲ ತನ್ನದೇ—ಎಂಬ ಬೆಡಗಿನಿಂದ ಬಂದು ಕೆಲಸ ಮಾಡುತ್ತಿದ್ದರೂ, ಸ್ಪರ್ಧೆಯ ಭೀತಿ ಅವಳ ಮನದಿಂದ ಅಳಿಯಲಿಲ್ಲ. ಇದನ್ನು ಶಾಶ್ವತವಾಗಿ ನಿವಾರಿಸಿಕೊಳ್ಳುವ ಇಚ್ಛೆ ಅವಳದ್ದು. ತಿಮ್ಮನ ಬಾಯಿಯಿಂದ ಅವಳು ತಿರುಗಿ ಬಸುರಿ, ಇನ್ನೊಮ್ಮೆಯಾದರೂ ತಾಯಿಯಾದಾಳು—ಎಂದು ಕೇಳಿದ್ದು ಮತ್ತಷ್ಟು ಅಸಂತೋಷಕ್ಕೆ ಗುರಿಮಾಡಿತು. ಆದರೆ ಯಾವುದನ್ನೂ ಹೊರಗೆ ತೋರಿಸಿಕೊಳ್ಳದೆ ಗಿಡ್ಡಿಯೊಡನೆ ಅಚ್ಚುಮೆಚ್ಚಾಗಿ ವರ್ತಿಸತೊಡಗಿದಳು. ಅದೆಲ್ಲ ತೋರಿಕೆಯ ಸಂಟುತನ. "ನೀನು ಬಸಿರಿಯಂತೆ, ನಿಜವೇ?" ಎಂದು ಅವಳನ್ನೇ ಸಂತೋಷದ ಮುಖದಿಂದ ಕೇಳಿದಳು. ಅದರ ಇಮ್ಮಡಿ ಹೊಟ್ಟೆಯ ಸಂಕಟ ಒಳಗಿಂದೊಳಗೆ ಅವಳನ್ನು ಕಾಡುತಿತ್ತು. ಎರಡೆರಡು ಬಾರಿ ಅವಳನ್ನು ಮುಗಿಸುತ್ತೇನೆ—ಎಂದು ಹಂಚಿಕೆ ಹೂಡಿದ್ದಳು. ಮೊದಲೊಮ್ಮೆ ಮೂಲೆ ಗುಂಪಿನ ಜಾತ್ರೆಯಲ್ಲಿ, ಖರ್ಜೂರದಲ್ಲಿ ಏನನ್ನೋ ಬೆರೆಸಿಕೊಟ್ಟಿದ್ದಳು. ಗಂಜಿಗೆ ಆ ದಿನ ಓತಿಕೇತ ತಂದು ಹಾಕಿದವಳು ಅವಳೇ. ಮೊದಲ ಬಾರಿ, ಅವಳ ಆಸೆ ಅರ್ಧಮರ್ಧ ಯಶಸ್ವಿಯಾಯಿತು. ಎರಡನೆಯ ಬಾರಿ ಅದೂ ಆಗಲಿಲ್ಲ. ಇನ್ನೇನು ಮಾಡಿಯೇನು—ಹೇಗೆ ಈ ಕಂಟಕ ನಿವಾರಿಸಿಕೊಂಡೇನು—ಎಂಬ ಹಟ ಅವಳನ್ನು ಬಿಡಲಿಲ್ಲ. ಗಿಡ್ಡಿ ಮಾತ್ರ ತನ್ನ ನಿಜವಾದ ವೈರಿಯಾರು—ಎಂದು ತಿಳಿಯದೆಹೋಗಿದ್ದಳು. ತೀರ ಮೊದಲಿಗೆ ಅವಳ ವಿಷಯದಲ್ಲಿ ನಂಜು ಮಾತನಾಡಿದವರು, ಅವಳ ಮನೆಗೆ ಬಾರದೆ ಹೋದವರು ಕೆಂಪಿಯೊಬ್ಬಳೇ ಅಲ್ಲ, ಕೇರಿಗೆ ಕೇರಿಯೇ ಹಾಗೆ ಮಾಡಿತು. ಆದರೆ ತನ್ನ ಪುಣ್ಯಕ್ಕೆ ಕೆಂಪಿ, ತನ್ನ ತಪ್ಪು ತಿಳಿದವಳಂತೆ, ಬಾಯಿ ಬಿಟ್ಟು ಕ್ಷಮೆ ಕೇಳದಿದ್ದರೂ, ನಡಿಗೆಯಲ್ಲಿ ಹಿತದವಳಾಗಿ ಕಾಣಿಸುತ್ತಿದ್ದಾಳಲ್ಲ—ಎಂಬುದು ಅವಳ ಸಮಾಧಾನ. ಈ ಐದಾರು ತಿಂಗಳುಗಳಿಂದ, ಅಂದರೆ ಮಳೆಗಾಲದಲ್ಲಿ, ಕುಮರಿಯಲ್ಲಿ ವಾಸವಾಗಿದ್ದಾಗಲೂ, ಅನಂತರವೂ ಕೇರಿಯ ಜನ ಮೊದಲಿಗಿಂತ ಅವರಿಗೆ ಎಷ್ಟೋ ಸಮೀಪರಾಗಿದ್ದಾರೆ. ಆದರೂ ತನ್ನ

ಗಂಡ "ಇಲ್ಲಿ ನಮಗೆ ಸುಖವಿಲ್ಲ, ಎಲ್ಲಿಗಾದರೂ ಹೋಗೋಣ" ಎಂದು ಅನ್ನುತ್ತಲೇ ಇದ್ದಾನೆ. ಕೊನೆಗೂ ಏನು ಮಾಡುತ್ತಾರೋ. ತಿಳಿಯದ ಇನ್ಯಾವ ಕಾಡಿಗೆ ತನ್ನನ್ನೊಯ್ಯುತ್ತಾರೋ—ಎಂಬ ಭೀತಿ ಅವಳದ್ದು. ಆ ವಿಚಾರವಾಗಿ ಕರಿಯನಲ್ಲಿ ಹೇಳಿಕೊಂಡಳು. ಕರಿಯ ಅದಕ್ಕೆ ಪ್ರತಿಯಾಗಿ, "ಛೀ, ಹಾಗೆಲ್ಲಿಗೆ ಹೋಗುತ್ತಾನೆ. ಎಲ್ಲಿಯೋ ಆಕಸ್ಮಿಕವಾಗಿ ಏನಾದರೂ ಆಯಿತೆಂದು, ಅದನ್ನೇ ನಂಬಿ ಊರು ಬಿಡುವ ಮಾತುಂಟೆ? ನಾನಿಲ್ಲಿ ಇಲ್ಲವೆ? ಅಂಥ ಅನ್ಯಾಯ ನಡೆದರೆ, ಕೇಳಲು ಕೇರಿಯ ಹಿರಿಯರಾರೂ ಇಲ್ಲವೆ?" ಎನ್ನುತ್ತಿದ್ದ.

ಆದರೆ ತಿಮ್ಮನ ಬಾಳಿನಲ್ಲಿ ಮಲೆಯನ್ನು ಬಿಟ್ಟುಬಿಡಬೇಕಾದ ಪ್ರಸಂಗ ಕ್ಷಿಪ್ರದಲ್ಲೇ ಬಂದೊದಗಿತು. ಗಿಡ್ಡಿ ಧನಿಗಳ ಮನೆಯ ಚಾಕರಿಗೆ ಹೋಗದಿದ್ದರೂ, ತನ್ನ ನಿತ್ಯಜೀವನದ ಕೆಲಸಕ್ಕೆ ಮಲೆಯನ್ನು ಸುತ್ತಾಡದಿರುವುದಕ್ಕಾಗುತ್ತದೆಯೇ? ನೀರಿಗೆ ಹೋಗಬೇಕು, ಕಟ್ಟಿಗೆಗೆ ಹೋಗಬೇಕು, ಗಡ್ಡೆಗೆಣಸು ತರುವುದಕ್ಕೆ ಹೋಗಬೇಕು. ಅವಕಾಶವಾದಾಗ ಹಳ್ಳಕ್ಕೆ ಹೋಗಿ, ಇತರರಂತೆ ಏಡಿ, ಸಿಗಡಿ ಹಿಡಿದು ತರಬೇಕು. ಹಾಗೆ ಅಂಥ ಕೆಲಸಗಳಿಗಾಗಿ ಒಂಟಿಯಾಗಿ ಹೋಗುವುದುಂಟು, ಜತೆಗಾತಿಯರನ್ನು ಕಟ್ಟಿಕೊಂಡೂ ಹೋಗುವುದುಂಟು. ಹೀಗೆ ಹೊರಟಾಗಲೆಲ್ಲ ಅವಳಿಗೆ ಒಂದು ಬಗೆಯ ಸುಖವೂ ಕಾಣುತಿತ್ತು. ಎಳೆತನಕ್ಕೆ ಸಮನಾದ ಉತ್ಸಾಹವಿರುತಿತ್ತು. ಜೀವನಕ್ಕೆ ಒದಗಿದ ಕಸುಬು ಮಾಡದೆ, ಮನೆಯಲ್ಲಿ ಕುಳಿತಿರುವುದಕ್ಕಾಗುತ್ತದೆಯೇ! ಆದರೆ ಇತ್ತೀಚೆಗೆ ಒಂದೆರಡು ಬಾರಿ ಹಳ್ಳದ ದಂಡೆಗೆ ಹೋದಾಗ, ಅವಳೊಂಟಿಯಾಗಿದ್ದಾಗ, ಧನಿಗಳು ಕೆಲಸ ಇದ್ದೋ ಇಲ್ಲದೆಯೋ, ಆ ಕಡೆ ಬಂದು, ಅವಳ ಮುಂದೆ ಸುಳಿದಾಡಿದ್ದುಂಟು. "ಏನು, ಒಬ್ಬಳೇ ಬಂದೆ? ಏಡಿ ಸಿಕ್ಕಿತೆ? ಎಷ್ಟು ಸಿಕ್ಕಿತು? ಹ್ಯಾಗೆ ಅದರ ಪದಾರ್ಥ ಮಾಡುತ್ತೀರಿ?" ಎಂದು ಹರಟೆಯ ಚಾಪಲ್ಯ ತೋರಿಸಿದ್ದೂ ಉಂಟು. ಈಕೆ ಚುಟುಕಿನಲ್ಲಿ ಉತ್ತರ ಕೊಟ್ಟು, ತನ್ನ ಕೆಲಸ ಮುಗಿಸಿ, ಬೇಗನೆ ಅಲ್ಲಿಂದ ಕೇರಿಗೆ ಹೋಗಬೇಕಾದ ಪ್ರಮೇಯವೂ ಉಂಟಾಯಿತು. ನೇರವಾಗಿ ಅಲ್ಲದಿದ್ದರೂ ಪರ್ಯಾಯವಾಗಿ "ಯಾಕೋ ಏನೋ, ಧನಿಗಳು—ಹೊಳೆಯ ಬುಡಕ್ಕೆ ಎರಡು ಮೂರು ದಿನವೂ ಬಂದಿದ್ದರು" ಎಂದು ಆಕೆ ತಿಮ್ಮನೊಡನೆ ಹೇಳಿ

ದಳು. ತಿಮ್ಮ ಅದಕ್ಕೆ "ಅವರಿಗೇನು, ತಿಂದ ತೆಗಲಿ" ಎಂದು ಒರಟು ಉತ್ತರ ಸಲ್ಲಿಸಿದ. ಅನಂತರ ತಿಮ್ಮನ ಮನಸ್ಸಿನಲ್ಲಿ, ಗಿಡ್ಡಿಯನ್ನು ತಾನು ಹೊಂಚುಹಾಕುತ್ತಿರಬೇಕು—ಎಂಬ ಭಾವನೆ ಮೂಡಿತು. ಆಕೆಯೂ ಕೆಂಪಿಯ ದಾರಿ ಹಿಡಿದರೆ ತನ್ನ ಗತಿಯೇನು?—ಎಂಬ ಭೀತಿಯೂ ಉಂಟಾಯಿತು. ಅವಳಿಗೆ ಹೇಳದಿದ್ದರೂ, ಅವಳಿಂಥ ಕೆಲಸಗಳಿಗೆ ಹೋದಾಗ, ತಿಮ್ಮ ಬೇಟೆಯ ನೆಪದಿಂದಲೋ, ಬೀಳಲು ತರುವ ನೆಪದಿಂದಲೊ, ಅವಳು ಇರುವ ತಾವಿಗೆ ಒಂದು ಕೂಗಿನ ಸಮೀಪದಲ್ಲಿ ಅಲೆದಾಡುತ್ತಲಿರುವ.

ಒಂದು ದಿನ ಗಿಡ್ಡಿ, ಕತ್ತಿ ಹಿಡಿದುಕೊಂಡು, ಹಳ್ಳದ ಮಗ್ಗುಲಿಗೆ ಹೋದಳು. ಹೋಗುವಾಗ ಜತೆಗೆ ಒಬ್ಬಿಬ್ಬರು ಹೆಂಗುಸರಿದ್ದರು. ಕಲ್ಲನ್ನು ಎಬ್ಬಿಸುತ್ತ, ಏಡಿ ಒಟ್ಟುಮಾಡುತ್ತ, ಅವರವರ ಪಾಲಿನ ಶಿಕಾರಿಮಾಡಲು ಚೆದರಿದರು. ಗಿಡ್ಡಿ ಏಡಿ ಹಿಡಿಯುವುದನ್ನು ಬಿಟ್ಟು, ಅಲ್ಲಿಯೇ ಒಂದು ಮರಕ್ಕೆ ಸುತ್ತಿದ್ದ ಹೆಗ್ಗೆಣಸಿನ ಬಳ್ಳಿಯನ್ನು ಕಂಡು, ಅದರ ಬುಡ ಹರಡಲು ಹೋದಳು. ಕತ್ತಿಯ ಮೊನೆಯಿಂದ ಗೆಣಸಿದ್ದ ಸ್ಥಳವನ್ನು ಅಗೆಯುತ್ತ ಕುಳಿತಳು. ಯಾರೋ "ಏನು ಗಿಡ್ಡಿ, ಕಾಣಲಿಕ್ಕೆ ಅಪೂರ್ವ" ಎಂದಂತಾಯಿತು. ಕತ್ತು ತಿರುಗಿಸಿದಳು—ನೋಡುತ್ತಾಳೆ. ಬೆನ್ನಿಗೇ ನಿಂತಿದ್ದಾರೆ ಧನಿಗಳು! ಗಾಬರಿಗೊಂಡು ಕತ್ತಿ, ಕೋಲುಗಳನ್ನು ಅಲ್ಲೇ ಬಿಟ್ಟು, ಸರಕ್ಕನೆ ಮಗ್ಗುಲಿಗೆ ಸರಿದು ನಿಂತಳು; ಕೇರಿಯ ಹಾದಿಯನ್ನು ಹಿಡಿದಳು. ಭಟ್ಟರು ಸಂಕೋಚದಿಂದ ಆಕೆ ಹಾಗೆ ಹೋಗುತ್ತಿರಬಹುದೆಂದು ಊಹಿಸಿ, ಅವಳನ್ನೇ ಹತ್ತು ಹೆಜ್ಜೆ ಹಿಂಬಾಲಿಸಿದರು. ಹಿಂಬಾಲಿಸಿ ಹೋಗಿ, ಆಕೆಯ ಬೆನ್ನ ಮೇಲೆ ಕೈಯಿಟ್ಟರು. ಗಿಡ್ಡಿ ಬೆದರಿಕೆಯಿಂದ ಚೀರಿದಳು; ಅಲ್ಲಿಂದ ಧಾವಿಸಿಯೇ ಬಿಟ್ಟಳು. ಈ ಅವಕಾಶವನ್ನು ಹೊಂಚುಹಾಕುತ್ತಿದ್ದ ತಿಮ್ಮಗೆ, ಧನಿಗಳ ಉದ್ದೇಶ ತಿಳಿಯದ್ದಲ್ಲ. ಅವನ ಎದೆ ಕೋಪದಿಂದ ಸ್ಫುರಿಸುತಿತ್ತು. ಆತ ನಿಂತಲ್ಲಿಂದಲೇ—ಕೈಯಲ್ಲಿದ್ದೊಂದು ಬಡಿಗೆಯನ್ನು 'ರುಮ ರುಮ' ಬೀಸಿ ಎಸೆದ. ಗಿಡ್ಡಿ ಅದನ್ನು ಕಂಡಿದ್ದಳೋ ಇಲ್ಲವೋ. ಬೀಸಿದ ಬಡಿಗೆ ಮಾತ್ರ ಅಂಬಿನ ವೇಗದಿಂದ ಭಟ್ಟರ ಕಪಾಲಕ್ಕೆ ಬಡಿಯಿತು. ಅವರು ಏಟಿನ ಭರದಿಂದ ಅಲ್ಲಿಯೇ ನೆಲಕ್ಕೆ ಬಿದ್ದರು. ತಿಮ್ಮ, ಅವರ ಕತ್ತು ಹಿಸುಕುತ್ತೇನೆಂದು ಅಲ್ಲಿಗೇನೆ ಓಡಿಹೋದ. ಹಣೆಯಲ್ಲಿ ರಕ್ತಸ್ರಾವವಾಗಿ,

ಭಟ್ಟರು ಮೂರ್ಛೆಬಿದ್ದುದನ್ನು ಕಂಡು, ಅವನಿಗೂ ಬೆದರಿಕೆಯಾಯಿತು. ಅಲ್ಲಿಂದ ಅವನೂ ಓಟ ಕಿತ್ತ. ಕೇರಿಯ ಮನೆಗೆ ಧಾವಿಸಿದ. ಅದೇ ಕ್ಷಣ ಮನೆಯನ್ನು ಸೇರಿದ. ಗಿಡ್ಡಿಯ ಕೈಯನ್ನು ಹಿಡಿದು "ಆಯಿತು, ನಮಗೆ ಮಲೆಯ ಋಣ. ಏನೇನೂ ಹೇಳಬೇಡ—ಏನೂ ಮಾತನಾಡಬೇಡ. ಹೊರಡುವ—ಇಲ್ಲಿಂದ. ಇಲ್ಲಿ ನಮಗೆ ಸುಖವಿಲ್ಲ—ಎಂದು ಮೊದಲೇ ಗೊತ್ತಿತ್ತು" ಎಂದು ನುಡಿದ. ಗಿಡ್ಡಿಗೂ ಮುಂದಿನ ಬಾಳಿನ ಭೀತಿ ಉಂಟಾಗಿತ್ತು. ಮಾತಿಲ್ಲದೆ ಅವರಿಬ್ಬರೂ ಮನೆಯಿಂದ ಹೊರಕ್ಕೆ ಬಂದರು. ಗುಡಿಸಲಿನ ಕದವನ್ನು ಇಕ್ಕಲಿಲ್ಲ. ಬರಿಯ ಒಂದೆರಡು ಚಿಂದಿಬಟ್ಟೆ, ಒಂದೆರಡು ಗಡಿಗೆಗಳನ್ನು ಅಡಗಿಸಿ ಹಿಡಿದುಕೊಂಡು ಅಲ್ಲಿಂದ ಹೊರಟೇಬಿಟ್ಟರು.

ಆ ದಿನವೆಲ್ಲ ಕೇರಿಯಲ್ಲಿ ಕೋಲಾಹಲವೇ ಕೋಲಾಹಲ! ಹಿರಿಮಲೆಯಿಂದ ಮರಳಿ ಬರುತ್ತಿದ್ದ ತುಕ್ರನ ಕಣ್ಣಿಗೆ ದಾರಿಯಲ್ಲಿ ಮೂರ್ಛಿತರಾಗಿ ಬಿದ್ದ ಧನಿಗಳ ಶರೀರ ಕಾಣಿಸಿತು. ತನ್ನ ಕೊಳೆಬಟ್ಟೆಯನ್ನೇ ಹಳ್ಳದ ನೀರಿನಲ್ಲಿ ಅದ್ದಿ, ಅವರ ಹಣೆಗಿಟ್ಟು, ಎಲೆಯ ದೊನ್ನೆಯಿಂದ ನೀರು ತಂದು ಅವರ ಬಾಯಿಗೆ ಸುರಿದು, ಅವರು ಚೇತನಗೊಂಡಮೇಲೆ "ಏನು, ಏನಾಯಿತು!" ಎಂದು ಕೇಳಿದ. ಏನಾಯಿತೆಂಬುದು ಅವರ ಬಾಯಿಯಿಂದ ಬರಲಿಲ್ಲ. ಬಡೆದವರನ್ನು ಅವರು ಕಂಡಿರಲೂ ಇಲ್ಲ. ಕಂಡ ಸಂಗತಿ, ನಡೆದ ಸಂಗತಿ ಹೇಳುವುದಕ್ಕೂ ಉಪಾಯವಿರಲಿಲ್ಲ. ಆದರೆ ತುಕ್ರ ಅಲ್ಲಿಂದ ಕೇರಿಗೆ ಓಡಿಹೋಗಿ ಧನಿಗಳಿಗೆ 'ಗುಳಿಗ' ಬಡಿದಿದೆ ಎಂದು ಹೇಳಿ, ಬೆದರಿಕೆಯಿಂದ ನಾಲ್ಕು ಜನರನ್ನು ಕಟ್ಟಿಕೊಂಡು, ಧನಿಗಳು ವಿರಮಿಸುತ್ತಿದ್ದ ಸ್ಥಳಕ್ಕೆ ಬಂದು, ಅವರನ್ನು ಹೊತ್ತುಕೊಂಡು ಮನೆಗೆ ಸಾಗಿದ. "ಸುಮ್ಮನೆ ತಿರುಗಾಟಕ್ಕೆ ಹೋಗಿದ್ದೆ. ಏನೋ ರುಮ್ಮನೆ ಕಪಾಲಕ್ಕೆ ಬಡಿದ ಹಾಗೆ ಆಯಿತು. ಮತ್ತೇನಾಯಿತೆಂದು ನನಗೆ ಗೊತ್ತಾಗಲಿಲ್ಲ" ಎಂದು ಅವರೆಂದುದರಿಂದ, 'ಅದು ಗುಳಿಗಳ ಉಪದ್ರ' ಎಂಬುದೇ ಎಲ್ಲರಿಗೂ ಖಾತ್ರಿಯಾಯಿತು. 'ಅಲ್ಲ, ಬೇರೇನೋ ನಡೆದಿದೆ' ಎಂಬ ಅನುಮಾನ, ಭಟ್ಟರಿಗೆ ಗೊತ್ತಿದ್ದರೂ ಅವರು ಹೇಳುವಂತಿರಲಿಲ್ಲವಷ್ಟೆ!

ಮರುದಿನ, ಕೆಂಪಿ ಮಾತ್ರ ಈ ರಹಸ್ಯಭೇದನೆಗೆ ಪ್ರಯತ್ನ ಮಾಡಿದಳು. 'ರಾತ್ರಿ ಗಿಡ್ಡಿಯ ಮನೆಯಲ್ಲಿ ಯಾರ ಧ್ವನಿಯೂ ಕೇಳಿಸಲಿಲ್ಲ.

ಬೆಳಿಗ್ಗೆ ಗಂಡ ಹೆಂಡಿರಿಬ್ಬರೂ ಮನೆಯಲ್ಲಿರಲಿಲ್ಲ. ಹಿಂದಣ ದಿನವೇ ಅವರಿಬ್ಬರು ಯಾರಿಗೂ ಹೇಳದೆಯೆ ಓಡಿಹೋಗಿರಬೇಕಾದರೆ, ಈ ಪ್ರಮಾದ ಅವರಿಂದಲೇ ನಡೆದಿರಬೇಕು. ಪ್ರಮಾದಕ್ಕೆ ಸೇರಿದ ಮೂರು ಮುಖ್ಯ ಪಾತ್ರಗಳ ಪರಿಚಯ ಅವಳಿಗೆ ಗೊತ್ತಿತ್ತು. ಹಿಂದೆ ತನಗಾದ ಅನುಭವ, ತಿಮ್ಮ ಅಡ್ಡ ಬಂದ ಸಂಗತಿ—ಇವುಗಳ ಮೇಲಿಂದ ಸತ್ಯ ಹೀಗೇನೆ'—ಎಂದು ಆಕೆ ತರ್ಕಿಸಿದಳು. ತುಂಬ ಸಂತೋಷಗೊಂಡಳು. ಏನೇ ಇರಲಿ—ತನ್ನ ದಾರಿಯ ಕಂಟಕವನ್ನು ದೈವವೇ ನಿವಾರಿಸಿತು—ಎಂದು ಅವಳು ತೀರ್ಮಾನಿಸಿದಳು. "ತಿಮ್ಮ, ಗಿಡ್ಡಿ ಯಾರೂ ಕಾಣುವುದಿಲ್ಲವಲ್ಲ; ಎಲ್ಲಿಗೆ ಹೋದರು! ಯಾಕೆ ಹೋದರು?" ಎಂದು ಅವಳು ಪ್ರತಿಯೊಬ್ಬರನ್ನು ಕೇಳುತ್ತ, ಆ ಸುದ್ದಿ ನಿಮಿಷದಲ್ಲಿ ಕೇರಿಯ ಸೊತ್ತಾಗುವಂತೆ ಮಾಡಿದಳು. ಮೊದಲಿನ ಒಂದೆರಡು ದಿನ, ಅವರಿಬ್ಬರು ಹಿರಿಮಲೆಗೆ ಹೋಗಿರಬಹುದು—ಎಂದು ಕೇರಿಯ ಜನ ಊಹಿಸಿದರು. ಅಲ್ಲಿಗೆ ಆಗಾಗ ಹೋಗಿಬರುತ್ತಿರುವ ತುಕ್ರನಿಂದ, ಅವರು ಅಲ್ಲಿಗೂ ಬಂದಿಲ್ಲ, ಎಂಬ ಸುದ್ದಿ ಮೆಲ್ಲಗೆ ತಿಳಿಯಿತು.

ಅವರು ಹೀಗೆ ಒಮ್ಮೆಗೇ ಅದೃಶ್ಯವಾದುದಕ್ಕೆ ಯಾರಿಗೆ ಹೆಚ್ಚು ಕಳವಳವಾಗದಿದ್ದರೂ, ಕರಿಯನಿಗೆ ಮಾತ್ರ ತುಂಬ ವ್ಯಥೆಯಾಯಿತು. ತಿಮ್ಮ ಆಗಾಗ 'ತನಗೆ ಈ ಮಲೆಯಲ್ಲಿ ಸುಖವಿಲ್ಲ' ಎಂಬ ಮಾತನ್ನು ಅವನೊಡನೆ ಹೇಳಿದ್ದರೂ, ಒಮ್ಮಿಂದೊಮ್ಮೆ, ತನ್ನಂಥ ಗೆಳೆಯನಿಗೆ ಸುದ್ದಿಯನ್ನು ತಿಳಿಸದೆ ಓಡಿಹೋಗುವ ಕಾರಣ ಅರಿಯದಾದ. ತಿಮ್ಮನ ಗುಣದೋಷಗಳೇನೇ ಇರಲಿ—ಆತ ನಿಷ್ಕಪಟಿ, ಸರಳ; ಬೇಟೆಯಲ್ಲಂತು ಬುದ್ಧಿವಂತ. ಕರಿಯನನ್ನು ಅಭಿಮಾನ ಪ್ರೀತಿಗಳೆರಡರಿಂದಲೂ ಕಂಡವನು. ಅವನಿಗೆ ಕಡಿಮೆಯಿಲ್ಲದ ಆದರದಿಂದ, ಗಿಡ್ಡಿ ಗಂಡನೊಡನೆ ಹೇಳಲಾರದ ಅನೇಕ ನೋವು ದುಃಖಗಳನ್ನು, ಅವನಲ್ಲಿ ಹೇಳಿದ್ದಾಳೆ. ಪ್ರತಿಯೊಂದು ವಿಚಾರದಲ್ಲಿಯೂ ಅವನನ್ನೇ ಕೇಳಿದ್ದಾಳೆ. ಅವರಿಬ್ಬರ ವಿಷಯದಲ್ಲೂ ಕರಿಯನಿಗೆ ತುಂಬ ವಾತ್ಸಲ್ಯ ಬೆಳೆದುಬಂದಿದೆ. ಹೆಚ್ಚಿನ ಯಾವುದಾದರೊಂದು ಆಪತ್ತು ಸಂಭವಿಸದಿರುತ್ತಿದ್ದರೆ ಅವರಿಬ್ಬರು ತನಗೂ ಸಹ ಹೇಳದೆ ಓಡಿಹೋಗುವ ಕಾರಣವಿರಲಾರದು—ಎಂದು ಊಹಿಸಿದ. ಆದುದರಿಂದಲೆ 'ಆ ದಂಪತಿಗಳಿಗೆ ಏನಾಯಿತೋ, ಹೊಸ ಸಂಕಟ ಏನು ಒದಗಿತೋ' ಎಂಬ ಚಿಂತೆ

ಯಿಂದ ಹಲುಬಿದ. ಮಲೆಯ ನಾಲ್ಕು ಸುತ್ತಲೂ ಅವರನ್ನು ಹುಡುಕಿ ಹುಡುಕಿ ದಣಿದ. ದಿನ ಹೋದಂತೆ ಅವರಿಗಾಗಿ ಅವನ ಜೀವ ಹೆಚ್ಚು ಹೆಚ್ಚಾಗಿ ಹಂಬಲಿಸತೊಡಗಿತು. ಆದರೂ ತನ್ನ ನೋವನ್ನು ಆತ ಬೇರೆ ಯಾರೊಡನೆ ಹೇಳಲಿಲ್ಲ.

ಒಂದು ದಿನ ತಿರುಮಲಧನಿಗಳು ಅವನನ್ನು ಮನೆಗೆ ಕರೆಯಿಸಿ ಕೊಂಡರು. ನೆಟ್ಟಗೆ ಒಂದು ಪ್ರಸ್ತಾಪವನ್ನೆತ್ತಿದರು—" ಕರಿಯ, ನೀನು ಈ ಮಲೆಯವರಿಗೆಲ್ಲ ಗುರಿಕಾರ. ಇಲ್ಲಿ ಏನಾದರೂ ಅನ್ಯಾಯ ನಡೆದರೆ, ನೋಡಿ ತುಬ್ಬು ಮಾಡಬೇಕಾದವನು ನೀನು " ಎಂದರು.

" ಅಂಥದೇನು ನಡೆದಿದೆ, ಒಡೆಯ ? "

" ನೋಡು, ನಾಲ್ಕಾರು ದಿನವಾಯಿತು. ನಾನು ನನ್ನ ಕೊರಳಿನ ಚಿನ್ನದ ಸರವೊಂದನ್ನು ಚಾವಡಿಯಲ್ಲಿಯೋ, ಬಚ್ಚಲಿನಲ್ಲಿಯೋ ತೆಗೆದಿರಿಸಿದ್ದೆ. ಅದು ಈಗ ಕಾಣೆಯಾಗಿದೆ. ಅದು ಹೋದ ದಿವಸವನ್ನು ಎಣಿಕೆ ಹಾಕಿದರೆ, ಆ ದಿನವೇ ನಿನ್ನ ತಿಮ್ಮನೂ, ಅವನ ಹೆಂಡತಿಯೂ ಓಡಿಹೋದ ದಿನವಾಗುತ್ತದೆ—ನಾನು ಮನೆಯಲ್ಲೆಲ್ಲ ಹತ್ತು ಹತ್ತು ಸಾರಿ ಹುಡುಕಿದೆ. ನನಗೆ ಖಂಡಿತಕ್ಕೂ ಅನಿಸುತ್ತದೆ—ಇದು ಅವರದ್ದೇ ಕೆಲಸವೆಂದು. ಅವರು ಸುದ್ದಿ ಹೇಳದೆ ಓಡಿಹೋಗುವುದಕ್ಕೆ ಅದೇ ಕಾರಣ " ಎಂದರು. ಈ ಮಾತನ್ನು ಕೇಳಿ, ಕರಿಯನಿಗೆ ಎಲ್ಲಿಲ್ಲದ ಆಶ್ಚರ್ಯವಾಯಿತು. ತಿಮ್ಮ ಚಿನ್ನದ ಒಡವೆಗಾಗಿ ಇಂಥ ಕೆಲಸ ಮಾಡಿಯಾನು—ಎಂದು ಅವನು ಎಣಿಸಲಾರ. ಅಲ್ಲದೆ, ಅವನು ಕಾಣೆಯಾದದ್ದು ಹಗಲಿಗೇನೆ. ಸಂಜೆ ತಾನು ಅವರ ಮನೆಗೆ ಹೋದಾಗ, ಅಲ್ಲಿ ಯಾರೂ ಇದ್ದಿಲ್ಲವಾದುದರಿಂದ ಅವರು ಹಗಲೇ ಓಡಿಹೋಗಿರಬೇಕು. ಹಗಲೇ—ಗಿಡ್ಡಿಯಾಗಲೀ, ತಿಮ್ಮನಾಗಲಿ—ಇಂಥ ಒಂದು ಕಳವು ಮಾಡಿ ಓಡಿಹೋದಾರು—ಎಂದವನು ಎಣಿಸಲಾರ. ಓಡಿ ಹೋಗುವುದಕ್ಕೆ ಅವರ ಭಯ ಭೀತಿಗಳು ಕಾರಣವೆಂಬುದು ನಿಜ. ಕಳವು ಕಾರಣ—ಎಂಬುದನ್ನು ಅವನ ಮನಸ್ಸು ಎಂದೂ ಒಪ್ಪಲಾರದು. "ಅಯ್ಯಾ ನಾನೇನನ್ನಲಾರೆ. ಅವರಿಬ್ಬರು ಓಡಿಹೋಗಿದ್ದಾರೆಂಬುದರಿಂದ ಅವರೇನೆ ಕದ್ದಿರಬೇಕು—ಎಂದು ಹೇಳುವುದಕ್ಕೆ ನನಗೆ ಧೈರ್ಯ ಬಾರದು. ಅವನು ಈ ತನಕ ಅಂಥ ಕೆಲಸ ಮಾಡಿದವನಲ್ಲ."

" ಮಾಡಿದ್ದಾನೋ, ಇಲ್ಲವೋ ನಾನು ಕಂಡು—ಹೇಳಿದ್ದಲ್ಲ. ಕದ್ದು ಹೋದುದಕ್ಕೂ, ಅವರು ಓಡಿ ಹೋದುದಕ್ಕೂ ಸಮನಾಯಿತು. ಹಾಗಾಗಿ ಅಂದೆ. ಏನೂ ಇರಲಿ. ನೋಡು, ಮಲೆಯಲ್ಲಿ ನಿಮ್ಮನ್ನು ಎಷ್ಟು ವರ್ಷಗಳಿಂದ ಮಕ್ಕಳ ಹಾಗೆ ಸಾಕಿಬಂದಿದ್ದೇನೆ ನಾನು. ಏನಾದರೂ ಆಗಿದ್ದರೆ, ಕೇರಿ ಬಿಡಬೇಕಾದರೆ ಅವನೇ ಬಂದು ಹೇಳಬೇಕಾಗಿತ್ತಲ್ಲ—ಒಂದು ಮಾತನ್ನು. ಈ ಏಲಕ್ಕಿ ಬೇಸಾಯದ ಸಮಯದಲ್ಲಿ ನನ್ನನ್ನು ಕೇಳದೆಯೆ, ನಾನೊಂದು ಕಸವೆಂದೆಣಿಸಿ, ಹೇಳದೆ ಹೋದರಲ್ಲ ಅವರು. ಏನು ಧೈರ್ಯ ಅವರದ್ದು! ನೋಡು, ನೀನು ಯಜಮಾನ ಎಂದು ನಿನಗೆ ಈ ಸಂಗತಿ ಹೇಳಿದೆ. ಅವರು ಎಲ್ಲಿಯೋ ಅಡಗಿರಲಿ—ಕದ್ದಿರಲಿ, ಬಿಡಲಿ—ಆ ಮಾತು ಬೇರೆ; ಅವರಿಬ್ಬರನ್ನೂ ನೀನು ನನಗೆ ಹುಡುಕಿ ತಂದು ತೋರಿಸಬೇಕು. ಅಲ್ಲದೆ ನಿನಗೂ ಅವರಿಗೂ ಒಳ್ಳೆಯದಿದೆ. ನಿನ್ನಿಂದಾಗಬಹುದಾದ ಕೆಲಸ ಇದು " ಎಂದರು.

ಕರಿಯು ತನ್ನ ಅವರ ಒಳ್ಳೆತನವನ್ನು ಒಪ್ಪಿಕೊಂಡ. ಆದರೆ ಅವರು ತನಗೂ ಹೇಳದೆ ಹೋಗಿದ್ದಾರೆಂದು ವ್ಯಥೆಯನ್ನು ಸೂಚಿಸಿದ. ಅವರು ಹೊರಟುಹೋಗುವುದಕ್ಕೆ—ತನಗೆ ತೋರಿದ ಅನುಮಾನ ಹೇಳಿದ. ಹಿಂದೆ ನಡೆದ ವಿಷಪ್ರಯೋಗದ ಎರಡೆರಡು ಕಥೆಗಳನ್ನು ವರ್ಣಿಸಿ, ಅದರಿಂದ ಆ ದಂಪತಿಗಳಲ್ಲಾದ ಪರಿಣಾಮವನ್ನು ವಿಸ್ತರಿಸಿ ಹೇಳಿ, ಅವರು ನಿರಪರಾಧಿಗಳೆಂದು ತನ್ನ ಅಭಿಪ್ರಾಯವನ್ನು ತಿರುಗಿ ವ್ಯಕ್ತ ಮಾಡಿದ. ಆದರೆ ತಿರುಮಲಭಟ್ಟರು ಬರಿಯ ಮಾತುಗಳಿಂದ ಮರುಳಾಗುವವರಲ್ಲ; ಅವರು ತಮ್ಮ ಆಳುಗಳನ್ನು ಕರೆದು, ತಮ್ಮಲ್ಲಿ ಹುದುಗಿದ್ದ ಕೋಪಕ್ಕೆ ಎಡೆ ಕೊಟ್ಟು " ಏನೇ ಇರಲಿ, ಏನೇ ಆಗಲಿ, ಈ ಮಲೆಯಲ್ಲಿ ಯಾವ ಮೂಲೆಯಲ್ಲಿ ಅವರು ಅಡಗಿದ್ದರೂ ಅವರನ್ನು ಹಿಡಿದು ತರಬೇಕು " ಎಂದು ಆಜ್ಞೆ ಮಾಡಿದರು. ಭಟ್ಟರು ಹೇಳಿದ ನೆಪ—ಬೂದ, ತುಕ್ರ ಮೊದಲಾದವರ ಪಾಲಿಗೆ ಸಾಕಾಗಿತ್ತು. ಅದನ್ನು ನಂಬಿ ಅವರು ತಿಮ್ಮನಿಗಾಗಿ ಹುಡುಕಾಡತೊಡಗಿದರು. ಅನಿವಾರ್ಯವಾಗಿ, ಕರಿಯು ಸಹ ತನ್ನ ಗೆಳೆಯರಿಗೆ ಬರಲಿರುವ ಆಪತ್ತನ್ನು ನಿವಾರಿಸುವ ಸಲುವಾಗಿ, ಹುಡುಕಾಡತೊಡಗಿದ.

ನಾಲ್ಕೆಂಟು ದಿನ ಮಲೆಯ ಆಳುಗಳು ಏಲಕ್ಕಿಯ ಕೆಲಸದಲ್ಲಿ ಬಿಡುವು

ಮಾಡಿಕೊಂಡು, ಮನುಷ್ಯ ಸಂಚರಿಸಬಹುದಾದ ಆ ಅರಣ್ಯದ ಎಲ್ಲ ಮೂಲೆ ಮೂಲೆಗಳನ್ನು ಹೊಕ್ಕು, ಹುಡುಕಿ, ಗಿಡ್ಡಿ ತಿಮ್ಮರ ಸುಳಿವು ಕಾಣದೆ ಮರಳಿ ಬಂದರು. ಕರಿಯ ಆ ಕೆಲಸ ತೊಡಗುವ ಮೊದಲು ಹಿರಿ ಮಲೆಗೆ ಹೋಗಿ ಬಂದ. ಗೆಳೆಯನ ಮೇಲೆ ಬಂದ ಅಪವಾದ ತನ್ನ ಮೇಲೆ ಬಂದದ್ದು— ಎಂಬಷ್ಟು ನೋವು ಅವನ ಮನದಲ್ಲಿ ಉಂಟಾಗಿತ್ತು. ಆ ನೋವನ್ನು ಹೊತ್ತುಕೊಂಡು, ಮೊದಲು ಹಿರಿ ಮಲೆಗೆ ಧಾವಿಸಿದ. ತಿಮ್ಮನ ಮಾವನ ಮನೆಗೆ ಹೋದ. ಚೋಮನಿಗೆ ಈ ಸುದ್ದಿಯನ್ನು ಕೊಟ್ಟ. ಅವನ ದುಃಖ ಗಳಿಗೆ ಪಾಲಾದರು, ಚೋಮ ಮತ್ತು ಅವನ ಹೆಂಡತಿಯರು. ಅವರೊಡನೆ ಕಿರಿಮಲೆಯಲ್ಲಿ ನಡೆದ ಮಚ್ಚು ಮಾಟಗಳ ವಿಚಾರವಾಗಿ ಕರಿಯ ತರ್ಕಿಸಿದ. ಅನಂತರ ಅವರನ್ನು ಕಟ್ಟಿಕೊಂಡು ಪೂಜಾರಿಯಲ್ಲಿಗೆ ಹೋಗಿ ಪ್ರಶ್ನೆ ಕೇಳಿದ. ಮೊದಲ ಪ್ರಶ್ನೆ "ಧನಿಯರ ಮನೆಯಿಂದ ಸರವನ್ನು ಕದ್ದವರು ಯಾರು ?" ಎಂಬುದು. ಎರಡನೆಯ ಪ್ರಶ್ನೆ "ತನ್ನ ಮಿತ್ರರಿಗೆ ಏನಾಗಿದೆ, ಅವರು ಎಲ್ಲಿ ಇದ್ದಾರೆ ?" ಎಂದು. ಪೂಜಾರಿ ಕವಡೆ ಉರುಳಿಸಿದ, ಲೆಕ್ಕ ಹಾಕಿದ, ಬಾಯಿ ಮಣಮಟ ಮಾಡಿದ. "ಸರವನ್ನು ಯಾರೋ ಕುಲದ ಹೊರಗಿನವರು ಕದ್ದದ್ದು" ಎಂದುಬಿಟ್ಟ. ಅದಕ್ಕೆ ಕಾರಣವೂ ಇತ್ತು. ಕದ್ದದ್ದು ನಿಜವೋ ಅಲ್ಲವೋ ಎಂದು ಅವನು ಹೇಳಲಾರದವನಾದರೂ, ತಮ್ಮ ಜನ ಚಿನ್ನ, ವಸ್ತು, ಒಡವೆಯೆಂದು ಒಬ್ಬರ ಸೊತ್ತು ಇನ್ನೊಬ್ಬರು ಅಪಹರಿಸುವ ಕತೆ ಅವನು ಕೇಳಿದವನಲ್ಲ. ಜೀವನಕ್ಕೆ ಬೇಕಾಗುವ ಪ್ರತಿಯೊಂದು ವಸ್ತು ಒಡವೆಯನ್ನು ತಮ್ಮ ಕಾಲ ಬುಡದಲ್ಲಿಯೇ ಹುಡುಕಿ ತೆಗೆಯಬಹುದಾದ ಅವರು ಕದಿಯಬೇಕೇನೇ ? ಚಿನ್ನದ ವಸ್ತುಗಳ ಬಾಯಾರಿಕೆ ಅವರಿಗೇಕೆ ? ಬಾಹ್ಯ ಪ್ರಪಂಚದಲ್ಲಿ—ಚಿನ್ನ ದೊಡ್ಡ ವಸ್ತುವೆಂಪೆನಿಸಬಹುದಾದರೂ ಅದನ್ನಿರಿಸಿಕೊಳ್ಳಲೇಬೇಕೆಂಬ ಲವಲವಿಕೆ ಕುಡಿಯರಿಗಿಲ್ಲ. ಹಾಗಾಗಿ 'ಹೊರಗಿನ ಜನರೇ ಕದ್ದದ್ದು ; ಜಾತಿಯವರಲ್ಲ' ಎಂದದ್ದು ಕರಿಯನಿಗೂ ತೃಪ್ತಿ ಮಾಡಿತು. ಎರಡನೆಯ ಪ್ರಶ್ನೆಗೆ—ತನ್ನ ಭಯಭೀತ ಶಿಷ್ಯನ ಮುಖವನ್ನು ನೋಡಿ, ಆತ ಅಂದಿದ್ದಿಷ್ಟೆ—"ಅವರು ಸತ್ತಿಲ್ಲ ; ಇದ್ದಾರೆ ಬದುಕಿ, ಭಯಭೀತಿ ಹೆಚ್ಚು. ಮೂಡು ದಿಕ್ಕಿನಲ್ಲಿ ಇದ್ದಾರೆ. ಬಂದಾರು ಒಂದಲ್ಲ ಒಂದು ದಿನ" ಎಂದು. ಬಿರುಮ ಹೇಳಿದ ದಿಕ್ಕಿನ ಸೆರಗನ್ನು ಹಿಡಿದು,

ಆ ಪರ್ವತಪ್ರದೇಶದಲ್ಲಿ ಅವರನ್ನು ಅರಸಲು ಬಂದೀತು ಎಂಬ ಧೈರ್ಯ ಮಾತ್ರ ಕರಿಯನಿಗೆ ಉಂಟಾಗಲಿಲ್ಲ. ಅವನ ಮನಸ್ಸಿನಲ್ಲಿ, ಮಳೆ ಬಿಟ್ಟು ಏಳಲಾರದ ತಿಮ್ಮ, ಘಟ್ಟದ ಕೆಳಕ್ಕೆ ಹೋಗಿ ಜೀವನ ಮಾಡಬಹುದು—ಎಂಬ ಅನುಮಾನಕ್ಕೆ ಎಡೆಕೊಡಲಿಲ್ಲ. ಮಲೆಯೇ ಕುಡಿಯ ಮಕ್ಕಳ ತವರು. ಆದರೂ—ಇಬ್ಬರೇ ಸಾಹಸಪಟ್ಟು, ಆ ವಿಶಾಲವಾದ ಪರ್ವತ ಪ್ರದೇಶದಲ್ಲಿ, ಎಲ್ಲಿ ಅಡಗಿರಬಹುದಾದರೂ, ಬದುಕಿ ಜೀವನ ಮಾಡುವುದು ಕಠಿಣವೆಂದೇ ತೋರಿತು. ಗಿಡ್ಡಿಯೂ ಮೂರು ನಾಲ್ಕು ತಿಂಗಳ ಬಸಿರಿ. ಅಂಥವಳನ್ನು ಕಟ್ಟಿಕೊಂಡು, ಈ ತಿಮ್ಮ ಹುಚ್ಚನಂತೆ ಏಕೆ ಹೊರಟುಹೋದ, ಎಲ್ಲಿ ವಾಸವಾಗಿದ್ದಾನೆ—ಎಲ್ಲಾದರೂ ವಾಸವಾಗಿದ್ದರೆ, ಕಷ್ಟದಲ್ಲಿದ್ದಾಗ ಅವರಿಗೆ ನೆರವಾಗುವವರಾರು—ಎಂಬ ಚಿಂತೆಯಿಂದಲೇ ಕರಿಯ ತನ್ನ ಮಲೆಗೆ ತೆರಳಿದ. ಅವನು ಗೆಳೆಯನಿಗಾಗಿ ಹುಡುಕಲು ಹೊರಟಂತೆ, ಗಿಡ್ಡಿಯ ತಾಯ್ತಂದೆಯವರು ಸಹ, ತಮ್ಮ ಅಳಿಯನಿಗಾಗಿ ಅರಣ್ಯದಲ್ಲಿ ಹುಡುಕಾಡ ತೊಡಗಿದರು.

ನಿತ್ಯ, ನಿತ್ಯ ತಿರುಮಲಧನಿಗಳು 'ಏನಾಯಿತು, ಸುದ್ದಿ ಸಿಕ್ಕಿತೇ?' ಎಂದು ಕೇಳುತ್ತಲೇ ಇದ್ದಾರೆ. ಕೇರಿಯ ಕುಡಿಯರು ತಿಮ್ಮನನ್ನು ಕಾಣದೆ ಮರಳಿದರು. ಕಾಳ ಮಲೆರಾಯನ ಗುಹೆಯ ತನಕ ಹೋಗಿ, ನಿರಾಶೆಗೊಂಡು ಬಂದ. ಕರಿಯ ಎಲ್ಲೆಲ್ಲೂ ಅವನಿಗಾಗಿ ಅರಸಿದ. ಧನಿಗಳು ಅವನನ್ನು ಸಂಧಿಸಿದಾಗಲೆಲ್ಲ "ಅವನೊಮ್ಮೆ ಸಿಕ್ಕಲಿ ಅವನ ಚರ್ಮ ಸುಲಿಸಿಬಿಡುತ್ತೇನೆ" ಎಂದು ನುಡಿದರು. ಅವರ ಸೇಡು, ಕೋಪಗಳ ಮಾತಿನ ಅರ್ಥ ಕರಿಯನಿಗೆ ತಿಳಿಯದ್ದಾಯಿತು. 'ಕದ್ದುದಕ್ಕೆ ಇಷ್ಟು ಸಿಟ್ಟೇ? ಮಲೆ ಬಿಟ್ಟದ್ದಕ್ಕೆ ಇಷ್ಟು ಸಿಟ್ಟೇ?' ಒಂದೂ ತಿಳಿಯಲಾರದಾದ ಅವನು.

ಎಲ್ಲಿಲ್ಲದ ಬೇಸರದ ಬಾಳು ಕರಿಯನದು. ಏಲಕ್ಕಿ ತೋಟಕ್ಕೆ ಹೋಗಿ, ಇತರರ ಜತೆಗೆ ದುಡಿದು, ವೈ ನುಗ್ಗುಮಾಡಿಕೊಂಡು ಮನೆಗೆ ಬರುತ್ತಾನೆ. ತನ್ನ ಗಂಜಿಯನ್ನು ತಾನೇ ಬೇಯಿಸಿಕೊಳ್ಳುತ್ತಾನೆ. ಗೆಳೆಯರ ಚಿಂತೆಯಿಂದ ಹಾಸಿಗೆಯಲ್ಲಿ ಹೊರಳಾಡುತ್ತಾನೆ. ಬೂದ ನಾಲ್ಕೈದು ಬಾರಿ ಅಲ್ಲಿಗೆ ಬಂದು "ಯಾಕಣ್ಣಾ, ನಮ್ಮಲ್ಲಿಗೆ ಬರಬಾರದೇ. ಕೆಂಪಿ ಬಹಳ ಸಾರಿ ಹೇಳಿದ್ದಾಳೆ—ನೀನು ಬೇರೆ ಗುಡಿ ಕಟ್ಟಿದರೇನಾಯ್ತು? ಮದುವೆಯಾಗುವ ತನಕ

ವಾದರೂ ನಮ್ಮಲ್ಲೇ ಇರು ಎಂದು." ಅದಕ್ಕೂ ಕರಿಯ ಪ್ರತ್ಯುತ್ತರ ಕೊಡಲಾರ. "ಮದುವೆಗೆ ಹೆಣ್ಣು ನೋಡಲೇ?" ಎಂದರೆ, "ಯಾರೂ ನನಗೆ ಹೆಣ್ಣು ನೋಡಬೇಕಾಗಿಲ್ಲ. ಆಗುವ ಕಾಲಕ್ಕೆ ಆಗುತ್ತೇನೆ" ಎಂದು ಸಂಭಾಷಣೆಯನ್ನೇ ಕಡಿಮೆಮಾಡುತ್ತಿದ್ದ. ಇಂಥ ಒಂದು ದಿನದಲ್ಲಿ—ಬಿನ್ನಾಣಗಿತ್ತಿ ಕೆಂಪಿ, ಅವನ ಗುಡಿಸಲಿಗೆ ತಾನಾಗಿಯೇ ಬಂದಳು. ಕರಿಯನ ಮುಖ ತುಂಬ ಬಾಡಿತ್ತು.

"ಇದೇನು ಕರಿಯಣ್ಣ, ತುಂಬ ಸೊರಗಿದ್ದೀಯೆ? ಗಿಡ್ಡಿ ಓಡಿ ಹೋದಳು ಎಂದು ನೀನು ಸೊರಗಿದರೆ ಹೇಗೆ?" ಎಂದುಬಿಟ್ಟಳು. ಗಿಡ್ಡಿಯ ವಿಚಾರದಲ್ಲಿ ಅವಳಿಗಿದ್ದ ಅಸಮಾಧಾನವೊಂದೇ ಇಂಥ ಮಾತಿಗೆ ಕಾರಣವಾಗಿರಬೇಕು. ಕರಿಯನಿಗೆ ಆ ಮಾತನ್ನು ಕೇಳಿ ಅಸಮಾಧಾನವಾಯಿತು. "ಅಕ್ಕ, ಗಿಡ್ಡಿಗೆ ಕೈಹಿಡಿದ ಗಂಡ ಇದ್ದಾನೆ. ಅವಳಿಲ್ಲಿ ಇದ್ದಾಗ ನೀನೇನೋ ಆಡುತ್ತಿದ್ದಿ—ಎಂದು ನನಗೆ ಗೊತ್ತು. ನನ್ನ ಹಿಂದೆಯೂ ಹಾಗೆ ಆಡುತ್ತಿದ್ದಿ. ಈಗಲೂ ಆಡುತ್ತಿದ್ದೀಯೆ. ಆದರೆ ಒಬ್ಬರು ಎದುರಿಗೆ ಇಲ್ಲದಾಗ ಸಲ್ಲದ ಮಾತು ಆಡಬಾರದು" ಎಂದ. ಕೆಂಪಿಯ ನಾಲಿಗೆ ಅಷ್ಟಕ್ಕೆ ನಿಲ್ಲಲಿಲ್ಲ. "ಏನೋ ಅಣ್ಣ, ನಿನಗೆ ಅವರು ಕದ್ದರೂ, ಬಿಟ್ಟರೂ—ಅವರೇ ದೇವರು. ನಾವೆಲ್ಲರೂ ಕಸ" ಎಂದಳು ಅವಳು.

"ಅವರು ಕದ್ದಿದ್ದಾರೆ—ಎನ್ನುವವರ ನಾಲಿಗೆ ಕೊಳೆತು ಹೋಗಲಿ" ಎಂದು ಕೋಪದಿಂದಲೇ ಕರಿಯ ಉತ್ತರ ಕೊಟ್ಟ. ಕೆಂಪಿಗೆ ಆತ ಈ ತನಕ ಹಾಗೆ ಮಾತನಾಡಿದವನಲ್ಲ. ಕೆಂಪಿ ಅಸಮಾಧಾನದಿಂದ ಹೊರಟು ಹೋದ ಮೇಲೂ ಕರಿಯನ ಮನಸ್ಸು ಕೆಂಪಿಯ ವಿಚಾರದಲ್ಲಿ ಸಿಟ್ಟುಗೊಂಡಿತ್ತು. ಅವರಿಬ್ಬರೂ ಕೇರಿಯಿಂದ ಓಡಿಹೋಗುವುದಕ್ಕೆ ಈ ದಿಂಡೆ ಹೆಂಗುಸೇ ಕಾರಣ—ಎಂದು ಆತ ನಿಶ್ಚಯ ಮಾಡಿಕೊಂಡ. ಹಿಂದಿನ ಕತೆಗಳೆಲ್ಲ ಅವನ ಆ ಅಭಿಪ್ರಾಯಕ್ಕೆ ಪುಷ್ಟಿಕೊಟ್ಟುವು. ಆದರಿಂದಾಗಿ, ಅನಂತರ ಕೆಂಪಿಯನ್ನು ಕಂಡಾಗಲೆಲ್ಲ ಮುಖ ತಗ್ಗಿಸಿ ಹೊರಟುಹೋಗುತ್ತಿದ್ದನೇ ಹೊರತು, ಅವಳೊಡನೆ ಮಾತನಾಡುತ್ತಿರಲಿಲ್ಲ. ಕೆಂಪಿ ಮಾತ್ರ ನಾಲಿಗೆಯ ಚಪಲ ತೀರಿಸಿಕೊಳ್ಳುವುದಕ್ಕೆ ಬೂದನೊಡನೆ "ನಿಜಕ್ಕೂ ಕರಿಯನಿಗೂ, ಗಿಡ್ಡಿಗೂ ಅಷ್ಟು ಅನ್ಯೋನ್ಯವಿದ್ದಿರಬೇಕು. ಅಲ್ಲವಾದರೆ ಅವನು ಅಷ್ಟು ಸೊರಗಲಿಕ್ಕಿಲ್ಲ" ಎನ್ನುತ್ತಿದ್ದಳು.

ಒಂದು ದಿನ ಕರಿಯನಿಗೆ—ಕುಳಿತಾಗ ಅನಿಸಿತು. 'ನಾನು ಕಾಡು ಬೀಡುಗಳನ್ನೆಷ್ಟೋ ತಿರುಗಾಡಿದ್ದೇನೆ. ಪೂಜಾರಿ ಹೇಳಿದ ಮಾತಿನಂತೆ ಮೂಡು ದಿಕ್ಕನ್ನೊಂದು ಸಾಕಷ್ಟು ಹುಡುಕಿಲ್ಲವಲ್ಲ' ಎಂದು. ಆ ಪರ್ವತ ಪ್ರದೇಶದಲ್ಲಿ, ಬೆಟ್ಟದ ಹರದಾರಿ ಹರದಾರಿ ದೂರದ ಸೆರಗುಗಳೆಲ್ಲವೂ ಮೂಡು ದಿಕ್ಕೇ! ಹಾಗೆಂದು ಹುಡುಕುವುದೂ ಹುಚ್ಚುತನ—ಎಂದು ಅವನಿಗೆ ತೋರದಿರಲಿಲ್ಲ. ಆದರೂ ಇನ್ನೊಮ್ಮೆ ಪ್ರಯತ್ನಿಸುತ್ತೇನೆಂದು ಹೊರಟ. ಹೆಚ್ಚುಕಡಿಮೆ, ಅವರ ಕೇರಿಗೆ ದಕ್ಷಿಣ-ಪೂರ್ವದಲ್ಲಿದ್ದುದು ಮಲೆರಾಯನ ಗುಹೆ. ಕಾಳ ಅಲ್ಲಿಗೆ ಹೋಗಿಬಂದದ್ದು ಅವನಿಗೆ ಗೊತ್ತಿರಲಿಲ್ಲ; 'ಅಲ್ಲಿದ್ದರೂ ಇರಬಹುದು'—ಎಂಬ ಅನುಮಾನ ಅವನಿಗಾಯಿತು. ಆದುದರಿಂದ ನೆಟ್ಟಗೆ ಅಲ್ಲಿಗೇನೆ ಹೊರಟ. ಹೊರಡುವಾಗಲೇ ಹೊತ್ತು ಮೂಡಿ ಜಾವವಾಗಿತ್ತು. ಹೊತ್ತಾರೆ ಏಲಕ್ಕಿ ಆಯ್ದು ಸಾಗಿಸುವ ಕೆಲಸ ಮುಗಿದಿದ್ದುದರಿಂದ, ಅವನಿಗೂ ವಿರಾಮ ದೊರಕಿತ್ತು. ಹಾಗೆ ಹೊರಟವನು ಗುಡ್ಡದ ಮೈಯನ್ನೇರಿ, ಮಲೆರಾಯನ ಗುಹೆಯ ಕಡೆಗೆ ನಡೆದ. ಜತೆಗೆ ಕಾಳನನ್ನು ಕರೆದೊಯ್ಯೋಣವೇ ಅನಿಸಿತು. ಆದರೆ ಧೈರ್ಯವಾಗಲಿಲ್ಲ. ಅವನಿಗೆ ಅವರಿರುವ ತಾವು ತಿಳಿದದ್ದೇ ಆದರೆ, ಆ ಸುದ್ದಿ ಅವನಿಂದ ಬೂದಗೆ, ಬೂದನಿಂದ ಧನಿಯರಿಗೆ ಮುಟ್ಟಿ ತನ್ನ ಗೆಳೆಯರಿಗೆ ಕಠಿಣದಂಡನೆ ಪ್ರಾಪ್ತಿಸಬಹುದು—ಎಂಬ ಭೀತಿ ಆಯಿತು. ಅದರಿಂದ ಒಬ್ಬನೇ ಮುಂದೆ ಸಾಗಿದ. ಮಲೆರಾಯನ ಗುಹೆಯೇನೋ ಬಂದಿತು. ಅದನ್ನು ಹೊಕ್ಕು, ಆಚೀಚೆ ಸುತ್ತಾಡಿ ನೋಡಿದ. ಜನರಾರೂ ಅಲ್ಲಿರಲಿಲ್ಲ. ಆದರೆ ಒಂದು ಒಲೆ ಹೂಡಿದ ಗುರುತೂ, ಮಸಿ ಕೆಂಡಗಳು ಬಿದ್ದ ಗುರುತೂ ಕಾಣಿಸಿತು. ಆದರೆ ಅಲ್ಲಿಗೆ ಯಾರೂ ಬಂದಿರಬಹುದು—ಎಂದಂದುಕೊಂಡ. ಕುಳಿತು ಕೆಲಸವಿಲ್ಲದ್ದಕ್ಕೆ ಕೆಂಡಗಳನ್ನು ಆಚೀಚೆ ಕೋಲಿನಿಂದ ಹರವಿ ನೋಡಿದಾಗ, ಅರ್ಧ ಸುಟ್ಟ ಗೆಣಸಿನ ತುಂಡೊಂದು ಕಾಣಿಸಿತು. ಕಾಡುಗೆಣಸಿನ ತುಂಡು! ಅದನ್ನೇ ತೆಗೆದ. ಕೈಯಿಂದ ಬಿಡಿಸಿ ನೋಡಿದ. ಅದರೊಳಗಿನ ನೀರ ಪಸೆ ಆರಿಹೋಗಿತ್ತು. ಒಂದೆರಡು ದಿನಗಳ ಹಿಂದೆ, ಅಥವಾ ಹೆಚ್ಚುಕಡಿಮೆ, ಒಂದು ವಾರದ ಹಿಂದೆ, ಇಲ್ಲಿ ಯಾರೋ ಅಡಿಗೆ ಅಟ್ಟಿದ್ದು ನಿಜ—ಎಂಬ ಭಾವನೆಯಾಯಿತು. ಇಲ್ಲಿಗೆ ಬಂದಿರಬೇಕು. ಈಗ ಗುಹೆಯಲ್ಲಿ ಅವರಿಲ್ಲದಿದ್ದರೆ, ಬೇರೆ ಯಾವುದಾದರೂ

ಗುಹೆಯಲ್ಲಿರಬಹುದು—ಎಂಬ ಅನುಮಾನವಾಯಿತು. ಆದರಿಂದೀಚೆಗೆ ಬಂದ. ಬೆಟ್ಟದ ಕಡಿದಾದ ಮೈಯನ್ನು ಹಿಡಿದುಕೊಂಡು, ದಕ್ಷಿಣಕ್ಕೆ ಸಾಲು ಸಾಲಾಗಿ ಬಿದ್ದ ಬಂಡೆಗಳನ್ನೆಲ್ಲ ಹತ್ತಿ, ಇಳಿಯತೊಡಗಿದ. ಯಾವೆಡೆಯಲ್ಲಿಯೂ ತಿಮ್ಮನ ಕುರುಹು ಕಾಣಿಸಲಿಲ್ಲ. ಮುಂದೆ ಕಾಣಿಸಿದ್ದೇ—ಕರಡಿ ಮನೆಮಾಡಿಕೊಂಡಿದ್ದ, ಎಳೆಯರಾಗಿದ್ದಾಗ ಇವರು ಬೆದರಿ ಹಿಂದಕ್ಕೆ ಬಂದಿದ್ದ ಗುಹೆ; ಅಲ್ಲಿಗೂ ಹೋಗಿ ಹುಡುಕಿದ. ಅಲ್ಲಿ ಹಿಂದೆ ಕಂಡ ಕರಡಿಯ ಹೊಳಪು ಕಣ್ಣುಗಳು ಕಾಣಿಸಲಿಲ್ಲ; ತಿಮ್ಮ ಗಿಡ್ಡಿಯರೂ ಕಾಣಿಸಲಿಲ್ಲ. 'ಇಲ್ಲ, ಇಲ್ಲೆಲ್ಲಿಗೋ ಬಂದು, ಅವರು ಕರಡಿಯ ಬಾಯಿಗೆ ಬಿದ್ದರೋ ಏನೊ! ಹಾಗಾಗಿದ್ದರೆ ಅವರ ಅರಿವೆಗಳ ಚೂರಾದರೂ ಕಾಣಿಸಬೇಡವೇ' ಎಂದು ತಿರುಗಿ ಹುಡುಕಲು ಹೊರಟ. ಕರಡಿಗುಹೆಯ ಸೆರಗನ್ನು ಹಿಡಿದು, ಇನ್ನೂ ನೂರು ಹೆಜ್ಜೆ ಮುಂದುವರಿಯುತ್ತಲೇ, ಬಂಡೆಗಳ ಸೆರಗೂ, ಕಾಡಿನ ಸೆರಗೂ ಕೊನೆಗೊಂಡಿತು. ಹಚ್ಚ ಹಸುರಿನ ಹುಲ್ಲು ಬೆಳೆದ ಭಾಗವೊಂದು ಬಂದಿತು. ಅದರಲ್ಲಿ ಮೇಲಕ್ಕೂ, ಕೆಳಕ್ಕೂ ಇಳಿಯದೆ, ನಾಲ್ಕು ಹೆಜ್ಜೆ ಮುಂದುವರಿದ. ಹುಲ್ಲನ್ನು ಮೆಟ್ಟಿ ತುಳಿದ ಗುರುತು ಇದೆ ಎಂದು ಊಹಿಸಿಕೊಂಡ. ಬಾನಲ್ಲಿ ಸೂರ್ಯ ನೆಟ್ಟಗೆ ಬಂದಿದ್ದ. ಇನ್ನೂ ವೇಳೆಯಿದೆ—ಇನ್ನೂ ಸ್ವಲ್ಪ ಹುಡುಕಬಹುದು—ಎಂದು ಧೈರ್ಯವಾಗಿ, ಹಾಗೆಯೇ ಮುಂದುವರಿದ. ಮುಂದೆ ಹೋದಂತೆ ಕಾಲುನಡಿಗೆಯ ಜಾಡು, ಮಗುಚಿ ಮುರಿದು ಬಿದ್ದ ಹುಲ್ಲುಗಳ ಸಾಲು ಸಮನಾಗಿ ಕಾಣುತಿತ್ತು. ಆದರೆ ಹಾಗಾಗುವುದು ಮನುಷ್ಯರಿಂದಲೂ ಸಾಧ್ಯ; ಕಾಡುಪ್ರಾಣಿಗಳ ಕಾಲುನಡೆಯಿಂದಲೂ ಸಾಧ್ಯವಷ್ಟೆ. ಆದರೂ—ತನ್ನ ಕೆಲಸ ತಾನು ಮಾಡುತ್ತೇನೆಂದು, ನೇರಾಗಿ ಆ ದಾರಿ ಹಿಡಿದು, ಬಹುದೂರ ನಡೆದು ಹೋದ. ಬೆಟ್ಟದ ಸೆರಗಿನ ಕೊನೆ ಬರುವ ತನಕವೂ ನಡೆದ. ಇನ್ನು ಆ ಸೆರಗು ಒಳಕ್ಕೆ ತಿರುಗಿಕೊಳ್ಳುತ್ತದೆ. ಸಹ್ಯಾದ್ರಿಯ ಕಡೆಗೆ ಹರಿಯುತ್ತದೆ. ಇಲ್ಲೆಲ್ಲಾದರೂ ಅಡಗಿರುವುದು ಸಾಧ್ಯವಲ್ಲ—ಎಂದು ಅವನಿಗೂ ಅನಿಸಿತು. ನಡೆದು, ದಣಿದು ಬಂದಿದ್ದ ಆತ, ಹುಲ್ಲಿನೆಡೆಯ ಬಂಡೆಯೊಂದರ ಮೇಲೆ ಕುಳಿತು, ತನ್ನ ಆಯಾಸ ಪರಿಹಾರಮಾಡಿಕೊಳ್ಳುತ್ತಾ ಸಮಯ ಕಳೆದ. ಅವನ ಕಣ್ಣೆದುರಿಗೇನೆ ಆ ಬೆಟ್ಟದ ಸೆರಗು. ಇಳಿದು, ಕೆಳಕ್ಕೆ ಸರಿದು, ಬಲು ದೂರದಲ್ಲಿರುವ 'ಶಿಶಿಲ'ಗ್ರಾಮದ ಬಯಲಿನ ಕಡೆಗೆ

ಚಾಚಿಕೊಂಡುದು ಕಾಣಿಸಿತು. ಅದರ ಕೆಳಭಾಗವೆಲ್ಲ—ಅರಣ್ಯದಿಂದ ಕವಿದಿತ್ತು. ಹುಲ್ಲಿನ ಎಳೆ ಹಸುರಿನಿಂದ ತುಂಬಿತ್ತು; ಅಲ್ಲಲ್ಲಿ ಕಾಡುಗಳ ಕಡುಹಸುರು ತುಂಬಿತ್ತು.

ಅದು ಮುಗಿಯುತ್ತಲೇ ಶಿಶಿಲದ ಬಯಲುಭೂಮಿ ಕಾಣಿಸಿತು. ಆ ಮೈದಾನಿನಲ್ಲಿ ಮೇಯುತ್ತಿರುವ ದನಕರುಗಳನ್ನು ಅಲ್ಲಿಂದಲೇ ಎಣಿಸಬಹುದು. ಮೈದಾನು ಮುಗಿಯಿತೆಂದರೆ, ಗ್ರಾಮದ ಹೊಲಗದ್ದೆಗಳು ಅಂಕಣ ಅಂಕಣವಾಗಿ ಕಾಣಿಸುತ್ತವೆ. ಆ ನೋಟವನ್ನೇ ನೋಡುತ್ತ ವ್ಯಥೆಯಿಂದ ತಲ್ಲೀನನಾಗಿ ಕುಳಿತ ಕರಿಯ. ಬೆಟ್ಟದ ಮೈಯನ್ನು ಹಾಯ್ದು ಬರುವ ಗಾಳಿಯ ಪ್ರವಾಹ, ಒಂದೊಂದು ವೇಳೆ ಒಂದೊಂದು ಕಡೆಯಿಂದ ಬೀಸುತ್ತಲಿತ್ತು. ಒಮ್ಮೆ ಅದು ತಳಿರೆಲೆಗಳ ಧ್ವನಿಯನ್ನು ತರುತಿತ್ತು, ಒಮ್ಮೆ ದೂರದ ಅಬ್ಬಿಗಳ ಮೊರೆತವನ್ನು ಹೊತ್ತು ತರುತಿತ್ತು. ಇನ್ನೊಮ್ಮೆ ಯಾವುದಾದರೂ ಗಿಡದ ಕಾಂಡಕ್ಕೆ ಬಡಿದು, ಸಿಳ್ಳಿನ ಸಂಗೀತ ತರುತಿತ್ತು. ಅದನ್ನೇ ಆಲಿಸುತ್ತಿದ್ದ ಕರಿಯನ ಕಿವಿಗೆ, ಮನುಷ್ಯರ 'ತುಣುಕು ತುಣುಕು ಮಾತು' ಕೇಳಿಸಿದಂತೆಯೂ ಅನಿಸಿತು. ವಿಸ್ಮಯಗೊಂಡು ಎದ್ದು ನಿಂತ. ಗಾಳಿಯ ವಿವಿಧ ಮೊರೆತಗಳಲ್ಲಿ, ಮನುಷ್ಯರ ಮಾತಿನ ಸಪ್ಪಳ ಸ್ವಲ್ಪಸ್ವಲ್ಪವಾಗಿ ಕೇಳಿಸುತ್ತಿದ್ದುದು ನಿಜವೆನಿಸಿತು. ಆ ಧ್ವನಿ, ಗಾಳಿ ಉತ್ತರದಿಂದ ದಕ್ಷಿಣಕ್ಕೆ ಬೆಟ್ಟದ ಮೈಯಿಂದಲೇ ಹಾಯ್ದು ಬರುವಾಗ, ಮತ್ತಷ್ಟು ಸ್ಪಷ್ಟವಾಗಿ ಕೇಳಿಸುತಿತ್ತು. ಆ ಭ್ರಮೆಯಿಂದಲೇ ಎದ್ದುನಿಂತು 'ಕೂಕ್, ಕೂಕ್' ಎಂದು ಕೂಗಿದ. ಪ್ರತ್ಯುತ್ತರ ದೊರೆಯಲಿಲ್ಲ. ಮಾತ್ರವಲ್ಲ, ಮುಂದೆ ಅಂಥ ಧ್ವನಿಯೇ ಬರಲಿಲ್ಲ. ಆದರಿಂದ ಆವನ ಕುತೂಹಲ ಹೆಚ್ಚಿತು. ಅಲ್ಲಿಂದಲೇ ಆ ಬೆಟ್ಟದ ಇನ್ನೊಂದು ಮೈಯನ್ನು ಹುಡುಕಿ ನೋಡುವೆನೆಂದು ಉತ್ತರಾಭಿಮುಖವಾಗಿ ಹೊರಟ ಸುಮಾರು ನೂರು ಗಜ ದೂರ ಹುಲ್ಲಿನ ಎಡೆಯಲ್ಲಿಯೇ ಮುಂದುವರಿದ. ಜನ ನಡೆದ ಗುರುತು 'ತೀರ ನಿಜ' ಎಂಬಷ್ಟು ಆಚೀಚೆ ಮಾಲಿಬಿದ್ದ ಹುಲ್ಲುಗಿಡಗಳು ಹೇಳುತ್ತಿದ್ದುವು ಮುಂದೊಂದು ಬಂಡೆ ಕಾಣಿಸಿತು. ವಿಶಾಲವಾದ ದೆವ್ವದಾಕೃತಿಯ ಆ ಬಂಡೆ, ಮುಂದಿನ ನೋಟವನ್ನೇ ತಡೆಹಿಡಿದು, ಗೊಂಡೆಯಾಕಾರದ ನಾಯಿಕೊಡೆಯಂತಿತ್ತು. ಬಂಡೆಯ ಬಳಿಗೆ ಬರುವಾಗ, ಕಾಲಿನ ಗುರುತುಗಳು ಬಂಡೆಯ ಮಗ್ಗುಲಿಂದ, ಮೇಲೇರಿದಂತೆ

ಕಾಣಿಸಿತು. ಇವನೂ ಮೇಲಕ್ಕೇರಿದ. ಮೇಲೇರಿ, ಜಾಡು ಕೆಳಗೆ ಹೋದುದನ್ನು ಕಂಡು, ತಿರುಗಿ ಕೆಳಕ್ಕೆ ಇಳಿಯುವ ಪ್ರಯತ್ನಮಾಡಿದ. ಬೆಟ್ಟಕ್ಕೆ ಮುಖಮಾಡಿ, ಹುಲ್ಲಿನ ಬುಡಗಳಿಗೆ ಕೈ ಕೊಟ್ಟು, ಏಣಿ ಇಳಿಯುವಂತೆ ಇಳಿಯುವಾಗ "ಯಾರು ಕರಿಯಣ್ಣನೆ?" ಎಂಬ ಧ್ವನಿ ಕೇಳಿಸಿತು. ಧ್ವನಿ ತಿಮ್ಮನದು. ಅಲ್ಲಿಂದಲೇ—ಬೆಟ್ಟಕ್ಕೆ ಮೈ ಚಾಚಿ, ಬಂಡೆಯ ಕೆಳಗಡೆ ನಿಂತ ತಿಮ್ಮನನ್ನು ಕಂಡು ಕರಿಯನಿಗಾದ ಸಂತೋಷ ಅಷ್ಟಿಷ್ಟಲ್ಲ. ಆನಂದದಿಂದ ಕೈ ಬಿಟ್ಟು ಆ ಹಸುರಿನ ಹಾಸುಗೆಯ ಮೇಲೆ ಉರುಳಿ, ಕೆಳಗಿನ ಕಣಿವೆಯನ್ನು ಆತ ಸೇರದಿದ್ದುದೇ ಆಶ್ಚರ್ಯ! ಕಪಿಯ ಲಾಘವದಿಂದ ಕರಿಯ ಬೆಟ್ಟದ ಮಗ್ಗುಲನ್ನು ಸೇರಿದ. ತಿಮ್ಮನನ್ನು ಹೋಗಿ ತಬ್ಬಿಕೊಂಡ. ವಿಚಿತ್ರವಾದೊಂದು ಗವಿಯದು. ಆ ಬೆಟ್ಟದ, ಆ ಒಂದೇ ಬಂಡೆಯ ಪೊಟರೆಯಲ್ಲಿ ಜಗತ್ತಿನಿಂದ ಮರೆಯಾಗಿ, ಬದುಕುವ ಆಶ್ರಯ ಹುಡುಕಿದ್ದರು—ಆ ಗಂಡ ಹೆಂಡಿರು. ತಿಮ್ಮ, ಕರಿಯನ ಆಗಮನದಿಂದ ಪುಳಕಿತನಾದ. ಗಿಡ್ಡಿಗಂತು ಕಂಬನಿ ಬಂದಿತು. ನಾಲ್ಕು ಕ್ಷಣಕಾಲ ಯಾರೂ ಏನೂ ಮಾತನಾಡಲಿಲ್ಲ. ಆ ಬಳಿಕ "ಯಾಕೆ ಓಡಿಬಂದೆ ಅಣ್ಣ?" ಎಂದು ಕರಿಯ ಕೇಳಿದ್ದಕ್ಕೆ, ಆ ದಂಪತಿಗಳಿಬ್ಬರೂ ತಮ್ಮ ಹೊಟ್ಟೆಯ ಸಂಕಟವನ್ನೆಲ್ಲ, ದುಃಖ, ಕೋಪ ಉದ್ವೇಗಗಳಿಂದ ಅವನ ಮುಂದೆ ತೋಡಿಕೊಂಡರು.

ಮಾತಿನ ಎಡೆಯಲ್ಲಿ, ದಣಿದು ಬಂದ ಕರಿಯನಿಗೆ ಹೆಗ್ಗಣಸು ಸುಟ್ಟು ಕೊಟ್ಟು ಔತಣ ಮಾಡಿಸಿದ್ದೂ ಆಯಿತು. ಕರಿಯನಿಗೆ ಅವರನ್ನು ಕಂಡೇ ಸಂತೋಷ! ಅವನಿಂದ ಆತ ಕೇಳಿದ ಸಮಾಚಾರಗಳಂತು ಇಲ್ಲದ ವಿಸ್ಮಯ ಹುಟ್ಟಿಸಿದುವು. ತಾನು ಅಷ್ಟು ದಿನಗಳಿಂದ ಗೌರವಿಸಿ, ಭಕ್ತಿಯಿಂದ ನಡೆದು ಕೊಳ್ಳುತ್ತಿದ್ದ ಮಲೆಯ ಧನಿಗಳು, ಅಂಥ ವ್ಯಕ್ತಿ ಎಂದು ಅವನಿಗೆ ಪರಿಚಯವಾದದ್ದು ಅದು ಮೊದಲ ಬಾರಿಗೆ. ತಮ್ಮದೇ ತಪ್ಪಿದ್ದರೂ, ಅದನ್ನು ಮರೆಯಿಸಿಕೊಂಡು, ಕಳ್ಳತನದ ದೂರು ಹೊರಡಿಸಿ, ಅದರಿಂದ ತಿಮ್ಮನನ್ನು ದಂಡಿಸುವ ಯೋಚನೆ ಅವರು ಮಾಡಿದ್ದನ್ನರಿತು, ಅವನಿಗಾದ ಸಿಟ್ಟು ಅಷ್ಟಿಷ್ಟಲ್ಲ. ಅಂಥ ಪ್ರಸಂಗದಲ್ಲಿ ತಿಮ್ಮನ ಬದಲು ತಾನೇ ಆಗಿದ್ದರೂ, ಬೇರೆಯೇನೂ ಮಾಡಲು ಶಕ್ಯವಿದ್ದಿಲ್ಲ—ಎಂದೂ ತಿಳಿದ. ಅವರ ಪ್ರತಿಮಾತಿಗೂ ಅವನ ಸಹಾನುಭೂತಿಯಿತ್ತು. ತಿಮ್ಮ ಅನ್ನುತ್ತಲೇ ಇದ್ದಾನೆ—'ಈ ಧನಿಗಳು ಬಂದುದೇ

ನಮ್ಮ ಕೇರಿಗೆ ಪಿಶಾಚಿ ಹೊಕ್ಕಂತಾಯಿತು. ಅದರಿಂದ ಯಾರಿಗೂ ಸುಖವಿಲ್ಲ" ಎಂದು. ಅದನ್ನು ಕೇಳಿ ಕರಿಯನಿಗೆ, ತಾನು ಆ ಮಲೆಯಲ್ಲಿ ಉಳಿದರೆ, ನಾಳೆ ತನಗೂ ಸುಖವಾಗದೆಂದು ಅನಿಸತೊಡಗಿತು. ಹೊತ್ತು ಮೀರುತ್ತ ಬಂದಿತು. ಮಲೆಗೆ ಮರಳುವ ವೇಳೆಯಾಯಿತು. ಆದರೆ ಆ ಬಡಪಾಯಿಗಳನ್ನು ಬಿಟ್ಟು ಕದಲುವುದಕ್ಕೆ ಕರಿಯನಿಗೆ ಮನವಿಲ್ಲ. ಅವರ ಮುಂದಿನ ಭವಿಷ್ಯ ಹೇಗೆ ಸಾಗಬೇಕು—ಎಂದು ಅವನು ತಿಳಿಯಲಾರ. ಏನೋ, ಬೇಸಿಗೆಯಲ್ಲಿ ನಾಲ್ಕು ದಿನ ಈ ಮಾಟೆಯಲ್ಲಿ ಅವರು ಮನೆ ಮಾಡಿಕೊಂಡಿರಬಹುದು. ಇಲ್ಲಂತು ಗಾಳಿಯ ಒತ್ತಡ ಹೆಚ್ಚು. ಮುಚ್ಚು ಮರೆ ಏನೇನೂ ಇಲ್ಲ. ಬೇರೆ ತಾವನ್ನು ಹುಡುಕಬೇಕು. "ಎಲ್ಲಿ ಹೋದರೂ, ನೀವಿಬ್ಬರೇ ಹೀಗೆ ಕಾಡಿನಲ್ಲಿ ಬದುಕುವುದು ಕಷ್ಟ. ಆಗಾಗ ನಾನು ಬಂದು ಹೋಗಲಾರೆ. ಈ ಸುದ್ದಿ ತಿಳಿದರೆ ನಿಮಗೂ ಕೆಡಕು. ನನಗೇನಾದರೂ ಚಿಂತಿಲ್ಲ. ಆದರೆ ನೀವು ಬದುಕಬೇಡವೇ? ಒಂದಿಷ್ಟಾದರೂ ಬತ್ತ ಬೆಳೆಯಬೇಡವೇ? ಇಬ್ಬರೇ ಸೇರಿ ಮಾಡುವ ಕೆಲಸವೇ ಇದು? ಇಬ್ಬರೇ ಇದರಲ್ಲಿದ್ದರೆ ಹುಚ್ಚೇ ಹಿಡಿದೀತು" ಎಂದೇನೇನೋ ಹೇಳಿದ. ಆ ರಾತ್ರಿಯನ್ನು ಆತ ಅವರ ಜತೆಯಲ್ಲೇ ಕಳೆದ. 'ಆ ಸ್ಥಳಕ್ಕೆ ಹೇಗೆ ಬಂದಿರಿ' ಎಂದು ತಿಮ್ಮನನ್ನು ವಿಚಾರಿಸಿದ. ತಾನು ಬಂದ ದಾರಿಯೇ ಅವರು ಹಿಡಿದ ಹಾದಿ—ಎಂದು ಕೇಳಿ ಸಂತೋಷವಾಯಿತು. ಮರುದಿನ ಅವರನ್ನು ಬೀಳ್ಕೊಡುವಾಗ "ಏನೂ ಇರಲಿ. ಇಲ್ಲಿಂದ ಥಕ್ಕನೆ ಎಲ್ಲಿಗೂ ಹೋಗಬೇಡಿ. ಮಳೆಗಾಲ ಕಳೆಯಬಹುದಾದ ಒಳ್ಳೆಯ ತಾವು ಇರುವುದಾದರೆ ನಾನೂ ಹುಡುಕುತ್ತೇನೆ. ನೀನೂ ಹುಡುಕುತ್ತಿರು. ನಾನು ಹದಿನೈದು ದಿನಕ್ಕೊಂದು ಸಾರಿ ನಿಮ್ಮನ್ನು ಕದ್ದು ಬಂದು ನೋಡಿ ಹೋಗುತ್ತೇನೆ. ಬರುವಾಗ ಏನಾದರೂ ತರಬೇಕಾದರೆ ಹೇಳು. ತರುತ್ತೇನೆ" ಎಂದು ಭರವಸೆ ಕೊಟ್ಟು, ಅವರನ್ನು ಬೀಳ್ಕೊಂಡ. ಅಲ್ಲಿಂದ ಹೊರಡುವಾಗ ಕಾಲು ಕೀಳುವುದು ಸುಲಭವಾಗಲಿಲ್ಲ. ಗಿಡ್ಡಿ ಅಳುವಿನ ಮಳೆ ಕರೆದಳು. "ನಮ್ಮನ್ನು ಪಾರುಮಾಡಬೇಕಾದವ ನೀನು. ಅಪ್ಪ, ಅಮ್ಮ, ಎಷ್ಟು ಹೆದರಿಕೊಂಡಿದ್ದಾರೋ ಏನೋ. ನಾವು ಓಡಿಬಂದದ್ದು ಕೇಳಿ ಎಷ್ಟು ದುಃಖಕ್ಕೆ ಗುರಿಯಾಗಿದ್ದಾರೋ ಕಾಣೆ. ಅವರಿಗೆ 'ನಾವು ಬದುಕಿದ್ದೇವೆ' ಎಂದಾದರೂ ಸುದ್ದಿ

ಮುಟ್ಟಿಸು" ಎಂದು ಅಳುತ್ತ ಅಳುತ್ತ, ಹೇಳಿದಳು. ಕಂಬನಿ ಸುರಿಸುತ್ತಲೇ ಕರಿಯು ಆ ಬಡ ದಂಪತಿಗಳನ್ನು ಬೀಳ್ಕೊಟ್ಟು, ಭಾರವಾದ ಮನದಿಂದ, ತನ್ನ ಕೇರಿಗೆ ಮರಳಿದ. ಅಲ್ಲಿಗೆ ಹೋಗುವಾಗ ಕಾತರವ್ಯಥೆಗಳನ್ನು ಹೊತ್ತುಕೊಂಡು ಹೋಗಿದ್ದರೆ, ಅಲ್ಲಿಂದ ಮರಳುವಾಗ, ಅದರ ಜತೆಗೆ ಧನಿಯನ್ನು ಕುರಿತಾದ ಕೋಪ ತಾಪಗಳನ್ನು ಹೊತ್ತು ತಂದ. ಅವನಿಗೆ ಅವರ ಮೇಲಿದ್ದ ಗೌರವಬುದ್ಧಿಯೆಲ್ಲ ನಶಿಸಿಹೋಗಿತ್ತು.

ಕರಿಯು ಕೇರಿಗೆ ಮರಳಿದ; ಎಲ್ಲರಂತೆ ದಿನದ ಕೆಲಸಗಳಲ್ಲಿ ಶ್ರಮಿಸತೊಡಗಿದ. ತಿರುಮಲಭಟ್ಟರು ಅವನನ್ನು ಕಂಡಾಗಲೆಲ್ಲ "ಏನು, ಏನಾದರೂ ತಿಮ್ಮನ ಸುದ್ದಿ ಇದೆಯೇ? ನಿನಗೆ ಗೊತ್ತಿರಬೇಕು. ನೀನು ಮಾತ್ರ ಹೇಳುವುದಿಲ್ಲ" ಎಂದು ಅನ್ನುತ್ತಲೇ ಇದ್ದರು. ಬೇರೆ ಸಮಯವಾಗಿದ್ದರೆ ಆತ ಮರು ನುಡಿಯುತ್ತಿದ್ದ. ಆದರೆ ತಿಮ್ಮನ ಮುಚ್ಚುಮರೆಯನ್ನು ಕಾಯುವ ಭಾರ ಅವನದ್ದಿದ್ದುದರಿಂದ, 'ತನಗೆ ಗೊತ್ತಿಲ್ಲ'ವೆಂಬ ಸೋಗು ಹಾಕಿಕೊಂಡ. ಧನಿಗಳು ಮಲೆಯಿಂದ ಊರಿಗೆ ಹೋಗುವ ತನಕ ಅವನ ಮನಸ್ಸಿಗೆ ನೆಮ್ಮದಿ ಇರಲಿಲ್ಲ. ಎಂದು ಹೊರಟುಹೋದರೋ, ಅಂದೇನೆ ಒಂದಿಷ್ಟು ಬತ್ತವನ್ನು ಹೊತ್ತುಕೊಂಡು, ಬೆಳಗಿನ ಜಾವಕ್ಕೇನೆ ಹೊರಟು, ತಿಮ್ಮನ ಕಡೆಗೆ ಧಾವಿಸಿದ. ಬಿಡುವಿದ್ದಾಗಲೆಲ್ಲ ತಮ್ಮ ಬೆಟ್ಟದ ಸೆರಗನ್ನೇರುತ್ತಿದ್ದ. ತಾನು ಎಳೆತನದಲ್ಲಿ ಕರಡಿಗೆ ಜೋನು ಹಾಕಿದ ಸ್ಥಳವನ್ನು ದಾಟಿ, ಅಲೆದಾಡತೊಡಗಿದ. ಆ ಬೆಟ್ಟದ ಸಂದಿನಲ್ಲಿ ತಿಮ್ಮನ ನಿವಾಸಕ್ಕೆ ಎಲ್ಲಾದರೊಂದು ಭದ್ರವಾದ ತಾವು ದೊರಕೀತೇ, ವನ್ಯಮೃಗಗಳಿಂದ ದೂರವಾಗಿ ಒಂದಿಷ್ಟು ಕುಮರಿ ಬೆಳೆಯುವುದಕ್ಕೆ ಅನುಕೂಲವಾದ ಸ್ಥಳ ದೊರಕೀತೇ —ಎಂದು ಹುಡುಕತೊಡಗಿದ. ಆಗ ತನ್ನ ಅದೃಷ್ಟವನ್ನು ತಿಮ್ಮನ ಅದೃಷ್ಟದೊಂದಿಗೆ ತೇಲಿಸಿ ಬಿಟ್ಟು, ಸ್ವತಂತ್ರ ಜೀವನ ನಡೆಸುತ್ತೇನೆ—ಎಂಬ ಹಂಬಲವನ್ನೂ ತೊಟ್ಟ. ಆ ಯೋಚನೆ ಮೊಳೆತಂದಿನಿಂದ 'ಕೇರಿಯ ಗುರಿಕಾರಿಕೆ ಯಾರದ್ದಿದ್ದರೂ ತನ್ನದಲ್ಲ. ತಿರುಮಲಧನಿಯರು ಮಲೆ ಬಿಟ್ಟು ಹೋಗುವ ತನಕ, ತಿರುಗಿ ತಾನು ಆ ಕೇರಿಗೆ ಕಾಲಿಡಬಾರದು' ಎಂಬ ನಿಶ್ಚಯ ಅವನಲ್ಲುಂಟಾಯಿತು. ಆ ಆಸೆಯ ಜತೆಗೆ, ಎಳೆತನದ ಬೇಟೆಯ ಹಂಬಲ, ಆನೆ ಹಿಡಿಯುವ ಆಸೆ, ಆನೆಯ ಮೇಲೇರಿ ಅರಣ್ಯದ

ದೊರೆಯಾಗಿ ನಲಿಯಬೇಕೆಂಬ ಚಪಲ'—ಎಲ್ಲ ಹುಚ್ಚುಗಳೂ ಸೇರಿ ಕೊಂಡಿತು. ಆದರೆ ಆತ, ತನ್ನ ಕರ್ತವ್ಯಗಳನ್ನು ಮರೆಯಲಿಲ್ಲ. ಹಿರಿ ಮಲೆಗೆ ಒಮ್ಮೆ ಹೋಗಿ ಬಂದ. ಅಲ್ಲಿ ಚೋಮನ ಕಿವಿಯಲ್ಲಿ—ಅವನ ಮಗಳು, ಅಳಿಯಂದಿರು ಸುಖವಾಗಿದ್ದಾರೆ—ಎಂಬ ಸುದ್ದಿಯನ್ನೂ ಕೊಟ್ಟು ಬಂದ. ಅವರಿಗೆ ಅದರಿಂದ ಎಷ್ಟೋ ನೆಮ್ಮದಿ ಉಂಟಾಯಿತು.

## ಅಧ್ಯಾಯ ೧೫

ಚಳಿಗಾಲ ಕಾಲಿರಿಸಿದೆ. ಇನ್ನು ತಿಂಗಳೆರಡು ತಿಂಗಳು ಕಳೆದರೆ ಬರು ವುದೇ ಬೇಸಿಗೆ. ಏಲಕ್ಕಿ ತೋಟದ ಕೆಲಸಗಳು ಮುಗಿದಿವೆ; ಇನ್ನು ಕುಡಿ ಯರ ನಿತ್ಯಜೀವನದ ಸಂಗ್ರಾಮ ತೊಡಗುತ್ತದೆ. ಕರಿಯ ನೂರಾರು ಸವಿ ಗನಸುಗಳನ್ನು ಹೊತ್ತು, ಬೇಟೆಯಲ್ಲೂ, ಮೀನು ಹಿಡಿಯುವುದರಲ್ಲೂ ಸಮಯ ಕಳೆಯುತ್ತಿದ್ದಾನೆ ತೋರಿಕೆಗೆ, ಆ ಮಲೆಯ ಮೇಲಿನ ಮೋಹ ಉಳಿದವರಿಗಿಂತ ತನಗೆ ಕಡಿಮೆಯಾಗಿಲ್ಲ, ಎಂದು ತೋರಿಸಿಕೊಳ್ಳುತ್ತಿದ್ದ ನಾದರೂ, ಅವನ ಮನವೆಲ್ಲ ಓಡಿಹೋದ ತಿಮ್ಮ ಗಿಡ್ಡಿಯರ ನೆನವರಿಕೆಯನ್ನು ಮಾಡುತ್ತಲಿದೆ. ಎಷ್ಟೆಂದರೂ—ಯಾವ ಸ್ನೇಹ, ಕೂಟ, ವಿಲಾಸಗಳಿಗೆ ಅವಕಾಶವಿಲ್ಲದ ಬಾಳು ಅವನದು. ತಾನೊಬ್ಬನಾದರೂ ಅವರ ಜತೆಗೆ ಸೇರಿ ಅವರ ಜೀವನಕ್ಕೆ ಒಂದಿಷ್ಟು ಗೆಲವನ್ನಾದರೂ ತಂದುಕೊಡುವ—ಎಂದು ಹಂಬಲಿಸುತ್ತಾನೆ. ಅವರಿರುವ ಬಂಡೆಯ ಪೊಟರೆಯು, ಮಳೆಗಾಲ ಕಳೆಯು ವುದಕ್ಕೆ ಹೇಳಿಸಿದ ತಾವೇ ಅಲ್ಲ. ಗಿಡ್ಡಿಯನ್ನು ಬಿಟ್ಟು, ತಿಮ್ಮನಾದರೂ ಬಹುದೂರ ಅಲೆದಾಡಲಾರ. ಅಲೆದಾಡಬೇಡವೆಂದೂ ಈತ ತಿಳಿಸಿ ಬಂದಿದ್ದ. ಆ ಕಗ್ಗಾಡಿನಲ್ಲಿ—ಹೋದ ಜಾಡು ತಪ್ಪಿ, ಮರಳಿ ಬರುವುದು ಅದೇ ದಿನ ಅಸಾಧ್ಯವಾದರೆ, ಒಂದು ರಾತ್ರಿಯಾದರೂ ಗಿಡ್ಡಿ ಒಂಟಿಯಾಗಿರಬೇಡವೇ? ಬರಲಿ, ಬಾರದಿರಲಿ. ವನ್ಯಮೃಗಗಳ ಭೀತಿ ಉಂಟೇ ಉಂಟು. ಅಲ್ಲದೆ ಒಬ್ಬಂಟಿಗಳಾಗಿದ್ದಾಗ ಮಲೆಯ ಬೆಟ್ಟದ ಕೋಡನ್ನೋ, ಹೆಬ್ಬಂಡೆಯನ್ನೋ, ಏಸಿಲ್ಲದೆ ಹೋದರೆ ಮೊಟಕು ಮರವನ್ನೋ ಕಂಡು, ಪ್ರೇತ ಪಿಶಾಚಿಗಳ ನೆನಪು ತಂದುಕೊಂಡು—ಆಕೆ ಭೀತಿಗೊಂಡಾಳು. ಸಾಲದ್ದಕ್ಕೆ ಈಗಾಗಲೇ, ಪರ್ವತಾವಳಿಯಲ್ಲಿ ಅಲ್ಲಲ್ಲಿ ಹುಲ್ಲು ಒಣಗಿ ಸುಡತೊಡಗಿದೆ. ಗಾಳಿಗೆ ಆ

ಬೆಂಕಿಯ ಜ್ವಾಲೆ ಯಾವ ಮೂಲೆಯಿಂದ ಯಾವ ಮೂಲೆಗೆ ಹರಿದುಬಂದರೂ ಬರಬಹುದು. ಇಂಥ ಅಪಾಯಗಳಿಂದ ಇವರಿರುವ ಬಂಡೆಯ ಮನೆ ದೂರಾದದ್ದಲ್ಲ. ಹಾಗೆಂದು ತಾನೊಬ್ಬನೇ ಹೊಸ ತಾವನ್ನು ಅರಸಲು ಹೋಗುತ್ತಾನೆ. 'ಕರಿಯ, ನಿನ್ನೆ, ಮೊನ್ನೆ ರಾತ್ರಿ ನಿನ್ನನ್ನು ಕಾಣಲಿಲ್ಲವಲ್ಲ' ಎಂದು ಕೇರಿಯವರು ಯಾರಾದರೂ ಅಂದರೆ 'ಬಯನಿಮರ ಹತ್ತಿ ಮುಳ್ಳಿಲಿ ಸಿಗುತ್ತದೋ ಎಂದು ಕಾದು ಕುಳಿತಿದ್ದೆ. ಹೆಂಡ ಕುಡಿಯುವುದಕ್ಕೆ ಒಂದಾದರೂ ಇಲಿ ಬರಬೇಡವೇ!' ಎನ್ನುತ್ತಾನೆ. ಮುಳ್ಳಿಲಿ ಅಂದರೆ ಕುಡಿಯರಿಗೆ ಪ್ರಾಣ. ಅದರ ಸಲುವಾಗಿ ಎಷ್ಟು ರಾತ್ರಿಯೂ ಅವರು ಕಾದು ಕುಳಿತಾರು. ಕತ್ತಲಾಯಿತೆಂದರೆ, ಎತ್ತರದ ಬಯನಿಮರ ಹತ್ತುತ್ತಾರೆ. ಅದಕ್ಕೆ ತೂಗಿಕೊಂಡು, ಬಯನಿಹೆಂಡಕ್ಕಾಗಿ ಇರಿಸಿದ ಬಿದಿರ ಅಂಡೆಯ ಮೇಲೆ, ಬಟ್ಟೆಯ ಮುಸುಕು ಹಾಕಿಕೊಂಡು ಕಾದು ಕುಳಿತಿರುತ್ತಾರೆ. ಆ ಹೆಂಡಕ್ಕಾಗಿ ಮುಳ್ಳಿಲಿಗಳಂದು ಬಂದಾವು ಎಂದು ಕಾಯುತ್ತಾರೆ. ಹೆಂಡದ ಆಸೆಗೆ, ಮೈ ತುಂಬ ಕಣೆಗಳಿರುವ ಪುಟ್ಟ ಇಲಿಗಳು ಮರವನ್ನೇರಿ ಪಾತ್ರದ ಮೇಲೆ ಬಂದುವೆಂದರೆ ಅವನ್ನು ಥಟ್ಟನೆ ಹೆಂಡದ ಪಾತ್ರೆಯೊಳಕ್ಕೆ ತಳ್ಳಿಬಿಡುತ್ತಾರೆ ಇದು ಅವರ ಬೇಟೆಯ ಒಂದು ವಿಧಾನ. ತಿಮ್ಮನಿಂದ ಕರಿಯನೂ ಈ ಪಾಠ ಕಲಿತಿದ್ದ. ಆದರೆ ಕರಿಯನಿಗೆ ನಿಜಕ್ಕೂ ಅಂಥ ಬೇಟೆಯ ಮರುಳಿಲ್ಲ ಮಲೆಯಲ್ಲಿ ನಿತ್ಯವೂ ದೂರ ದೂರ ಅಲೆದಾಡುವ ಅವಕಾಶ ಅವನಿಗೆ ಬೇಕಿತ್ತು. ರಾತ್ರಿ ಗುಡಿಸಲಿಗೆ ಬರಲು ಆಗದಿರುವುದುಂಟು. ಬೆಟ್ಟದಲ್ಲೇ ರಾತ್ರಿ ಕಳೆಯಬೇಕಾಗಿ ಬಂದಾಗ, ಯಾವುದಾದರೂ ಮರದ ರೆಂಬೆಯನ್ನೇರಿ, ಅಲ್ಲೇ ನಿದ್ರೆ ಮಾಡಬೇಕಾಗುವುದೂ ಉಂಟು. ಮರುದಿನ ಎದ್ದು, ತಿರುಗಿ ಯೋಗ್ಯ ಸ್ಥಳವನ್ನು ಅರಸಿ ಹೋಗುವುದುಂಟು. ಆದುದರಿಂದ ಮನೆಯಲ್ಲಿಲ್ಲದೆ ಹೋದುದಕ್ಕೆ ಇವೆಲ್ಲ ನೆಪಗಳು ಬೇಕು.

ಪಾಪ, ಚಳಿಯನ್ನದೆ, ಗಾಳಿಯೆನ್ನದೆ, ಬಿಸಿಲೆನ್ನದೆ, ಜೇಗೆ ಎನ್ನದೆ ಕರಿಯ ಆ ಬೆಟ್ಟಗಳನ್ನು ಎಷ್ಟು ಸುತ್ತಿದ್ದಾನೆಂದು ಹೇಳಿತೀರದು. ಒಂದು ದಿನ ಅಲೆದಲೆದು ಬಿರುಮನಿರುವ ಗವಿಮನೆಯ ಹಾದಿಯಿಂದಲೇ, ನೆಟ್ಟಗೆ ಮುಂದುವರಿದ. ಬೆಟ್ಟದ ಮೈಗೆ ಸಮಾನವಾಗಿ ನಡೆದು ನಡೆದೂ, ಬಹುದೂರ ಸಂಚರಿಸಿದ. ಸಹ್ಯಾದ್ರಿಯ ಸೆರಗನ್ನೂ ಮುಟ್ಟಿದ. ಅಲ್ಲಿಂದ ಆ

ಸೆರಗು ಉತ್ತರ-ದಕ್ಷಿಣವಾಗಿ ಚಾಚುತ್ತದೆ. ಸೆರಗಿನ ಮೈಯಲ್ಲಿ ಜನನಿವಾಸದ ಯಾವ ಸುಳಿವೂ ಇದ್ದಿಲ್ಲ. ಆನೆಗಳು ಸಂಚರಿಸಿ ಮಾಡಿಟ್ಟ ದಾರಿಯೊಂದು ಸಮಾನಾಂತರವಾಗಿ ಹಾದುಹೋಗಿತ್ತು. ಬಹು ದೂರದಲ್ಲಿ—ಅಲ್ಲಿಂದ ಕವಲೊಡೆಯುವ ಇನ್ನೊಂದು ಚಿಕ್ಕ ಬೆಟ್ಟದ ಸಾಲು ಕಾಣಿಸಿತು. ಅದು ಕಿರಿ ಮಲೆಗೆ ಸಮಾನಾಂತರವಾಗಿ ಚಾಚಿಕೊಂಡಿತ್ತು. ಸಹ್ಯಾದ್ರಿಯಿಂದಿಳಿದು, ಆ ಸೆರಗನ್ನೇರಿ, ಅದರ ತುದಿಯ ತನಕವೂ ನಡೆದು, ಹೋಗಿ ನಿಂತರೆ— ಬೆಟ್ಟ ಒಮ್ಮೆಗೇ ನಾನ್ನೂರು ಐನೂರು ಅಡಿ ಇಳಿಯುವಂತೆ ಕಂಡಿತು. ಆ ತುದಿಯಲ್ಲಿ ದೊಡ್ಡ ಮರಗಳಿರಲಿಲ್ಲ. ಬರಿಯ ಹೆಬ್ಬಂಡೆಗಳಷ್ಟೇ ತುಂಬಿದ್ದುವು. ಅಲ್ಲಿ ನಿಂತು ನೋಡಿದರೆ—ತಿಮ್ಮನ ವಾಸವಾಗಿರುವ ಬಂಡೆಯೂ ಕಾಣಿಸುತಿತ್ತು. ಅಲ್ಲಿಂದ ಹೇಗೋ ಹೇಗೋ ಬೆಟ್ಟದ ಮಗ್ಗುಲನ್ನು ಇಳಿದುಹೋದರೆ, ಅವೇ ಬಂಡೆಗಳು ಕೆಳಗಿನ ಒಂದು ವಿಶಾಲ ಸ್ಥಳದಿಂದ ಮೇಲಕ್ಕೆದ್ದು ನಿಂತಂತೆ ಕಾಣಿಸುತ್ತವೆ. ನಾಲ್ಕೆಂಟು ಎಕ್ರೆ ವಿಸ್ತೀರ್ಣವಾದ ಸ್ಥಳ ಬಂಡೆಗಳ ಬುಡದಲ್ಲಿದೆ. ಅಲ್ಲಿ, ಒಂದಲ್ಲ ಹತ್ತೆಂಟು ಗುಹೆಗಳಿದ್ದುವು. ಬಂಡೆಯ ಸೆರಗಿಂದ ಸದಾ ಜಿನುಗುತ್ತಿರುವ ನೀರಿನ ಪ್ರವಾಹವೂ ಇತ್ತು. ಆ ಗವಿಗಳ ಎದುರಿಗೇನೆ—ಗಾಳಿಯ ಪ್ರವಾಹವನ್ನು ತಡೆಯಲು ನಿಂತ ಮರಗಳಿವೆ. ಮೇಲಿಂದ ನೋಡಿದಾಗಲೇ ಈ ಪುಟ್ಟ ಅರಣ್ಯ ತಮ್ಮ ನಿವಾಸವಾಗಲು ಯೋಗ್ಯವೆಂದು ಅವನಿಗೆ ಕಂಡಿತು. ಕಾರಣವಿಷ್ಟೆ—ಅಲ್ಲಿಂದ ಆಚೀಚೆ ಎಲ್ಲ ಕಡೆಗೂ ಬೆಟ್ಟ ಇಳಿಯುತ್ತದೆ. ಸಮತಟ್ಟಾದ ಭೂಮಿ ಅದಷ್ಟೇನೆ. ಆನೆ, ಕಾಟಿ, ಕಡವೆಗಳ ಸಂಚಾರಕ್ಕೆ ಅದು ಅನುಕೂಲವಾದ ತಾವಲ್ಲ. ಮೇಲಿಂದ ಅಲ್ಲಿಗೆ ಇಳಿಯುವುದೂ ಕಷ್ಟ. ಹೀಗಾಗಿ, ಎಲ್ಲ ವಿಧದಿಂದಲೂ ಅಲ್ಲಿ ರಕ್ಷಣೆಯುಂಟು. ಅಲ್ಲಿ ಕುಮರಿ ಬೆಳೆ ಬೆಳೆಯಬಹುದು. ತಮ್ಮ ಪಾಲಿಗೆ ತಾವು ಜೀವನ ಮಾಡಿಕೊಂಡಿರಬಹುದು—ಎಂದು ತೋರಿತು. ಹಾಗೆಂದು ಸಾಹಸ ಮಾಡಿ ಅಲ್ಲಿಗೆ ಹೋಗಿ ನಿಂತ. ಎದುರಿನ ಕಾಡಿನ ಪೊದೆಯಿಂದ, ಮುಂದಿನ ನೋಟ ಮಾತ್ರ ಕಾಣಿಸುತ್ತಿರಲಿಲ್ಲ. ಆಪತ್ಕಾಲದಲ್ಲಿ ಮನುಷ್ಯರ ಮುಖ ನೋಡಬೇಕು—ಎಂದರೂ, ಎಷ್ಟು ದೂರ ಹೋಗಬೇಕೋ ಏನೋ— ಎಂಬ ಅಂಜಿಕೆಯಾಯಿತು. ಕೇರಿಯ ಕುಡಿಯರ ಬಂಧುತ್ವ ಬೇಡವಾದರೂ, ಮನುಷ್ಯನಿಗೆ ಮನುಷ್ಯನ ಸಂಪರ್ಕವಿಲ್ಲದೆ ಬಾಳಿಯಾನೇ? ಅರಿವೆಗಾಗಿ,

ಉಪ್ಪಿಗಾಗಿ ಹೊರಜಗತ್ತನ್ನು ಅವರು ನಂಬಿಯೇ ಬಾಳಬೇಕು. ಇದೊಂದೇ ಯೋಚನೆ ಅವನನ್ನು ಬಾಧಿಸಿತು. ಆ ರಾತ್ರಿಯೆಲ್ಲ ಅಲ್ಲಿನ ಗವಿಯ ಪೊಟರೆಯಲ್ಲಿ ಕಳೆದ. ರಾತ್ರಿ ಗವಿಯ ಸುತ್ತುಮುತ್ತು, ಎಲ್ಲ ಮಲೆಗಳ ಮೈಯಂತೆ, ಮೋಡ ಮಂಜುಗಳು ಮುಸುಕಿದರೂ, ಗಾಳಿಯ ಬಿಸಾಟೆ ಎದುರಿನ ಮರಗಳ ದಟ್ಟಣೆಯಿಂದಾಗಿ—ಅಷ್ಟೊಂದು ಹೆಚ್ಚಾಗಿರಲಿಲ್ಲ. ಅದೊಂದು ಅನುಕೂಲದ ಸಂಗತಿಯಾಗಿ ಕಂಡಿತು.

ಮರುದಿನ ಬೆಳಿಗ್ಗೆ ಎದ್ದ. ತನ್ನ ಗವಿಯ ಮೇಲಿನಿಂದಲೇ ಧಾರೆಯಾಗಿ ಬೀಳುತ್ತಿರುವ ನೀರಿನಲ್ಲಿ ಮುಖ ತೊಳೆದುಕೊಂಡ. ಸೊಂಟಕ್ಕೆ ಸಿಕ್ಕಿಸಿದ ಕತ್ತಿಯನ್ನು ಕಿತ್ತು, ಗೆಣಸನ್ನು ಅರಸಿ ತಂದ, ನಡುವಿಗೆ ಕಟ್ಟಿದ ದಟ್ಟಿಯ ಚೀಲದಿಂದ ಬೆಂಡು ಚಕುಮುಕಿ ಕಲ್ಲುಗಳನ್ನು ತೆಗೆದು, ಕಿಡಿ ಹಾರಿಸಿ ಬೆಂಕಿ ಹೊತ್ತಿಸಿದ. ಗೆಣಸು ಸುಟ್ಟು, ತಿಂದು, ಒಂದಿಷ್ಟನ್ನು ಕಟ್ಟಿಕೊಂಡು, ಈ ಸ್ಥಳದ ಸಂಪೂರ್ಣ ಶೋಧನೆ ಮಾಡುತ್ತೇನೆ—ಎಂದು ಒಬ್ಬನೇ ಎದುರಿನ ಕಾಡನ್ನು ಹೊಕ್ಕ. ಬಳ್ಳಿಗಳನ್ನು ಸವರುತ್ತ, ದಾರಿ ಸಾಗುವ ಕೆಲಸ ಸುಲಭವಲ್ಲ. ಸವರಿದ ದಾರಿಯಲ್ಲಿ ನುಸುಳಿಕೊಂಡು ಮುಂದುವರಿದ ಕಾಡಿನ ಮುಸುವಗಳು ಈ ಮನುಷ್ಯಮೃಗ ಏಕೆ ಇಲ್ಲಿಗೆ ಬಂದಿತೆಂಬ ಅಚ್ಚರಿಯಿಂದ 'ಬೂಕ್, ಬೂಕ್' ಎಂದು ಕೂಗಿದುವು. ಇವನೂ ಪರಿಹಾಸ್ಯಕ್ಕೆ ಅವುಗಳ ಧ್ವನಿಯನ್ನು ಅಣಕಿಸಿದ. ಸುಮಾರು ಅರ್ಧ ಮೈಲು ದೂರ ಬಂದ ಮೇಲೆ, ಬೆಟ್ಟ ಒಮ್ಮೆಗೇ ಇಳಿಯಿತು. ಇಳಿದರೂ, ಎದುರಿನ ದೈವದಂಥ ಮರಗಳ ದೆಸೆಯಿಂದ ಕೆಳಗಿನ ನೋಟ ಏನೇನೂ ಕಾಣಿಸಲಿಲ್ಲ. ಉನ್ನತವಾದ ಮರವೊಂದನ್ನೇರಿದ. ಅದರ ರೆಂಬೆ ಕಡಿದು, ಎದುರಿಗಿನ ದೃಶ್ಯಕ್ಕಾಗಿ ಕಣ್ಣುಹಾಯಿಸಿದ. ಎದೆ ಸಂತೋಷದಿಂದ ಮಿಡಿಯತೊಡಗಿತು. ಬಹು ಸ್ವಲ್ಪ ದೂರದಲ್ಲಿಯೇ ಅರಣ್ಯದಲ್ಲಿ ಕಡಿದ 'ಗಡಿಯ ಗುರುತುಗಳು', ಕಲ್ಲಿನ ಗುಪ್ಪೆಗಳು ಕಂಡು ಬಂದುವು ಮರದಿಂದ ಇಳಿದ. ಇಳಿದು ಮಂಗನಂತೆ ಬೆಟ್ಟವನ್ನು ಇಳಿಯತೊಡಗಿದ. ಕಲ್ಲುಗುಪ್ಪೆಗಳ ದಿಕ್ಕನ್ನು ನೆನೆದು, ಗಿಡಗಳನ್ನು ಸವರಿ ದಾರಿ ಮಾಡಿಕೊಂಡು, ಮುಂದುವರಿದ. ತಿರುಗಿ ಸಾಮಾನ್ಯ ಇಳುಕಲು ನೆಲ ಕಾಣಿಸಿತು. ಆ ದಾರಿಯುದ್ದಕ್ಕೂ ಕಾಡಿನಲ್ಲಿ ತನ್ನಂತೆಯೇ ಹುಟ್ಟಿ ಬೆಳೆದ ಏಲಕ್ಕಿ ಗಿಡಗಳ ಪೊದೆಯೇ ಪೊದೆ! ಯಾವ

ಮನುಷ್ಯನೂ ಅಲ್ಲಿಗೆ ಬಂದದ್ದಿಲ್ಲ. ‘ತನ್ನದೆಂದು’ ಆ ಏಲಕ್ಕಿಯನ್ನು ಕೊಂಡದ್ದಿಲ್ಲ—ಎಂಬುದು ನೋಡಿದ ಮಾತ್ರಕ್ಕೆ ಗೊತ್ತಾಗುತಿತ್ತು. ಆ ಪ್ರದೇಶವನ್ನು ದಾಟಿ ಇಳಿದು ಹೋದರೆ, ಎರಡು ಕಾಡುಗಳ ನಡುವೆ—ಕಾಡು ಕಡಿದು ಮಾಡಿದ ಗಡಿಯ ಗುರುತೂ ಕಾಣಿಸಿತು. ಒಂದಲ್ಲ ಒಂದು ಊರು ಸಮೀಪವಿರಬೇಕು—ಎಂದು ತೋರಿತು. ಅವನ ಊಹೆ ನಿಜವಾಯಿತು. ಒಂದು ಮೈಲು ದೂರ ಹೋಗುವುದರೊಳಗಾಗಿಯೇ ದನಕರುಗಳು ತಿರುಗಾಡಿದ, ಸವೆದ ದಾರಿ ಸಿಕ್ಕಿತು. ಅದನ್ನೇ ಅನುಸರಿಸಿ ಹೋದರೆ, ಒಂದೆರಡು ಹಟ್ಟಿ, ಮನೆಗಳು ಇದಿರಾದುವು. ಮನೆಯ ಆ ಕಡೆ ಹೊಲಗದ್ದೆಗಳು ಇದ್ದುವು. ಅಲ್ಲಿನ ರೈತರನ್ನು ಸಂಧಿಸಿದ. ಆ ಊರಿನ ಹೆಸರು ಕೇಳಿದ. ‘ಕುಕ್ಕರಳ್ಳಿ’ ಎಂಬ ಹೆಸರನ್ನು ಕೇಳಿ ಹಿಗ್ಗಿದ. ಅಲ್ಲಿಂದ ಹೆದ್ದಾರಿ ದೂರಕ್ಕೆ ಶಿರಾಡಿಯ ರಸ್ತೆ ಸಿಗುತ್ತದಂತೆ. ಹಳ್ಳಿಯವರಲ್ಲಿ ಬೇಡಿ, ಒಂದಿಷ್ಟು ಗಂಜಿ ಕೇಳಿಕೊಂಡು, ಊಟ ಮಾಡಿ, ಮಧ್ಯಾಹ್ನವೇ ಹೊರಟ; ಗವಿಗೆ ಬಂದು ಸೇರಿದ. ಅಲ್ಲಿಂದ ಎದುರು ಮಲೆಯಲ್ಲಿ ತಿಮ್ಮನಿದ್ದ. ಅವನ ಮನೆಯ ಹೆಬ್ಬಂಡೆ ಕಾಣಿಸುತ್ತದೆ. ಅಲ್ಲಿಗೆ—ನೇರವಾಗಿ ಹೋಗುವ ದಾರಿ ಹುಡುಕಬೇಕೆಂದು ಮಗ್ಗುಲಿಗೆ ತಿರುಗಿದ. ಒಂದು ಮೈಲು ದೂರ ಕಾಡಿನಲ್ಲಿ ದಾರಿ ಮಾಡಿಕೊಂಡು ಹೋದರೆ, ಮುಂದೆ ಮಲೆಯ ಬೋಳಾದ ಮೈ ಸಿಗುತ್ತದೆ. ಹುಲ್ಲಿನ ಮೆಡೆಯಲ್ಲದೆ, ತಿಮ್ಮನ ಬಂಡೆಯ ತನಕ ಯಾವೊಂದೂ—ಅಡ್ಡಿ ಆತಂಕವಿಲ್ಲದ ಸೆರಗದು. ತನ್ನ ಶೋಧೆಯ ಉತ್ಸಾಹದಿಂದ, ನಾಗಾಲೋಟ ಹೂಡಿದ ಆ ಸ್ಥಳಕ್ಕೆ. ಅಲ್ಲಿ ಸೇರಿ, ತಾನು ಮಾಡಿದ ಸಾಹಸಗಳನ್ನು ಬಣ್ಣಿಸಿ, ಗೆಣಸು ತಿಂದು, ತಿರುಗಿ ತಿಮ್ಮನನ್ನು ಕರೆದುಕೊಂಡು, ತಮ್ಮ ಮುಂದಿನ ಮನೆಯನ್ನು ತೋರಿಸಲು ಹೊರಟ. ತಿಮ್ಮನಿಗೂ ಆ ಸ್ಥಳ ತುಂಬ ಚೆನ್ನಾಗಿ ಹಿಡಿಸಿತು. ಬರಿಯ ಸ್ವಲ್ಪ ಜಾಗವಷ್ಟೆ—ಇಳಿಯಲು ಕಷ್ಟವಾದದ್ದು. ಮರ, ಗಿಡ ಹುಲ್ಲುಗಳ ಬುಡಗಳನ್ನು ಹಿಡಿದು, ಏಣಿ ಇಳಿಯುವಂತೆ ಇಳಿಯಬೇಕು. ಅಷ್ಟು ಇಳಿದರೆ ಮುಂದೆ ಯಾವ ಆತಂಕವೂ ಇಲ್ಲದ ರಾಜ್ಯ. ಅಲ್ಲದೆ—ಕರಿಯ ಹೇಳಿದ ಹಾಗೆ, ಆ ಸ್ಥಳದ ಸುತ್ತುಮುತ್ತಲು ಕಾಡಲ್ಲಿ ಏಲಕ್ಕಿ ಬೆಳೆಯುತ್ತಿರುವುದು ನಿಜವಾದರೆ, ಅವನ್ನು ಸಂಗ್ರಹಿಸಿ, ಮಾರಿ, ತಮಗೆ ಬೇಕಾದ ಅರಿವೆ ಉಪ್ಪುಗಳನ್ನು ನಿರಾಯಾಸವಾಗಿ ಕೊಳ್ಳಬಹುದು ಎಂದೂ ತಿಮ್ಮನಿಗೆ ಅನಿಸಿತು.

ಈ ಎಲ್ಲ ಪ್ರಯತ್ನಗಳಿಗಾಗಿ ಕರಿಯು ಮಲೆ ಬಿಟ್ಟು, ಮೂರು ದಿನಗಳಾಗಿದ್ದುವು. ಅನಂತರ ಊರನ್ನು ಸೇರಿದ. ಇನ್ನು ಕೇರಿಯಲ್ಲಿ ತನ್ನ ನಿವಾಸ ದಿನವೋ, ನಾಲ್ಕು ದಿನವೋ—ಎಂದು ನಿಶ್ಚಯಿಸಿದ. ಬಹು ದಿನ ಆತ ಅಲ್ಲಿರಲಾರ. ಕುಮರಿ ಬೆಳೆಯುವುದಕ್ಕೆ, ಆತ ಹೋಗಿ ತಿಮ್ಮನಿಗೆ ನೆರವಾಗಬೇಡವೇ? ಆದರೆ ಅವನೆಣಿಸಿದಷ್ಟು ಬೇಗನೆ ಹೊರಡಲಾಗಲಿಲ್ಲ. ಅಲ್ಲಿಂದ ಹದಿನೈದು ದಿನಕ್ಕೆ ಕಲ್ಕುಡನಿಗೆ ಕೋಲ ನಿಶ್ಚಯವಾಗಿತ್ತು. ಗುರಿಕಾರನಾದ ತಾನು, ದೈವಕ್ಕೆ ಕೊಸೆಯ ಹರಕೆ ಹೊತ್ತು, ತನ್ನ ಋಣ ಸಲ್ಲಿಸಿ, ಮಲೆಯಿಂದ ಮಾಯವಾಗುತ್ತೇನೆ ಎಂದಂದುಕೊಂಡು ಅಲ್ಲಿಯ ತನಕ ಕಾದು ಕುಳಿತ. ಕರಿಯ ಮೂರು ದಿನ, ನಾಲ್ಕು ದಿನ ಹೀಗೆ ಕೇರಿಯಲ್ಲಿ ಕಾಣಿಸದೆ ಹೋದದ್ದು ಬೇಟೆಯ ಹುಚ್ಚಿನಿಂದಲ್ಲ, ಏನೋ ಹೊಂತುಗಾರಿಕೆ ಇರಬೇಕು, ಅಥವಾ ತಿಮ್ಮನ ಇರವು ಅವನಿಗೆ ತಿಳಿದಿರಬೇಕು. ತಿಳಿದೂ ಧನಿಗಳಿಂದ ಆತ ಆ ಸುದ್ದಿಯನ್ನು ಅಡಗಿಸಿರಬೇಕು—ಎಂಬ ಅನುಮಾನ ಬೂದನಿಗೆ ಬಂದೇ ಬಂದಿತು. ಕೆಂಪಿ ಚುಚ್ಚಿದ ಈ ಸಂಶಯ ಅವನಲ್ಲಿ ಬಲಗೊಂಡಿತು. ಅದರ ಜತೆಯಲ್ಲಿ ಧನಿಗಳ ಮನೆಯ ಚಿನ್ನ ಕದ್ದುದರಲ್ಲಿ ಕರಿಯನಿಗೂ ಒಂದು ಪಾಲು ಇದ್ದುದಾದರೆ, ಆ ಘಟಿಂಗನ ಸಂಪರ್ಕದಿಂದ, ತಾನು ಬೆಳೆಸಿ ಬೆಂಬಲಕೊಟ್ಟ ಈ ಹುಡುಗ ಹಾಳಾಗಿಹೋದನಲ್ಲ—ಎಂಬ ದುಃಖವೂ ಆಯಿತು. ಅನೇಕಾವೃತ್ತಿ, ಇದರ ಸತ್ಯ ತಿಳಿಯುವುದಕ್ಕೆ ಕರಿಯನನ್ನು ಆತ ಪ್ರಶ್ನಿಸಿದ್ದೂ ಉಂಟು. ಕರಿಯ "ಏನೋ, ಬೇಟೆಯ ಹುಚ್ಚು ಕಟ್ಟಿ ಕಾಡೆಲ್ಲ ಸುತ್ತಾಡಿದೆ. ದಾರಿ ತಪ್ಪಿತು. ಎರಡು ದಿನವೆಲ್ಲ ಕಾಡಿನಲ್ಲೇ ಇರಬೇಕಾಯಿತು" ಎಂದು ನೆಪ ಹೇಳಿ ತಪ್ಪಿಸಿಕೊಂಡ. ಆದರೆ ಬೂದನಿಗೆ ಮಾತ್ರ ಆ ನೆಪಗಳು ಸಮಾಧಾನ ಕೊಟ್ಟಂತೆ ಕಾಣುವುದಿಲ್ಲ. ಅವನ ಮನಸ್ಸಿಗೆ ಈ ಬಾರಿಯ ಕೋಲದಲ್ಲಿ ದೈವದೊಡನೆ ಧನಿಗಳ ಮನೆಯ ಕಳವಿನ ವಿಚಾರ, ಧನಿಗಳಿಗಾದ ಅಪಘಾತದ ವಿಚಾರ ಪ್ರಶ್ನೆ ಕೇಳಬೇಕೆಂದಿತ್ತು. ಕೇಳಿ, ತಕ್ಕ ಉತ್ತರ ದೊರೆಯುವ ತನಕ, ಕರಿಯನ ವಿಚಾರದಲ್ಲಿ ಅವನಿಗೆ ಅಪನಂಬುಗೆಯೇ ಉಳಿಯಿತು.

ಈ ವರ್ಷದ ಕೋಲಕ್ಕೆ ತಿರುಮಲಭಟ್ಟರು ಬಂದಿರಲಿಲ್ಲ. ಆದರೆ ಎರಡೂ ಮಲೆಯವರು ತಪ್ಪದೆ ಹರಕೆಯ ಕೋಳಿ, ಹಂದಿಗಳನ್ನು ಹಿಡಿದು

ಕೊಂಡು ಬಂದಿದ್ದರು. ಪ್ರಾಯಶಃ ಇದು ತನ್ನ ಕೊನೆಯ ಹರಕೆಯಾಗುವು ದೆಂದು ಕರಿಯು, ಒಂದು ಬಲವಾದ ಹಂದಿಯನ್ನು ಕೊಂಡುಹೋಗಿದ್ದ. ಕ್ರಮದಂತೆ ಎಲ್ಲರೂ ಕಲ್ಕುಡನ ಗುಡಿಯ ಮುಂದೆ ಸ್ನಾನ ಮಾಡಿ ಕಲೆತರು. ಪೂಜಾರಿ ಮೈಮೇಲೆ ದೈವದ ಆವೇಶ ತುಂಬಿಬರುತ್ತಲೇ, ಎರಡೂ ಮಲೆಯ ಗುರಿಕಾರರೂ ಸಿಂಗಾರದ ಹೂವನ್ನೂ ಕತ್ತಿಯನ್ನೂ ಅರ್ಪಿಸಿದರು. ಪೂಜಾರಿ ಆವೇಶದಿಂದ ಮೈ ನಡುಗಿಸಿದನು. ವಾದ್ಯದ ಧ್ವನಿಗೆ ಸಮನಾಗಿ ಹಿಂದೆ ಮುಂದೆ ನಲಿದಾಡಿದ, ಘೂಂಕರಿಸಿದ, ಬೊಬ್ಬಿರಿದ. ವಾಡಿಕೆಯಂತೆ ದೈವ— ತನಗಿರುವ ಅತೃಪ್ತಿಗಳನ್ನೆಲ್ಲ ಹೇಳಿಕೊಂಡಿತು. "ಮಲೆಯಲ್ಲಿ ಅನ್ಯಾಯ ಹೆಚ್ಚಿದೆ, ಅಸೂಯೆ ಹೆಚ್ಚಿದೆ, ಒಬ್ಬರನ್ನು ಕಂಡರೆ ಒಬ್ಬರಿಗಾಗದು. ಸಾಲ ದುದಕ್ಕೆ ಈ ಎರಡು ವರ್ಷಗಳಿಂದ ಮದ್ದುಮಾಟ ಮಾಡುವುದೂ ಕಂಡು ಬರುತ್ತದೆ. ನನಗೆ ತಿಳಿಯದ ಒಂದೂ ಸಂಗತಿ ಇಲ್ಲ. ಯಾರು ಅನ್ಯಾಯ ಗಾರರು, ಯಾರು ಅನ್ನಕ್ಕೆ ವಿಷ ಬೆರೆಸಿದವರು—ಎಂಬುದನ್ನೆಲ್ಲ ನಾನು ಬಲ್ಲೆ. ಅವರ ಮೇಲಿದೆ ನನ್ನ ಕಣ್ಣು. ಅನ್ಯಾಯಗಾರರು ತಪ್ಪಿಗೆ ತಕ್ಕ ಕ್ಷಮೆ ಕೇಳದೆ ಹೋದರೆ, ತಪ್ಪಿಗೆ ತಕ್ಕ ದಂಡ ತೆರದೆ ಹೋದರೆ ಅವರ ಜೀವವನ್ನು ನಾನು ಕೊಳ್ಳುವುದು ನಿಜ" ಎಂದು ಗದರಿಸಿದಾಗ, ಜನರ ಕಣ್ಣುಗಳು ಅನುಮಾನ ದಿಂದ ಆಚೀಚೆ ನೋಡುತ್ತಿದ್ದುವು. ಪ್ರತಿಯೊಬ್ಬರೂ ಯಾರ ವಿಷಯ ಹೇಳಿದ್ದು, ಏನು—ಎಂಬುದನ್ನು ಎಣಿಸಲೆತ್ನಿಸುತ್ತಿದ್ದರು. ವರ್ಷ, ಎರಡು ವರ್ಷಗಳಹಿಂದೆ ನಡೆದ ತಿಮ್ಮನ ಮನೆಯ ಪ್ರಕರಣವೇ ಇದು ಇದ್ದಿರಬಹುದು ಎಂದು ಊಹಿಸಿಕೊಂಡರು. ಕರಿಯನಿಗಂತೂ ಅದೇ ನಿಶ್ಚಯ—ಎಂದು ತೋರಿತು. ಆದರೆ ಆ ಸಭೆಯಲ್ಲಿ 'ತಪ್ಪು ತನ್ನದು, ಕ್ಷಮಿಸು' ಎನ್ನುವ ಸರಳತನ, ದಿಟ್ಟತನ ಯಾರಿಗೂ ಬರಲಾರದು. ಹಾಗೆ ಒಪ್ಪಿಕೊಂಡರೆ ನಾಳೆ ಅವರು ಕೇರಿಯ ಮುಂದೆ ಮುಖ ತೋರಿಸುವುದಕ್ಕೆ ಸಾಧ್ಯವಿಲ್ಲ. ದೈವ ತಾನಾಗಿ ಹೀಗೆ ನುಡಿದಾದ ಬಳಿಕ, ಜನ ತಮ್ಮ ತಮ್ಮ ಹೇಳಿಕೆ ಪ್ರಶ್ನೆ ಗಳನ್ನು ಕೇಳಲು ಮುಂದಾದರು. ಬೂದ ಹೇಳುವ ಮೊದಲೇ ಕರಿಯಣ್ಣ "ಅದಿರಲಿ ದೇವರೆ, ಎಂದೂ ನಮ್ಮ ಜನಗಳ ಮೇಲೆ ಬಾರದ ಅಪವಾದ ಇಂದು ಬಂದಿದೆ. ಧನಿಗಳ ಮನೆಯ ಚಿನ್ನ ಕದ್ದುಹೋಗಿದೆಯಂತೆ. ಯಾರೆಂದು ಹೇಳಿ, ತಪ್ಪಿತಸ್ಥರನ್ನು ದಂಡಿಸಿ, ನಮ್ಮ ಕೀರ್ತಿ ಉಳಿಸಬೇಕು

ನೀನು. ಕಳ್ಳತನದ ಈ ಅಪವಾದವನ್ನು ನಾವೆಲ್ಲರೂ ಸಹಿಸಬೇಡವೇ. ನನ್ನನ್ನೇ ಧನಿಗಳು ಒಮ್ಮೆ ಕೇಳಿದರು. ನೀನು ಕಳ್ಳರನ್ನು ತೋರಿಸಿಕೊಡುವ ತನಕ, ನನ್ನ ಗುರಿಕಾರಿಕೆಯನ್ನು ನಿನ್ನ ಕಾಲ ಬುಡದಲ್ಲಿಟ್ಟಿದ್ದೇನೆ ಅನ್ಯಾಯಗಾರರ ತಲೆಯನ್ನು ನೀನು ತೆಗೆದರೂ ಚಿಂತಿಲ್ಲ. ಧನಿಗಳು ನಮ್ಮನ್ನೆಲ್ಲ ಅನುಮಾನದಿಂದ ಕಾಣದ ಹಾಗೆ ಮಾಡಿ ಕಾಪಾಡಬೇಕು" ಎಂದು ದುಃಖದಿಂದ ತನ್ನ ನೋವನ್ನೆಲ್ಲ ತೋಡಿಕೊಂಡ.

ದೈವ ನಾಲ್ಕು ಆವೃತ್ತಿ ಆರ್ಭಟಿಸಿತು. "ಏನು, ಏನು, ಏನು?" ಎಂದು ಮೇಲಿಂದಮೇಲೆ ನುಡಿಯಿತು. ಕರಿಯ ಅವೇ ಮಾತುಗಳನ್ನು ಇನ್ನೊಮ್ಮೆ ಹೇಳಿದ.

ಬೂದ, ಕರಿಯನೆಂದ ಮಾತುಗಳನ್ನೇ ಸಮರ್ಥಿಸಿ "ಹೀಗೂ ಒಂದು ಸಂಗತಿ ಆಗುವುದುಂಟೇ?" ಎಂದ.

ದೈವಕ್ಕೆ ಕಳ್ಳರು ಯಾರೆಂದು ಗೊತ್ತಿಲ್ಲದ್ದಕ್ಕೋ ಅಥವಾ ಇನ್ನೇತಕ್ಕೋ ಅದೆಂದಿತು "ಏನು ಕಳ್ಳತನವೇ! ಚಿನ್ನ ಕದ್ದದ್ದೇ? ಧನಿಗಳ ಮನೆಯಿಂದೇ? ಈಗ್ಯಾಕೆ ಆ ಮಾತು? ಕಳೆದುಕೊಂಡವರು ನನ್ನೆದುರಿಗೆ ಬರಲಿ. 'ನಾನು ಕಡಿಮೆ' ಎಂದು ಅವರು ಬರಲಿಲ್ಲವೋ ಈಗ? ಮಲೆಯ ದೈವ ನಿಮ್ಮ ಧನಿಗೆ ಸಣ್ಣದಾಯಿತೋ? ಕಳೆದದ್ದು ನಿಜವಾದರೆ ನನ್ನೆದುರಿಗೆ ಬಂದು ಹೇಳಲಿ. ಆಗ ತುಬ್ಬು ಮಾಡಿಕೊಡುವ ಭಾರ ನನ್ನದು. ನನ್ನ ಮಕ್ಕಳು ಕದ್ದಾರೆಂದು ನಾನು ತಿಳಿಯಲಾರೆ" ಎಂದಿತು.

ಜನರ ಮನದಲ್ಲಿ ಒಂದು ಬಗೆಯ ಆತುರ, ಸಂತೋಷಗಳು ವ್ಯಕ್ತವಾದರೂ, ಕರಿಯನಾಗಲೀ, ಬೂದನಾಗಲೀ ಈ ಉತ್ತರದಿಂದ ತೃಪ್ತಿಗೊಳ್ಳಲಿಲ್ಲ. ಬೂದ ಧನಿಗಳ ಪಕ್ಷ ವಹಿಸಿ ಮಾತನಾಡಿದ. "ದೈವವೇ ಹೀಗಂದರೆ ಹ್ಯಾಗೆ? ಧನಿಗಳು ಯಾವಾಗ ನಿನ್ನ ಸೇವೆಗೆ ಕಡಿಮೆ ಮಾಡಿದ್ದಾರೆ? ಎಷ್ಟೋ ಸಾರಿ ಪೂಜೆ ನಡೆದಾಗ ಪೂಜೆಯ ಖರ್ಚು ತಾವು ಹೊತ್ತು ನಡೆಸಿಕೊಟ್ಟರು. ಅವರಿಗೆ ಏನು ಊರಿನಲ್ಲಿ ಕೆಲಸವಿತ್ತೋ ಬರಲಿಲ್ಲ. ಬರಲಿಲ್ಲ, ಅಂದರೆ ನೀನು ಸಿಟ್ಟಾಗುವುದೇ? ದೊಡ್ಡ ಮನಸ್ಸು ಮಾಡಬೇಕು ನೀನು" ಎಂದು ವಿನಯದಿಂದ ಪ್ರಾರ್ಥಿಸಿದ.

"ಹೂಂ, ನಿಜ, ನಿಜ. ಹಿಂದೂ ನಡೆದಿದ್ದಾರೆ, ಇನ್ನೂ ನಡೆದುಕೊಳ್ಳ

ತ್ತಾರೆ—ಅನ್ನುತ್ತೀಯಾ ನೀನು, ಆಗಲಿ. ಕದ್ದುಹೋಗಿದ್ದೇ ಹೌದಾದರೆ ಅವರ ಕೈಗೆ ಅದನ್ನು ಕೊಡಿಸುತ್ತೇನೆ" ಎನ್ನುತ್ತಲೇ, ಕರಿಯ ತನಗೆ ಬೇಕಾದ ಪ್ರಶ್ನೆ ಕೇಳಿದ.

"ದೇವರೇ, ಮತ್ತೂ ಮತ್ತೂ ನಾನು ಹೀಗೆ ಕೇಳುತ್ತೇನೆಂದು ಸಿಟ್ಟಾಗಬಾರದು. ತಿಮ್ಮ, ಗಿಡ್ಡಿ ಕದ್ದವರು ಎಂದು ಊರಲೆಲ್ಲ ಸುದ್ದಿ ಹಬ್ಬಿದೆ; ಜನರೂ ಅದನ್ನು ನಂಬಿದ್ದಾರೆ; ನಿಜವೇ" ಎಂದ.

ಪೂಜೆಗೆ ಬಂದಿದ್ದ ಚೋಮ, ಇನ್ನಷ್ಟು ಧೈರ್ಯತಾಳಿ "ದೈವವೇ, ಎಂದಿನಿಂದ ನಿನಗೆ ನಡೆದುಕೊಂಡು ಬಂದವರು ನಾವು. ನನ್ನ ಮಗಳನ್ನು, ಅಳಿಯನನ್ನು ಕಾಯುವ ಭಾರ ನಿನ್ನದು. ಅವರು ಅನ್ಯಾಯಗಾರರಾದರೆ ಹಾಳಾಗಿ ಹೋಗಲಿ. ಆದರೆ ಬೇರೆಯವರ ಅನ್ಯಾಯ ಸಹಿಸಲಾರದೆ ಅವರು ಓಡಿಹೋದದ್ದು ನಿಜವಾದರೆ, ಅವರನ್ನು ನೀನು ಕಾಪಾಡಬೇಕು. ಆ ಭಾರ ನಿನ್ನದು" ಎಂದು ಬಿನ್ನಹಮಾಡಿದ.

ಹತ್ತೆಂಟು ನಿಮಿಷಗಳ ಕಾಲ 'ಹೂಂ, ಹೂಂ' ಎನ್ನುತ್ತ ದೈವ ಯೋಚನೆಯಲ್ಲಿ ತಲ್ಲೀನವಾಗಿತ್ತು. ಕೊನೆಗೆ ಆರ್ಭಟಿಸಿ "ತಿಮ್ಮನೂ ಅವನ ಹೆಂಡತಿಯೂ ಕದ್ದವರೆಂದು ಹೇಳುವವರಾರು? ಅವರಿಗೆ ಅನ್ಯಾಯಮಾಡಿ, ಅವರನ್ನು ಮಲೆಯಿಂದ ಓಡಿಸಿ, ಸಂಭಾವಿತರ ಹಾಗೆ ಇರುವವರನ್ನು ನಾನು ಬಲ್ಲೆ; ನಾನು ಬಲ್ಲೆ! ನನಗೆ ಕಾಣುವುದಿಲ್ಲವೆಂದು ತಿಳಿಯುತ್ತೀರೋ? ಅವರನ್ನು ಕಾಯುವ ಕೆಲಸ ನನ್ನದು. ಅವರಿಗೆ ಅನ್ಯಾಯ ಮಾಡಿದವರನ್ನು ದಂಡಿಸುವ ಕೆಲಸ ನನ್ನದು" ಎಂದು ಅಪ್ಪಣೆ ಕೊಡಿಸಿತು.

ಮುಖ್ಯವಾಗಿ, ದೈವ ತನ್ನ ನಿಯಮಕ್ಕೆ ತಪ್ಪದ ಹಾಗೆ, ತನ್ನ ಹೆಗ್ಗಳಿಕೆ ಹೇಳಿಕೊಂಡು, ಜನಗಳನ್ನು ಬೆದರಿಸಿಕೊಂಡು, ವ್ಯಕ್ತಿಯ ಹೆಸರನ್ನು ಹೇಳದೆ, ತಪ್ಪಿತಸ್ಥರನ್ನು ಪರೋಕ್ಷವಾಗಿ ದೂರಿ, ಎಂದಿನಂತೆ ಆ ವರ್ಷವೂ ತನ್ನ ವಾಣಿಯನ್ನು ಮುಗಿಸಿತು. ಇನ್ನುಳಿದ ಕೆಲಸ ಕೇರಿಯವರದ್ದು. ತಪ್ಪು ಮಾಡಿದವರು ಅವರವರೇ ಎದುರಿಗೆ ಬಂದು ಹೇಳಬೇಕು. ಹೇಳಿದರಾಯಿತು—ಹೇಳದೆ ಹೋದರೆ ಅವರವರ ಭೀತಿ ಅವರವರ ನಾಶಕ್ಕೆ ಕಾರಣವಾಗುತ್ತದೆ. ಯಾರ ಮನದಲ್ಲಿ ಯಾವ ಭೀತಿಯೋ ಇರಲಿ, ಕರಿಯ ಮಾತ್ರ ಸಂತೋಷಚಿತ್ತನಾದ. ಹತ್ತು ಜನರೆದುರಿಗೆ ತನ್ನ ಗೆಳೆಯರು ನಿರ್ದೋಷಿಗಳೆಂದು ದೈವ ಸಾರಿದ್ದು ಅವನಿಗೆ ಸಂತೋಷವನ್ನುಂಟುಮಾಡಿತು.

ಆ ರಾತ್ರಿಯ ವನಭೋಜನದ ತನಕ ಅವನಿಗೆ ಬೇರೆ ಉದ್ಯೋಗವಿರಲಿಲ್ಲ. ಅಪ್ತರೊಡನಷ್ಟೆ ಹರಟೆ ಕೊಚ್ಚುತ್ತಿದ್ದ. ನಡುನಡುವೆ ತನ್ನ ವಿಚಾರ ನೆನೆಯುತ್ತಿದ್ದ. ಕೋಲದ ಮರುದಿನವೇ, ಕೇರಿಯಿಂದ ತಿಮ್ಮ ಕಣ್ಮರೆಯಾದ ಬಗೆಯಲ್ಲಿಯೇ, ತಾನು ಕಣ್ಮರೆಯಾಗಬೇಕೆಂದು ಆತ ಯೋಚಿಸಿದ್ದ. ಆದರೆ ಗುರಿಕಾರನಾದ ತಾನು, ಹಾಗೆ ಅದೃಶ್ಯನಾದರೆ ತನ್ನ ಕೀರ್ತಿಗೆ ಸಮವಲ್ಲ. ಓಡಿಹೋದವರೇ ಅಪರಾಧಿಗಳೆಂದಾರು—ಎಂದು ಅವನಿಗೆ ತೋರಿತು. ಆದುದರಿಂದ ಹತ್ತು ಜನಗಳ ಮುಂದೆ ತಾನು ತನ್ನ ಗುರಿಕಾರಿಕೆಯ ಪಟ್ಟ ಕಳಚಿ ಬಿಡಬೇಕು. ಅದೇ ಧೈರ್ಯದ ಮಾರ್ಗ—ಎಂದು ತೋರಿತು ಅವನಿಗೆ. ಆ ಸಂಜೆಯ ತನಕ ಆತ ಹಿರಿ ಮನೆಯ ಜೋಮನೊಡನೆಯೇ ಹೆಚ್ಚಾಗಿ ಹರಟುತ್ತಲಿದ್ದ. ರಾತ್ರಿ ಕವಿದು, ಅಗ್ಗಿಷ್ಟಿಕೆ ಹೊತ್ತಿಸಿ, ಅದರ ಬೆಳಕಿನಲ್ಲಿ ಎರಡೂ ಮನೆಯ ಜನ ಕಲೆತರು. ಊಟ ಕಳೆದ ಮೇಲೆ ಹರಟೆ, ಆಟ, ಏನೇನೋ ಹುಚ್ಚಾಟಗಳಲ್ಲಿ ಸಮಯ ಕಳೆಯುವುದು ಅವರ ವಾಡಿಕೆ. ಅದರ ಬದಲು, ಕರಿಯ ತನ್ನ ಮಾತಿನಿಂದ ಇತ್ತಂಡದವರ ಮನವನ್ನೂ ಸೆಳೆದ. ಪ್ರಾರಂಭಿಸುವಾಗ 'ಕಿರಿ ಮನೆಯ ಮಾತು ಇದು' ಎಂದು ಅಂದರೂ, ಅಂದ ಮಾತಿನ ಪರಿಣಾಮ ಎರಡೂ ಮನೆಯವರ ಮೇಲೆ ಆಗದೆ ಹೋಗಲಿಲ್ಲ. "ನಾನೇನೋ ಅನ್ನಬೇಕೆಂದಿದ್ದೇನೆ. ಇಷ್ಟು ದಿನ ನೀವೇ ಹೇಳಿ, ಮಾಡಿದ ಹಾಗೆ, ಸಣ್ಣವನಾದರೂ ಗುರಿಕಾರ ಎನಿಸಿಕೊಂಡು ಬಂದಿದ್ದೆ. ಅದಕ್ಕೂ ಹಿಂದೆ ನಿಮಗೆ ಕಷ್ಟವಾದರೂ, ನನ್ನ ಗುರಿಕಾರಿಕೆ ಒಪ್ಪಿಕೊಂಡು ಬಂದಿರಿ ನೀವೆಲ್ಲ. ಆದರೆ ನನಗೆ ಕಾಣುತ್ತದೆ—ನನಗೆ ಆ ಗುರಿಕಾರಿಕೆ ಬೇಡವೆಂದು. ನಿಮಗೆ ದೈವ ಹೇಳಿದ್ದೆಲ್ಲ ಕೇಳಿದೆ; ನಾನೂ ಬಲ್ಲೆ. ತಿಮ್ಮ, ಗಿಡ್ಡಿ ಈ ಕೇರಿಯಲ್ಲಿ ಸುಖವಾಗಿದ್ದುದು, ಎಷ್ಟೋ ಜನಕ್ಕೆ ನೋಡಲಿಕ್ಕಾಗಲಿಲ್ಲ. ಅವರ ಅನ್ನಕ್ಕೆ ವಿಷ ಬೆರೆಸಿದರು. ಅವರು ಹೋದದ್ದು ಇಲ್ಲಿನ ಬಾಳು ಬೇಡವಾಗಿ; ಕದ್ದಲ್ಲ. ಧನಿಗಳಾದರೇನು? 'ಕದ್ದದ್ದು' ಎಂದು ಸುದ್ದಿ ಹೊರಡಿಸಿದ್ದು, ತಿಮ್ಮನನ್ನು ಹಿಡಿದು ತಂದು ಹೊಡೆಯಬೇಕು, ಬಡಿಯಬೇಕು—ಎಂಬ ಇರಾದೆಯಿಂದಲೇ. ಅವನನ್ನು ಕಾಪಾಡುವ ಹೊಣೆ ದೈವದ್ದು. ನಾನು ಹ್ಯಾಗೂ ಗುರಿಕಾರಿಕೆ ಬಿಡುವವ. ಯಾರ ಹಂಗೂ ನನಗೆ ಇಲ್ಲ, ಯಾವ ಹಂಗೂ ಇಲ್ಲ. ಬೂದ ಮಾವನೂ

ಹೇಳುತ್ತಾನೆ—ನನಗೆ ತಿಮ್ಮನ ಸುದ್ದಿ ಗೊತ್ತೆಂದು. ನಿಜ, ಗೊತ್ತು. ಚೆನ್ನಾಗಿ ಗೊತ್ತು. ನಾನು ಸಹ ತಿಮ್ಮನಿರುವಲ್ಲಿಗೇ ಹೋಗಬೇಕೆಂದಿದ್ದೇನೆ. ತಿಮ್ಮ ಹೋದದ್ದು ಧನಿಗಳ ಅನ್ಯಾಯವನ್ನು ನೋಡಲಾರದೆ. ಆಮೇಲೆ ಕೇರಿಯ ಒಬ್ಬಿಬ್ಬರು ತಮ್ಮನ್ನು ವಿಷ ಹಾಕಿ ಕೊಂದಾರು—ಎಂಬ ಹೆದರಿಕೆಯಿಂದ. ಇನ್ನಾದರೂ ತಿಮ್ಮನ ಮೇಲೆ ಅನ್ಯಾಯ ಹೊರಿಸಬೇಡಿ. ನನ್ನ ಮೇಲೆಯೂ ಅನ್ಯಾಯದ ಮಾತು ಹೇಳಿದ್ದಾರೆ; ನಾಳೆಯೂ ಹೇಳಬಹುದು ಜನ. ದೈವ ನೋಡಿಕೊಂಡೀತು ಆದರ ನಿಜವನ್ನು. ನನಗ್ಯಾಕೆ ಆ ಪಾರುಪತ್ಯ" ಎಂದು ಸಿಡುಕು, ಕಂಬನಿಗಳಿಂದ, ಆ ಸಭೆಯಿಂದೆದ್ದು ಹೊರಟೇಹೋದ ಎರಡೂ ಮುಲೆಯ ಜನಗಳಲ್ಲಿ ಕಾತರ, ಕಳವಳ ಉಂಟಾದುವು. ಬೂದನಂತು ಇಲ್ಲದ ಜೇಸರಕ್ಕೊಳಗಾದ. ಕರಿಯನ ಮೇಲೆ ಅವನಿಗೆ ಅಭಿಮಾನ ಕಡಿಮೆ ಇರಲಿಲ್ಲ. ತಿಮ್ಮನ ಸಹವಾಸದಿಂದ ಕರಿಯ ಕೆಟ್ಟಿದ್ದಾನೆ—ಎಂದು ಅಷ್ಟು ದಿನ ಅವನಿಗೆ ತೋರಿದ್ದರೂ, ಇಂದು ದೈವದ ವಾಣಿಯಿಂದ ಅವನ ಅನುಮಾನ ಪರಿಹಾರವಾಗಿದೆ. ಕೆಂಚನ ಮುಂದೆ, ಅವನ ಅಂತಿಮ ಕಾಲದಲ್ಲಿ, 'ನಿನ್ನ ಮೊಮ್ಮಗನನ್ನು ನೋಡಿಕೊಳ್ಳುತ್ತೇವೆ, ಗುರಿಕಾರನನ್ನಾಗಿ ಮಾಡುತ್ತೇವೆ, ನಿನ್ನನ್ನು ಕಂಡಷ್ಟೇ ಮನ್ನಣೆಯಿಂದ ಕಾಣುತ್ತೇವೆ' ಎಂದಿದ್ದ ಬೂದ. ಅವನಿಗೆ ಎಲ್ಲಿಲ್ಲದ ದುಃಖ, ನೋವು ಉಂಟಾಯಿತು. 'ಕರಿಯಣ್ಣ, ಕರಿಯಣ್ಣ' ಎಂದು ಆತ ಗೋಳಿಟ್ಟು ಕರೆದ. ಅವನು ಹೋದ ದಾರಿಯನ್ನು ಹಿಂಬಾಲಿಸಿದ. ಸಭೆ ಚೆದರಿತು. ಎರಡೂ ಮುಲೆಯವರೂ ಕಿರಿ ಮುಲೆಯ ಕೇರಿಗೆ ಅವಸರವಾಗಿ ಧಾವಿಸಿ ಹೋದರು.

ಆ ರಾತ್ರಿ ಮುಲೆಯ ಜನಕ್ಕೆ ನಿದ್ದೆ ಇರಲಿಲ್ಲ. ಪ್ರತಿಯೊಬ್ಬರು ದೈವದ ನುಡಿಯನ್ನು ನೆನೆದು ಗುಜು ಗುಜು, ಗುಸು ಗುಸು—ಮಾತನಾಡುವವರೇ. ಎರಡೆರಡು ವಿಷಯಗಳು ಅವರನ್ನು ಬಾಧಿಸುತ್ತಿದ್ದುವು. ತಮ್ಮಲ್ಲಿ ಅನ್ನಕ್ಕೆ ವಿಷ ಬೆರೆಸುವ ಜನಗಳೂ ಇದ್ದಾರೆ—ಎಂಬ ಅನುಮಾನವನ್ನು ದೈವ ಬಾಯ್ಬಿಟ್ಟು ಹೇಳಿದ್ದು, ಕರಿಯಣ್ಣ 'ಧನಿಗಳೇ ಅನ್ಯಾಯಗಾರರು'—ಎಂದು ಸಾರಿ ಹೇಳಿದ್ದು. ಧನಿ ಎಂಥವನಾದರೂ, ಹತ್ತು ಜನರ ಮುಂದೆ ಅಷ್ಟು ನಿರ್ಭೀತಿಯಿಂದ ಆ ಮಾತು ಹೇಳಬಾರದಿತ್ತು—ಎಂದು ಕೆಲವರಿಗೆ ಅನಿಸಿ

ದರೂ, ಆತ ಹೇಳಿದ್ದು ನಿಜವಿರಬಹುದೇ—ಎಂಬ ಅನುಮಾನ ಕೆಲವರಿಗೆ ಉಂಟಾಗದೆ ಹೋಗಲಿಲ್ಲ.

ಮರುದಿನ, ಆ ಮರುದಿನ, ಜನ ಕರಿಯನಿಗಾಗಿ ಕಾದು ಕುಳಿತರೂ ಮಲೆಯನ್ನೆಲ್ಲ ಅರಸಿದರೂ ಅವನು ಸಿಗದೆ ಹೋದ. ತಾವು ಚಿಕ್ಕ ಗುರಿಕಾರನನ್ನು ಕಳೆದುಕೊಂಡದ್ದು ನಿಜವೆಂಬ ವ್ಯಥೆ ಉಂಟಾಯಿತು. ಹೊಸ ಗುರಿಕಾರನನ್ನು ಆರಿಸುವ ಪ್ರಮೇಯ ಬಂದೊದಗಿತು. ಈಗ ಮಾತ್ರ ಆ ಕೆಲಸ—ಅಷ್ಟು ಸುಲಭದ್ದಾಗಿ ಕಾಣಿಸಲಿಲ್ಲ. ತಾವು ತಾವೇ ಏನಾದರೊಂದು ನಿಶ್ಚಯ ಮಾಡಿ, ಗುರಿಕಾರಿಕೆಯ ಪಟ್ಟ ನಿಶ್ಚಯಿಸಿದರೆ, ಹಿಂದಾದಂತೆಯೇ ಇನ್ನೊಮ್ಮೆ ತಿರುಮಲಧನಿಗಳ ಮುನಿಸಿಗೆ ಪಾತ್ರವಾಗಬೇಕು—ಎಂಬ ಅನುಮಾನ ಬಂದುದರಿಂದ, ಕೇರಿಯ ಜನ ಬೂದನಾಗಲೀ ತುಕ್ರನಾಗಲಿ ಧನಿಗಳ ತನಕ ಹೋಗಿ ಸುದ್ದಿ ಮುಟ್ಟಿಸಬೇಕೆಂದು ನಿರ್ಣಯ ಮಾಡಿದರು. ಬೂದನ ಮನಸ್ಸು ತುಂಬ ನೊಂದಿತ್ತು. ಕರಿಯ ಅಂದದ್ದನ್ನೆಲ್ಲ ಧನಿಗಳ ಮುಂದೆ ಆತ ಹೇಳಲಾರ. ದೈವ ಹೇಳಿದ್ದನ್ನೆಲ್ಲ ಅವರಿಗೆ ತಿಳಿಸದೆ ಹೋದರೂ ತಪ್ಪಾಗುತ್ತದೆ. ತಿಳಿಸಿದರೂ ಕಷ್ಟ—ಎಂದುಕೊಂಡು, ತುಕ್ರನನ್ನೇ ಮುಂದೆ ತಳ್ಳಿದ. ತುಕ್ರಗೆ ಹಳೆಯ ಯಜಮಾನಿಕೆಯ ಹಂಬಲ ಇನ್ನೊಮ್ಮೆ ಮೊಳೆಯಿತು ಮನಸ್ಸಿನಲ್ಲಿ. ಆತ ನೆಟ್ಟಗೆ ವಿಟ್ಟಲಕ್ಕೆ ಓಟ ಹೂಡಿದ. ನಾಲ್ಕು ದಿನಗಳಲ್ಲಿ ಧನಿಗಳನ್ನು ಕರೆದೂ ತಂದ. ತಾನು ಕೇಳಿದ ಯಾವತ್ತೂ ಸುದ್ದಿಗಳನ್ನು ಅವರ ಕಿವಿಯ ಮೇಲೆ ಹಾಕಿದ. ಧನಿಯರೂ ಮಲೆಗೆ ಅವಸರದಲ್ಲಿ ಬಂದರು.

ಧನಿ ಬರುತ್ತಲೇ, ಅವರ ಮನೆಯ ಮುಂದೆ ಕೇರಿಯ ಹಿರಿಯರೊಬ್ಬೊಬ್ಬರಾಗಿ ಬಂದು ಸೇರಿದರು. ದೈವದ ನುಡಿ ಅಲ್ಲಗಳೆಯುವ ಸಾಹಸ ಅವರಿಗೆಲ್ಲುಂಟು? ನಾಳೆ ಕೇರಿಗೆ ಇಷ್ಟವಿಲ್ಲದ ವ್ಯಕ್ತಿಯನ್ನು, ತಾನು ಯಜಮಾನನಾಗಿ ಆರಿಸಿದರೆ, ಅದೂ ದೈವದ ಬಾಯಿಗೊಂದು ಆಹಾರ—ಎಂದು ತೋರಿತು. ಆದುದರಿಂದ ಅವರು ಅಪ್ಪಣೆ ಕೊಡಿಸಿದರು—"ಹಿಂದೆ ಈ ಗುರಿಕಾರಿಕೆಯ ಸಂಬಂಧದಲ್ಲಿ ಏನಾಯಿತು ಹೋಯಿತು—ಎಂಬುದು ನಿಮಗೆಲ್ಲ ಗೊತ್ತಿದೆ. ನಾನು ಅದನ್ನೆಲ್ಲ ಕಟ್ಟಿಕೊಂಡು ಏನು ಮಾಡಬೇಕಾಗಿದೆ? ನನಗೀಗ ಮೊದಲಿನ ಹಾಗಲ್ಲ—ಎರಡೆರಡು ಮಲೆಗಳಿವೆ. ನನ್ನ ಕೆಲಸದ

ಮುಟ್ಟಿಗೆ ಧೋರಣೆಯ ಮುಟ್ಟಿಗೆ, ಹೊಸ ವ್ಯವಸ್ಥೆಯೇನೂ ಬೇಡ. ಆ ಮಲೆಯ ಯಜಮಾನಿಕೆ ತುಕ್ರ ನಡೆಸುತ್ತಾನೆ. ಈ ಮಲೆಯ ಓಡಾಟ ಬೂದ ಮಾಡುತ್ತಾನೆ. ಇನ್ನು ನಿಮ್ಮ ನಿಮ್ಮ ಕುಲಾಚಾರ ಲೆಕ್ಕ—ಅದನ್ನು ನೀವು ನೀವೇ ಪೂರೈಸಿಕೊಳ್ಳಿ" ಎಂದರು. "ಹಿರಿಯರಲ್ಲಿ ಯಾರೂ ಗುರಿಕಾರರಾಗಲಿ—ನನಗೆ ಅವರೆಲ್ಲ ಒಂದೇ. ಬಲ್ಲವರು, ತಿಳಿದವರು ಆದರೆ ಆಯಿತು. ಆದರೆ ನಾಳೆ ಕರಿಯಣ್ಣನಿಗೆ ದೊಡ್ಡ ಮನಸ್ಸು ಬಂದು, ಅವನು ಹಿಂದಕ್ಕೆ ಬಂದರೆ, ಗುರಿಕಾರಿಕೆಯನ್ನು ಅವನಿಗೇ ಒಪ್ಪಿಸಬೇಕು" ಎಂದರು. ಅಂತೂ ಆ ದಿನದ ಸಭೆಯಲ್ಲಿ ಬೂದ ಹೆಚ್ಚಿನ ಉತ್ಸಾಹ ತೋರದ್ದರಿಂದ, ತುಕ್ರ ನಾಲ್ಕು ಜನರ ಹತ್ತಿರ ಮಾತನಾಡಿದ್ದರಿಂದ, ಆ ಪದವಿ ಸರ್ವಾನುಮತದಿಂದ ಅವನ ಕೊರಳಿಗೇ ಬಿತ್ತು. ಅಷ್ಟು ದೊರೆತನ ಗೊರಕಿದ ಮೇಲೆ, ತುಕ್ರ ತುಸು ಧೈರ್ಯಪೂರ್ಣವಾಗಿ ದಾರಿಯಲ್ಲಿ, ಧನಿಗಳಿಗೆ ತಿಳಿಸಿದ ಮಾತನ್ನೇ ನಾಲ್ಕು ಜನರ ಮುಂದೂ ಹೇಳಿದ. "ಒಡೆಯಾ, ಕೋಲಕ್ಕೆ ನೀವು ಬಂದಿದ್ದರೆ ಚೆನ್ನಾಗಿತ್ತು. ನೀವೇ ಚಿನ್ನ ಕಳೆದು ಹೋದುದನ್ನು ದೈವದ ಮುಂದೆ ಹೇಳಿದ್ದರೆ—ತಾನು ತಬ್ಬು ಮಾಡಿಕೊಡುತ್ತಿದ್ದೆ. ಅದನ್ನು ಕದ್ದದ್ದು ತಿಮ್ಮನ ಮನೆಯವರಲ್ಲ—ಎಂದಿತು ದೈವ" ಎಂದು ತಿಳಿಸಿದ.

ತಿರುಮಲಭಟ್ಟರು ಎಲೆ ಅಡಿಕೆ ಮೆಲ್ಲುತ್ತ ಕುಳಿತವರು, ವಿಚಾರಶಾಲಿಗಳಂತೆ ಚಾವಡಿಯಿಂದಿಳಿದು, ಅಂಗಳಕ್ಕೆ ಹೋಗಿ, ತಟಿಯ ಮುಂದೆ ಎರಡು ಬೆರಳಿರಿಸಿ, ತಂಬುಲವನ್ನು ಚಿರ್ರನೆ ಚಿಮ್ಮಿ ನಗುತ್ತ ಮರಳಿ ಬಂದು "ಹೌದೋ ತುಕ್ರ—ಅದೊಂದು ನಿನಗೆ ಹೇಳಲೇ ಇಲ್ಲಲ್ಲವೇ? ನೋಡು, ಸರ ಹೋಗಿ ನಾನು ಗಾಬರಿಯಾದದ್ದು ನಿಜ. ಊರಿಗೆ ಹೋದ ಮೇಲೆ ಇಲ್ಲಿಂದ ಕೊಂಡು ಹೋದ ಸಾಮಾನುಗಳನ್ನು ಜಡ್ತಿಮಾಡುವಾಗ, ಅದು ನನ್ನ ಪೆಟ್ಟಿಗೆಯೊಳಗೇ ಇತ್ತು. ಆದರೂ ಆ ದಿನ ತಿಮ್ಮ ನನ್ನ ಅನ್ನ ತಿಂದು ಬೆಳೆದು, ಮಲೆ ಬಿಟ್ಟು ಹೋಗುವಾಗ, ನನಗೆ ಒಂದು ಸುದ್ದಿ ಹೇಳದೆ ಹೋದದ್ದು ನ್ಯಾಯವೇ? ಈಗ ಕರಿಯಣ್ಣನೂ ಹಾಗೆ ಮಾಡಿದ. ಆದರಿಂದ ಧನಿ ಆದವನಿಗೆ ಏನು ಮರ್ಯಾದೆ ಕೊಟ್ಟ ಹಾಗಾಯಿತು ಒಂದು ದಿನವಾದರೂ ನಾನು ಕರಿಯನಿಗೆ ಕೆಟ್ಟ ಮಾತನಾಡಿದ್ದೇನೇ? ತಿಮ್ಮನಿಗಾದರೆ—ಕೆಟ್ಟ ಮಾತೆಂದದ್ದುಂಟು; ಗದರಿಸಿದ್ದುಂಟು" ಎಂದರು.

‘ ಕದ್ದ ಒಡವೆ ಕದ್ದು ಹೋಗಿಲ್ಲ. ಮರಳಿ ಸಿಕ್ಕಿತು ’ ಎಂದು ಕೇಳಿ ಕೇರಿಯ ಜನಕ್ಕೆ ಸಂತೋಷವಾಯಿತು. ಅಲ್ಲದೆ—ದೈವ, ‘ ಕದ್ದು ಹೋಗಿದ್ದರೆ, ಧನಿಗಳೇ ಕೇಳಿದರೆ ತಾನು ಕೊಡಿಸುತ್ತೇನೆ ’ ಎಂದೆನ್ನಲಿಲ್ಲವೇ. ಅದರ ಹಿರಿಮೆಯ ಮಾತುಗಳೂ ನೆನಪಾದುವು. ಆದರೆ ಧನಿಗಳು ಕರಿಯನ ವಿಷಯದಲ್ಲಿ ಬೇಸರವನ್ನು ತಾಳಿದ್ದು, ಬೂದನಿಗೇಕೋ ಸಮಾಧಾನವಾಗಲಿಲ್ಲ. “ ಏನು ಒಡೆಯ, ಅವನದು ಹುಡುಗಬುದ್ಧಿ ; ನಾಳೆ ತಿರುಗಿ ಬಂದಾನು. ನೀವು ಅದನ್ನೆಲ್ಲ ಮನಸ್ಸಿನಲ್ಲಿಟ್ಟುಕೊಳ್ಳಬಾರದು. ಅವನ ಮನಸ್ಸು ಒಳ್ಳೆಯದು ” ಎಂದ. ತುಕ್ರ ತನ್ನ ಹೆಚ್ಚಳ ತೋರುವುದಕ್ಕಾಗಿ “ ಹುಡುಗ, ಗಿಡುಗ ಅನ್ನುವುದು ನ್ಯಾಯ. ಆದರೆ ಗುರಿಕಾರನಲ್ಲವೇ? ಏನು ಆಡಬಹುದು, ಏನು ಆಡಬಾರದು—ಎಂದು ಆಡುವ ಮೊದಲು ನೋಡಬೇಡವೇ ? ಹತ್ತು ಜನರ ಎದುರಿಗೆ—ಧನಿಗಳು ಅಂಥವರು, ಇಂಥವರು—ಎಂದರೆ ಅದು ಸಣ್ಣ ಮಾತಾಗುತ್ತದೆಯೇ ? ” ಎಂದ.

ಅದಕ್ಕೆ ಧನಿಗಳು ನಗುತ್ತ “ ತುಕ್ರ, ಅವನಿಗೆ ಬುದ್ಧಿ ಇಲ್ಲದೆಯೇ ಆಡಿದನೆಂದು, ನಾನು ಸಿಟ್ಟಾಗುತ್ತೇನೆಯೆ ? ಹುಡುಗಬುದ್ಧಿ. ಆದರೆ ಅವನು ನಿಮಗ್ಯಾರಿಗೇ ಸಿಗಲಿ—ಹೇಳಿ, ಒಳ್ಳೆಯ ಮಾತಿನಲ್ಲೇ ಹೇಳಿ. ‘ಧನಿಗಳಿಗೆ ನಿನ್ನ ಮೇಲೆ ಸಿಟ್ಟಿಲ್ಲ ; ಏನೂ ಸಂಶಯವಿಲ್ಲ. ಮನೆಗೆ ಬಂದು ಇರು’ ಎಂದು. ನನಗೆ ನನ್ನ ಮಕ್ಕಳು ಬೇರೆ, ನೀವು ಬೇರೆ ಎಂದನಿಸುವುದಿಲ್ಲ ” ಎಂದು ಅಪ್ಪಣೆ ಕೊಡಿಸಿದರು.

ಅಲ್ಲಿಗೆ ಗುರಿಕಾರಿಕೆಯ ಪ್ರಕರಣ ಮುಗಿಯಿತು. ಬಂದ ಧನಿಗಳು ಊರಿಗೆ ಮರಳಿದರು. ಅವರನ್ನು ನಿರಾಶೆಗೊಳಿಸಿದ ಪ್ರಕರಣವೆಂದರೆ, ಅವರು ಬಂದಂದಿನಿಂದ ಕೆಂಪಿ ಮೈ ಚೆನ್ನಾಗಿಲ್ಲವೆಂದು ಮನೆಯಲ್ಲೇ ಒರಗಿಕೊಂಡದ್ದು ; ಅವಳು ಬಂಗಲೆಯ ಕೆಲಸಕ್ಕೆ ಹೋಗದೆ ಇದ್ದುದು.

ದೈವದ ಕೋಲಕ್ಕೆ ಹೋದ ಕೆಂಪಿ, ದೈವದ ಮಾತನ್ನು ಸಮೀಪದಿಂದ ಕೇಳಿಲ್ಲವಾದರೂ, ಆ ಮಧ್ಯಾಹ್ನ ಅಲ್ಲಿಗೆ ಹೋದವಳು, ತನ್ನ ಗೆಳತಿಯರಿಂದ ಎಲ್ಲ ಸುದ್ದಿಯನ್ನು ಕೇಳಿ ತಿಳಿದಿದ್ದಳು. ಅಂದಿನಿಂದಲೇ ಅವಳ ಎದೆ ಕೊರೆಯತೊಡಗಿತು. ತಿಮ್ಮ, ಗಿಡ್ಡಿಯರ ಮೇಲಿನ ಕೋಪ ಉಲ್ಬಣಿಸಿ ಬರುವ ಬದಲು, ತಾನು ನಡೆಸಿದ ಕೃತ್ರಿಮ ದೈವಕ್ಕೆ ಗೊತ್ತಾಯಿ

ತಲ್ಲ—ಎಂಬ ಭೀತಿ ಅವಳ ತಲೆಯಲ್ಲಿ ತುಂಬಿಕೊಂಡಿತು. 'ತಪ್ಪು ಒಪ್ಪಿಕೊಳ್ಳದೆ ಹೋದರೆ ತಪ್ಪಿತಸ್ಥರ ತಲೆಯನ್ನು ತೆಗೆಯುತ್ತೇನೆ. ಅವರನ್ನು ಬಲಿ ಕೊಳ್ಳುತೇನೆ' ಎಂದ ದೈವದ ವಿಚಾರದಲ್ಲಿ, ಇಲ್ಲದ ಹೆದರಿಕೆ ಅವಳಿಗೆ ಉಂಟಾಯಿತು. ಹತ್ತು ಜನರ ಮುಂದೆ ಒಪ್ಪಿಕೊಳ್ಳುವ ತಪ್ಪಾದರೆ—ಅವಳೇನು ಮಾಡುತ್ತಿದ್ದಳೋ! ಅದರ ಬದಲು ನಾಲ್ಕು ಜನರ ಮುಂದಾದರೂ 'ಗಿಡ್ಡಿಗೆ ಖರ್ಜೂರದಲ್ಲಿ ಮದ್ದು ಬೆರೆಸಿ ಕೊಟ್ಟೆ; ಗಂಜಿಗೆ ಓತಿಕೇತ ತಂದು ಹಾಕಿದೆ'—ಎಂದು ಯಾವ ಅಪರಾಧಿಯೂ ಬಹಿರಂಗದಲ್ಲಿ ನುಡಿದಾನೆಯೇ? ಹಾಗೆ ನುಡಿದದ್ದಾದರೂ, ಆ ಮೋರೆಯನ್ನು ಹೊತ್ತುಕೊಂಡು, ಕೇರಿಯ ಜನರ ಮುಂದೆ ಬಾಳುವುದಕ್ಕಾಗುತ್ತದೆಯೇ? ಏನಿಲ್ಲ—ತನ್ನ ಗಂಡನೊಡನೆಯೂ ಹೇಳಲಾರದ ಮಾತದು. ಹೆಚ್ಚೆಂದರೆ ದೈವದ ಬದಲು ಗುರಿಕಾರನ ಮುಂದೆ, 'ತನ್ನಿಂದ ಶತಾಪರಾಧವಾಯಿತು'—ಎಂದು ಕಾಲು ಹಿಡಿದು, ಗುಟ್ಟಿನಲ್ಲಿ ಕ್ಷಮೆ ಕೇಳಬಹುದು—ಎಂದು ತೋರಿತು. ಅದಕ್ಕೂ ಈಗ ಅವಕಾಶವಿಲ್ಲ. ಕರಿಯಣ್ಣ ಕೇರಿಯನ್ನು ಬಿಟ್ಟೇ ಹೊರಟು ಹೋದ.

ಭಯ ಭೀತಿಗಳಿಂದ ಕೆಂಪಿ ಉಣ್ಣುವುದು, ತಿನ್ನುವುದು, ಮಾತನಾಡುವುದು—ಅಸಾಧ್ಯವಾಗುತ್ತ ಬಂದಿತು. ಬೂದಣ್ಣ ಅಡಿಗಡಿಗೆ ಅವಳ ಬಳಿಗೆ ಬಂದು "ಏನಾಗಿದೆ ನಿನಗೆ, ಜ್ವರವೇ? ಮತ್ತೊಂದೇ? ಉಣ್ಣಲಾರೆ ಏಕೆ?" ಎಂದರೂ, "ಏನೆಂದು ನನಗೇ ಗೊತ್ತಾಗುವುದಿಲ್ಲ. ಜೀವಸಂಕಟವಾಗುತ್ತದೆ" ಎನ್ನುತ್ತಾಳೆ ಅವಳು. ಬಲವಂತದಿಂದ ಗಂಜಿಯ ಬಟ್ಟಲನ್ನು ಅವಳ ಬಾಯಿಗೆ ಹಿಡಿದರೆ, ಕುಡಿದುದನ್ನು ಕಕ್ಕುತ್ತಾಳೆ. ಭೀತಿಯಿಂದ ಕಣ್ಣಾರಳಿ ಕೆಂಪಾಗಿವೆ. ಒಂಟಿಯಾಗಿ ಅತ್ತು, ಅತ್ತು ಕಪೋಲಗಳು ತೊಯ್ದು ಹೋಗಿವೆ. ಬೂದ ಕೆಂಪಿಯ ಸ್ಥಿತಿಯನ್ನು ಕಂಡು ಕಂಗಾಲಾದ. ನಾಲ್ಕು ದಿನ ಸರಿದುವು. ಧನಿಗಳು ಊರಿಗೆ ಹೊರಟು ಹೋದರು. ಬೂದ ಗುರಿಕಾರಿಕೆಯ ವಿಚಾರದಲ್ಲಿ, ನಡೆದ ತೀರ್ಮಾನವನ್ನು ಮನೆಯಲ್ಲಿಯೂ ಹೇಳಿದ. ಅದನ್ನು ಕೇಳಿದ ಮೇಲೆ, ಕೆಂಪಿಗೆ ಇದ್ದೊಂದು ಆಸೆಯೂ ಮಾಯವಾಯಿತು. ದೈವದ ಮುಂದಕ್ಕೆ ಒಪ್ಪಿಕೊಳ್ಳಲಾರದ ತಪ್ಪನ್ನು, ಗುರಿಕಾರನ ಮುಂದೆ ಹೇಳೋಣ—ಎಂದು ಹಂಬಲಿಸಿದರೆ, ಕರಿಯ ಓಡಿ

ಹೋದ; ಬದಲು ತನ್ನ ಪರಮ ಶತ್ರುವಾದ ತುಕ್ರ ಗುರಿಕಾರನಾಗಿದ್ದಾನೆ. ಮನಸ್ಸು ದ್ವೇಷದಿಂದ ಮತ್ತಷ್ಟು ಬಿಗುವಾಯಿತು. 'ಜೀವ ಹೋದರೂ ತುಕ್ರನ ಮುಂದೆ ಆ ಸುದ್ದಿ ಹೇಳಲಾರೆ' ಎಂದಂದುಕೊಂಡಳು ಅವಳು.

ದಿನ ಹೋದಂತೆ, ಕೆಂಪಿಯ ಹೆಸರಿಲ್ಲದ ಬೇನೆ, ಪ್ರಬಲಿಸಿತು. ಅನ್ನ ಆಹಾರ ಬಿಟ್ಟ ಅವಳಿಗೆ, ಸಮನಾಗಿ ನಿದ್ದೆ ಹತ್ತುತ್ತಲೂ ಇರಲಿಲ್ಲ. ನಿದ್ರೆ, ಎಚ್ಚರಗಳೆರಡರಲ್ಲೂ, ಭಯಾನಕ ನರಕ ಹಿಂಸೆಯ ಚಿತ್ರವೇ ಕಾಣುತ್ತದೆ. ಕೇರಿಯಲ್ಲಿ—ಗುಳಿಗ, ದೆವ್ವ ಬಡಿದು ಯಾರ್‍ಯಾರು ಆಕಸ್ಮಿಕ ಮರಣ ಹೊಂದಿದ್ದರೋ, ಅವರೆಲ್ಲರ ಚಿತ್ರಗಳನ್ನು ನೆನೆಯುತ್ತಾಳೆ. ಒಮ್ಮೊಮ್ಮೆ ಬೆದರಿ ಚೀರುತ್ತಾಳೆ. ಮೈಮರೆತಾಗ 'ಕರಿಯಣ್ಣಾ, ಕರಿಯಣ್ಣ' ಎಂದು ಕೂಗುತ್ತಾಳೆ. ಬೂದನಿಗ ಬೇರೆ ದಾರಿ ಕಾಣದೆ ಹೆದರಿ, ಹಿರಿ ಮಲೆಗೆ ಓಡಿ ಹೋಗಿ ಅವಳ ಮುದಿ ತಾಯಿತಂದೆಯರನ್ನು ಕರೆಕೊಂಡು ಬಂದ. ಅವರೂ, ಬಂದ ಮಗಳ ಪಾಡನ್ನು ಕಂಡು, ಆಡಿದ್ದಕ್ಕೆ ನೇರ ಪ್ರತ್ಯುತ್ತರ ಕೊಡಲಾರದ, ಅವಳ ಚಯೆ ನಗಳಿಂದ ಭೀತಿಗೊಂಡು, ತಿರುಗಿ ಮಲೆಗೆ ಹೋದರು. ಬಿದುಮ ಪೂಜಾರಿಯನ್ನು ಕರೆದು ತಂದರು. ಬಿದುಮ ಅವಳ ಬಳಿ ಕುಳಿತು, ಮದ್ದು ಮಾಟ ಮಾಡಿದ. ಬಾಳೆಯ ದಿಂಡು, ತೆಂಗಿನ ಗರಿಗಳಿಂದ ಏನೇನೋ ಗೊಂಬೆ, ಮಂಟಪ ನಿರ್ಮಾಣಮಾಡಿ ಚರು, ಕುಂಕುಮ, ಓಕಳಿಗಳನ್ನು ಚೆಲ್ಲಿ, ಕೋಳಿ ಬಲಿಕೊಟ್ಟು ತರತೆರನ ಸೋಂಕುಗಳಿಗೆ ಪರಿಹಾರವೆಸಗಿದ. ನಿರಾಶೆಯಿಂದ ಕಂಗಾಲಾದ ಬಂಧುಗಳಿಗೆ, ಸಮಾಧಾನವೆಸಗುವುದಕ್ಕಾಗಿ ಅವಳ ಕೊರಳಿಗೆ ಮಂತ್ರಿಸಿದ ತಾಳಿಯನ್ನು ಕಟ್ಟಿದ.

ಬೂದ, ತೌಡ, ಕಾಳ ಎಲ್ಲರೂ 'ಮಾಡುವುದನ್ನೆಲ್ಲ ಮಾಡಿದ್ದೇವೆ, ಇನ್ನು ಕಾಪಾಡುವುದು ದೈವದ ಕೆಲಸ' ಅನ್ನುತ್ತಲೇ ಇದ್ದರು. ಮತ್ತೆ ಎರಡು ದಿನ ಕುದಿಯುವ ಜ್ವರ ಅವಳನ್ನಾವರಿಸಿತು. ಮೈ ಮುಖಗಳೆಲ್ಲವೂ ಬಾಡಿ ಪ್ರೇತಶರೀರಿಯಾಗಿದ್ದಳು ಕೆಂಪಿ. ಕಣ್ಣು ಅರಳಿ ರಕ್ತರಂಜಿತವಾಗಿತ್ತು. ಮಾತು ಹೊರಡುವುದೂ ನಿಧಾನವಾಯಿತು. ಆದರೆ ದೃಷ್ಟಿಯ ನೋಟದಲ್ಲಿ ಯಾವುದೋ ವಸ್ತುವನ್ನು ಆಕೆ ಅರಸುತ್ತಿದ್ದಂತೆ, ಯಾರದೋ ಆಗಮನವನ್ನು ಬಯಸುತ್ತಿದ್ದಂತೆ ಕಾಣುತ್ತಲಿತ್ತು.

ಕೇರಿ ಬಿಟ್ಟು ಓಡಿಹೋದ ಕರಿಯ ಗೆಳೆಯರನ್ನು ಕೂಡಿಕೊಂಡ.

ಅಲ್ಲಿಂದ ತಾನು ಕಂಡುಹಿಡಿದ ಹೊಸ ಜಾಗಕ್ಕೆ ಪಯಣವೆಸಗಿದ. ನಾಲ್ಕು ದಿನ ಮರ ಕಡಿಯುವ ಕೆಲಸಮಾಡಿದ. ಸ್ವಲ್ಪ ಜಮೀನನ್ನು ಮೂವರೂ ಸೇರಿ, ಸವರಿ ನೆಲ ಸಮ ಮಾಡಿದಾಗ 'ಕುಮರಿಯ ಬೀಜಕ್ಕೆ ಗತಿಯೇನು' ಎಂಬ ಯೋಚನೆ ಮೊಳೆಯಿತು. ಬಳಸು ದಾರಿಯಿಂದ, ಹಿರಿ ಮಲೆಗೆ ಹೋದ— ಚೋಮನಲ್ಲಿಗೆ. ಹೋದುದು ಕುಮರಿಯ ಬಿತ್ತನ್ನು ಕೇಳಿ ತರಲು. ಅಲ್ಲಿ ಬಹು ಹೊತ್ತು ತಿಮ್ಮ, ಗಿಡ್ಡಿಯರ ವಿಚಾರದ ಮಾತುಕತೆಗಳು ನಡೆದುವು. ಅಲ್ಲಿಂದ ಮಾತು ಕಿರಿ ಮಲೆಯ ಗುರಿಕಾರ ಕರಿಯನ ವಿಚಾರಕ್ಕೂ ಬಂದಿತು. ಅದನ್ನೆಲ್ಲ ಕೇಳಿ ಹೊರಡುವಾಗ, ಮನೆಯ ಎದುರಿಗೆ ಬಿರುಮ ಪೂಜಾರಿ ಸಂಧಿಸಿ "ಏನಣ್ಣ, ಏನು ಮಾಡಿದೆ?" ಎಂದು ಮಾತಿಗೆ ತೊಡಗಿದ. ಗುಟ್ಟಿ ನಲ್ಲಿ ಬಂದುಹೋಗಬೇಕು—ಎಂದಿದ್ದ ಕರಿಯನಿಗೆ ಈಗ, ಯಾವ ಭೀತಿಯೂ ಇಲ್ಲದಿದ್ದರೂ ಪೂರ್ವಸ್ನೇಹ ಮರೆಯಲಾರನಷ್ಟೆ. ಚೋಮ, ಬಿರುಮ, ಕರಿಯ ಮೂವರೂ ಕಲೆತರು. "ನಿನ್ನೆ ಮೊನ್ನೆ ಎಲ್ಲಿ? ಪೂಜಾರಿಗಳನ್ನು ಕಾಣಲಿಲ್ಲ ವಲ್ಲ" ಎಂದದ್ದಕ್ಕೆ ಬಿರುಮ, ಕಿರಿ ಮಲೆಯ ಪುರಾಣ ಹೇಳಿದ. ಕೆಂಪಿಯ ಕಾಯಿಲೆಯ ಯಾವತ್ತು ಸಮಾಚಾರಗಳನ್ನು ಕೇಳಿ ಕರಿಯನಿಗೆ ಬಲು ದುಃಖವಾಯಿತು. ಕೆಂಪಿ ಒಳ್ಳೆಯವಳು—ಎಂಬ ಅಭಿಮಾನ ಆತಗೆ ಇದ್ದಿಲ್ಲ ವಾದರೂ 'ತನಗೆ ಒಂದೆರಡು ವರ್ಷಕಾಲ ಅನ್ನ ಹಾಕಿದವಳು. ಅವಳು ಕೆಟ್ಟ ಮಾತನ್ನಾಡಿದರೂ ತನ್ನನ್ನು ತಮ್ಮನಂತೆ ಆರಂಭದಲ್ಲಿ ಕಂಡವಳು; ಅವಳಿಗೆ ಅಂಥ ಕಠಿಣ ಕಾಯಿಲೆಯಾಗಿದ್ದರೆ ಬಿರುಮನೆನ್ನುವಂತೆ ಬದುಕುವುದೇ ಕಷ್ಟ ವಾದರೆ, ತಾನು ತಿಳಿದೂ ಅಲ್ಲಿಗೆ ಹೋಗದೆ ಇರಬಾರದು' ಎಂದು ತೋರಿತು. ಆದರೂ ಹಗಲಿಗೆ ಕಿರಿ ಮಲೆಯ ಕೇರಿಯವರ ಮುಂದೆ ಕಾಣಿಸಿಕೊಳ್ಳಲಾರ. ಹೊತ್ತಿಳಿಯುವ ತನಕ ಕಾದು, ಚೋಮನನ್ನು ಕರೆದುಕೊಂಡು, ಆತ ಕಿರಿ ಮಲೆಗೆ ಹೋದ. ಹೋಗುವಾಗ ಚೆನ್ನಾಗಿ ಕತ್ತಲು ಕವಿದಿತ್ತು. ಬೂದನ ಮನೆ, ಎದೆಗಳಲ್ಲೆಲ್ಲ ಅಂಧಕಾರ ತುಂಬಿತ್ತು. ಒಲೆಯೊಳಗಿನ ಬೆಳಕು, ತುಸು ದೂರದ ಚಾಪೆಯಲ್ಲಿ ಮಲಗಿದ್ದ ದುರ್ದೈವಿ ಕೆಂಪಿಯ ಮುಖವನ್ನಷ್ಟೇ ಬೆಳ ಗುತಿತ್ತು. ಥಟ್ಟನೆ ಹೊರಗೆ ಕಾಲುಸಪ್ಪಳ ಕೇಳಿಸಿ, ಯಾರೆಂದು ಬೂದ ಇಣಿಕಿ ನೋಡುವಾಗ, ಕರಿಯ, ಚೋಮ ಬಂದಿದ್ದರು. ಬೂದ "ನನ್ನ ಗತಿ ಮುಗಿಯಿತಲ್ಲ ಮಗು" ಎಂದು ಅವನನ್ನು ತಬ್ಬಿಕೊಂಡು ಮರುಗಿದ.

ಕೆಂಪಿಯ ಬಳಿಗೆ ಕರೆದುಕೊಂಡು ಬಂದ. "ಕೆಂಪಿಯ ಕಿವಿಯಲ್ಲಿ—ಕಾಣು ತ್ತದೆಯೇ ಯಾರೆಂದು? ಕರಿಯಣ್ಣ, ಕರಿಯಣ್ಣ ಅನ್ನುತ್ತಿದ್ದೆಯಲ್ಲ. ನಿನ್ನ ಪುಣ್ಯಕ್ಕೆ ಅವನೇ ಬಂದಿದ್ದಾನೆ—ನೋಡು" ಎಂದು ನುಡಿದ. ಕರಿಯ ಗದ್ಗದಿತ ಕಂಠದಿಂದ ಅವಳ ತೋಳನ್ನು ಹಿಡಿದು, "ಅಕ್ಕ, ಏನಾಯಿತು ನಿನಗೆ ಹೇಳು" ಎಂದು ದುಃಖದಿಂದ ನುಡಿದ. ಕೆಂಪಿಗೆ ಆ ನಸು ಬೆಳಕಿನಲ್ಲಿ ಕರಿಯನ ಮುಖ ಸ್ಪಷ್ಟವಾಗಿ ಕಾಣಿಸದಿದ್ದರೂ, ಧ್ವನಿ ಕೇಳಿಸಿತು; ಗುರುತು ಹತ್ತಿತು. ಅವಳೆಂದ ಮಾತಿಷ್ಟೆ. "ಗುರಿಕಾರ, ನನ್ನದು ತಪ್ಪು. ನಾನು ಪಾಪಿ" ಎಂದು. ದಳದಳನೆ ಕಣ್ಣೀರು ಅವಳ ಎರಡು ಕಪೋಲಗಳಿಂದಲೂ ಹರಿಯುತೊಡಗಿತು. ಮುಂದೆ ಅವಳ ಬಾಯಿಯಿಂದ ಮಾತು ಹೊರಡಲಿಲ್ಲ. ಕರಿಯ ಸ್ತಂಭಿತನಾಗಿ, ಅಲ್ಲಿ ಬಳಿಯಲ್ಲೇ ಕುಳಿತ. ತನಗೆ ನಾಲ್ಕು ದಿನ ಅನ್ನ ಕೊಟ್ಟು ಪಾಲಿಸಿದವಳ ಕೊನೆಗಾಲಕ್ಕಾದರೂ ತಾನು ಬಂದೆನಲ್ಲ—ಎಂದಿಷ್ಟೇ ಸಮಾಧಾನ ಅವನಿಗೆ.

ಆ ಕತ್ತಲು ಕಳೆದು, ಬೆಳಕು ಹರಿಯುವಾಗ ಕೇರಿಯ ಮಸಣದಲ್ಲಿ ಕೆಂಪಿಯ ಶರೀರವನ್ನು ಇರಿಸಿದ್ದಾಯಿತು! ಕರಿಯ ಗುರಿಕಾರನಲ್ಲದಿದ್ದರೂ, ಗುರಿಕಾರನಂತೆ ಹಿರಿಯರನ್ನು ಪ್ರಾರ್ಥಿಸಿ 'ಈ ಜೀವವನ್ನು ನಿಮ್ಮ ಬಳಿಗೆ ಸೇರಿಸಿಕೊಳ್ಳಿ' ಎಂದು ಕಂಬನಿಗರೆದು ನುಡಿದಿದ್ದಾನೆ. ಬೂದನ ಬಲ ವತಂಕ್ಕೆ ಏಳು ದಿನಗಳ ಉತ್ತರಕ್ರಿಯೆ ನಡೆಯುವ ತನಕ ಅಲ್ಲಿದ್ದು, ಅದರ ಯಜಮಾನಿಕೆ ನಡೆಯಿಸಿ, ಅಲ್ಲಿಂದ ಇನ್ನೊಮ್ಮೆ ಮಾಯವಾದ.

## ಅಧ್ಯಾಯ ೧೬

ಕರಿಯ ಮತ್ತು ತಿಮ್ಮ ತಮ್ಮದೇ ರಾಜಧಾನಿಯನ್ನು ಸ್ಥಾಪಿಸಿ, ದಿನ ಕಳೆದ ಮೊದಲ ಎರಡು ವರ್ಷಗಳ ಬವಣೆಯನ್ನು ಹೇಳುವುದಕ್ಕಿಲ್ಲ. ಆ ಜೀವನದಲ್ಲಿ ಬಂದ ಕಷ್ಟಪರಂಪರೆಗಳು ಸ್ವಲ್ಪವಲ್ಲವಾದರೂ ಮನಸ್ಸಿನಲ್ಲಿ ಹಿಗ್ಗಿಗೂ, ಉತ್ಸಾಹಕ್ಕೂ ಯಾವ ಕೊರತೆಯೂ ಉಂಟಾಗಲಿಲ್ಲ. ತಿಮ್ಮನೆ ನ್ನುವಂತೆ "ಕರಿಯಣ್ಣ, ಈ ಜಾಗ ಕಂಡುಹಿಡಿದವ ನೀನು. ಒಂದೊಂದು ಮಲೆಗೆ ಒಂದೊಂದು ಹೆಸರಿದ್ದಂತೆ, ನಮ್ಮದೇ ಮಲೆಯಾದ ಮೇಲೆ ಸಣ್ಣದಿ ರಲಿ, ದೊಡ್ಡದಿರಲಿ, ಅದಕ್ಕೊಂದು ಹೆಸರು ಬೇಡವೇ? ನೀನೇನೂ ಹೇಳು,

ನಾನು ಇದನ್ನು ' ಕರಿಯ ಮಲೆ ' ಅನ್ನುವವನು. ಈಗ ಈ ಜಾಗ ನಿನ್ನದು. ಈ ತಾವಿಗೆ ಗುರಿಕಾರ ನೀನು " ಎನ್ನುತ್ತಿದ್ದಾನೆ. ತಲತಲಾಂತರದಿಂದ ಬಂದ ಅವರ ಬಾಳು ಸ್ವತಂತ್ರವೆಂದರೂ ಒಂದು ತೆರನ ಹಂಗಿನ ಬಾಳಾಗಿತ್ತು. ಮಲೆಯಲ್ಲಿ ಅವರು ಎಲ್ಲಿಯೋ ವಾಸಿಸಿರಲಿ, ಎಲ್ಲಿ ಗುಡಿ ಕಟ್ಟಿರಲಿ, ಯಾವ ಭಾಗದ ಕಾಡನ್ನೇ ಸವರಿ ಕುಮರಿ ಮಾಡಲಿ, ಕೇಳುವವರಿಲ್ಲ— ಎಂಬುದು ನಿಜ. ಆದರೆ ಆ ಮಲೆಯ ಸೆರಗೆಲ್ಲ ಅನಾದಿಯಿಂದ ಒಬ್ಬನಲ್ಲ ಒಬ್ಬ ಧನಿಗೆ ಸೇರಿದ್ದಾಗಿತ್ತು. ಅವರೆಲ್ಲರೂ ಪೀಳಿಗೆಯಿಂದ ಬಂದ ಜೀತದ ಆಳುಗಳು. ವರ್ಷದ ನಾಲ್ಕು ತಿಂಗಳು ಕಾಲ ಧನಿಗಾಗಿ ಹೆಚ್ಚುಕಡಿಮೆ, ಫಲಾಪೇಕ್ಷೆಯಿಲ್ಲದೆ, ದುಡಿಯಬೇಕು. ಅದಕ್ಕೆ ಪ್ರತಿಫಲ—ಬಟ್ಟೆ, ಉಪ್ಪು, ಹೆಂಡ ತೆಗೆಯುತ್ತಿದ್ದುದಕ್ಕಾಗಿ ಧನಿ ಕೊಡುತ್ತಿದ್ದ ಸುಂಕ—ಈ ಎಲ್ಲವುಗಳ ಮೊತ್ತ ಅವರ ದುಡಿತಕ್ಕೆ ಸಮನಾದ ಪ್ರತಿಫಲ ಎನ್ನುವಂತಿಲ್ಲ. ಅವರಾದರೂ ಹೆಚ್ಚಿನ ಹಣಕಾಸಿನ ಬಯಕೆ ಮಾಡಿದವರಲ್ಲ. ಮಾಡುವ ಅವಶ್ಯಕತೆಯೂ ಇರಲಿಲ್ಲ. ಅವರಿಗೆ ಬೇಕಾದುದನ್ನೆಲ್ಲ ಮಲೆಯೇ ಕೊಡುತ್ತಿರುವಷ್ಟು ಕಾಲ, ದುಡಿಮೆಗೆ ರಟ್ಟೆಯಲ್ಲಿ ಬಲ ಇರುವಷ್ಟು ಕಾಲ ಆ ಚಿಂತೆ ಅವರಿಗಿಲ್ಲ. ಹೀಗಿರಲು ತಿಮ್ಮ, ಕರಿಯರು ಸ್ವತಂತ್ರವಾಗಿ ಬಾಳಲು ಹಂಬಲಿಸಿದುದು—ತಮ್ಮ ಸಮಾಜ ಜೀವನದಲ್ಲಿ ಹೊರಗಿನ ಜನಗಳ ಚೇಷ್ಟೆಯನ್ನು ಕಂಡು, ಅಸಮಾಧಾನಪಟ್ಟುದರಿಂದ. ಕೆಂಪಿಯಂಥವರು ಹೊರಗಿನ ಗಾಳಿಗೆ ಬಲಿಯಾದುದರಿಂದ, ಮೊದಲೇ ಇದ್ದ ದಾಂಪತ್ಯ ಸಮಸ್ಯೆ, ಇನ್ನಷ್ಟು ವಿಕಟವಾಗಿ ಬಂದಿತು. ಅದರಿಂದಲೇ—ಏಕೆ ತಮಗೆ ಅಂಥ ಹಂಗಿನ ಬಾಳು— ಎಂದೆನಿಸಿತು ಎಳೆಯನಾದ ಕರಿಯಗೂ ಸಹ. ತಮ್ಮ ಜನದ ಪ್ರತಿಷ್ಠೆಗೂ ಅದೊಂದು ಕುಂದೆಂದು ತೋರಿತು.

ಈಗ ಅವರು ಕರಿಯ ಮಲೆ ತಮ್ಮದೆಂದು ತಿಳಿದು, ದಿನವೆಲ್ಲ ದುಡಿಯುತ್ತಿದ್ದಾರೆ. ಗಿಡ್ಡಿಯ ಶ್ರಮವೂ ಕಡಿಮೆಯಲ್ಲದ್ದು. ಅವರದು, ಒಂದು ದೃಷ್ಟಿಯಿಂದ ನೋಡಿದರೆ, ಸವಿಹೀನ ಬಾಳೂ ಆಗಿತ್ತು. ಸಮಾಜದ ಹೊರಗಿನ ಬಾಳದು. ಬೇಸರವಾದಾಗ ಸುಖ ದುಃಖ ತೋಡಿಕೊಳ್ಳುವುದಕ್ಕೆ ಇನ್ನೊಂದು ಜೀವವಿಲ್ಲ. ಆ ಕೊರತೆಯ ಪರಮಾವಧಿ ಎನಿಸಿದ್ದು, ಗಿಡ್ಡಿಯ ಹೆರಿಗೆಯ ಕಾಲದಲ್ಲಿ. ಬೇಸಿಗೆಯಲ್ಲಿ ತಿಮ್ಮ ಕರಿಯರೊಡನೆ ಅವಳೂ ಕತ್ತಿ

ಹಿಡಿದು ಕಾಡನ್ನು ಕಡಿದಳು, ಗೆಲ್ಲು ಸವರಿದಳು. ಒಂದು ತಿಂಗಳ ಕಾಲ ಮೂವರೂ ಅರ್ಧ ಎಕ್ರೆಯ ಕಾಡು ಸವರಿ, ನೆಲ ಸಮ ಮಾಡಿ, ಬೆಂಕಿ ಹಚ್ಚಿ, ಕುಮರಿಯ ನೆಲ ಹಸನುಮಾಡಲು ಪಟ್ಟ ಕಷ್ಟ ಅಷ್ಟಿಷ್ಟಲ್ಲ. ಅನಂತರ ಮೊದಲ ವರ್ಷ ಕುಮರಿಯ ಬಿತ್ತನ್ನು ಚೋಮನಿಂದ ಬೇಡಿ ತಂದು ಬಿತ್ತಿದರು. ಬಿತ್ತನೆಯ ಜಾಗ ಸಣ್ಣದಾದರೇನು? ಆವರಣ, ಬೇಲಿಗಳಿಲ್ಲದೆ ಕಳೆಯುವಂತಿಲ್ಲ. ಅದು ಆನೆ ಬರಲಾರದ ತಾವಾದರೂ, ಆ ಬೆಟ್ಟದ ಸೆರಗು ಕಡಿದಾಗಿದ್ದರೂ, ಕಡವೆ, ಮಿಗ, ಕಾಡುಹಂದಿಗಳ ಬಾಯಿಗೆ ಹೊರಗಾದ ವಲಯವಲ್ಲ. ಅಷ್ಟೆಲ್ಲ ಕೆಲಸ ಮಾಡಿ ಮುಗಿಯುವಾಗ, ಮಳೆ ಮುಗಿಲು ಕವಿಯತೊಡಗಿತು. ಭರದಿಂದ ಮಳೆಯೂ ಬೀಳತೊಡಗಿತು. ಆಗ ಗವಿಯ ಮನೆ ಬೇರೆ; ಕುಮರಿಯ ಕಾವಲು ಮನೆ ಬೇರೆ ಆಗಲೇ ಬೇಕು. ಆ ಹೊರೆಯನ್ನು ಕರಿಯ ಕಟ್ಟಿಕೊಂಡು, ಕಾವಲು ಕಾಯುತ್ತಿದ್ದ. ಮಳೆಗಾಲ ಎಲ್ಲಿಲ್ಲದ ಭರದಿಂದಲೇ ತೊಡಗಿತು. ಆಷಾಢಮಾಸ ಬರುತ್ತಲೆ, ಬನದ ಸಿರಿ ಹೆಚ್ಚಿದಂತೆ ಸಮಸ್ಯೆಗಳೂ ಹೆಚ್ಚಿದುವು! ನೆಲದ ಮೇಲೆ ನಡೆಯುವುದಕ್ಕಿಲ್ಲ; ರಕ್ತ ಹೀರುವ ಇಂಬಳುಗಳ ಹಾವಳಿ. ಕಾಡಿನ ಆಚೀಚೆ ಹೋಗುವುದಕ್ಕಿಲ್ಲ. ಸವರಿದಷ್ಟು ಬೆಳೆಯುವ ಪೊದೆಗಳು. ಬೇಟೆಗೂ ಅಲೆದಾಡಲಾರದಷ್ಟು ಮೋಡ, ಮಂಜುಗಳ ಮುಸುಕು. ಇಂಥ ವೇಳೆಯಲ್ಲೇ—ಗಿಡ್ಡಿ ಪ್ರಸವದ ದಿನ ಕಾಣಬೇಕಾಯಿತು. ಎರಡು ಮೂರು ದಿನ ಹೊಟ್ಟೆನೋವೆಂದು ಆಕೆ ಬಳಲಿದಳು. ಬಳಿಯಲ್ಲಿ ಮದ್ದು ಬಲ್ಲವರಿಲ್ಲ, ಸೂಲಗಿತ್ತಿಯರಿಲ್ಲ. ಹಿಂದಾದ ನಷ್ಟ ಪ್ರಸವದ ನೆನಪಿನಿಂದ ತಿಮ್ಮನಂತೂ ದಾರಿಗಾಣದಾದ. ಇಂಥ ವೇಳೆಯಲ್ಲಿ ಕರಿಯ, ಬೆಟ್ಟವನ್ನಿಳಿದು, ಕೆಳಗಿನ ಹಳ್ಳಿಗೆ ಹೋಗಿ, ಅಲ್ಲಿನ ರೈತನೊಬ್ಬನ ಆಶ್ರಯ ಬೇಡಿ, ಮೇಲಕ್ಕೆ ಬಂದ. ಗಿಡ್ಡಿಯನ್ನು ಕಷ್ಟದಿಂದ ಪಾರಾಗಿಸಲು ಬೇರೆ ದಾರಿ ಕಾಣದೆ, ಕಂಬಳಿಯ ಮಂಚಲು ಮಾಡಿ, ನಡುವೆ ಕೋಲು ಸಿಕ್ಕಿಸಿಕೊಂಡು, ಹೆಗಲ ಮೇಲೆ ಅವಳನ್ನು ಹೊತ್ತುಕೊಂಡು —ಹೇಗೋ ಹೇಗೋ ಸಾಹಸದಿಂದ, ಬೆಟ್ಟವನ್ನಿಳಿದು, ಕೆಳಗಿನ ಒಂದು ಹಳ್ಳಿಯ ಮನೆಯನ್ನು ಸೇರಿದರು. ಅಲ್ಲಿ ಬಾಣಂತಿಯರಿಗೆ ನೆರವಾಗಲಿಕ್ಕೆ ಒಬ್ಬಿಬ್ಬ ಹೆಂಗಸರಾದರೂ ಇದ್ದಾರೆ—ಎಂಬುದರಿಂದ. ತಿಮ್ಮ ಹೆಂಡತಿಯ ಬಳಿಯಲ್ಲಿಯೇ ಉಳಿದುಕೊಳ್ಳಬೇಕಾಯಿತು. ಕರಿಯ ಮಲೆಯನ್ನು

ಒಬ್ಬನೇ ಸೇರಿದ. ನಟ್ಟ ಬೆಳೆ ಹಂದಿಗಳ ಪಾಲಾಗಬಾರದಲ್ಲ. ಮಲೆಯ ದೊರೆತನ ಬೇಕಾದರೆ, ಕಾವಲನ್ನೂ ಮಾಡಬೇಕು. ಮಳೆಗಾಲದ ಮೂರು ತಿಂಗಳ ಕಾಲ ತಿಮ್ಮನ ಸಂಸಾರ ಬೆಟ್ಟದ ಬುಡದ ಹಳ್ಳಿಯಲ್ಲಿ ಕಳೆಯಿತು. ಗಿಡ್ಡಿ ಗಂಡು ಕೂಸೊಂದನ್ನು ಹಡೆದಳು; ಅಲ್ಲಿನ ಜನಗಳ ನೆರವಿಂದ ಅವಳ ಬಾಣಂತಿತನ ಸುಖವಾಗಿಯೇ ಕಳೆಯಿತು. ಆದರೆ ಒಂದು ತಿಂಗಳ ಕಾಲ, ಜ್ವರ, ನಿತ್ರಾಣಗಳಿಂದ ಆಕೆ ನರಳಿದಳು. ಕರಿಯನು ಬೆಟ್ಟ ಬಿಟ್ಟು ಇಳಿಯುವುದಕ್ಕಿಲ್ಲ. ತಿಮ್ಮ—ಬಾಣಂತಿಯನ್ನು ಬಿಟ್ಟು ಮೇಲೆ ಬರುವುದಕ್ಕಿರಲಿಲ್ಲ.

ಕರಿಯನ ಪೇಳಿ—ಅವನಿಗೆಂದೂ ಭಾರವಾಗಿ ಕಾಣಿಸಲಿಲ್ಲ. ತಿಮ್ಮನ ಚಿಂತೆ ಆಗಾಗ ಬರುತ್ತಿತ್ತಾದರೂ, ಮಳೆಗಾಲದ ಪ್ರಯೋಜನವನ್ನು ತಾನು ಪಡೆಯಲೇಬೇಕೆಂದು, ತಾನಿರುವ ಮಲೆಯ ಮಗ್ಗುಲಲ್ಲಿ ಬೆಳೆದ ಏಲಕ್ಕಿ ಬುಡಗಳೆಷ್ಟೆಂದು ಎಣಿಕೆಹಾಕತೊಡಗಿದ. ಅವುಗಳ ಸುತ್ತಲಿನ ಬಲ್ಲೆಗಳನ್ನು ಸವರಿದ ಮರಗಳ ದಟ್ಟಣೆಯಿದ್ದಲ್ಲಿ ಕಡಿಮೆ ಮಾಡಿದ. ದಿನವೆಲ್ಲ ಇಂಬಳುಗಳಿಂದ ಕಚ್ಚಿಸಿಕೊಂಡು, ಅವಕ್ಕೆ ರಕ್ತದ ನೈವೇದ್ಯ ಉಣಿಸಿ, ಜೀವನದ ದಾರಿ ಮಾಡಿಕೊಳ್ಳುವೆನೆಂದ. ಅವನಿಗೆ ತೋಚದ ಅಂಶವೆಂದರೆ—ತಾನು ವಾಸವಾಗಿರುವ ಮಲೆಗೆ, ಯಾರಾದರೊಬ್ಬರೂ ತನಗೇ ತಿಳಿಯದ ಒಡೆಯರಿರಬಹುದೇ—ಎಂಬುದು. ನ್ಯಾಯಕ್ಕೂ ಆ ಸೆರಗು, ಊರಿನ ನಕಾಶೆಯಲ್ಲಿ ತಿರುಮಲ ಧನಿಯರಿಗೇ ಸೇರಿತ್ತು. ಚೆನ್ನಾಗಿ ಅಳೆದು ಮಾಡದ ನಕ್ಷೆ ಹಿಂದಿನ ಕಾಲದ್ದು. ಅದರಲ್ಲಿ ಒಟ್ಟೊಂದು ಗಡಿಯ ಗುರುತಿತ್ತು. ಆ ಗುರುತಿನೊಳಗೇನೆ—ಕರಿಯನ ಮಲೆ ಇದೆ. ಅದು ಮಲೆ—ಎನ್ನುವಷ್ಟು ದೊಡ್ಡ ಬೆಟ್ಟದ ಸಾಲಲ್ಲ. ಈ ತನಕ ಅಲ್ಲಿಗೆ ಕಾಲಿರಿಸಿದವರೂ ಇಲ್ಲ. ಅಲ್ಲೂ—ಸ್ವಲ್ಪವಲ್ಲ ಸ್ವಲ್ಪ ಏಲಕ್ಕಿಯು ಬೆಳೆಯುತ್ತಿದೆ ಎಂದು ತಿಳಿದಿದ್ದರೆ, ತಿರುಮಲಭಟ್ಟರು ಸ್ವಾಭಾವಿಕವಾಗಿ ತಮ್ಮ ಕೈಯನ್ನು ಅಲ್ಲಿಯ ತನಕವೂ ಚಾಚುತ್ತಿದ್ದರು. ಇದ್ದ ಮಲೆಯಲ್ಲೇ ಕೃಷಿಯಿಂದ ಇನ್ನು ಹೆಚ್ಚಾಗಿ ಏಲಕ್ಕಿ ಬೆಳೆಯಬಹುದಾದಾಗ, ತಿರುಮಲಭಟ್ಟರು ಒಟ್ಟು ಈ ಜಾಗ ತಮ್ಮದು—ಎಂದಿಷ್ಟೇ ಬಲ್ಲರು ಹೊರತು, ತಪ್ಪಿಸಿಕೊಂಡ ಕರಿಯ, ಇನ್ನೂ ತಮ್ಮ ಅಂಕೆಯಲ್ಲಿ ಉಳಿದಿದ್ದಾನೆ—ಎಂಬ ಅರಿವುಳ್ಳವರಾಗಿರಲಿಲ್ಲ.

ಗಿಡ್ಡಿಯ ಬಾಣಂತಿತನ ಎರಡು ತಿಂಗಳ ಕಾಲ ಸಾಗುತ್ತಲೇ ಅವಳು

ಸಂಪೂರ್ಣ ಆರೋಗ್ಯಗೊಂಡಳು. ತಿಮ್ಮನ ಮನಸ್ಸು ಹಗುರವಾಯಿತು. ಒಮ್ಮೆ ಆತ ಬೆಟ್ಟವನ್ನೇರಿ ಕರಿಯನ ಮನೆಗೆ ಬಂದು, ಆ ಶುಭವಾರ್ತೆಯನ್ನು ಆತಗೆ ಹೇಳಿದ. "ಆದರೆ ಇನ್ನು ತಿಂಗಳು ಕಳೆಯದೆ ಗಿಡ್ಡಿಯನ್ನು ಇಲ್ಲಿಗೆ ನಡೆಸಿಕೊಂಡು ಬರುವುದು ಹೇಗೆ?" ಎಂಬ ಚಿಂತೆಯನ್ನು ತೋರಿದ. ತಾವು ಉಳಿದುಕೊಂಡ ಮನೆಯ ಯಜಮಾನ ಬಟ್ಯಗೌಡರು ತಮಗೆ ಅನ್ನ ನೀಡಿ, ಸಾಕಿದ್ದಕ್ಕೆ ಅವರಿಗೇನು ಸಲ್ಲಿಸಲಿ—ಎಂಬ ಚಿಂತೆಯನ್ನೂ ವ್ಯಕ್ತಪಡಿಸಿದ. "ಯಾಕೆ ಅದೆಲ್ಲ ಚಿಂತೆ ನಿನಗೆ? ಮಳೆ ಕಳೆದ ಮೇಲೆ ಬಾ. ಗೌಡರಿಗನ್ನು: ಮಲೆಯಲ್ಲಿ ಏಲಕ್ಕಿ ಇದೆ ಎಂದು, ಕೊಡುತ್ತೇವೆ ಎಂದು ಹೇಳು" ಎಂದು ಉಪದೇಶಿಸಿ ಕಳುಹಿಸಿದ.

ಕರಿಯನಿಗೆ ಆ ಒಂಟಿ ದಿನಗಳನ್ನು ಕಳೆಯುವ ಕೆಲಸ ಸುಲಭವಾಗಲಿಲ್ಲ. ಒಮ್ಮೊಮ್ಮೆ ಅವನ ಮನಸ್ಸು ತನ್ನ ಮದುವೆಯ ಕಡೆ ಹಾಯುತ್ತಿದೆ. ತಾನೂ ಸಂಸಾರಿಯಾಗಿ ಸುಖವಾಗಿರಬೇಕೆಂದು ಬಯಸುತ್ತದೆ ಆತ ಒಮ್ಮೆಯಷ್ಟೆ ಗಿಡ್ಡಿಯನ್ನು ನೋಡಲು ಹೋಗಿದ್ದ. ಆಗ ಅವಳ ಹಸುಗೂಸನ್ನು ಕಂಡು 'ತನಗೂ ಅಂಥ ಕೂಸೊಂದು ಬೇಕು' ಎಂಬ ಆಸೆಯೂ ಆಗಿತ್ತು. ಆದರೆ—ಕುಲಕೇರಿಗಳನ್ನು ಕಡಿದು ಬಂದ ತನ್ನ ಆಸೆಯು ಎಂದು ಸಫಲವಾದೀತು—ಎಂದು ಊಹಿಸಲಾರ. ವೇಳೆ ಹೋಗುವುದಕ್ಕೆ, ಮಲೆಯ ಸುತ್ತಲೂ ಆತ ಅಲೆದಾಡುತ್ತಾನೆ. ಮರಗಳ ಮೇಲೆ ಕುಳಿತು, ಕಾಡಿನ ಹುಲ್ಲು, ಪೊದೆ ಅಲುಗಾಡಿತೆಂದರೆ, ಕಣ್ಣಿಗೆ ಕಣ್ಣಿಟ್ಟು ನೋಡುತ್ತಾನೆ. ನಿರಾತಂಕವಾಗಿ, ಸಂಚರಿಸುತ್ತಿದ್ದ ಕಡವೆ, ಕಾಡುಕೋಣಗಳ ಹಿಂಡನ್ನು ಕಾಣುತ್ತ ಬಾಯಿಬಿಡುತ್ತಾನೆ. ಕೊಲ್ಲುವ ಹಂಬಲಕ್ಕಿಂತ ಹೆಚ್ಚಾಗಿ ಮೃಗಗಳನ್ನು ನೋಡುವ ಹುಚ್ಚು ಅವನಿಗೆ. ಒಮ್ಮೊಮ್ಮೆ ತಾನೇ ಮೈಮರೆತು ಅವುಗಳನ್ನು ಆದಷ್ಟು ಸಮೀಪ ಹಿಂಬಾಲಿಸಿ ಹೋಗಿ ನೋಡಿದ್ದೂ ಉಂಟು. ಒಮ್ಮೊಮ್ಮೆ, ಮರದ ಮೇಲೆ ಕುಳಿತಾಗ, ಕೆಳಗೆ ಚಿರತೆಯೋ ಹುಲಿಯೋ, ಯಾರ ಲಕ್ಷ್ಯವೂ ಇಲ್ಲದೆ ಅಲೆದಾಡುವುದನ್ನು ನೋಡಿ ಹಿಗ್ಗಿದುದುಂಟು. ವೇಳೆ ಹೋಗದ್ದಕ್ಕಾಗಿ—ಒಮ್ಮೆ ಉರುಳೊಡ್ಡಿ ಬರ್ಕದ ಮರಿಯೊಂದನ್ನು ಹಿಡಿದ. ಹಿಡಿದಾಗ, ತಾಯಿಗಾಗಿ ಹಂಬಲಿಸಿ, ಚೀರಿದ ಆ ಎಳೆಯ ಕರುವಿನ ದುಃಖಕ್ಕಾಗಿ ಮರುಗಿದ. ಆದರೂ—ಆ ಪ್ರಾಣಿಯ

ಮೋಹಕ ರೂಪ ಅವನನ್ನು ಸೆಳೆಯಿತು. ಮಿಗದಂತೆ ಹೊಂಬಣ್ಣದ ಮೈ; ಅದರ ಮೇಲೆ ಬಿಳಿಯ ಬೊಟ್ಟುಗಳ ಸಾಲು. ಆದನ್ನು ತಂದು ಸಾಕಿದ; ಪಳಗಿಸಿದ. ತನ್ನ ಹಿಂದೆಯೇ ಅದು ಅಲೆದಾಡುವಾಗ ಅದನ್ನು ನೋಡಿ ಹಿಗ್ಗಿದ. ತನ್ನ ಮಗು ಅದೇನೆ ಎಂದು ನಕ್ಕ. ಕಾವಲಿನ ಅಟ್ಟಳಿಗೆಯ ಮನೆಗೆ ಹೋದರೆ ಅಲ್ಲಿಗೂ ಅದನ್ನು ಒಯ್ದು, ತನ್ನ ಜತೆಗೆ ಮಲಗಿಸಿಕೊಳ್ಳು ತ್ತಿದ್ದ. ಮಗುವಿಗಿಂತ ಹೆಚ್ಚಾಗಿ ಅದನ್ನು ಮುದ್ದುಮಾಡುತ್ತಿದ್ದ.

ಭಾದ್ರಪದ ಮಾಸ ಕಳೆಯುವಾಗ, ತಿಮ್ಮನ ಸವಾರಿ ಗಿಡ್ಡಿಯನ್ನು ಕರೆದುಕೊಂಡು, ತಿರುಗಿ ಗವಿಮನೆಗೆ ಬಂದಿತು. ತಿಮ್ಮ ಮಗುವನ್ನು ಹೊತ್ತುಕೊಂಡು, ಹೆಂಡತಿಯನ್ನು ಮೆಲ್ಲನೆ ನಡೆಯಿಸಿಕೊಂಡು, ಪೊದೆಗಳ ಎಡೆಯಲ್ಲಿ ಮೈ ಸವರಿಕೊಂಡು, ದಣಿದು, ಮೇಲಕ್ಕೆ ಬಂದಿದ್ದರೂ, ತನ್ನಂಥ ಭಾಗ್ಯಶಾಲಿ ಇನ್ನಾರೂ ಇಲ್ಲ ಎಂದು ತಿಳಿದಿದ್ದ. 'ಅಜ್ಜಿ, ಅಜ್ಜರಿಗೆ ಆ ಮಗುವನ್ನು ತೋರಿಸುವುದೆಂದು' ಎಂಬ ಹಂಬಲ ಅವನದು. ಗಿಡ್ಡಿಗೂ ಆ ಆಸೆ ಉತ್ಕಟವಾಗಿತ್ತು. ಆದರೆ ತಾವು ಹಿರಿ ಮಲೆಗೆ ಹೋಗಿ ಸಿಕ್ಕಿಬೀಳ ಬಾರದೆಂಬ ಬೆದರಿಕೆಯೂ ಇತ್ತು. ಅಲ್ಲದೆ ಈಗ ಕುಮರಿಯ ಬೆಳೆ ತೆನೆಯೊಡೆ ದಿತ್ತು. ಪೈರು ಹಣ್ಣಾಗುವಲ್ಲಿತ್ತು. ಅದು ಕೈಗೆ ಬರುವ ತನಕ, ಅಲ್ಲಿಂದ ಕದಲುವ ಹಾಗಿರಲಿಲ್ಲ. ಅಲ್ಲಿಗೆ ಬಂದೊಡನೆ ಗುಹೆಯೊಡತಿ ಗಿಡ್ಡಿಯಾದಳು. ಮಗುವಿನಿಂದಾಗಿ ಅವಳ ಬೇಸರದ ಬಾಳು ಹೆಚ್ಚಿನ ನಗುಮುಖ ತಾಳಿತು. ತಿಮ್ಮ, ಕರಿಯರಿಬ್ಬರಿಗೆ ದಿನರಾತ್ರಿ—ಕುಮರಿ ಕಾಯುವ ಕೆಲಸ. ವಿಶಾಲ ಕಾಡಿನ ಆವರಣದಲ್ಲಿ, ಗೇಣುದ್ದ ಜಾಗದಲ್ಲಿ ಕುಮರಿ ಬೆಳೆದರೆ ಒಬ್ಬಿಬ್ಬರು ವೈರಿಗಳಲ್ಲ. ಕಾಡಿನ ಕಪಿಗಳಿಗೆಲ್ಲ ಅವುಗಳ ಮೇಲೆಯೇ ಕಣ್ಣು. ಮಂಗ ಬೇರೆ, ಮುಸುವ ಬೇರೆ, ಸಿಂಗಲೀಕ ಬೇರೆ. ಇನ್ನು ಸಾಲದುದಕ್ಕೆ ಅಳಿಲು ಗಳ ಹಾವಳಿ. ಹಾರಾಡುವ ಗಿಳಿ, ಗುಬ್ಬಿಗಳಿಗೆ, ತಮಗಾಗಿ ಈ ಬೆಳೆ ಬೆಳೆ ದಿದ್ದಾರೆಂಬ ತಿಳಿವು. ಇಬ್ಬರಿಗೂ—ಕವಣೆ ಬೀಸಿ ಬೀಸಿ ನಿತ್ಯ ಕಟ್ಟೆನೋವು ಬರುತ್ತಿತ್ತು. ಆದರೂ ಪೈರು ಹಣ್ಣಾಗಿ, ಅರೆವಾಸಿಯಷ್ಟಾದರೂ ಬತ್ತ ಮನೆಗೆ ಬರಬೇಕಲ್ಲ. ಬಂದೂ ಬಂದಿತು. ಗವಿಯ ಮಗ್ಗುಲಲ್ಲಿ, ಶಿಲೆಯೊಂದರ ಮೇಲೆ, ನೀರು ಬಿದ್ದು ಬಿದ್ದು, ಕೊರೆದ ಹೊಂಡವೊಂದರಲ್ಲಿ, ಗಿಡ್ಡಿ ಬತ್ತ ಕುಟ್ಟಿ ಅಕ್ಕಿಯನ್ನು ಕೇರಿ, ಹೊಸ ಅನ್ನ ಮಾಡಿದ ದಿನ ಕರಿಯ ತಿಮ್ಮರ

ಸಂತೋಷ ಹೇಳಲಾರದ್ದು. ಆ ಅನ್ನದಂಥ ರುಚಿ, ಆ ಅಕ್ಕಿಯಂಥ ಸವಿ, ನಾಲ್ಕು ಮಲೆಗಳಲ್ಲೂ ಇಲ್ಲ—ಎಂದುಕೊಂಡರು. ಹಿಗ್ಗಿನ ಊಟ ಉಣ್ಣುತ್ತಿದ್ದಾಗ ಕರಿಯ ತಿಮ್ಮನೊಡನೆಂದ: "ಅದೆಲ್ಲ ಇರಲಿ, ಇಲ್ಲಿ ನಮಗೆ ನಾವೇ ದೊರೆಗಳು; ಹೇಳುವವರಿಲ್ಲ, ಕೇಳುವವರಿಲ್ಲ. ನನ್ನದೊಂದು ಆಸೆಯಿದೆ. ನೋಡು—ಈ ವಟಾರದಲ್ಲಿ ಒಂದು ಆನೆ ಹಿಡಿಯಲಿಕ್ಕೆ ಬರಲಾರದೇ? ಕಡೆಗೆ ಒಂದು ಆನೆಯ ಮರಿ ಸಿಕ್ಕಿದರೂ ಸಾಕು."

"ಕರಿಯಣ್ಣ, ನಿನಗೆ ಈ ಆನೆಯ ಕನಸು ಮರೆತೇ ಹೋಗಿತ್ತೆಂದು ತಿಳಿದಿದ್ದೆ. ಇನ್ನು ಉಳಿದಿದೆ ಆ ಆಸೆ! ಆದರೆ—ಹಾಗೆಲ್ಲ ಆನೆಯನ್ನು ಹಿಡಿಯಬಾರದು ಅನ್ನುತ್ತಾರೆ. ಆನೆ ಇರಲಿಕ್ಕೆ, ಈ ಸೀಮೆನಲ್ಲಿ ಇರಬಹುದು. ಕೆಳಗೆ ಈ ವರ್ಷ ಒಂದು ಹಿಂಡು ಆನೆಗಳು ಬಂದು ಬಟ್ಯಗೌಡರ ಅಡಿಕೆ ತೋಟ ನುಗ್ಗುನುರಿ ಮಾಡಿದುವು. ಅವನ್ನು ಯಾಕೆ ಹಿಡಿಯಬಾರದು ಎಂದುದಕ್ಕೆ ಗೌಡರೆಂದರು—'ಮಹಾರಾಯ, ಅವೆಲ್ಲ ಸರಕಾರದ್ದು; ಹಿಡಿಯುವುದನ್ನು ಬಿಟ್ಟು ತೊಂದರೆಕೊಡಲು ಬಂದವುಗಳನ್ನು ಗುಂಡು ಹಾರಿಸಿ ಕೊಲ್ಲುವುದಕ್ಕೂ ಹೆದರಿಕೆಯೇ' ಎಂದು"

"ಏನೇ ಆಗಲಿ, ಒಂದಲ್ಲ ಒಂದು ದಿನ, ನಾನು ಆನೆ ಹಿಡಿದು ಅದರ ಸವಾರಿ ಮಾಡುವವನೇ—ಸಾಯುವ ಮೊದಲು. ಕೆಳಗೂ ಆನೆಯಿದೆ ಅನ್ನುತ್ತೀ. ಮೇಲೆ ಇದ್ದೇ ಇದೆ. ನಾನೆಷ್ಟೋ ಸಾರಿ—ಇಲ್ಲಿ ಕುಳಿತು ಆಚೀಚಿನ ಬೆಟ್ಟಗಳ ಎಡೆಯ ಒಳಬುಗಳನ್ನು ನೋಡುತ್ತಿದ್ದೇನಲ್ಲ. ಅಲ್ಲಿ ಹಿಂಡಾಗಿ ಅವು ತಿರುಗುವುದನ್ನು ಕಂಡಿದ್ದೇನೆ. ತೀರ ಇಳುಕಲು ಪೈಯಲ್ಲಿ ಅವು ಅಷ್ಟು ಹೆಚ್ಚಾಗಿ ಅಲೆದಾಡುವುದಿಲ್ಲವಷ್ಟೆ. ಮಳೆ ಸ್ವಲ್ಪ ಕಡಿಮೆಯಾದಾಗ ಯಾರ ಲಕ್ಷ್ಯವೂ ಇಲ್ಲದೆ ಅವು ಅಲೆದಾಡುತ್ತವೆ."

"ಇಷ್ಟೆಲ್ಲ ಆಯಿತಂತೆ—ನಿನ್ನ ಮನಸ್ಸಿನಲ್ಲಿ ಅಂಥ ಆಸೆಯಿದ್ದರೆ, ಅದೂ ನೆರವೇರೀತು. ಆದರೆ ಆನೆಯನ್ನು ಕಟ್ಟಿಕೊಂಡು ನೀನೇನು ಮಾಡುವವ? ಇಲ್ಲಿರುವ ಆಲೋಚನೆ ಇಲ್ಲವೇ ನಿನಗೆ? ಆನೆ ಹಿಡಿದರೂ ಈ ಜಾಗದಲ್ಲಿ ಹಿಡಿಯಲಿಕಾಗಲಿಕ್ಕಿಲ್ಲ. ಇಲ್ಲಿಗಂತು ಅವು ಬರಲಾರವು. ಇನ್ನೊಂದು ಕಡೆಯಲ್ಲಿ ಆನೆ ಹಿಡಿದು, ಇಲ್ಲಿಗೆ ಅದನ್ನು ತರುವುದು ಸಾಧ್ಯವೇ? ತಂದು ಸಾಕುವುದಾದರೂ ಹೇಗೆ—ಹೇಳು."

"ಅದೆಲ್ಲ ಪುರಾಣ ನಿನಗೆ ಬೇಡ. ಸಿಕ್ಕೀತು—ಒಂದು ದಿನ, ಆಗ ನೋಡುವ" ಎಂದು ತಾನು ಮಳೆಗಾಲದ ವಿರಾಮದಲ್ಲಿ ದೂರದಲ್ಲಿ ಕಂಡ, ಆನೆಯ ಹಿಂಡುಗಳ ಕತೆ ಬಣ್ಣಿಸತೊಡಗಿದ. ಜತೆಗೆ ಇತರ ಕಾಡುಮೃಗಗಳ ಸಂಚಾರಗಳನ್ನು ಕಂಡದ್ದೂ ಹೇಳಿದ.

ಹೊಸತು ಊಟವಾದ ಮೇಲೆ, ಹೊಸ ಬಾಳಿನ ಯೋಚನೆ ತೊಡಗಿದರು. ತಿಮ್ಮನನ್ನು ಕರಿಯು ಏಲಕ್ಕಿ ಬೆಳೆಯುವ ತಾವಿಗೆ ಕರೆದುಕೊಂಡು ಹೋದ. ನಾಲ್ಕಾರು ಮಣದಷ್ಟು ಏಲಕ್ಕಿ ನಿರಾಯಾಸವಾಗಿ ದೊರೆಯಬಹುದು. ಅದನ್ನು ಒಟ್ಟುಮಾಡಿ, ಒಣಗಿಸಿ, ಕೆಳಗಿನ ಗೌಡರಿಗೆ ಕೊಟ್ಟರೆ ಉಪ್ಪು ಅರಿವೆಗಳ ಚಿಂತೆ ಕಳೆದೀತೆಂದು ಅನಿಸಿತು. ಅಲ್ಲಿಂದಲೇ ಶುರು—ಮಣ್ಣು ಅಗೆದು, ಏಲಕ್ಕಿ ಒಣಗಿಸಲು ಗೂಡು ಕಟ್ಟಲಿಕ್ಕೆ ಕಟ್ಟಿಗೆ ಕಡಿದರು; ಏಲಕ್ಕಿ ತಂದರು; ಅದನ್ನು ಕಾದ ನೆಲದ ಮೇಲೆ ಹರವಿ ಒಣಗಿಸಿದರು. ಅದರಲ್ಲಿ ಏಲಕ್ಕಿಯ ಕೆಲಸ ಮಾಡುವಾಗಲೆಲ್ಲ ತಿಮ್ಮ ಹೇಳುತ್ತಿರುವ ಮಾತೊಂದೇ. "ಕರಿಯಣ್ಣ, ನಿನಗೆ ಹೇಗೆ ಅನಿಸುತ್ತದೋ! ನನಗೆ ಖಂಡಿತಕ್ಕೂ ಕಾಣುವ ಮಾತೆಂದರೆ ಒಂದು ನಾಲ್ಕು ದಿನ, ರಾತಾರಾತ್ರಿಗೆ ಹೋಗಿ, ಧನಿಗಳ ಏಲಕ್ಕಿ ತೋಟದಲ್ಲಿ ಒಂದೆ ಮಾಡಿದ ಹಾಗೆ, ಏಲಕ್ಕಿ ಚೊಕ್ಕಮಾಡಿ ಬರಬೇಕೆಂದು. ಅವರು ನಮಗೆ ಅಷ್ಟೆಲ್ಲ ಉಪದ್ರ ಕೊಟ್ಟದ್ದಕ್ಕೆ, ಸುಮ್ಮನೆ ಬಿಡಬಾರದು. ಅವರ ಹೊಸ ಮನೆ ಸುಟ್ಟರೂ ಪಾಪ ಎಂದು ನನಗೆ ಕಾಣುವುದಿಲ್ಲ" ಎನ್ನುತ್ತ ಆತನ ಮೋರೆಯನ್ನೇ ನೋಡಿದ ಕರಿಯು ಅದಕ್ಕೆ ಒಪ್ಪಿಗೆಯ ಮುದ್ರೆಯನ್ನು ಕೊಡದಿದ್ದುದನ್ನು ಕಂಡು "ಈ ವರ್ಷ ಸಾಧ್ಯವಿಲ್ಲ, ಮುಂದಿನ ವರ್ಷಕ್ಕೆ ಹೇಳಿದ್ದು—ನಾನು" ಎಂದು ತನ್ನ ಸೇಡನ್ನು, ತಾತ್ಕಾಲಿಕವಾಗಿ ನುಂಗಿಕೊಂಡ. ಅವನಿಗಂತು ತಿರುಮಲಧನಿಯನ್ನು ಹಸಿಹಸಿಯಾಗಿ ತಿನ್ನುವಷ್ಟು ಕೋಪ ಇನ್ನೂ ಅಳಿದಿಲ್ಲ.

ಮಳೆಗಾಲ ಸರಿದು, ಚಳಿಗಾಲ ಪ್ರಾರಂಭಿಸಿತು. ಕರಿಯನ ಮಲೆಯ ಮೇಲೆ ಬೆಳಗು, ಸಂಜೆಗಳಲ್ಲಿ ನಿತ್ಯವೂ ಮಂಜು ಮುಸುಕತೊಡಗಿತು. ಚಳಿಗಾಳಿ ಬೀಸಿ ಹೊಸ ಉತ್ಸಾಹವನ್ನು ಕರಿಯನ ಜೀವನದಲ್ಲಿ ತುಂಬಿಸುತಿತ್ತು. ಒಂದು ಕಡೆ ಸುಮ್ಮನೆ ಕುಳಿತರೆ ಮಾತ್ರ, ಆ ಚಳಿಯನ್ನು ಸಹಿಸುವುದು ಕಷ್ಟವಾದರೂ, ಬಿಸಿಲಿಗೆ ಮೈಯೊಡ್ಡಿ, ಬೆಟ್ಟ ಅಲೆಯುತ್ತಿರುವ ಜೀವಕ್ಕೆ, ಆ ಹವೆ

ನಿತ್ಯ ಹುರುಪನ್ನು ಕೊಡುವ ಶಕ್ತಿಯಾಗಿತ್ತು. ಅಲ್ಲದೆ ಹೋದರೂ, ಕರಿಯ ಸದಾ ಉತ್ಸಾಹಿ. ಎಂದೂ ಸುಮ್ಮನೆ ಕುಳಿತಿರುವವನಲ್ಲ. ಮೂರು ಜನರ ಜೀವನಕ್ಕಾಗಿ ಎಷ್ಟು ಬೇಟೆಯಾಡಬೇಕು? ಎಷ್ಟು ಬೇಸಾಯ ಮಾಡಬೇಕು? ಕೈತುಂಬಾ ವಿರಾಮವಿರುವಾಗ, ಮನ ತುಂಬಾ ಉತ್ಸಾಹವಿರುವಾಗ—ಕರಿಯ ಎಂದೂ ಸುಮ್ಮನೆ ಕುಳಿತಿರಲಾರ. ಗೆಳೆಯನನ್ನು ಕುಳಿತಿರಲೂ ಬಿಡಲಾರ. ಏಲಕ್ಕಿಯನ್ನು ಕೊಯ್ದು, ಕುಕ್ಕರಳ್ಳಿಯ ಗೌಡನಿಗೆ ಕೊಟ್ಟು ಬಂದರು. ಆತ ಮಾಡಿದ ಸಹಾಯಕ್ಕಿಂತ ಹೆಚ್ಚಿನ ಬೆಲೆ, ಆ ಮೂರು ನಾಲ್ಕು ಮಣ ಏಲಕ್ಕಿಗಿತ್ತು—ಎಂದು ಗೌಡನಿಗೆ ಗೊತ್ತು. ಆ ಲೆಕ್ಕಾಚಾರದ ಮೇಲೆ ಗೌಡ ತಿಮ್ಮನಿಗಾಗಲೀ, ತಿಮ್ಮನ ಹೆಂಡತಿಗಾಗಲೀ ಆಶ್ರಯಕೊಟ್ಟವನಲ್ಲ. ಅಂಥ ಎಣಿಕೆಯ ಸ್ವಭಾವ ಅವನದ್ದಲ್ಲ. ಆತನಾಗಲಿ, ಅವನ ಮನೆಯ ಸುತ್ತಲಿರುವ ನಾಲ್ಕಾರು ಮಲೆಯವರಾಗಲಿ ತೃಪ್ತಜೀವನ ಮಾಡುತ್ತಿದ್ದವರು. ನಿಸರ್ಗ ಅವರ ಪಾಲಿಗೆ ಉದಾರವಾಗಿದೆ. ಮಳೆಯ ನೀರಿಗೂ ಬೆಟ್ಟದ ಬುಡದ ಹೊಳೆಯ ನೀರಿಗೂ ಬರಗಾಲವಿಲ್ಲ. ಬೆಳೆಯುವುದನ್ನು ಬೆಳೆಯಬಹುದು. ಇಷ್ಟೇ ಅವರ ತೊಡಕು—ಬೆಳೆದುದನ್ನು ಕಾಡುಮೃಗಗಳಿಂದ ರಕ್ಷಿಸಿಕೊಳ್ಳಬೇಕಾದದ್ದು. ಬೆಳಗೂ ಅವುಗಳ ಹಾವಳಿ, ದನಕರುಗಳಿಗೂ ಅವುಗಳ ಹಾವಳಿ ಇದ್ದೇ ಇದೆ. ಹೆಚ್ಚಿನ ಸಾಹಸಕ್ಕೆ ಅವರ ಜೀವನದಲ್ಲಿ ಅವಕಾಶವಿರಲಿಲ್ಲ. ಅವರ ಜೀವನದ ಇನ್ನೊಂದು ಕೊರತೆಯೆಂದರೆ—ಆ ಪ್ರದೇಶದಲ್ಲಿ ದುಡಿಯುವ ಆಳುಗಳ ಅಭಾವ. ಇರುವ ನಾಲ್ಕು ಇಲ್ಲವೆ ಹತ್ತು ಆಳುಗಳಲ್ಲಿ, ಒಬ್ಬಿಬ್ಬರು ಮಲೆಜ್ವರದಿಂದ ಪೀಡಿತರಾಗಿ ಮಲಗಿರಲೇಬೇಕಾಗುತ್ತದೆ. ಬೇಸಾಯಕ್ಕೆ ಏನಾದರೊಂದು ನೆರವು ಬೇಕಾದರೆ, ಹೊರಗಿನ ಜನರ ಸಹಾಯವಿಲ್ಲ. ತಿಮ್ಮ ಕರಿಯನನ್ನು ಕಂಡ ದಿನ ಬಟ್ಯನಿಗೆ ಆದ ಅತಿ ಹೆಚ್ಚಿನ ಸಂತೋಷವೆಂದರೆ—ಆಪತ್ತಿನ ಕಾಲದಲ್ಲಿ, ನೆರವಾಗಬಹುದಾದ ಇನ್ನಿಬ್ಬರು ಗೆಳೆಯರು ದೊರೆತಿದ್ದಾರೆಂದು. ಅವರಂತೆಯೇ ನಿಷ್ಕಪಟ ಜೀವಿಗಳು.

ಅಲ್ಲದೆ ಗೌಡನಿಗೂ, ಅವನ ಕೆಲವು ಗೆಳೆಯರಿಗೂ ಬೇಟೆಯೆಂದರೆ ಪ್ರಾಣ. ಹಾರುವ ಅಳಿಲು, ಕೆಂಚಳಿಲು, ಬರ್ಕ, ಕೆಮ್ಮ ಇವುಗಳ ಮಾಂಸವೆಂದರೆ ತುಂಬ ಇಷ್ಟ. ಒಮ್ಮೊಮ್ಮೆ ತಿಮ್ಮನಾಗಲಿ, ಕರಿಯನಾಗಲಿ ಮಲೆ

ಯಿಂದ ಕೆಳಗಿಳಿದು ಬರುವಾಗ ಬರಿಗೈಯಿಂದ ಬಾರದೆ. ಏನಾದರೊಂದು ಬೇಟೆ ತಂದೇ ತರುತ್ತಾರೆ. ಬಟ್ಯಗೌಡನಿಗೂ ಈ ಕುಡಿಯರ ಕೈಯಲ್ಲಿ ಬೇಟೆಯ ವಿಧಾನ ಕಲಿಯುವ ಹಂಬಲ. ಕರಿಯ ಒಮ್ಮೆ, ಬಟ್ಯನ ಮನೆಯ ಮುಂದಿನ ಬಯಲಿನಿಂದ ತನ್ನ ಮಲೆಯನ್ನು ತೋರಿಸಿದಾಗ, ಅವನ ಗುಹೆಗೆ ಆಶ್ರಯವಾದ ಬಂಡೆಯ ಕಡಿದಾದ ಮೈಯನ್ನು ಕಂಡು ಬಟ್ಯಗೌಡ "ಏನು! ನೀವು ಮೂವರು ಮಂದಿ ಅಲ್ಲಿ ಇದ್ದೀರಾ? ಹೆದರಿಕೆಯಾಗುವುದಿಲ್ಲವೇ?" ಎಂದು ಆಶ್ಚರ್ಯ ತಾಳಿದ್ದ. ಕುಕ್ಕರಳ್ಳಿಯ ಕತೆಗಳಲ್ಲಿ—ಆ ಬೆಟ್ಟದ ಶಿಖರಕ್ಕೆ 'ಗುಮ್ಮನ ಕಲ್ಲು' ಎಂದು ನಾಮಕರಣವಾಗಿತ್ತು. ಅಲ್ಲಿ ರಾತ್ರಿವೇಳೆ ಗಂಟೆಯ ಧ್ವನಿಯಾಗುತ್ತದಂತೆ; ಗಣಗಳ ಚೀತ್ಕಾರ ಕೇಳಿಸುತ್ತದಂತೆ— ಎಂದು ಏನೇನೋ ಕತೆಗಳು ಹಬ್ಬಿದ್ದುವು. ಅಂಥ ಸ್ಥಳದಲ್ಲಿ ಈ ಮೂವರೇ ಸೇರಿ ದಿಟ್ಟತನದ ಬಾಳು ನಡೆಸುತ್ತಿದ್ದುದನ್ನು ಕಂಡು ಬಟ್ಯನಿಗೆ ಅವರ ವಿಷಯದಲ್ಲಿ ತುಂಬ ಹೆಮ್ಮೆ, ಆದರ. ಅವರ ಸ್ನೇಹಕ್ಕೆ ಕಟ್ಟುಬಿದ್ದು, ಆತ ಅದೆಷ್ಟೋ ಬಾರಿ ಆಯಾಸಪಟ್ಟು, ಮಲೆ ಹತ್ತಿ ಅವರ ಗುಹಾಲಯಕ್ಕೆ ಅಭ್ಯಾಗತನಾಗಿ ಹೋದುದುಂಟು. ಆರೆಂಟು ತಿಂಗಳ ಅವಧಿಯಲ್ಲಿ, ಬಟ್ಯ ಮತ್ತು ಅವರ ಸ್ನೇಹ ಗಾಢವಾಗಿ ಪರಿಣಮಿಸಿತು. ಬಟ್ಯ ಕರಿಯನನ್ನು ಹಿಂಬಾಲಿಸಿ, ಉರುಳಿಡುವ ವಿಧಾನ ಕಲಿತಿದ್ದಾನೆ; ಕವಣೆ ಬೀಸುವುದಕ್ಕೂ ಕಲಿತಿದ್ದಾನೆ. ಬಿಲ್ಲುಬಾಣಗಳನ್ನು ಹಿಡಿದು ಆಟವಾಡಿದ್ದಾನೆ. ಅವನಿಂದಾಗದ ಕೆಲಸ ವೆಂದರೆ—ಕರಿಯನ ಹಿಂದೆ, ದಿಕ್ಕು ದಿವಾನಿಯಿಲ್ಲದೆ, ಕಾಡಿನಲ್ಲಿ ಅಲೆದಾಡುವ ಕೆಲಸ. ಕರಿಯ ಒಬ್ಬನೇ ಎಲ್ಲೆಲ್ಲೂ ಸಂಚರಿಸಬಲ್ಲ. ಹುಲಿ ಬಂದರೆ, ಕಾಟಿ ಬಂದರೆ—ಎಂದು ಬಟ್ಯ ಅಂಜುವಾಗ 'ನಾವು ಅವಕ್ಕೇನು ಮಾಡದಿದ್ದರೆ, ಅವು ನಮಗೇನು ಮಾಡುವುದಿಲ್ಲ' ಎಂಬ ಮಾತು ಕರಿಯನದ್ದು. ಬಟ್ಯನಿಗೆ ಅದೆಲ್ಲ ಸೋಜಿಗವೇ! ಆತ ಮಲೆಗೆ ಬರಬೇಕಾದರೆ, ಮಲೆಯಿಂದ ಇಳಿಯ ಬೇಕಾದರೆ, ಜತೆಯಲ್ಲಿ ತಿಮ್ಮನಾಗಲಿ, ಕರಿಯನಾಗಲಿ ಇರಬೇಕು. ಅವ ನನ್ನು ಕರೆಯಲು ಬರಬೇಕು, ಕಳುಹಿಸಿಕೊಡಬೇಕು. ಅವನಿಗೆ ಈ ವನ್ಯ ಮೃಗಗಳ ಔದಾರ್ಯದಲ್ಲಿ ವಿಶ್ವಾಸವಿಲ್ಲ. ಅಂದರೆ ಇಷ್ಟೆ—ವರ್ಷ ವರ್ಷ ಕುಕ್ಕರಳ್ಳಿಯ ಒಂದಲ್ಲ ಒಂದು ಅಡಿಕೆಯ ತೋಟ, ಕಬ್ಬಿನ ಹೊಲ, ಕಾಟಿ, ಕಾಡಾನೆಗಳ ದಾಳಿಗೆ ಗುರಿಯಾಗುತ್ತದೆ. ಹಗಲೇ ಮೇಯಲು ಬಿಟ್ಟ ದನ

ಕರುಗಳು ಹುಲಿಗೆ ತುತ್ತಾಗುವುದುಂಟು. ಹಾಗೆಂದು, ಬರಿಯ ಕಳೆದ ವರ್ಷವೇ ಆತ ಒಂದು ಚರೆಮದ್ದು ತುಂಬುವ ಕೋವಿ ಸಂಪಾದಿಸಿದ್ದ. ಅದನ್ನು ಹಿಡಿದು, ಒಂದೆರಡು ಪಾಂಜ ಹೊಡೆದಿರಬಹುದು. ಅಥವಾ ಹಸರು ಪಾರಿವಾಳ ನೆಲಕ್ಕೆ ಉರುಳಿಸಿರಬಹುದು. ಅಷ್ಟು ಮಾಡಿ, ಮದ್ದಿನ ಕ್ರಯ, ಮದ್ದನ್ನು ಕೊಳ್ಳಲು ನಡೆಯಬೇಕಾಗಿದ್ದ ದೂರ, ಮಾಂಸದ ಕ್ರಯದೊಡನೆ ಹೋಲಿಸಿ ನೋಡಿ, ಅದು ಲಾಭದ ವ್ಯಾಪಾರವಲ್ಲ ಎಂದು ನಿರ್ಧರಿಸಿದ್ದ. ಹುಲಿಯ ಉಪದ್ರದ ಕತೆ, ಅವನ ಬಾಯಿಯಿಂದ ಕೇಳಿದ ಕರಿಯನಿಗೆ 'ಯಾಕೆ ಅದನ್ನು ಶಿಕಾರಿ ಮಾಡಬಾರದು?' ಎಂದು ಒಮ್ಮೊಮ್ಮೆ ಅನಿಸಿದ್ದುಂಟು. ಬಟ್ಯನ ಬಾಯಿಂದ—ಹುಲಿ ದನವನ್ನೋ, ಎತ್ತನ್ನೋ ಕೊಂದು ರಕ್ತ ಹೀರಿ ಹೋದಮೇಲೆ, ತಿರುಗಿ ಮರುದಿನ ಅದೇ ತಾವಿಗೆ ಬರುತ್ತದೆ—ಎಂದು ಕೇಳಿ "ಅಂಥ ಸಂದರ್ಭ ಒದಗಿದರೆ, ನನಗೆ ಹೇಳಿಕಳುಹಿಸಿ; ಬರುತ್ತೇನೆ" ಎಂದು ಭರವಸೆ ಕೊಟ್ಟಿದ್ದ. ತಿಮ್ಮ ಅಂಥ ಮಾತುಗಳನ್ನು ಕೇಳಿದರೆ, ಧೈರ್ಯ ಕೊಡುವವನಲ್ಲ. ಅವನಲ್ಲಿ ಬೇರೆ ಕತೆಗಳೇ ಉಂಟು. ಬೆಟ್ಟದಲ್ಲಿ ವಾಸಿಸುವ ನೂರಾರು ದೇವತೆಗಳು, ಹುಲಿಯ ರೂಪ ತಾಳಿ ಅಲೆದಾಡುತ್ತವಂತೆ. 'ಅಂಥವನ್ನು ಕೊಲ್ಲಬಾರದು, ಕೊಲ್ಲುವುದು ಸುಲಭವಲ್ಲ' ಎಂಬುದು ಅವನ ನಂಬಿಕೆ. ಅಷ್ಟು ಮಾತ್ರವಲ್ಲ—'ಹಿರಿಮಲೆಯ ಬಿರುಮ ಪೂಜಾರಿ ಇದ್ದಾನಲ್ಲ, ಅವನಿಗೆ ಹುಲಿಯ ರೂಪ ತೆಗೆದುಕೊಳ್ಳಲಿಕ್ಕೆ ಬರುತ್ತದಂತೆ. ಒಮ್ಮೆ ಪಾಪ ಅನ್ನುತ್ತಿದ್ದರು—ಹುಲಿಯ ರೂಪ ತಾಳಿ, ರಾತ್ರೆಯೆಲ್ಲ ಬಿರುಮ ಸುತ್ತಾಡುವುದುಂಟು. ಅವನಿಗೆ ಗೊತ್ತಿಲ್ಲದ ಮದ್ದುಮಾಟವಿಲ್ಲ, ಮಂತ್ರವಾದವಿಲ್ಲ' ಎಂದು. ಇಂಥ ಕತೆಗಳನ್ನು ಕರಿಯನೂ ಅರ್ಧಮರ್ಧ ನಂಬಿದವನೇ. ಆದರೆ ದೇವತೆಗಳು ಮಂತ್ರವಾದಿಗಳು ರೈತನ ಎತ್ತು, ದನ, ತಿಂದು ಉಪದ್ರ ಕೊಟ್ಟಾರೆಯೇ? ಹಾಗಿದ್ದರೂ ಆ ಹುಲಿ ಬೇರೆ, ಈ ಹುಲಿ ಬೇರೆ ಎಂಬ ತರ್ಕಸರಣಿ ಅವನದ್ದು. ಮುಖ್ಯ ಬೇಟೆಯ ಚಪಲ ಅವನದ್ದು. ಅದರಲ್ಲೂ, ಬಟ್ಯನ ಮನೆಯಲ್ಲಿದ್ದ ಬಂದೂಕನ್ನು ಎತ್ತಿಹಿಡಿದು, ಹುಸಿಮದ್ದು ತುಂಬಿಸಿ ಹಾರಿಸಿದ್ದೂ ಸಾಲದೆ, ಹುಲಿಯನ್ನೇ ಕೊಲ್ಲಬೇಕೆಂಬ ಆಸೆ ಅವನದ್ದು. ಆ ಆಸೆಯಿಂದ ಬಟ್ಯನ ಮನೆಯ ಎಮ್ಮೆ, ದನಗಳನ್ನು—ಹುಲಿ ಬಂದು ಎಂದು ತಿಂದೀತು; ಎಂದು ತನಗೆ ಅವನಿಂದ ಶಿಕಾರಿಯ ಕರೆ ಬಂದೀತು—ಎಂದು ಬಯಸಿದ್ದೂ ಉಂಟು.

ಮಕರಸಂಕ್ರಾಂತಿ ಕಳೆಯಿತು. ಬೆಟ್ಟದ ಸೆರಗಿನಲ್ಲಿ ಒಂದೊಂದಾಗಿ ಕಾಡ್ಗಿಚ್ಚುಗಳು ಉರಿಯಲಾರಂಭಿಸಿದುವು. ಬೆಟ್ಟದ ಮೈಯಲ್ಲಿ ಆಳೆತ್ತರ ಹುಲ್ಲು ಬೆಳೆದಾಗ ಬೆಂಕಿ ಬಿತ್ತೆಂದರೆ, ಒಂದು ಮೂಲೆಯಿಂದ ಇನ್ನೊಂದು ಮೂಲೆಗೆ ಅದು ಪಸರಿಸುವುದಕ್ಕೆ, ಹಾಗೆ ಪಸರಿಸಿ ಬೆಟ್ಟದ ತುದಿಯನ್ನು ಏರುವುದಕ್ಕೆ, ಒಂದೆರಡು ಗಳಿಗೆಯೂ ಬೇಡ. ಕರಿಯು ತನ್ನ ಗುಹೆಯ ಮುಂದೆಯೋ, ಮರದ ಮೇಲೆಯೋ ಕುಳಿತು, ಆ ಭಯಾನಕ ದೃಶ್ಯ ನೋಡುವ ಹುಚ್ಚುಳ್ಳವ. ಆ ತಿಂಗಳಲ್ಲೇ—ಅವನಿಗೆ ಒಂದು ಅಪೂರ್ವ ದೃಶ್ಯ ಕಾಣಸಿಕ್ಕಿತು. ಮಧ್ಯಾಹ್ನ ಅವನ ಮಲೆಯ ಗಾಳಿಯಲ್ಲಿ ಹೊಗೆಯ ವಾಸನೆ ತುಂಬಿಹೋಗಿತ್ತು. 'ಸೂಸೂ' ಎಂದು ಮೂಸಿ 'ಇವತ್ತೆಲ್ಲೋ ಸಮೀಪ ದಲ್ಲೇ ಬೆಂಕಿ ಬಿದ್ದಿರಬೇಕು. ಹೊಗೆಯ ಗಾಟು ಇಲ್ಲಿಗೂ ಬರುತ್ತದೆ' ಎಂದೆಣಿಸಿಕೊಂಡ. ಸಂಜೆ ಪಡುವಣಕ್ಕೆ ತಿರುಗಿ ನೋಡುತ್ತಾನೆ—ತಿಮ್ಮ ಹಿಂದೆ ಆಶ್ರಯಪಡೆದಿದ್ದ ಬಂಡೆಯ ಬೆಟ್ಟದ ಮೈ, ಬೆಂಕಿಗೆ ಆಹುತಿಯಾಗಿದೆ! ಅಪರ ಬುಡದಿಂದಲೇ ಹೊತ್ತಿದೆ ಬೆಂಕಿ! ಬಿಸಿಲಿಗೆ ಹೊಗೆ ಮಾತ್ರ ಕಾಣಿ ಸಿತ್ತು; ಕತ್ತಲು ಕವಿಯುತ್ತ ಬರಲು, ಬೆಂಕಿಯ ನಾಲಿಗೆ ಬೆಟ್ಟದ ಮರಗಳಿ ಗಿಂತಲೂ ಎತ್ತರವಾಗಿ ಮೇಲಕ್ಕೆ ನಿಡಿದು, ಚಾಚಿ, ಬೆಟ್ಟಕ್ಕೆ ಬೆಟ್ಟವನ್ನೇ ನುಂಗಲು ಹೊರಟ ಹಾಗೆ ಕಾಣಿಸಿತು. ತಿಮ್ಮ ಆ ದೃಶ್ಯವನ್ನು ನೋಡಿ 'ನಮ್ಮ ಕಾಡಿಗೂ ಅದು ಬಂದರೇನು ಗತಿ' ಎಂದು ಅಂಜಿಕೊಂಡರೆ, ಕರಿಯು ಎವೆ ಬಿಡದೆ ಹುಚ್ಚು ಮನಸ್ಸಿನಿಂದ ಬೆಂಕಿಯ ನಾಲಿಗೆಗಳು ಎಲ್ಲೆ ಲ್ಲಿಗೆ ಚಾಚುತ್ತಿವೆ ಎಂದು ನೋಡುತ್ತಲೇ ಇದ್ದಾನೆ. ಹಸಿ ಹುಲ್ಲು ಸುಡುವ, ಹಸಿ ಮರ ಸುಡುವ ಸದ್ದು ಸಹ, ಕಿವಿಗೆ ಕೇಳಿಸುತ್ತಿತ್ತು—ಅಷ್ಟು ಸಮೀಪ ದಿಂದ. ಅರಣ್ಯದ ಸ್ಮಶಾನದ ಇಂಥ ರೌದ್ರ ಚಿತ್ರವನ್ನು ಇಷ್ಟು ಸಮೀಪದಿಂದ ಅವನೆಂದೂ ಕಂಡವನಲ್ಲ. ಗಾಳಿಯ ಆವೇಗಕ್ಕೆ ಒಂದೆರಡು ಗಳಿಗೆಯೊಳ ಗಾಗಿ ಸುಮಾರು ಹರದಾರಿ ದೂರದ ಬೆಟ್ಟದ ಮೈಯು ಬೆಂದು ಕಮರಿ ಹೋಯಿತು. ಬೆಂಕಿಯ ಹಾಳೆ ಮೇಲಕ್ಕೇರಿ, ಏರಿ, ಕೊನೆಗೆ ಬೆಟ್ಟದ ಕುಡಿ ಯಲ್ಲಿ ನೊಂದಿ, ಅದೃಶ್ಯವಾದ ಯಾವತ್ತೂ ನೋಟ ನೋಡಿದ ಅವನಿಗೆ, ಹಿಗ್ಗಿನಿಂದ ಆ ರಾತ್ರಿ ನಿದ್ರೆಯೇ ಹತ್ತಲಿಲ್ಲ. ಅವನೆಣಿಕೆ ಬೇರೆಯೇ—'ಹೀಗೆ ಬೆಂಕಿ ಬೀಳುವಾಗ ಕಾಡಿನಲ್ಲಿರುವ ಆನೆಗಳೇನು ಮಾಡುತ್ತವೆ? ಕಾಟಿಗಳೆ

ಲ್ಲಿಗೆ ಹೋಗುತ್ತವೆ? ಹುಲಿ ಎಲ್ಲಿಗೆ ಹೋದೀತು' ಎಂಬ ಲೆಕ್ಕ ಅವನದ್ದು. ಬೆಂಕಿಯನ್ನು ನೋಡುತ್ತಿರುವಾಗ, ಅವನು ಇದ್ದ ಮಲೆಯ ಕೆಳಗಿನ ಸೆರಗಿನಲ್ಲಿ ಅಪೂರ್ವದ ಸದ್ದೊಂದು ಕೇಳಿಸಿತು. ಒಮ್ಮೆಂದೊಮ್ಮೆ ಬೆಟ್ಟದ ಅಬ್ಬಿ ಹಾದಿತಪ್ಪಿ ಭೋರ್ಗರೆದು, ಕಾಡಿನೆಡೆಯಲ್ಲಿ, ಕೊಚ್ಚಿಕೊಂಡು ಹೋದಂತಿತ್ತು—ಆ ಧ್ವನಿ. 'ಪ್ರಾಯಶಃ ಅದೇ ಇರಬೇಕು—ಕಾಡುಕೋಣಗಳ ಹಿಂಡೋ, ಆನೆಯ ಹಿಂಡೋ, ಬೆಂಕಿಗೆ ಬೆದರಿ ಓಡಿ ಹೋಗುತ್ತಿರುವ ಸದ್ದು' ಎಂದೆಣಿಸಿಕೊಂಡ. ಇಂಥ ಚಿಂತೆ ಕರಿಯನಿಗಾದರೆ 'ಬೆಂಕಿ ಹಾಗಿಂದ ಹಾಗೆಯೇ ಹೋಯಿತಲ್ಲ; ಇಲ್ಲಿಗೂ ಬಂದಿದ್ದರೆ ನಮ್ಮ ಗತಿಯೇನು!' ಎಂದು ಅದೃಷ್ಟವನ್ನು ಕೊಂಡಾಡುತ್ತಿರುವ ತಿಮ್ಮ.

ಈ ಕತೆ ನಡೆದು, ಒಂದು ವಾರ ಪೂರ್ಣ ಕಳೆದಿರಲಿಲ್ಲ. ಬಟ್ಯಗೌಡನ ಸವಾರಿ, ಇಬ್ಬರು ಜತೆಗಾರರನ್ನು ಕಟ್ಟಿಕೊಂಡು ಅವರ ಮಲೆಗೆ ಧಾವಿಸಿ ಬಂದಿತು. ಬಟ್ಯನ ಮೈ ನಡೆದ ದಣಿವಿನಿಂದ ಎಷ್ಟು ಕಂಗಾಲಾಗಿತ್ತೋ, ಮುಖ, ಆದ ನಷ್ಟದಿಂದ ಅಷ್ಟೇ ಕಂದಿತ್ತು. "ಮೊನ್ನೆ ನಿಮ್ಮ ಈ ಮಲೆಗೆ ಬೆಂಕಿ ಬಿದ್ದದ್ದೇ ತಡ. ಹುಲಿಗಳೆಲ್ಲ ಬಯಲಿಗೆ ಬಂದು ಇಳಿದಿದ್ದಾವೆ. ಈಗಾಗಲೇ ನನ್ನ ಎರಡು ದನ ಹೋಯಿತು, ಹೋಗಲಿ; ಸೊಣಕು ಜೀವಗಳು—ಎಂದುಕೊಂಡಿದ್ದೆ. ಆದರೆ ನಿನ್ನೆ ಮೇಯಲು ಬಿಟ್ಟ ನನ್ನ ಹೂಡುವ ಎತ್ತುಗಳ ಪೈಕಿ ಒಂದನ್ನು, ನಡು ಹಗಲಿಗೇ ಹುಲಿ ಬಂದು, ಗೋಣು ಮುರಿದು ಕೊಂದು ಹಾಕಿದೆ" ಎಂಬ ದುಃಖಕರ ವಾರ್ತೆ ಹೇಳಿದ. ಅವರು ಬಂದುದು—ಪುಸಲಾಯಿಸಿ ಪುಸಲಾಯಿಸಿ, ಆ ಹುಲಿಯ ಶಿಕಾರಿ ಮಾಡಲಿಕ್ಕಾಗುತ್ತದೆಯೇ—ಎಂದು ನೋಡುವುದಕ್ಕೆ. "ನೀನಷ್ಟು ಉಪಕಾರ ಮಾಡಬೇಕು" ಎಂದು ಬಟ್ಯ ಕರಿಯನನ್ನು ಬೇಡಿದರೆ, ತಿಮ್ಮ "ಅದೊಂದು ಕೆಲಸ ಹೇಳಬಾರದು ನೀವು" ಎಂದು ದಮ್ಮಯ್ಯ ಹಾಕುತ್ತಾನೆ. ಆದರೆ ಕರಿಯನ ಉತ್ಸಾಹ ತಿಮ್ಮನಿಂದ ತಡೆಯುವುದಕ್ಕಾಗಲಿಲ್ಲ. ತಿಮ್ಮ ಬರುವವನೂ ಅಲ್ಲ, ಅವನಿಗೆ ಆ ಧೈರ್ಯವೂ ಇಲ್ಲ. ಹೆಂಡತಿ, ಮಗುವನ್ನು ಬಿಟ್ಟು ಬರುವ ಹಾಗೂ ಇಲ್ಲ. ಕರಿಯ ಹೊರಟುಹೋದ ಕ್ಷಣದಿಂದ ಮಾತ್ರ, ತಿರುಗಿ ಆತನ ಮುಖ ಕಾಣುವ ತನಕ, ಅವನು ಸದಾ ಮಲೆರಾಯನನ್ನು ಬೇಡುತ್ತಲೇ ಇದ್ದ. 'ಹುಲಿಯನ್ನು ಕೊಂದು, ತನ್ನ ಕರಿಯನನ್ನು ಕಾಪಾಡು' ಎಂಬುದೇ ಅವನ ಪ್ರಾರ್ಥನೆ.

ಹುಲಿಯ ಶಿಕಾರಿ ಹೇಗೆಂದು ಕರಿಯನಿಗೆ ಗೊತ್ತಿತ್ತೋ ಇಲ್ಲವೋ ಆದರೆ ಹುಲಿ ಕಂಡವ; ತನ್ನಿಂದಾಗದ ಕೆಲಸವಿಲ್ಲ ಎಂಬ ಧೈರ್ಯ ಉಳ್ಳವ. ಆತ ಕರೆಯಲು ಬಂದ ಜನಗಳ ಹಿಂದೆ ಧಾವಿಸಿಯೇ ಧಾವಿಸಿದ. ದಾರಿಯ ಉದ್ದಕ್ಕೂ ಬೇಟೆಯ ನಾನಾ ಉಪಾಯಗಳನ್ನು ಅವರೊಡನೆ ತರ್ಕಿಸುತ್ತಿದ್ದ. "ಮರ ಹತ್ತಿ ಕಾದು ಕುಳಿತುಕೊಳ್ಳಬೇಕು, ಹಾಗೆ ಮಾಡಬೇಕು, ಹೀಗೆ ಮಾಡಬೇಕು" ಎನ್ನುತ್ತಿದ್ದ. "ಗುಂಡಿನ ಧ್ವನಿ ಕೇಳಿ ಹುಲಿ ಮರದ ಮೇಲೆ ಜಿಗಿದರೇನು ಗತಿ" ಎಂಬ ಅನುಮಾನವನ್ನು ಬಟ್ಯ ಸೂಚಿಸಿದ. ಅಂತು ಬೇಟೆಯ ವಿಧಾನ, ದಾರಿಯಲ್ಲೇ ನಿರ್ಣಯವಾಗಲಿಲ್ಲ. ಸ್ಥಳವನ್ನು ಕಂಡ ಬಳಿಕವೇ ಆ ನಿರ್ಧಾರ ಮಾಡಬೇಕಾಯಿತು.

ಎಲ್ಲರೂ ಬಟ್ಯನ ಮನೆಯನ್ನು ಸೇರಿದರು. ಮನೆಯ ಹಿಂದುಗಡೆ, ನೂರು ಗಜವೂ ಇರಲಿಲ್ಲ, ಒಂದು ಪುಟ್ಟ ಮೈದಾನಿದೆ. ಅಲ್ಲಲ್ಲಿ ಹಸುರು ಹುಲ್ಲು ಬೆಳೆದಷ್ಟೇ, ಎಡೆ ಎಡೆಯಲ್ಲಿ ಗಿಡ ಮರಗಳಿದ್ದುವು. ಅಲ್ಲಿ ಹುಲಿಯ ಬಾಯಿಗೆ ತುತ್ತಾಗಿ ಬಿದ್ದಿದ್ದ ಪುಷ್ಟ ಎತ್ತೊಂದು ಕಾಣಿಸಿತು. 'ಅಷ್ಟು ಬಲಿಷ್ಟ ಪ್ರಾಣಿಯನ್ನು, ಒಂದಿಷ್ಟೂ ಗಾಯವಿಲ್ಲದಂತೆ ಉರುಳಿಸಿ, ಕತ್ತನ್ನು ಕಡಿದು, ರಕ್ತ ಹೀರಿ ಹೋದ ಹುಲಿ ಎಂಥದಿರಬಹುದು!' ಎಂಬ ಯೋಚನೆ ಕರಿಯನಿಗಾಯಿತು. ಅದು ಮೇಲಕ್ಕೆ ಹಾರಿದರೆ, ಎಷ್ಟು ಎತ್ತರ ಹಾರಬಹುದು? ಅದರ ಎಟುಕಿಗೂ ಸಿಗದಷ್ಟು ಎತ್ತರದ ಮರ ಸಮೀಪ ದಲ್ಲಿಲ್ಲವಲ್ಲ—ಎಂಬ ಯೋಚನೆಯೂ ಆಯಿತು. ಇನ್ನು ಆ ಚರೆ ಕೋವಿಯ ಗುಂಡು ಎಷ್ಟು ದೂರ ನಾಟೀತು—ಎಂಬ ಜ್ಞಾನವೂ ಅವನಿಗಿಲ್ಲ. ಆ ಪರಿಚಯವೂ ಆಗಬೇಕು. ಸಮೀಪದ ಮರವೊಂದಕ್ಕೆ, ಪರೀಕ್ಷೆಗಾಗಿ ಆತ ಗುಂಡು ಹಾರಿಸಿದ. ಗುರಿ ಏನೋ ಸಮನಾಗಿತ್ತು. ಬಹು ದೂರ ಹೊಡೆ ದರೆ ಚರೆ ಮದ್ದು ಹರಡಿ ಹೋಗಿ, ಹುಲಿ, ಅದರಲ್ಲೂ ಅಂಥ ಬಲವಾದ ಹುಲಿ, ಸಾಯಲಾರದು—ಎಂದನಿಸಿತು. ತಲೆ ತುರಿಸಿದ; ಯೋಚಿಸಿದ, ಚಿಂತಿಸಿದ.

ಕೊನೆಗೆ, ಆ ಎತ್ತಿನ ಹೆಣವನ್ನು, ಅದು ಬಿದ್ದಲ್ಲಿಯೇ ಒಂದು ಗೂಟ ಹೊಡೆದು, ಅದಕ್ಕೆ ಬಿಗಿಯುವಂತೆ ಹೇಳಿದ. ಈ ಹೊಸ ತಮಾಷೆ ನೋಡುವುದಕ್ಕೆ—ಊರಿನ ಗಂಡಾಳೆಲ್ಲ ಸಿದ್ಧರು. ಅನಂತರ ಅದಕ್ಕೆ ಹತ್ತು

ಹದಿನೈದು ಮಾರು ದೂರದಲ್ಲಿ, ಪೊದೆಯೊಂದರ ಬಳಿ, ಅವಸರ ಅವಸರದಿಂದ, ಒಂದು ಚೌಕದ ಕುಣಿ ತೋಡಿದರು. ಕುಣಿ ತೋಡಿ, ಅದರ ಎದುರಿಗೆ, ಮರೆಯಾಗುವಂತೆ ಸೊಪ್ಪು ಸದೆ ಕಟ್ಟಿ, ಎದುರಿಗೆ ಒಂದು ಹೊಡೆಮಂಚ ತಂದು ಮಾಲಿಸಿ ನಿಲ್ಲಿಸಿದರು. ಸಂಜೆಯಾಗುವುದರೊಳಗೆ ಅಷ್ಟು ಕೆಲಸ ಮಾಡಬೇಕಾದರೆ ಸಾಕುಬೇಕಾಯಿತು. ಊರಲ್ಲಿರುವ ಕೋವಿ ಒಂದೇನೆ. ಬೇಟೆಗಾರನೂ ಒಬ್ಬನೇ. ಆದರೆ ಉಳಿದವರು ಏನು ಮಾಡಬೇಕು ? ಕರಿಯ ನನ್ನು ಬಿಟ್ಟು, ತಾವು ಹಿಂದಕ್ಕುಳಿಯುವುದೇ—ಎಂಬ ಯೋಚನೆ ಅವರಿಗೆ. 'ಹಾಗೆಯೇ ಸರಿ' ಎಂದು ಬಹುಮತದ ವಾದ. ಬಟ್ಯನಿಗೆ ಅದು ಸಮಾಧಾನವಾಗಲಿಲ್ಲ. 'ಏನೇ ಆಗಲಿ, ಸತ್ತರೂ ಬದುಕಿದರೂ ಇಬ್ಬರೂ ಸೇರಿ ಸಾಯುವ' ಎಂದು ಆತ ಹುಮ್ಮಸ ತಂದುಕೊಂಡು, ಕರಿಯನಿಗೆ ಊಟ ಹಾಕಿ, ತಾನೂ ಉಂಡು, ಕುಣಿಯ ಕಡೆಗೆ ಹೊರಟ. ಕತ್ತಲಿಗೆ ಮೊದಲೇನೆ ಅವರಿಬ್ಬರೂ ಆ ಕೋಣೆಯಲ್ಲಿ ಅಡಗಿ ಕುಳಿತರು. ಕೋವಿಗೆ ಮದ್ದು ತುಂಬಿಸಿದ್ದಾಯಿತು. ಕುಣಿಯಲ್ಲಿ ಒಂದೆರಡು ಕತ್ತಿ ಕೋಲುಗಳನ್ನು ತಂದಿರಿಸಿ ಕೊಂಡದ್ದಾಯಿತು. ಮಾತು ನಿಲ್ಲಿಸಿ, ಕಾವಲು ಹಾಕುವ ಮುನ್ನ, ಎಲೆ ಅಡಿಕೆ ಸಜ್ಜುಮಾಡಿ ತಿಂದರು. ಬಟ್ಯ "ಬರುತ್ತದೋ ಇಲ್ಲವೋ. ಎಷ್ಟು ರಾತ್ರಿ ಕಾಯಬೇಕಾಗುತ್ತದೋ. ನಮ್ಮ ಸುಳಿವು ಸಿಕ್ಕಿ ಕಂಡು ಓಡಿ ಹೋದರೆ ಮತ್ತೂ ಮೋಸ" ಎಂದು ಯೋಚನೆ ಮಾಡುವಾಗಲೇ, ಕರಿಯನ ಕಿವಿಗೆ ಒಂದೆರಡು ಕೋತಿಗಳ ಚೀರಾಟ ಕೇಳಿಸಿತು. ಕೈಸನ್ನೆ ಮಾಡಿದ, ಬಟ್ಯನಿಗೆ ಸುಮ್ಮನಿರಲು. ಅವನಿಗೆ ಗೊತ್ತು—ಕಾಡಿನಲ್ಲಿ ಸಮೀಪ ಹುಲಿ, ಚಿರತೆ ಹಾದರೆ ಬಹು ಬೇಗ ಕೋತಿಗಳಿಗೆ ತಿಳಿಯುತ್ತದೆಂದು. ಬಾಯಿಗೆ ತುಂಬಿಸಿದ ಕವಳ ಉಗಿದು, ಬಟ್ಯನ ಕೈಗೆ ನೀಳ ಕತ್ತಿಯೊಂದನ್ನು ತುರುಕಿ, ಸುಮ್ಮನಿರಲು ಹೇಳಿ, ಹೊಡೆಮಂಚದ ಎಡೆಯಿಂದ, ಎತ್ತಿನ ಶವವನ್ನು ನೋಡತೊಡಗಿದ. ನಸುಕಾಗಿತ್ತಷ್ಟೆ. ಸಮನಾದ ಕತ್ತಲೂ ಕವಿದಿರಲಿಲ್ಲ. ಕಣ್ಣೆದುರಿಗೆ ಬಾನಲ್ಲಿ ಅರ್ಧಚಂದ್ರನೂ ಕಾಣಿಸುತ್ತಿದ್ದ. ಅಷ್ಟು ಬೇಗನೆ ಹುಲಿ ಬಂದೀತು ಎಂದು ಅವರೆಣಿಸಿರಲಿಲ್ಲ. ಆದರೆ ತನ್ನ ಮಲೆಯಲ್ಲಿ ಎಂದು ಬೇಕಾದರಂದು ತಿರುಗಾಡಲು ಹುಲಿಗೇಕೆ ಅಂಜಿಕೆಯಂತೆ! ಎದುರಿನ ಪೊದೆಗಳಿಂದ, ದಷ್ಟಪುಷ್ಟವಾದ ಹುಲಿಯೊಂದು, ಗಂಭೀರ ನಡೆಯಿಂದ, ಬಿದ್ದ

ಎತ್ತಿನ ಕಡೆಗೆ ಬಂದೇ ಬಂದಿತು. ಕರಿಯ ನೋಡುತ್ತಲೇ ಇದ್ದ. ಕೋವಿಯನ್ನು ಹಿಡಿದು, ಗುರಿಹಿಡಿದು ಸಜ್ಜಾದ. ಬಟ್ಯ ಅವನ ಹಿಂದೆಯೇ ಕುಳಿತಿದ್ದರೂ ಹುಲಿ ಬಂದಿರಬೇಕೆಂಬ ಅನುಮಾನವಾದರೂ, ಹುಲಿ ಕಂಡುದಕ್ಕಿಂತ ಹೆಚ್ಚು ಪುಕ್ಕುಗೊಂಡಿದ್ದ. ಒಂದೆರಡು ನಿಮಿಷಗಳಲ್ಲಿ, ಹುಲಿ, ಎತ್ತಿನ ಶವವನ್ನು ಸಮೀಪಿಸಿ, ಉದ್ದಕ್ಕೆ ಮಲಗಿ ಅದರ ಗೋಣಿಗೆ ಬಾಯಿಹಾಕಿ, ಒಮ್ಮೆ ಎತ್ತಿ ತಲೆಯಾಡಿಸಿದ್ದೇ ತಡ, ಕಟ್ಟಿದ ಗೂಟ ಕಿತ್ತು, ಬಿಗಿದ ಹಗ್ಗ ಹರಿದು, ಎತ್ತಿನ ಅಗಾಧ ಶರೀರ ಈಚೆಗೆ ಉರುಳಿಬಿತ್ತು. ಹುಲಿಗೆಷ್ಟು ತ್ರಾಣವಿರಬಹುದು—ಎಂದು ಕರಿಯ ಮನಗಂಡದ್ದು ಆಗ. ಅವನಿಗನಿಸಿತು—ಅದು ಆ ಶವವನ್ನೆತ್ತಿಕೊಂಡು ಹೊರಟೇಹೋದರೆ, ತಾವು ಕಾದು ಕುಳಿತದ್ದು ವ್ಯರ್ಥವೆಂದು. ಆಮೇಲೆ ಬೇಟೆಯಾಡುವುದೇನು? ಹೊಡೆಯುವುದಿದ್ದರೆ ಅದರ ಮೊದಲೇ ಗುರಿಯಿಟ್ಟು ಹೊಡೆಯಬೇಕು. ಒಂದು ಗುಂಡು ವ್ಯರ್ಥವಾದರೆ, ಮತ್ತೊಮ್ಮೆ ಮದ್ದು ಜಡಿದು ತುಂಬಿಸುವ ಅವಕಾಶವೂ ಇಲ್ಲ; ಅನುಕೂಲವೂ ಇಲ್ಲ—ಎಂದು ತೋರಿದ ಆತ ಮಲೆರಾಯನನ್ನು ಸ್ಮರಿಸಿದ. ಗುರಿಹಿಡಿದು, ಹುಲಿಯ ಹಣೆಗೆ ಗುಂಡು ಹಾರಿಸಿಯೂ ಬಿಟ್ಟ! ಅನಂತರದ ಕೆಲವು ಕ್ಷಣಕಾಲ, ಯಾರಿಗೆ ಏನಾಯಿತು ಎಂದು ಒಬ್ಬರಿಗೂ ತಿಳಿಯದಾಗಿತ್ತು.

ಹುಲಿಯ ಹಣೆಗೆ ಸಾಕಷ್ಟು ಪೆಟ್ಟಾಗಿ, ಯಾವ ಶಕ್ತಿಯಿಂದಲೋ ಏನೋ, ಅದು ಜಿಗಿ ಹಾರಿತು; ಹಾರಿದ್ದೇ ಕರಿಯನ ಕಡೆಗೆ. ಕುಣಿಯ ಎದುರಿನ ನಿಲ್ಲಿಸಿದ ಹೊಡೆಮಂಚದ ಮೇಲೆ ಅದು ಧೊಪ್ಪಳಿಸಿ ಎರಗಿತು. ಅದರ ರೌದ್ರ ಘರ್ಜನೆ, ಗುಂಡಿನ ಧ್ವನಿ, ಜತೆಗೆ ಬಟ್ಯ ಬೆದರಿದ ಚೀತ್ಕಾರ—ಎಲ್ಲವೂ ಸೇರಿದುವು. ನೂರು ಗಜ ದೂರದಲ್ಲಿ, ಕಾದು ಕುಳಿತ ಜನಕ್ಕೆ ಕೇಳಿಸಿದರೂ, ಅಂಗಳಕ್ಕಿಳಿಯರು ಯಾರೊಬ್ಬರೂ. ಯಾರು ಸತ್ತರು, ಯಾರು ಉಳಿದರು—ಎಂಬ ತಿಳಿವು ಬರುವ ಮುಂಚೆಯೇ, ತಮ್ಮ ಜೀವವನ್ನು ಬಲಿಯೊಡ್ಡುವ ಧೈರ್ಯ, ಅವರಿಗಾದರೂ ಹೇಗೆ ಬಂದೀತು?

ಇತ್ತ ಕುಣಿಯ ಕತೆ ಬೇರೆಯೇ. ಹುಲಿ ಧೊಪ್ಪಳಿಸಿದ್ದಕ್ಕೆ ಸಮನಾಗಿ, ಮಾಲಿಸಿಟ್ಟ ಎದುರಿನ ಮಂಚ ಮಗುಚಿಕೊಂಡು, ಕುಣಿಗೆ ಮುಚ್ಚಳವಾಗಿ ಪರಿಣಮಿಸಿತು. ಆ ಏಟಿಗೆ ಬಟ್ಯ, ಕರಿಯ ಇಬ್ಬರೂ ಒಬ್ಬರ ಮೇಲೊಬ್ಬರು

ಬಿದ್ದು ಕುಣಿಯೊಳಗೆ ಭದ್ರರಾದರು. ಬಟ್ಯ ಬೆದರಿಕೆಯಿಂದಲೇ ಮೂಕನಾದ. ಕರಿಯ ಮೊದಲ ಗಾಬರಿಯಿಂದ ಚೇತನಗೊಂಡಾಗ, ಹೊಡೆಮಂಚದ ಪಟ್ಟಿಗಳ ಎಡೆಯಿಂದ, ಹುಲಿಯ ಕಾಲು ಅವರ ಮೈಗೆ ತಗಲುವಷ್ಟು ಸಮೀಪವಾಗಿದ್ದುದು ಕಾಣಿಸಿತು. ನಾಲ್ಕೂ ಕಾಲುಗಳೂ ಮರದ ಎಡೆಯಲ್ಲಿ ಇಳಿದು ಸಿಕ್ಕಿಬಿದ್ದಿದ್ದುವು. ಹುಲಿ—ಪ್ರಾಣೋತ್ಕ್ರಮಣದ ಹೋರಾಟದಿಂದ ಮಂಚದ ಮರವನ್ನು ಕಚ್ಚಿ, ಮೈ ಅಲುಗಾಡಿಸುತ್ತ ಮಂಚವನ್ನೇ ಅಲುಗಿಸುತಿತ್ತು. ಮಂಚ ಬಲವಾಗಿದ್ದುದರಿಂದ, ತಾತ್ಕಾಲಿಕ ಜೀವಾಪಾಯ ಅವರಿಗಿರಲಿಲ್ಲ. ಅಲ್ಲದೆ—ಕರಿಯ ತಮ್ಮ ಜೀವಕ್ಕೆ ಅಪಾಯವಿಲ್ಲವೆಂದೂ ಬಲ್ಲ. ಮೇಲೆ ಕವಿದು ಬಿದ್ದ ಸೊಪ್ಪುಗಳಿಂದ ಒಳಗೆ ಬೆಳಕು ಇಲ್ಲದೆ ಹೋದರೂ, ಹುಲಿ, ಕೈಕಾಲು ಅದುರಿಸುತ್ತಿದ್ದುದರಿಂದ, ಅದರ ಆಟ ಮುಗಿಯದೆ ತಮಗೆ ಬಿಡುಗಡೆಯಿಲ್ಲ ಎಂದರಿತಿದ್ದ. ತಂದಿರಿಸಿದ್ದ ಕತ್ತಿಯನ್ನೆತ್ತಿ ಹಿಡಿದು ಹುಲಿಯ ಕಾಲುಗಳನ್ನು ಸವರಿದ; ಹೊಟ್ಟೆಗೆ ಚುಚ್ಚಿದ. ಆ ಒಂದೆರಡು ಕ್ಷಣ—ಹುಲಿ ಮಾಡಿದ ಘರ್ಜನೆ, ಮೈ ಅದುರಿಸಿದ ಬಗೆ, ಮಂಚ ಕುಲುಕಿದ ಬಗೆ, ಸ್ಮರಿಸಿಕೊಂಡಾಗ ಕರಿಯನಿಗೆ ಮೂವರ ಸಮಾಧಿ ಒಂದೇ ಕಡೆ ಆಯಿತೆಂದು ಅನಿಸಿತ್ತು. ಆಕಸ್ಮಿಕವಾಗಿ ಅವನ ಮೈಯೂ ಅಲ್ಪಸ್ವಲ್ಪ ಪರಚಿಹೋಯಿತು. ಅಂತು—ಕೆಲವು ನಿಮಿಷಗಳಲ್ಲಿ ಹುಲಿಯ ಧ್ವನಿ ಉಡುಗಿದುದನ್ನು ಕಂಡು, ಕರಿಯನಿಗೆ ಧೈರ್ಯವಾಯಿತು. ಅಲ್ಲಿಂದಲೇ ಬೊಬ್ಬಿಟ್ಟು, ಕೇರಿಯವರನ್ನು ಕೂಗಿದ. ಜತೆಯಲ್ಲಿ ಭಯಭೀತಿಯಿಂದ ಮುದುರಿ ಕುಳಿತ ಬಟ್ಯನಿಗೆ " ಹುಲಿ ಸತ್ತಿದೆ; ಹೆದರಬೇಡ " ಎಂದು ಎಷ್ಟು ಹೇಳಿದರೂ ಅವನ ಬಾಯಿಯಿಂದ ಮಾತ್ರ ಸೊಲ್ಲೇ ಹೊರಡದು. ಬಹು ಹೊತ್ತು ಆ ಹೊಂಡದಲ್ಲಿ ಕಾದು ಕುಳಿತರು ಅವರಿಬ್ಬರು. ಕೂಗಿ ಕರೆದು, ದಣಿವೂ ಬಂದಿತು.

ತಮ್ಮವರ ಬೊಬ್ಬೆಯನ್ನು ಕೇಳಿದರೂ, ಏನಾಗಿದೆಯೆಂದು ಊಹಿಸಲಾರರು, ಮನೆಯಲ್ಲಿ ಕಾದು ಕುಳಿತ ಊರಿನ ಜನಗಳು. ಮತ್ತೂ ಮತ್ತೂ ಕೂಗು ಕೇಳಿದಮೇಲೆ ನಾಲ್ಕೆಂಟು ಮಂದಿ ಕತ್ತಿ, ದೊಣ್ಣೆ, ಸೂಟೆಗಳನ್ನು ಹಿಡಿದು ಅಂಗಳಕ್ಕೆ ಬಂದರು. 'ಬನ್ನಿ, ಬನ್ನಿ' ಎಂಬ ಕರಿಯನ ಕೂಗು ಸ್ಪಷ್ಟವಾಗಿ ಕೇಳಿಸಿತು. " ಅವರೂ ಹೆದರಿ ಕೂಗುವುದೋ ಏನೋ! ಹುಲಿ

ಹತ್ತಿರದಲ್ಲೇ ಇದ್ದರೆ" ಎನ್ನುವವನೊಬ್ಬ. "ಹುಲಿ ಸತ್ತಿರಬೇಕು" ಎನ್ನುವವ ಮತ್ತೊಬ್ಬ. "ಗಂಡು, ಹೆಣ್ಣು ಎರಡೆರಡು ಹುಲಿ ಸೇರಿ ಬಂದಿದ್ದರೇನು ಗತಿ" ಎನ್ನುವವ ಮೂರನೆಯವ. ಅಂತು ಕತ್ತಲು ತೊಡಗುವಾಗ ಹುಲಿಯ ಶಿಕಾರಿ ಮುಗಿದಿದ್ದರೂ, ಎರಡು ಗಳಿಗೆ ಕಳೆದ ಮೇಲೆ, ಊರ ಜನರು ದೊಂದಿ ಹಿಡಿದು, ಬೊಬ್ಬಿರಿಯುತ್ತ, ಹುಲಿಯನ್ನಟ್ಟುವ ಧ್ವನಿ ಮಾಡುತ್ತ, ಕುಣಿಯ ಬಳಿಗೆ ಬಂದರು. ಬಂದು, ತಿರುಗಿ ಕರಿಯನ ಧ್ವನಿ ಕೇಳಿದರೂ ಹುಲಿಯ ಹೆಣವನ್ನು ಸಮೀಪಿಸುವುದಕ್ಕೇನೆ ಅಂಜಿಕೆ. ಮೇಲಿಂದ ಚಂದ್ರಪ್ರಕಾಶ ವಿಲ್ಲದೆ ಹೋಗಿದ್ದರೆ, ಬಟ್ಯ, ಕರಿಯ ಇಬ್ಬರೂ ಬೆಳಗಿನ ತನಕ ಅಲ್ಲೇ ಬಿಡಾರ ಹೂಡಬೇಕಿತ್ತು. ತಿಂಗಳು ಬೆಳಕು ಅವರಿಗೆ ಧೈರ್ಯಕೊಟ್ಟಿತು. ಮುಂದಿನ ಕೆಲಸ ಸಾಗಿತು. ಹುಲಿಯ ಹೆಣವನ್ನು ಎತ್ತಿ ತೆಗೆಯುವುದಕ್ಕೂ ಸುಲಭವಾಗಲಿಲ್ಲ. ಹುಲಿ ಸತ್ತಿದ್ದರೂ, ಅದರ ತೆರೆದ ಬಾಯಿ, ಚಾಚಿದ ನಾಲಿಗೆ, ಯಾರನ್ನೂ ಬೆದರಿಸುವಂತಿತ್ತು. ಸಾಹಸದಿಂದ ಅದನ್ನೆತ್ತಿ ಹಾಕಿದ ಮೇಲೆ, ಹೊಡೆಮುಂಚಕ್ಕೆ ಹಗ್ಗ ಹಾಕಿ, ನಾಲ್ಕೂ ಕಡೆಯಿಂದ ಎತ್ತಿ ತೆಗೆದ ಮೇಲೆ ಬಟ್ಯಗೌಡನಿಗೆ 'ತಾನು ಬದುಕಿದ್ದು ನಿಜ' ಎಂದು ಕಂಡಿತು. ಅಷ್ಟರೊಳಗೆ ಬೆವರಿನ ಸ್ನಾನ ಎಷ್ಟಾಗಿತ್ತೋ ಇಬ್ಬರಿಗೂ. ಕರಿಯಗಂತು ಇಲ್ಲದ ಹೆಮ್ಮೆ—ತಾನು ಮಾಡಿದ ಪ್ರಥಮ ಹುಲಿಶಿಕಾರಿಯಲ್ಲೇ ಗೆಲುವು ಪಡೆದಿದ್ದೇನೆಂದು. ಅವನ ಮೈ ಪರಚಿ ಗಾಯವಾಗಿದ್ದರೂ, ಆ ಗೊಡವೆಯೇ ಆತಗೆ ಬಂದಿರಲಿಲ್ಲ. ಅಂತು ಮದುವೆಯ ದಿಬ್ಬಣದಂತ—ಸೂಟೆ, ಗದ್ದಲ ಗಳಿಂದ ಕರಿಯನನ್ನು ಮೆರೆಯಿಸಿಕೊಂಡು ಮನೆಗೆ ಕೊಂಡೊಯ್ದರು. ಆಮೇಲೆಯೇ ಗುರುತಿಸಿದ್ದು ಅವನ ಎದೆ ಬೆನ್ನುಗಳಲ್ಲಾದ ಉಗುರಿನ ಗಾಯಗಳನ್ನು. ನಂಜು ಏರದಂತೆ ಏನೇನೋ ಎಣ್ಣೆ ಸೊಪ್ಪು ಕಾಯಿಸಿ, ಹಚ್ಚಿದರು. ಬೆಳಗಾಗುವ ತನಕ, ಹರಟೆಯ ಹಿಗ್ಗಿನಲ್ಲಿ ಕಳೆದರು. ಬೆಳಗಾದ ಮೇಲೆ ಮಾತ್ರ ಊರವರ ಧೈರ್ಯ ಹೇಳಲಾರದ್ದು. ಹೆಂಗಸರು, ಮಕ್ಕಳು, ಎಲ್ಲರೂ ಗುಂಪಾಗಿ ಹೋಗಿ ಸತ್ತ ಹುಲಿಯ ದರ್ಶನವನ್ನು ಪಡೆದರು. ಆಗ ಕರಿಯನನ್ನು ಹೊಗಳದವರಿಲ್ಲ. ಅವನದು ಎಳೆ ವಯಸ್ಸಿನ ಅಮಲು. "ಹುಲಿ ಕೊಲ್ಲುವುದೇನು ದೊಡ್ಡ ಕೆಲಸ! ನನಗೆ ಆನೆ ಹಿಡಿದು ಸವಾರಿ ಮಾಡಬೇಕೆಂದಿದೆ! ಆಮೇಲಾದರೆ, ಅದರ ಮೇಲೆಯೇ ಕೂತು ಶಿಕಾರಿ

ಮಾಡುತ್ತೇನೆ. ಆಗ ಇಂಥ ಹೊಂಡವೂ ಬೇಡ; ಹೊಡೆಮಂಚವೂ ಬೇಡ. ಎದುರೆದುರಿಗೆ ಬೇಟಿ" ಎಂದು ಬಡಾಯಿ ಕೊಚ್ಚಿದ.

ಆಮೇಲೆ ಕುಕ್ಕರಳ್ಳಿಯ ಜನರು, ಕರಿಯನನ್ನು ಕುರಿತು ಮಾತ ನಾಡುವಾಗಲೆಲ್ಲ 'ಕುಡಿಯರ ಪೈಕಿ ಇರುವುದು ಒಬ್ಬನೇ ಒಬ್ಬ—ಹುಲಿ ಕೊಂದ ಕರಿಯ' ಎನ್ನುತ್ತಲಿದ್ದರು.

ಅಂಥ ಕರಿಯಣ್ಣ ತನ್ನ ಮಲೆಗೆ ಮರಳಿ, ತನ್ನ ಸಾಹಸವನ್ನು ತಿಮ್ಮಗೆ ಬಣ್ಣಿಸಿ ಹೇಳಿದರೆ, ಆ ಹುಲಿಯ ಗಾತ್ರವನ್ನು ಬಣ್ಣಿಸಿದರೆ—ತಿಮ್ಮನಿಗೆ, ನಂಬಬೇಕೋ, ಬಿಡಬೇಕೋ—ಎಂಬ ಅನುಮಾನ. "ಹಾಗಾದರೆ ಇನ್ನೊಮ್ಮೆ ಶಿಕಾರಿಗೆ ಹೋಗುವಾಗ, ನಿನ್ನನ್ನು ಕರೆದುಕೊಂಡು ಹೋಗು ತ್ತೇನೆ" ಎನ್ನಬೇಕಾಯಿತು ಕರಿಯ.

## ಅಧ್ಯಾಯ ೧೭

ಕರಿಯ ತನ್ನ ಹುಟ್ಟೂರನ್ನು ಬಿಟ್ಟು, ಸ್ವತಂತ್ರವಾಗಿ ಎರಡು ಮಳೆ ಗಾಲಗಳನ್ನು ಕಳೆದನು. ತಿಮ್ಮ ಓಡಿಹೋಗಿ ಎರಡು ವರ್ಷಗಳು ಪೂರ್ಣ ವಾಗಿವೆ. ಆದರೆ ಎಂದಿನಂತೆ ಮಹಾಲಯ ಅಮಾವಾಸ್ಯೆ ಕಳೆದು ಮಲೆಗೆ ಬಂದ, ತಿರುಮಲಭಟ್ಟರಲ್ಲಿ ಅವರನ್ನು ಕುರಿತಾದ ಆಂತರಿಕ ದ್ವೇಷಭಾವ ಇಷ್ಟಿಷ್ಟೂ ಕಡಿಮೆಯಾಗಿರಲಿಲ್ಲ. ಅಲ್ಲದೆ ಈ ಬಾರಿ ಅವರು ಬರುವಾಗ ತುಸು ಆರೋಗ್ಯವೂ ಕೆಟ್ಟಿತ್ತು. ಆಗಾಗ ವಾತದ ಬೇನೆಗೆ ತುತ್ತಾಗುತ್ತಿದ್ದರು. ಆರೋಗ್ಯ ಕೆಟ್ಟದ್ದುದರಿಂದ ಸಿಟ್ಟು, ಸಿಡುಕು ಇನ್ನಷ್ಟು ಹೆಚ್ಚಾಗುವುದು ಸ್ವಾಭಾವಿಕ. ಇದೇ ರೀತಿಯಲ್ಲಿ ತನ್ನ ಆರೋಗ್ಯ ಕೆಡುತ್ತಾ ಹೋದರೆ ಮಲೆಯ ಕಾರುಭಾರಗಳನ್ನೆಲ್ಲ ಮಗನಿಗೆ ವಹಿಸಿಕೊಡಬೇಕಾಗುತ್ತದೆ— ಎಂಬ ಚಿಂತೆ ಬೇರೆ. ಆದರೂ ಮಲೆಯಲ್ಲಿ ತಮ್ಮ ಕಾಮುಕ ಪ್ರವೃತ್ತಿಗೆ ಬೇಕಾದ ಇಂಬು ದೊರಕಿಸಿಕೊಳ್ಳಬಲ್ಲ ಅವರು, ಮಲೆಯ ಸುಖದ ದಿನ ಗಳನ್ನು ಮರೆಯುವುದಕ್ಕೆ ಸಿದ್ಧರಾಗಿರಲಿಲ್ಲ.

ಅವರ ಮಗ ರಾಮಚಂದ್ರಯ್ಯ ನಡುವಯಸ್ಸಿನ ಹುಡುಗ. ವಯಸ್ಸು ಇಪ್ಪತ್ತುನಾಲ್ಕು ವರ್ಷ. ಆರೋಗ್ಯವಂತ ಶರೀರ, ಆರೋಗ್ಯವಂತ ಮನಸ್ಸು —ಎರಡೂ ಅವನಿಗಿತ್ತು. ತಂದೆಯ ದುರಾಶೆಗಳ ಸೋಂಕು ಅವನಿಗೆ ಬೀಸಿ

ರಲಿಲ್ಲ. ಮಲೆಗಳನ್ನು ನೋಡಬೇಕೆಂಬ ಹಂಬಲ ಅವನಿಗೂ ಇತ್ತು. ತಂದೆ ಮಲೆಯಲ್ಲಿ ಹೊಸ ಮನೆ ಕಟ್ಟಿದ್ದಾರೆ; ಮಲೆಯ ಜೀವನ ಕಷ್ಟ ಅನ್ನುತ್ತಾರೆ. ಆದರೂ ತಾವು ಒಬ್ಬರೇ ತೈನಾತಿ ಕರೆದುಕೊಂಡು ಹೋಗಿಬರುತ್ತಿದ್ದಾರೆ. ಆರೋಗ್ಯ ಚೆನ್ನಾಗಿಲ್ಲದಾಗ ಒಬ್ಬರೇ ಹಾಗೆ ಹೋಗುವುದು ಅವನಿಗೆ ಸಮಾಧಾನವಿಲ್ಲ. ಆ ನೆಪದಿಂದ ತಂದೆಯನ್ನು ಒತ್ತಾಯಪಡಿಸಿ, ಅವರ ಜತೆಗೆ ತಾನೂ ಈ ಬಾರಿ ಹೊರಟುಬಂದ. ಬಯಲು ಗುಡ್ಡಗಳಲ್ಲಿ ವಾಸಿಸುತ್ತಿದ್ದ ಅವನ ಕಣ್ಣಿಗೆ, ಕಿರಿಮಲೆಯ ತಮ್ಮ ವಿಶಾಲ ರಾಜ್ಯ, ಒಂದು ಸುಂದರ ಸ್ವರ್ಗವಾಗಿ ಕಾಣಿಸಿದುದರಲ್ಲಿ ಆಶ್ಚರ್ಯವಿಲ್ಲ. ಅಲ್ಲದೆ ಅವನಿಗೆ ಬೇಟೆಯ ಹುಚ್ಚೂ ಸ್ವಲ್ಪ ಇತ್ತು. ತಮ್ಮ ಮಲೆಯಲ್ಲಿ ಕಾಡುಮೃಗಗಳು ಸ್ವಚ್ಛಂದವಾಗಿ ಅಲೆದಾಡುತ್ತವೆ, ಎಂದು ಕೇಳಿದ ಅವನಿಗೆ, ಇವುಗಳನ್ನೆಲ್ಲ ಕಾಣಬೇಕು ಎಂಬ ಕುತೂಹಲವೂ ಉಂಟಾಯಿತು. ತಂದೆ ತಿರುಮಲಭಟ್ಟರು, ಅವನನ್ನು ಕರೆದುಕೊಂಡು ತಮ್ಮ ಎರಡೂ ಮಲೆಯ ತೋಟಗಳನ್ನು ತೋರಿಸಿಕೊಂಡು ಬಂದರು. ಅನಂತರ ರಾಮಚಂದ್ರ ಅವನ ಪಾಡಿಗೆ ಅವನೇ ಕುಡಿಯ ಕೆಲಸಗಾರರ ಹಿಂದೆ ಅಲೆದಾಡುತ್ತಾನೆ. ಅವರ ಬೇಟೆಯ ವಿಧಾನಗಳನ್ನು ಹೋಗಿ, ನೋಡಿ, ಕೇಳಿ ತಿಳಿದುಕೊಳ್ಳುತ್ತಾನೆ. ಪ್ರತಿಯೊಂದನ್ನು 'ಎಷ್ಟು ಚೆನ್ನ, ಎಷ್ಟು ಚೆನ್ನ' ಎಂಬ ಸಂತೋಷದಿಂದಲೇ ನೋಡುತ್ತಾನೆ. ಮಗನ ಈ ಎಲ್ಲ ಸಂತೋಷಗಳಿಗೆ ತಿರುಮಲಭಟ್ಟರು ನುರಿತವರಲ್ಲ. ಅವರ ಜೀವನದ ಬಗೆಯೇ ಬೇರೆ. ಹೆಣ್ಣು, ಹೊನ್ನುಗಳೆರಡೇ ಅವರ ಸುಖದ ಕಲ್ಪನೆಯನ್ನು ಕೆರಳುವ ವಸ್ತುಗಳಾಗಿದ್ದುವು. ಮಗನ ಪ್ರಕೃತಿಯ ಹುಚ್ಚು, ಎಳೆತನದ ಮಕ್ಕಳಾಟಿಕೆ ಎಂದೇ ತಿಳಿದವರು ಅವರು.

ತುಕ್ರ ಇನ್ನೂ ಅವರ ಆಪ್ತದೂತನಾಗಿದ್ದಾನೆ. ಬೂದನೊಡನೆ ಹೇಳಲಾರದಾದ ಕೆಲಸಗಳನ್ನೆಲ್ಲ ಸಾಧಿಸಿ ಕೊಡಬೇಕಾದವನು ಅವನೇ. ಕಳೆದ ಬಾರಿ ಬಂದಾಗ ಅವನೊಡನೆ "ಏನು ತುಕ್ರ, ನಮ್ಮ ಮಲೆಯಿಂದ ತಪ್ಪಿಸಿಕೊಂಡು ಹೋದ ಕರಿಯ, ತಿಮ್ಮರನ್ನು ನಿಮಗೆ ಹುಡುಕಲು ಆಗಲಿಲ್ಲ ಅಂದರೆ ಏನು ನಾಚಿಕೆಗೇಡು" ಎಂದಿದ್ದರು. ಇನ್ನೊಮ್ಮೆ "ನೋಡು, ಆ ಇಬ್ಬರ ಸೊಕ್ಕನ್ನು ಮುರಿಯದಿದ್ದರೆ ನನಗಿಷ್ಟು ಸಮಾಧಾನವಿಲ್ಲ. ಹೇಗಾದರೂ ಹುಡುಕಿ, ಅವರನ್ನು ಕರೆದು ತಂದು, ಇಲ್ಲಿ ಬಿಟ್ಟೆಯಾದರೆ—ಚೆನ್ನಾಗಿ

ಬುದ್ಧಿ ಕಲಿಸಬಹುದಿತ್ತು” ಎಂದೂ ಅಂದಿದ್ದರು. ‘ಯಾಕಿಷ್ಟು ಹಗೆ’ ಎಂದು ಊಹಿಸಲಾರದ ತುಕ್ರನ ಮುಂದೆ, ಹಿಂದಿನ ಬಡಿಗೆ ಏಟಿನ ಪ್ರಕರಣ ವನ್ನೂ ಅವರು ಗುಟ್ಟಾಗಿ ಹೇಳಿದ್ದರು. “ನಾನು ನಿನ್ನೊಬ್ಬನಿಗೇ ಅದನ್ನ ಹೇಳಿದ್ದು. ಆ ದಿನ ಸುಮ್ಮನೆ ನನ್ನಷ್ಟಕ್ಕೆ ಹೊಳೆಯಿಂದ ಮನೆಗೆ ಬರುವಾಗ, ತಿಮ್ಮ ಬಡಿಗೆ ಬೀಸಿ, ಅಷ್ಟೆಲ್ಲ ಮಾಡಿದ. ನಾನು ಧನಿಯಾಗಿದ್ದು, ಆ ಅವಮಾನ, ನೋವು ಸಹಿಸಿಕೊಂಡಿರಬೇಕೆಂದರೆ ಹೇಗೆ? ಅವನಿಗೆ ಕರಿಯನ ಬೆಂಬಲವೂ ಇರಬೇಕೆಂದು ಕಾಣುತ್ತದೆ. ಧನಿಯಾದ ನನ್ನನ್ನು ಅವಮಾನಿ ಸಿದ ಅವರಿಬ್ಬರನ್ನು ದಂಡಿಸದೆ ಹೋದರೆ ನಾನಿದ್ದೇನು ಫಲ?” ಎಂದು ಅಂದರು. ತುಕ್ರನಿಗೂ ತಿಮ್ಮನ ಮೇಲೆ ಹಗೆತನ ಕಡಿಮೆ ಇದ್ದಿರಲಿಲ್ಲ. ಕರಿಯ, ಗುರಿಕಾರಿಕೆ ಬಿಡುವಾಗ ಧನಿಗಳ ಮೇಲೆ ಚುಚ್ಚಿ ನುಡಿದ ಮಾತುಗಳನ್ನು, ಆತ ಮರೆತಿರಲಿಲ್ಲ. ಆತನಿಗೂ ತನ್ನ ಮೇಲೆ ಹಗೆತನ ಉಂಟೆಂದು ಊಹಿಸಿ ಕೊಂಡಿದ್ದ. ಆದುದರಿಂದಲೇ ಕೆಂಪಿಯು ಸತ್ತಾಗ, ಅವನು ಬಂದುಹೋದ ನೆಂಬ ಸುದ್ದಿಯನ್ನು ಧನಿಗೆ ತಿಳಿಸಿದ.

“ನಾನು ಸುಮ್ಮನಿದ್ದೇನೆಂದು ತಿಳಿಯಬೇಡಿ. ಎಷ್ಟೆಷ್ಟೋ ಹುಡುಕಿ ದ್ದೇನೆ. ಇನ್ನು ಬೇರೆ ದಾರಿಯನ್ನೇ ಯೋಚಿಸಬೇಕು ತಿಮ್ಮನ ಮಾವ ನೊಟ್ಟಿಗೆ ಒಳ್ಳೆತನ ನಟಿಸಿ, ಅವನಿಂದ, ಅಳಿಯ ಮಲೆಗೆ ಬಂದಿರುವ ಹಾಗೆ ಹೇಳಿಸಬೇಕು. ಆದೀತು—ಇಲ್ಲದೆ ಹೋದರೆ, ಮೂಲೆಗುಂಪಿನ ಜಾತ್ರೆಗೆ ಅವರು ಬಾರದೆ ಹೋಗಲಾರರು. ಆಗ ಅವರನ್ನು ಬಲಿ ಹಾಕುವ” ಎಂದು ಉಪಾಯ ಸೂಚಿಸಿದ. ತುಕ್ರ ಹಿರಿ ಮಲೆಗೆ ಹೋದ; ಚೋಮನೊಡನೆ ಆಪ್ತತನ ನಟಿಸಿದ. “ತಿಮ್ಮನ ಮೇಲೆ ಧನಿಗಳಿಗೆ ಹಗೆಯಿಲ್ಲ, ಯಾಕೆ ಸುಮ್ಮನೆ ಕಾಡಿನಲ್ಲಿ ಅಲೆದಾಡಬೇಕು—ಅವನನ್ನು ಕರೆಯಿಸು” ಎಂದು ಬೋಧಿಸಿದ. ಚೋಮ “ಹೂಂ” ಗುಟ್ಟಿದ. ಮೂರು ತಿಂಗಳ ಅವಧಿಯಲ್ಲಿ, ತುಕ್ರ ಅದೇ ಅದೇ ಮಾತು ಆಡಿದ್ದರಿಂದ ಇಲ್ಲದ ಅನುಮಾನ ಚೋಮನಿಗೆ ಬಂದಿತು. ಇಷ್ಟೆಲ್ಲ ಹೇಳಬೇಕಾದರೆ, ಏನಾದರೊಂದು ಕಾರಣವಿರಬೇಕು. ತುಕ್ರನನ್ನು ನಂಬುವುದು ಕಷ್ಟ—ಎಂಬ ಸಂಶಯ ತಲೆದೋರಿತು. ಹೀಗಾಗಿ ತನ್ನ ಮಗಳನ್ನು, ಅಳಿಯನನ್ನು ಕಾಣುವುದಕ್ಕೆ ಅವನೇನೆ ಕದ್ದು, ಹೋಗಿ, ಮೊಮ್ಮಗುವಿನ ಮುಖ ನೋಡಿ ಮರಳಿದನು. ಮಾತ್ರವಲ್ಲ, ಸ್ವಲ್ಪ ಸಮಯ,

'ಮೂಲೆಗುಂಪಿನ ಜಾತ್ರೆಗೂ ನೀವು ಬಾರದಿರುವುದು ಒಳಿತು' ಎಂದು ಅವರಿಗೆ ತಿಳಿಸಿಯೂ ಬಂದನು.

ಧನಿಗಳ ನಿಜವಾದ ಬಂಟನಾದ ತುಕ್ರ, ಆ ಮಲೆಯ ರಾಜ್ಯದಲ್ಲಿ ಬಹುದೂರ ಅವರಿಗಾಗಿ ಹುಡುಕಾಡಿದ. ನೆರಿಯ ಮಲೆಗೂ ಹೋಗಿಬಂದ. ಕುಡಿಯರ ಕುಲ ಕಂಡಲ್ಲೆಲ್ಲ ವಿಚಾರಿಸಿದ. ಆದರೆ ಅವನ ತಲೆಯಲ್ಲಿ, ಆ ಎರಡುಮೂರು ಮಂದಿ ಸ್ವತಂತ್ರರಾಗಿ, ಮನುಷ್ಯರ ಎಟುಕಿಗೆ ಸಿಗದ ತಾವಿನಲ್ಲಿ ನೆಲೆಸಿದ್ದಾರು—ಎಂಬ ಅನುಮಾನ ಬರಲಿಲ್ಲ. ಅನಂತರ ಮೂಲೆಗುಂಪಿನ ಜಾತ್ರೆಯೂ ಬಂದಿತು. ಅಲ್ಲಿಗೂ ಅವರು ಬಂದಂತಿಲ್ಲ. ಧನಿಗಳೂ ವಿಚಾರಿಸಿದರು. ಚೋಮನ ಬೆನ್ನಹಿಂದೆ ಕಾವಲಿಟ್ಟು, ಅವನನ್ನು ಕದ್ದು ನೋಡುವುದಕ್ಕಾದರೂ ಅಳಿಯ ಮಗಳು ಬಂದಾರೆಯೋ, ಎಂದು ಹುಡುಕಿದರು. ಅದು ನಿಷ್ಫಲವಾಯಿತು. ಹೀಗಾಗಿ ಈ ವರ್ಷ ಮಲೆಗೆ ಬಂದ ಧನಿಗಳ ಮುಂದೆ ಏನು ಹೇಳುವುದಕ್ಕೂ ಅವನಿಗೆ ತೋಚಲಿಲ್ಲ. "ಪ್ರಾಯಶಃ ನಮ್ಮ ಸೀಮೆಯನ್ನೇ ಬಿಟ್ಟು, ಸುಬ್ರಹ್ಮಣ್ಯಕ್ಕೋ, ಮೈಸೂರು ಸೀಮೆಗೋ ಅವರು ಹೋಗಿರಬೇಕು" ಎಂದು ಹೇಳಿದ. ಆದರೆ ಅದರಿಂದ ಧನಿಗೆ ತೃಪ್ತಿಯಾಗಲಿಲ್ಲ. "ನೀನಷ್ಟು ವ್ಯರ್ಥ ಎಂದು ನಾನು ತಿಳಿದಿರಲಿಲ್ಲ" ಎಂದು ಅವರು ನುಡಿದರು. ಅದರ ಅರ್ಥ ತುಕ್ರ, ಬೇರೆಯೇ ಮಾಡಿಕೊಂಡ. ಅವನಲ್ಲಿಯೂ ಅನುಮಾನ ಕೆದರಿತು. 'ಗಿಡ್ಡಿಯ ದೆಸೆಯಿಂದ ಉಂಟಾದ ಆಸೆ, ಧನಿಗಳಿಗೆ ಈ ಹುಚ್ಚನ್ನು ಹಿಡಿಸಿದೆ' ಎಂದು ಆತ ತರ್ಕಿಸಿದ. ಆದರೂ ತಾನು ಹೋದಲ್ಲೆಲ್ಲ, ತಿಮ್ಮ ಕರಿಯರ ಸುದ್ದಿ, ಸುಳಿವುಗಳು ಸಿಕ್ಕಿಯಾವೇ—ಎಂದು ವಿಚಾರಿಸುತ್ತಲೇ ಇದ್ದ.

ಆ ಬಾರಿಯೇ, ತಿರುಮಲಧನಿಗಳ ಯಾತ್ರೆ ಮಲೆಗೆ ಆದದ್ದು ಕೊನೆಯದು. ಅಲ್ಲಿಂದ ಊರಿಗೆ ಹೊರಡುವಾಗ, ಅವರ ವಾತ ಜೋರಾಗಿ, ಮೂಲೆಗುಂಪಿಗೆ ಅವರನ್ನು ಹೊತ್ತುಕೊಂಡು ಹೋಗಬೇಕಾಯಿತು. ಅನಂತರ ನಡೆದ ಮೂಲೆಗುಂಪಿನ ಜಾತ್ರೆಗೆ ಅವರು ಬರಲಿಲ್ಲ. ಅವರ ಮಗ ರಾಮಚಂದ್ರಯ್ಯ ಬಂದು, ಕುಡಿಯರಿಗೆ ಹಚ್ಚಡ ಕೊಟ್ಟರು. ಮುಂದೆ ಮಲೆಗೆ ಬಂದು ಹೋಗುವ ಕೆಲಸ ಆ ಹುಡುಗನದ್ದಾಯಿತು. ರಾಮಚಂದ್ರಯ್ಯನೇ ಆಗಾಗ ಮಲೆಗೆ ಬಂದು ತಂದೆಯ ಹೊಣೆಯನ್ನು ಹೊರುತ್ತಿದ್ದರು; ಏಲಕ್ಕಿ

ಸಾಗಿಸುತ್ತಿದ್ದರು ಎಷ್ಟೋ ಬಾರಿ ಹೆಂಡತಿಯೊಡನೆ ಮಲೆಗೆ ಬಂದು, ನಾಲ್ಕು ದಿನ ಸುಖವಾಗಿದ್ದು, ಎಲ್ಲರೊಡನೆಯೂ ಚೆನ್ನಾಗಿ ಮಾತನಾಡಿ ಹೋಗುತ್ತಿದ್ದರು. ಅದರಿಂದ ' ತಂದೆ ಮಕ್ಕಳಲ್ಲಿ ಎಷ್ಟು ತಾರತಮ್ಯ ! ' ಎಂಬ ಭಾವನೆ ಕಿರಿ ಮಲೆಯ ಜನಗಳಲ್ಲಿ ಉದಯಿಸದೆ ಹೋಗಲಿಲ್ಲ.

ಇತ್ತ ಕರಿಯ, ತಿಮ್ಮರ ಸಂಸಾರ ಎಂದಿನಂತೆಯೆ ಸಾಗಿತು. ಕುಮರಿ ಸ್ವಲ್ಪ ಹೆಚ್ಚಾಗಿ ಬೆಳೆದರು; ಬಿಡುವಿನಲ್ಲಿ ಇನ್ನಷ್ಟು ಬೇಟೆಯಾಡಿದರು. ಕರಿಯ, ಗಿಡ್ಡಿಯ ಮಗುವನ್ನು ಹೊತ್ತುಕೊಂಡು, ಮಗುವಿನೊಡನೆ ತೊದಲು ಮಾತನಾಡುತ್ತ, ಮೂವರ ಸಂಸಾರ ನಾಲ್ಕಾದುದಕ್ಕೆ ಹೆಮ್ಮೆಪಟ್ಟ. ದಿನ ಹೋದಂತೆ ತಾನು, ಮದುವೆಯಾಗಬೇಕೆಂಬ ಹಂಬಲ ಅವನಲ್ಲಿ ಹುಟ್ಟಿಕೊಂಡಿತು. ಆ ಯೋಚನೆ ಮರೆಯುವುದಕ್ಕೋ ಏನೋ, ಬೇಟೆಯ ಹುಚ್ಚಿನಿಂದ ಹೆಚ್ಚಾಗಿ ಅಲೆದಾಡಿದ. ಕುಕ್ಕರಳ್ಳಿಯ ಬಯಲಲ್ಲಿ ಕೋಣ ಸಾಯಲಿ, ಕರು ಸಾಯಲಿ, ಇವನಿಗೆ ನೇರವಾಗಿ ಕರೆ ಬರುತ್ತದ. ಆ ಸುದ್ದಿ ಕೇಳುತ್ತಲೇ, ಕಿವಿ ನಿಮಿರಿಸಿಕೊಂಡು ಓಡುತ್ತಾನೆ. ಚಿರತೆ, ಹುಲಿಗಳ ಬೇಟೆಗೆ ತನ್ನ ಹಳೆಯ ಕ್ರಮದಲ್ಲಿ ಹೊಂಚುಹಾಕುತ್ತಾನೆ. ಆ ಒಂದು ವರ್ಷವೇ ಮೂರು ಮೂರು ಚಿರತೆಗಳನ್ನು ಹೊಡೆದ ಕೀರ್ತಿ ಅವನದ್ದು. ಒಮ್ಮೆ—ಈತ ತನ್ನ ತಾವಿಗೆ ಸಮನಾದ ಮುಚ್ಚು ಮರೆ ಮಾಡಿಕೊಳ್ಳುವ ಮೊದಲೇ, ಚಿರತೆ ಅವನಿರುವ ತಾವನ್ನು ಕಂಡಿತು. ಅದು ಶವ ಮೂಸಿ ನೋಡದೆ ಮರಳಿದಾಗ, ಈತ ಆತುರದಿಂದ ಅದರ ಕಡೆಗೆ ಗುಂಡು ಹಾರಿಸಿದ. ಅರ್ಧ ಏಟು ತಿಂದು ಆ ಚಿರತೆ, ಹೊರಟೇಹೋಯಿತು. ಆಗ ಕೇರಿಯವರಿಗೆ ಧೈರ್ಯಹೇಳಿ ಅವರನ್ನು ಕಟ್ಟಿಕೊಂಡು, ಕತ್ತಿ, ಈಟಿಗಳನ್ನು ಹಿಡಿದು ಚಿರತೆಯ ರಕ್ತದ ಜಾಡನ್ನು ಹಿಂಬಾಲಿಸಿ, ಕಾಡಲ್ಲಿ ಅಲೆದಾಡಿದ. ಗುಂಪಿನ ಜನ ಒಟ್ಟಿಗೆ ಅಲೆದಾಡಲಾರದೆ, ಅಲ್ಲಲ್ಲಿ ಚದರಿ ' ಹುಯ್ಯೋ, ಹುಯ್ಯೋ ' ಎಂದು ಗದ್ದಲವೆಬ್ಬಿಸಿತು. ಅರ್ಧ ಗಾಯಗೊಂಡು ರಕ್ತಸ್ರಾವವಾಗಿ ದಣಿದು ಕಂಗಾಲಾದ ಆ ಚಿರತೆ ಪೊದೆಯೊಂದರ ಒಳಗೆ ಅವಿತುಕೊಂಡಿತು. ಜನರ ಗದ್ದಲ ಕೇಳಿ ಧಾವಿಸಿತು. ಮೂರು ನಾಲ್ಕು ಮಂದಿ ಅದನ್ನು ಅಟ್ಟಿಕೊಂಡು ಹೋದರು. ಆ ಗುಂಪಿನ ಮುಂಗಾವಲಿಗೆ ಕರಿಯ ನಿಂತಿದ್ದ. ಕೈಯಲ್ಲೊಂದು ನೀಳವಾದ ಖಡ್ಗದಂತಿದ್ದ ಕತ್ತಿಯೂ ಇತ್ತು. ಅದನ್ನು ಹಿಡಿದು, ಮುಂದಾಲೋಚನೆಯಿಲ್ಲದೆ ಆತ

ಧಾವಿಸುವಾಗ ಚಿರತೆ, ಅವನ ಮೇಲೆಯೇ ನೆಗೆಯಿತು ಈತ ಕೈ ಬೀಸಿದ ಪೆಟ್ಟಿಗೆ ಚಿರತೆ ಗಾಯಗೊಂಡು ಕೆಳಕ್ಕೆ ಬಿದ್ದರೂ, ಅದು ಬಿದ್ದ ಭರಕ್ಕೆ ಇವನನ್ನೂ ಉರುಳಿಸಿತು. ಒಂದೆರಡು ನಿಮಿಷಗಳ ಕಾಲ ಈತ ಚಿರತೆಯೊಡನೆ ಮಾಡಿದ ಹೋರಾಟ—ಯಾರಿಗೂ ಕೀರ್ತಿ ತರಬೇಕು. ಚಿರತೆಯೇನೋ ಸತ್ತಿತು. ಆದರೆ ಕರಿಯನ ಮೈ ಪರಚಿ ರಕ್ತದ ಸ್ನಾನವಾಗಿತ್ತು. ಗಾಯಗೊಂಡ ಕರಿಯ ಬಟ್ಯನ ಮನೆಯಲ್ಲಿ ಹದಿನೈದು ದಿನಗಳ ಉಪಚಾರ ಪಡೆದು, ಆಮೇಲೆಯೇ ಮಾಲಿಗೆ ಮರಳಿದ್ದು. ಆ ಘಟನೆಯಾದ ಮೇಲಂತೂ ಕರಿಯನ ಮನಸ್ಸಿನಲ್ಲಿ ತನ್ನ ಬೇಟೆಗೆ ಆನೆ ವಾಹನವಾಗಬೇಕೆಂಬ ಆಸೆ ಹುಟ್ಟಿತು. ಆದರೆ ತನಗೆ ಆನೆ ಹಿಡಿಯಲು, ಪಳಗಿಸಲು ಬಂದೀತೆ—ಎಂಬ ವಿಚಾರ ಮಾತ್ರ ಅವನಿಗೆ ತಿಳಿಯದ್ದು. ಯಾವುದೋ ಒಂದು ವಿಚಿತ್ರ ವಿಧಿ ಅವನ ಈ ಆಸೆಯನ್ನು ಸಹ ಪೂರೈಸೀತೆಂದು ಆತ ಎಣಿಸಿರಲಿಲ್ಲ.

ಕರಿಯ ಸ್ವತಂತ್ರನಾದ ಮೂರನೆಯ ಮಳೆಗಾಲ ಬಂದಿತು; ಆ ಮಳೆಗಾಲವೆಂದರೆ ಮಳೆಗಾಲವೇ! ಬೇಸಗೆಯಲ್ಲಿ ತೊಡಗಿದ ಮಳೆ ಒಂದು ದಿನವೂ ಬಿಡದೆ, ಹುಚ್ಚುಕಟ್ಟಿ ಅಹರ್ನಿಶಿ ಬಡಿಯಬೇಕೇ? ಕರಿಯ ಮಲೆ ಮುಗಿಲಿನಿಂದ ಕವಿಯದ ದಿನವಿಲ್ಲ, ರಾತ್ರಿಯಿಲ್ಲ; ಮಳೆಯ ಆರ್ಭಟೆ ಕೇಳದ ಗಳಿಗೆಯಿಲ್ಲ. ಬಿರುಗಾಳಿಯ ಒತ್ತಡಕ್ಕೆ ರೆಂಬೆ, ಕೊಂಬೆ ಮುರಿದುಕೊಳ್ಳದ ಮರವಿಲ್ಲ. ಅವರ ಕುಮರಿ ಬೆಳೆಯೋ—ಗಾಳಿಯ ಭರಕ್ಕೆ ಬೆಳೆಯುವ ಮೊದಲೇ, ನೆಲಸಮವಾಯಿತು. ಒಂದು ವರ್ಷದ ಕೃಷಿಯೆಲ್ಲ ವ್ಯರ್ಥವಾಯಿತು. ಈ ವರ್ಷ ಕೆಳಗಿನವರು ತಮಗೆ ಬತ್ತ ಕೊಟ್ಟರೆ ಉಂಟು—ಎಂದು ಚಿಂತಿಸಬೇಕಾಯಿತು ತಿಮ್ಮ, ಕರಿಯರು. ಏನಿಲ್ಲದೆ ಹೋದರೆ ಗಡ್ಡೆಗೆಣಸಿದೆ ಎಂಬ ಧೈರ್ಯವಿದ್ದರೂ ಒಂದು ಹೊತ್ತಾದರೂ ಅನ್ನ ತಿನ್ನಬೇಡವೇ? ಮಳೆ ಹೆಚ್ಚಾದುದರಿಂದ ಏಲಕ್ಕಿ ಬುಡಗಳೆಲ್ಲ ಬರಿದಾಗಿದ್ದುವು. ಹಾಗೂ ಬರುವ ಲಾಭವಿಲ್ಲ. ಆ ಚಳಿಗೆ ಮೈ ಕಾಸಿಕೊಳ್ಳೋಣ—ಎಂದರೆ ಕೂಡಿಟ್ಟ ಕಟ್ಟಿಗೆಯೆಲ್ಲ ಮುಗಿಯಿತು; ನಿತ್ಯ ತರುವ ಕಟ್ಟಿಗೆ ಉರಿಯಲಾರದಷ್ಟು ತೇವಗೊಂಡಿತ್ತು. ಬೇಸರ ಕಳೆಯುವುದಕ್ಕೂ ಹೊರಗೆ ಆಡ್ಡಾಡಲು ಬಾರದಷ್ಟು ಗಾಳಿ, ಮಳೆ. ಅವರಿಗೂ, ಮಲೆಯ ವಾಸ ನರಕವಾಸ ಎಂದನಿಸಿದ್ದು—ಆ ವರ್ಷವೇ, ಗಿಡ್ಡಿಗಂತು ತುಂಬ ಕಷ್ಟವಾಯಿತು. ಒಂದು

ದಿನವಾದರೂ ಬಿಸಿಲು ಕಾಣುವುದಕ್ಕಿಲ್ಲ. ಮಗುವನ್ನು ಹೊರಕ್ಕೆ ತಂದು ನಲಿದಾಡುವುದಕ್ಕಿಲ್ಲ. 'ಮಳೆ ಒಂದಿಷ್ಟು ಬಿಟ್ಟರೆ, ನೆಟ್ಟಗೆ ಕುಕ್ಕರಳ್ಳಿಗೆ ಹೋಗಿ ಎಂಟು ದಿನ ಕೂತುಬಿಡುವ. ಹೇಗೂ ಈ ವರ್ಷ ಬತ್ತ ಕೊಯ್ಯುವ ಕೆಲಸವಿಲ್ಲ. ಹೋಗಿ ಕೆಳಗಿನವರ ಕೊಯ್ಲಿಗೆ ಸಹಾಯ ಮಾಡಿದರೆ, ಬಟ್ಯ ಗೌಡನಂತಹರು ದಮ್ಮಯ್ಯ ಎಂದು ದಿನಕ್ಕೆರಡು ಸೇರು ಬತ್ತ ಕೊಟ್ಟಾರು' ಎಂದು ಯೋಚಿಸುವಂತಾಯಿತು.

ಶ್ರಾವಣಮಾಸ ಕಳೆಯುತ್ತಲೇ ಇಂದ್ರದೇವನಿಗೆ ಬೇಸರ ಬಂದಿತೋ ಏನೋ. ಒಮ್ಮೆಂದೊಮ್ಮೆಗೆ, ಬಾನಿನಲ್ಲಿ ಮುಗಿಲು ಮಾಯವಾಯಿತು. ಬಿಸಿಲು ಪರ್ವತಾವಳಿಯ ಮೇಲೆ ನಲಿದಾಡತೊಡಗಿತು. ಅಷ್ಟೇ ಉಕ್ಕು ಮಲೆವಾಸಿಗಳ ಮನದಲ್ಲೂ ತುಂಬತೊಡಗಿತು. ಕರಿಯ, ತಿಮ್ಮ ಇಬ್ಬರೂ ಗವಿಯ ತಾವನ್ನು ಬಿಟ್ಟು ಬೆಳಗಿಂದ ಸಂಜೆಯ ತನಕ ಕೆಲಸವಿಲ್ಲದೆ ಪೈಗಳ್ಳರಂತೆ ಅಲೆದಾಡಿದ ದಿವಸ ಅದು. ತಮ್ಮ ಜಾಗವನ್ನೆಲ್ಲ ಸುತ್ತಿ ಬಂದರು. ಬೆಟ್ಟವನ್ನೆಲ್ಲ ನೋಡಿಕೊಂಡು ಬಂದರು.

ಮಳೆಗಾಲದ ಅವಾಂತರದ ಚಿತ್ರವನ್ನು ಪ್ರತ್ಯಕ್ಷ ಕಂಡುಬಂದರು. ಅಲ್ಲಲ್ಲಿ ಬುಡಮೇಲಾಗಿ ಉರುಳಿದ ಮರಗಳ ಸಂಖ್ಯೆ ಅಪರಿಮಿತವಾಗಿತ್ತು. ಅವರ ಮನೆ ಗವಿಯ ಮನೆಯಾಗಿರದಿದ್ದರೆ, ಕಟ್ಟಿದ ಮನೆಯಾಗಿದ್ದಲ್ಲಿ ಎಂದೇ ಅದು ಗಾಳಿ ಪಾಲಾಗುತಿತ್ತು—ಎಂದು ತೋರಿತು. ಅವರಿಬ್ಬರು ಇನ್ನೂ ಒಂದು ಹೆಚ್ಚಿನ ನೋಟವನ್ನು ಕಂಡರು. ತಮ್ಮ ಆಚೀಚಿನ ಮಲೆಗಳಲ್ಲಿ ಹರಿಯುತ್ತಿದ್ದ ಅಬ್ಬಿಗಳು, ಜಲಪಾತಗಳು, ನಿತ್ಯಕ್ಕಿಂತ ಹತ್ತು ಮಡಿ ಉಕ್ಕಿನಿಂದ ಬೀಳುತ್ತಿದ್ದುವು. ಅಷ್ಟೇ ಅಲ್ಲ, ಸಂಪೂರ್ಣ ಹಸುರಾದ ಬೆಟ್ಟದ ಗೋಡೆಗಳಲ್ಲಿ ಕೆಂಪು ಬಣ್ಣದ ಮುಕ್ಕುಗಳು ಹಲವೆಡೆ ಕಾಣಿಸುತ್ತಿದ್ದುವು. ಮಳೆ ಹೆಚ್ಚಿ, ನೀರ ಒರತೆ ಪ್ರಾಪ್ತಿಸಿ, ಬೆಟ್ಟದ ಮಗ್ಗಲುಗಳು ಎಷ್ಟೋ ಕಡೆಗಳಲ್ಲಿ ಜರಿದು, ಕುಸಿದು ಮುಕ್ಕುಗೊಂಡಿದ್ದುವು. ಇಂದ್ರ ವಜ್ರಾಯುಧ ಹಿಡಿದು ಬೆಟ್ಟಕ್ಕೆ ಬಡಿದುಂಟಾದ ಹೊಸ ಗಾಯಗಳಂತೆ ಕಾಣಿಸುತ್ತಿದ್ದುವು ಅವು. ತಿಮ್ಮ ಅನ್ನುತ್ತಾನೆ "ಯಾವ ವರ್ಷವೂ ಇಷ್ಟು ಹೆಚ್ಚಾಗಿ ಘಟ್ಟದ ಬರೆ ಜರಿದದ್ದೆಂಬುದಿಲ್ಲ" ಎಂದು.

ಕರಿಯನ ಆಸೆ—ಹಾಗೆ ಜರಿದ ತಾವುಗಳಿಗೆ ಹೋಗಿ, 'ಸಮೀಪದಿಂದ

ಅವು ಹೇಗೆ ಕಾಣಿಸುತ್ತವೆ' ಎಂದು ನೋಡಬೇಕೆಂದು. ಅದಕ್ಕಾಗಿ ಗೆಳೆಯ ನನ್ನು ಪೀಡಿಸತೊಡಗಿದ. "ತೀರ ಸಮೀಪದಲ್ಲಿ ಕುಸಿದ ಬರೆಯೆಂದರೆ ಒಂದು ಹರದಾರಿ ದೂರವಾದರೂ ಆಗಬಹುದು. ಅಲ್ಲಿಗೆ ಹೋಗಿ ಬರಲು ಒಂದು ದಿನವೇ ಬೇಕು" ಎಂದು ಅಂಜಿಸುತ್ತಾನೆ ತಿಮ್ಮ. "ನೀನು ಬಾ, ಇಲ್ಲದೆ, ಬಿಡು. ನಾನು ಮಾತ್ರ ಹೋಗಿಯೇ ಶುದ್ಧ" ಎಂದು ಕರಿಯ ಪಣ ತೊಟ್ಟಿದ್ದಾನೆ.

"ಕರಿಯನ ಉತ್ಸಾಹಕ್ಕೆ ತಡೆಯಿರಲಿಲ್ಲ. ಆದರೆ ಆ ದಿನ ಹೊತ್ತಾಗಿದ್ದುದರಿಂದ, ಸಂಜೆಯೊಳಗೆ ಮನೆಗೆ ಹಿಂತಿರುಗಬಹುದೋ ಇಲ್ಲವೋ ಎಂಬ ಭೀತಿಯಾಯಿತು. ಮಳೆ ಬಿಟ್ಟ ಮೊದಲ ದಿನವಷ್ಟೆ ಅದು; ಮತ್ತೂ ಮಳೆ ಬರಲಾರದು—ಎಂಬ ಧೈರ್ಯವಿಲ್ಲವಲ್ಲ. ಹಾಗೆಂದುಕೊಂಡು ಮರು ದಿನ ಬೆಳಿಗ್ಗೆ ಆತ ಒಬ್ಬನೇ ಹೊರಟ. ಮರುದಿನವೂ ಬಾನು ಬರಿದಾಗಿತ್ತು. ಬಿಸಿಲು ಬೆಳಗಿನಿಂದಲೂ ಸುಂದರವಾಗಿ ನಾಲ್ದೆಸೆಗಳಲ್ಲೂ ಹರಡಿಕೊಂಡಿತ್ತು. ಆತ ಸೊಂಟಕ್ಕೊಂದು ಕತ್ತಿ ಸಿಕ್ಕಿಸಿಕೊಂಡು, ಕೈಯಲ್ಲೊಂದು ದೊಣ್ಣೆ ಹಿಡಿದುಕೊಂಡು, ಅದನ್ನು ಊರುತ್ತ ನಡೆದ. ತಮ್ಮ ಬೆಟ್ಟದಿಂದ ಮೂಡ ಣಕ್ಕೆ, ದೂರದಲ್ಲಿ ಕಾಣಿಸುತಿದ್ದ ಬರೆ ಕುಸಿದ ಒಂದು ತಾವಿಗೆ ನೇರಾಗಿ ಹೊರಟ ಅಲ್ಲಲ್ಲಿ ಹಲವಾರು ಕಾಡುಗಳು, ನಡುನಡುವೆ ಹರಿವ ಅಬ್ಬಿಗಳು, ಕಾಡುಗಳ ನಡುವಣ ಹುಲ್ಲಿನ ಮೇದೆಗಳು ಇವನ್ನೆಲ್ಲ ದಾಟುತ್ತ, ಬೆಟ್ಟದ ಮಗ್ಗುಲಲ್ಲೇ ಆ ಸ್ಥಳಕ್ಕೆ ಹೋಗಲು ಜಾವ ಹೊತ್ತಿಗಿಂತ ಹೆಚ್ಚಿನ ವೇಳೆ ಹಿಡಿಯಿತು. ದಾರಿಯುದ್ದಕ್ಕೂ ಜಿಗಣೆಗಳಿಂದ ಕಡಿಸಿಕೊಂಡು, ಗಾಯಕ್ಕೆ ಏನೇನೋ ಸೊಪ್ಪು ಮುಟ್ಟಿಸುತ್ತ ನಡೆದ. ಅಷ್ಟು ದಣಿದು ನಡೆದದ್ದು ಸಾರ್ಥಕವಾಯಿತೆಂದೆನಿಸಿತು—ಆ ನೋಟ ಕಂಡ ಮೇಲೆ. ಬೆಟ್ಟದ ಸೆರಗೊಂದು ವಕ್ರವಾಗಿ ಚಾಚಿಕೊಂಡು, ಕುಕ್ಕರಳ್ಳಿಗಿರುವ ಪ್ರದೇಶದ ದಕ್ಷಿಣಕ್ಕೆ ಗೋಡೆಯಂತೆ ನಿಂತಿದೆ. ಅದು ತಿರುಗಿ ನಿಲ್ಲುವ ಮೂಲೆಯ ಭಾಗ, ಒಂದು ಹಿರಿದಾದ ಒಳಬು. ದಟ್ಟವಾದ ಕಾಡಿನಿಂದ ತುಂಬಿದ ಪ್ರದೇಶ. ಕರಿಯ ನಿಂತ ಭಾಗ ಮಾತ್ರ ಹುಲ್ಲು ಬೆಳೆದಂಥ ತಾವು. ಅಲ್ಲಿಂದ ನೋಡಿದ ಕರಿಯನಿಗೆ—ಬೆಟ್ಟದ ಜರಿ ನೆಲವನ್ನು ತಬ್ಬಿ ಹರಿಯುವ ಬದಲು, ಒಮ್ಮೆಗೆ ಪ್ರಪಾತದಂತೆ ಧುಮುಕುವ ನೋಟ ಕಂಡಿತು. ನಾಲ್ಕೆಂಟು ಮರಗಳಷ್ಟು

ಎತ್ತರವಾಗಬಹುದು ಅದು. ಆ ಭಾಗದಲ್ಲಿ ಅಬ್ಬಿ ಕುಸಿದ ನೆಲದ ಮೇಲೆಯೇ ಧುಮುಕುತಿತ್ತು. ತೀರ ಸಮೀಪದಲ್ಲೂ ನೆಲ ಕುಸಿದದ್ದು ಕಾಣುತಿತ್ತು. ನೂರಾರು ಎಕ್ರೆ ವಿಶಾಲವಾದ ಕಾಡಿನ ಭಾಗ ಭೂಕಂಪದಿಂದ ಅಪುರಿ ಕುಸಿದಂತೆ ಕಾಣಿಸುತಿತ್ತು. ಆತ ನಿಂತ ಜಾಗಕ್ಕೂ, ಕುಸಿದ ಭಾಗಕ್ಕೂ, ನೂರಿನ್ನೂರು ಅಡಿಗಳ ಅಂತರವನ್ನುಂಟುಮಾಡಿತ್ತು. ಕುಸಿದಾದ ಬೆಟ್ಟದ ಮಗ್ಗು, ಕೆಂಪು ತೋಟಿಯ ಗೋಡೆಯಂತೆ ಕಾಣುತ್ತದೆ. ಅದರ ಮೇಲಿನ ಸಂಸ್ತರ ಕೆಂಪಾಗಿದ್ದರೆ, ಕೆಳಗಿನ ಅಂಚೆಲ್ಲ ಬಿಳಿ ಜೇಡಿ ಮಣ್ಣಿನದು. ಕಾಡಿಗೆ ಕಾಡೇ ಕುಸಿದು ಕುಕ್ಕರಳ್ಳಿಯ ಬಯಲಿನ ತನಕವೂ ಚಾಚಿ ನೀಡಿದ ಆ ವಿಚಿತ್ರ ನೋಟ ಕಾಣಿಸಿತು. ಅಲ್ಲಿಂದಲೇ ಕೆಳಕ್ಕೆ ಧುಮುಕಿ ಬಿಡೋಣ ಎನ್ನುವಷ್ಟು ಆಸೆಯಾಯಿತು ಅವನಿಗೆ. ಕೆಳಗಿನ ತನಕ ಏನೇನಾಗಿದೆ— ಎಂದು ನೋಡುವ ಕುತೂಹಲ ಹೆಚ್ಚಿತು. ಜರಿದ ನೆಲದ ಮಗ್ಗುಲನ್ನೇ ಹಿಡಿದು, ಕೆಳಗಿಳಿಯತೊಡಗಿದ. ಅದೆಲ್ಲ ಹುಲ್ಲು ಬೆಳೆದ ಭಾಗ; ಅದರ ಮೇಲೆ ನಡೆದುಕೊಂಡು ಬಹು ದೂರ ಇಳಿದ. ತಿರುಗಿ ಕಾಡು ಬಂತು. ಕುಸಿದ ನೆಲದ ಮೇಲಿನ ಮರಗಳಿಂದ ಎತ್ತರವಾಗಿತ್ತು ಈತ ಹಾದುಹೋಗುತ್ತಿದ್ದ ಭಾಗ. ಈತ ನಡೆಯುತ್ತಿದ್ದ ಅಂಚಿನಲ್ಲಿದ್ದ ಎಷ್ಟೋ ಮರಗಳು ಅಲ್ಲಲ್ಲಿ ಅರ್ಧಮರ್ಧ ಮುಗುಚಿ ಬಿದ್ದಿದ್ದುವು. ಆ ತಡೆಗಳನ್ನೆಲ್ಲ ದಾಟಿಕೊಂಡು ಬಹು ದೂರ ಇಳಿದು ಹೋದರೆ ಕುಕ್ಕರಳ್ಳಿಗೆ ತೀರ ಸಮೀಪವಾದ ಪ್ರದೇಶ ಕಾಣಸಿಗುತ್ತದೆ. ಮುಂದೆ ಕರಿಯನ ದಾರಿಗಡ್ಡವಾದುದು ಒಂದು ಚಿಕ್ಕ ಹಳ್ಳ. ಅದರ ನೀರು ನಾಲ್ಕು ದಿನಗಳ ಹಿಂದೆ ಬೆಟ್ಟದ ಒಳಬದಿಯಿಂದ ಹರಿದು ಬರುತ್ತಿದ್ದರೆ, ಈಗ ಜರಿಯೊಳಗೆ ಧುಮುಕಿ, ಅದರ ಮಣ್ಣನ್ನೆಲ್ಲ ಕಲಸಿಕೊಂಡು, ಕೆಂಪಾದ ಕೆಸರಾಗಿ ಬರುತಿತ್ತು. ಕೆಳಗಿನ ಪ್ರದೇಶಕ್ಕೆ ನೆಲ ಕುಸಿದು ಒತ್ತಿ ಬಂದುದರ ಪರಿಣಾಮವಾಗಿ ನೀರಿನ ಭರವನ್ನು ತಡೆದು ನಿಂತ ವಿಶಾಲವಾದ ಮರ ಮಟ್ಟುಗಳ ಸೆರಗು ಮುರಿದು ನುಜ್ಜುಗುಜ್ಜಾಗಿತ್ತು. ಕರಿಯ ಅದನ್ನೇ ಹೊಕ್ಕ. ಪೊದೆಗಳನ್ನು ಸವರಿಕೊಂಡು, ದಾರಿ ಮಾಡಿಕೊಂಡು ಮುಂದುವರಿದ. ಮುಂದೆ ಮುಂದೆ ಹೋಗುವುದು ಸುಲಭವಲ್ಲದ ಕೆಲಸವಾಗಿ ಕಂಡಿತು. ಅದುರುವಿಕೆಯಿಂದ ನೆಲ ಪುಡಿಪುಡಿಯಾಗಿ, ಅಲ್ಲಲ್ಲಿ ಬಿರುಕುಗಳು, ಕೆಸರಿನ ಪ್ರವಾಹಗಳು ಉರುಳಿದ ಬಂಡೆಗಳೂ ವಿಚಿತ್ರ

ನೋಟವನ್ನು ತಂದುಕೊಟ್ಟುವು. ಹೋಗಲು ಎಷ್ಟೆಷ್ಟು ತೊಡಕು ಕಂಡಿತೋ ಅಷ್ಟಷ್ಟು ಉತ್ಸಾಹ ಅವನಿಗೆ. ಮೇಲಿಂದ ಧುಮುಕುವ ಅಬ್ಬಿಯ ನೀರು ಹಾದಿ ತಪ್ಪಿ, ಹೇಗೆಲ್ಲ ಹೋಗುತ್ತಿರಬಹುದು, ಎಂದು ನೋಡುವ ಕುತೂಹಲ. ಕುಸಿದ ಪ್ರದೇಶವನ್ನು ಎಷ್ಟೆಷ್ಟು ತುಳಿದು, ನಡೆದು ಹೋಗಲು ಪ್ರಯತ್ನಿಸಿದನೋ, ಅಷ್ಟಷ್ಟು ಕಷ್ಟದ ಕೆಲಸವಾಯಿತು. ನೆಲ ಅಲ್ಲಲ್ಲಿ ಒಡೆದಿತ್ತು. ಒಂದೊಂದು ಮರವೂ ಕೆಸರಿನಲ್ಲಿ ನಟ್ಟ ಹೊಸ ಗಿಡದಂತೆ ಕಾಣಿಸುತಿತ್ತು. ಒಂದು ಮರದಿಂದ ಇನ್ನೊಂದು ಮರದ ಬಳಿಗೆ ಹೋಗಲು ಅಸ್ಥಿರವಾದ ನೆಲ, ಕೆಸರು, ನೀರುಗಳನ್ನು ತುಳಿದು ಹೋಗಬೇಕು. ಇನ್ನು ಮುಂದಕ್ಕೆ ಹೋಗುವುದು ಅವನಿಂದಾಗಲಿಲ್ಲ. ಅಲ್ಲೇ ನಿಂತರೆ ದೂರದ ನೋಟ ಕಾಣಿಸಲಾರದೆಂಬ ನಿರಾಶೆಯೂ ಆಯಿತು. ಒಂದು ಮರವನ್ನೇರಿದ. ಅಲ್ಲಿಂದ ಆಚೀಚೆ ಏನು ಕಾಣುತ್ತದೆ—ಎಂದು ನಿರೀಕ್ಷಿಸಿದ. ತುಸು ಸಮೀಪದಲ್ಲಿ ನೀರಿನ ಒರತೆಯಿಂದಾಗಿ ಕೆಂಪು ಮಣ್ಣಿನ ಒಂದು ನದಿಯೇ ಹರಿಯುತ್ತಿದ್ದಂತೆ ಕಂಡಿತು. ಆ ಕೆಂಪು ಮಣ್ಣಿನ ರಾಡಿಯಲ್ಲಿ ಉರುಳಿದ ಬಂಡೆಗಳು, ಹೂತ ಬಂಡೆಗಳೂ, ನಿಂತ ಮರಗಳೂ ಕಾಣಿಸಿದುವು. ಅಲ್ಲಿಗೂ ಹೋಗಬೇಕೆಂಬ ಹಂಬಲವಾಯಿತು. ಮರ ಇಳಿದು, ಹತ್ತು ಹೆಜ್ಜೆ ಹಿಂದಕ್ಕೆ ಬಂದು, ಗಟ್ಟಿ ನೆಲವನ್ನು ಸೇರಿ, ಮೇಲಕ್ಕೆ ಬಂದಾಗ ಆ ಕೆಮ್ಮಣ್ಣಿನ ಪ್ರವಾಹ ಕಣ್ಣೆದುರಿಗೆ ಕಾಣಿಸಿತು. ಕುಸಿದು ಬಿದ್ದ ಆ ಪ್ರದೇಶದಲ್ಲಿ ನದಿಯ ಭಾಗ ಇನ್ನಷ್ಟು ಕುಸಿದು ಹರಿಯುತಿತ್ತು. ಅದರಲ್ಲಿ ನೀರು ಮಾತ್ರ ಇದ್ದಿರಲಿಲ್ಲ. ನೀರಿನ ಬದಲು ಮಣ್ಣು ನೀರುಗಳು ಬೆರೆತ ದಪ್ಪನಾದ ರಾಡಿಯ ಪ್ರವಾಹ. ಆ ಪ್ರವಾಹದಲ್ಲಿ ಸಿಲುಕಿಕೊಂಡ ಬಂಡೆಯೊಂದನ್ನು ಕಂಡ. ಕಣ್ಣು ಅದನ್ನು ಎಷ್ಟು ನೋಡಿತೋ ಅಷ್ಟು 'ಅದು ಬಂಡೆಯೋ, ಇನ್ನೇನೋ' ಎಂಬ ಅನುಮಾನವಾಯಿತು. ಆ ನೋಟ ಸಮೀಪಿಸುವಲ್ಲಿ ಹೋಗಿ ನಿಂತ. ನಿಜಕ್ಕೂ ಅದು ಬಂಡೆಯಾಗಿರಲಿಲ್ಲ. ಬದಲು ಹೂತು ಬಿದ್ದ ಒಂದು ಆನೆಯ ಶರೀರವೆಂದು ಕಂಡಿತು. ದೊಡ್ಡದಲ್ಲ, ಮರಿ ಆನೆ, ಸತ್ತಿದೆಯೋ, ಬದುಕಿದೆಯೋ ಎಂದು ಅಲ್ಲಿಂದಲೇ ಊಹಿಸಲಾರ. ಆ ಕೆಸರಿನಲ್ಲಿ ಅದರ ಸಮಾಧಿಯಾಗುತ್ತದೆ ಎಂದು ತೋರಿತು. ಅಲ್ಲಿಂದ ಅವನೊಬ್ಬನೇ ಏನು ಮಾಡುವಂತೆಯೂ ಇಲ್ಲ. ಅವಸರಪಟ್ಟು ಕುಕ್ಕರಳ್ಳಿಗೆ ಓಡಿಹೋದ. ಅಷ್ಟಾಗುವಾಗ ಮಧ್ಯಾಹ್ನವಾಗಿತ್ತು. ಕುಕ್ಕರ

ಳ್ಳಿಗೆ ಹೋಗಿ, ಆನೆಯ ಸಮಾಚಾರ ಕೊಟ್ಟರೆ, ಅದು ಯಾರಿಗೆ ಬೇಕಿತ್ತು? ಮಳೆ ಕುಸಿದುದರ ಪರಿಣಾಮವಾಗಿ, ಹಳ್ಳಿಯ ದಕ್ಷಿಣದ ಹಳ್ಳವೊಂದು ದಾರಿ ತಪ್ಪಿ, ಅವರ ಬಯಲಿನ ಒಂದು ಭಾಗವನ್ನೇ ಕೊಚ್ಚಿಕೊಂಡು ಹೋಗಿತ್ತು. ಅದು ದೋಚಿ ತಂದ ಮಣ್ಣಿನಿಂದ, ಬೆಳೆದ ಹೊಲ ಗದ್ದೆಗಳನ್ನು ಮಣ್ಣಿನಿಂದ ತುಂಬಿಸಿತ್ತು. ಆ ನಷ್ಟವನ್ನು ಸರಿಪಡಿಸುವುದರಲ್ಲಿದ್ದರು ಅವರೆಲ್ಲ. ಕರಿಯ "ಆನೆಯ ಮರಿಯೊಂದು ಕೆಸರಲ್ಲಿ ಸಿಕ್ಕಿ ಬಿದ್ದಿದೆ; ಅದರ ಜೀವ ಉಳಿಸುವ" ಎಂದು ಪುರಾಣ ಹೇಳಿದರೆ ತಮ್ಮ ಗೋಳನ್ನು ತೋಡಿಕೊಂಡರು ಅವರು. ಕರಿಯನೆಂದ "ನಿಮ್ಮ ಈ ಕೆಲಸ ಒಂದು ದಿನದ್ದಲ್ಲ, ಎರಡು ದಿನದ್ದಲ್ಲ. ಮಳೆಗಾಲವೆಲ್ಲ ಹೊತ್ತು ತೆಗೆಯುವ ಕೆಲಸ. ಇದಾದರೂ ಒಂದು ತಮಾಷೆ ನೋಡಬಾರದೇ" ಎಂದು ಅವರಲ್ಲಿ ಉತ್ಸಾಹ ತುಂಬಿದ. ಆನೆ—ಒಂದಲ್ಲ, ನೂರು ಸತ್ತರೂ ಕುಕ್ಕರಳ್ಳಿಯವರಿಗೆ ಬೇಸರವಿಲ್ಲ. ಅದರ ಹಾವಳಿಯನ್ನು ಅವರು ಸಹಿಸಿದವರು. ಆದರೂ ಅದೊಂದು ವಿಚಿತ್ರ ನೋಟ ನೋಡುವ ಹಂಬಲ ಆಗದಿದ್ದೀತೇ? ಅವನ ಹಿಂದೆಯೇ ಜನ ಹೊರಟರು. ಕರಿಯ ಅವರನ್ನೆಲ್ಲ ಆ ತಾವಿಗೆ ಕರೆದುಕೊಂಡು ಹೋದ. ಮೇಲಿನ ಅಬ್ಬಿಯ ನೀರು, ಕುಸಿದ ನೆಲದ ಮೇಲೆ ಹೊಸ ಹುಚ್ಚಾಟ ನಡೆಸಿದುದು ಅವರಿಗೂ ಕಾಣಿಸಿತು. "ನೆಲ ಜರಿದು ದಿನ ಮೂರಾಯಿತು. ಆ ರಾತ್ರಿಯೇ ಕಾಡು ಮುರಿದು, ಜರಿದು ಬೀಳುವ ಆರ್ಭಟೆ ಕೇಳಿ ಭೂಕಂಪವಾಗುತ್ತಿದೆ, ಎಂದು ಕೊಂಡಿದ್ದೆವು. ಮೂರು ದಿನಗಳಿಂದ ಹೊಳೆ ದಾರಿ ತಪ್ಪಿ, ಕೆಸರು ಮಣ್ಣನ್ನು ತಂದು ತುಂಬಿಸುತ್ತಿದೆ. ಮಳೆ ನಿಂತರೆ ಏನಾದರೂ ಸರಿ ಮಾಡಬಹುದು" ಎಂದು ಆ ಘಟನೆಯನ್ನು ಕುರಿತಾದ ತರ್ಕ ವಿತರ್ಕ ಮಾಡುತ್ತ ಸಾಗಿದರು. ಕರಿಯ ಆನೆ ಕಂಡುಬಂದ ತಾಪು ಬಂತು. ಕೆಸರಿನ ಪ್ರವಾಹ ಆನೆಯ ಶರೀರವನ್ನು ಹೊತ್ತು ಇನ್ನೂ ಹತ್ತು ಗಜ ಮುಂದಕ್ಕೆ ತಳ್ಳಿತ್ತು. ಹಾಗೆಯೇ ಅದನ್ನು ಮುಂದೆ ಮುಂದೆ ತಳ್ಳುತಿತ್ತು. ಅದಕ್ಕೆ ಜೀವವಿದೆಯೇ ಇಲ್ಲವೋ, ಎಂಬುದು ಅವರಿಗೂ ತಿಳಿಯದು. ತಮ್ಮ ನೆಚ್ಚಿನ ಕರಿಯ ಏನನ್ನುವನೋ, ಅದರಂತೆ ಅವರು ಮಾಡಲು ಸಿದ್ಧ. ಮರದ ಗೆಲ್ಲುಗಳನ್ನು ಕಡಿದು, ತಂದು, ಆ ರಾಡಿ ಪ್ರವಾಹದ ಮೇಲೆ ನಡೆದು ಹೋಗಲು ಅನುಕೂಲವಾಗುವಂತೆ, ಸೇತುವೆ ಹಾಕಿದರು. ಅದನ್ನೇರಿಕೊಂಡು ಆನೆಗೆ ತೀರ ಸಮೀಪವಾಗಿ

ಹೋಗಿ ನೋಡಿದವ ಕರಿಯ. ಅವನಿಗಾದ ಆನಂದ, ವ್ಯಥೆಗಳು ಅಷ್ಟಿಷ್ಟಲ್ಲ. ಬರಿಯ ಎರಡೋ, ಮೂರೋ ವರ್ಷದ ಆನೆಯ ಮರಿಯದು; ದಣಿದು, ನುಗ್ಗಾಗಿ, ನಾಲ್ಕು ಕಾಲುಗಳು ಕೆಸರಲ್ಲಿ ಹೂತು, ತಾನಾಗಿ ಚಲಿಸಲಾರದೆ ಪ್ರವಾಹ ಸೆಳೆದತ್ತ ಸಾಗುತಿತ್ತು. ತನಗೆ ಆ ಮರಿಯನ್ನು ದೇವರೇ ಕರುಣಿಸಿದ್ದು ಎಂಬ ಯೋಚನೆ ಕರಿಯನದು. ಆದರೆ ಅದನ್ನು ಪಾರಾಣಿಸುವ ಬಗೆ ಸುಲಭವಾಗಿರಲಿಲ್ಲ. ಅದರ ಕಣ್ಣುಗಳನ್ನು ನೋಡಿದ—ಬಿಳಿಚಾಗಿರಲಿಲ್ಲ. ಜೀವವಿತ್ತು. ಸೊಂಡಿಲು ಕದಲುತಿತ್ತು. ಅದೊಂದನ್ನು ತುಸುವೇ ಎತ್ತಿ ಹಿಡಿದು ಉಸಿರಾಡುತಿತ್ತು. “ಏನೇ ಆಗಲಿ, ಇದನ್ನು ಎಳೆದು ತೆಗೆಯಲೇ ಬೇಕು” ಎಂದ ಕರಿಯ. “ಕಾಡಾನೆಯನ್ನು ಉಳಿಸಲು ಹೋಗಿ ಅದರ ಕೈಯಲ್ಲಿ ನಾವೂ ಸಾಯಬೇಕಾದೀತು” ಎಂದ ಬಟ್ಯಗೌಡ. ಯಾವುದಕ್ಕೂ ಸಂಜೆ ಸಮೀಪಿಸಿತು. ಆ ದಿನ ಅವರು ಏನೂ ಮಾಡುವಂತಿರಲಿಲ್ಲ. ಆದರೂ ಕರಿಯ ಅದು ತಿನ್ನಲಿ, ಬಿಡಲಿ—ಎಂದು ಒಂದಿಷ್ಟು ಸೊಪ್ಪು ಕಡಿದು ಅದರ ಮೂತಿಯ ಬಳಿ ಎಸೆದು ಬಂದ. ಎಲ್ಲರೂ ಹಳ್ಳಿಗೆ ಮರಳಿದರು.

ಮರುದಿನ ಬೆಳಿಗ್ಗೆ ಹಳ್ಳಿಯ ಜಾತ್ರೆ ತಿರುಗಿ ಆನೆಯ ಬಳಿಗೆ ಹೊರಟಿತು—ಆನೆ ಬಿದ್ದಲ್ಲಿಗೆ. ಹಲಗೆ, ಒನಕೆ, ಹಗ್ಗ ಏನೇನೋ ಸರಂಜಾಮುಗಳನ್ನು ಹೊತ್ತು ನಡೆದರು. ಆನೆ ಇನ್ನೂ ಒಂದು ಐವತ್ತು ಗಜ ಮುಂದು ವರಿದು ಬಂದಿತ್ತು, ಕೆಸರಿನೊಂದಿಗೆ. ತಿರುಗಿ ಗೆಲ್ಲು, ಕೊಂಬೆ, ರೆಂಬೆಗಳನ್ನು ಕೆಸರ ಮೇಲೆ ಹಾಕಿ ಅದನ್ನು ಸಮೀಪಿಸಿದರು. ಒಂದೆರಡು ಹಲಗೆಗಳನ್ನು ಅದರ ಹೊಟ್ಟೆಯ ಅಡಿಗೆ ತುರುಕಬೇಕೆಂದು ಮಾಡಿದ ಪ್ರಯತ್ನ ವ್ಯರ್ಥವಾಯಿತು. ಹಾರೆ ಹಿಡಿದು, ಸಮೀಪದ ನೆಲ ಕೊಚ್ಚತೊಡಗಿದರು. ಒಂದು ಹಾರೆ ಮಣ್ಣು ತೆಗೆದರೆ ಎರಡು ಹಾರೆ ಮಣ್ಣು ಬಂದು ತುಂಬುತಿತ್ತು. ಎಲ್ಲವೂ ಅಸ್ಥಿರವಾದ ನೆಲ. ಆ ಪ್ರವಾಹದ ಅಗಲ ಹೆಚ್ಚಾಗಿರಲಿಲ್ಲ. ಕೊನೆಗೆ ಏನೂ ದಾರಿ ಕಾಣದೆ, ಬಾವಿಯ ಹಗ್ಗಗಳನ್ನೆಲ್ಲ ಜೋಡಿಸಿ, ಅದರ ನಡುವಿಗೆ ಕಟ್ಟಿ ಎಳೆದರು. ಹಗ್ಗ ತುಂಡಾಯಿತು; ಆನೆ ಕದಲಲಿಲ್ಲ. ಎಷ್ಟು ತಲೆ ಕೆರೆದುಕೊಂಡರೂ ದಾರಿ ಕಾಣಿಸಲಿಲ್ಲ—ಅವರಿಗೆ. ಕೊನೆಗೆ ಬಟ್ಯನೆಂದ. “ಇನ್ನಿದ್ದರೆ ಒಂದೇ ಉಪಾಯ. ಮೇಲೆ ಹರಿಯುವ ನೀರಿನ ಸಾಲನ್ನು ಕಡಿದು, ಇಲ್ಲಿಗೆ ಬಿಟ್ಟರೆ ಮಣ್ಣು ತೊಳೆದು ಹೋದೀತು. ಹೊರತು, ಕಟ್ಟು, ಎಳೆದು,

ಕೊಚ್ಚಿ ಆಗುವ ಕೆಲಸವಲ್ಲ" ಎಂದು. ಎಲ್ಲರೂ ಸೇರಿ ಹಾಗೆ ಮಾಡತೊಡಗಿದರು. ಅದೂ ಸುಲಭವಾಗಲಿಲ್ಲ. ಹತ್ತೆಂಟು ಮಂದಿ ಸೇರಿ ತುಸು ಮೇಲಕ್ಕೆ ಹರಿಯುತ್ತಿದ್ದ ನೀರಿನ ಪ್ರವಾಹವೊಂದನ್ನು, ಆ ಮುಖವಾಗಿ ಕಡಿದು ಕೆಸರಿನ ಪ್ರವಾಹಕ್ಕೆ ಬಿಟ್ಟರು. ತಿರುಗಿ ಕತ್ತಲೆಯಾಯಿತೆಂದು ಹೊರಟುಬಿಟ್ಟರು. ಕರಿಯ ಎಲ್ಲ ಆಸೆಗಳನ್ನು ಬಿಟ್ಟ. ಹೊಟ್ಟೆಗಿಲ್ಲದೆ ಆನೆ ಬೆಳಗಾಗುವ ತನಕ ಉಳಿಯುವುದು ಕಷ್ಟ ಎಂದು ಎಣಿಕೆ ಹಾಕಿದ. ನಿದ್ದೆ ಬಾರದ್ದಕ್ಕೆ 'ಅದು ಹೇಗೆ ಕೆಸರಲ್ಲಿ ಸಿಕ್ಕಿಕೊಂಡಿರಬಹುದು. ಹಿಂಡಿನಲ್ಲಿರುವ ಮರಿ ಒಂದೇ ಸಿಕ್ಕಿಕೊಳ್ಳಲು ಕಾರಣವೇನು? ಉಳಿದುವು ಹೇಗೆ ಪಾರಾದುವು' ಎಂದು ಏನೇನೋ ಲೆಕ್ಕ ಹಾಕುತ್ತ ಇಲ್ಲದ ಕನಸುಗಳನ್ನು ಕಟ್ಟಿಕೊಂಡು ರಾತ್ರಿ ಕಳೆದ. ಬೆಳಗ್ಗೆ ನಸುಕು ಹರಿಯುವ ಮೊದಲೇ ಹೊರಟ ಅಲ್ಲಿಗೆ ಬಟ್ಯನನ್ನು ಕರೆದುಕೊಂಡು ಹೋಗಿ ನೋಡುವಾಗ ಅವನ ವಿಸ್ಮಯ, ಸಂತೋಷ ಹೇಳತೀರದು. ಇವರು ಬಿಟ್ಟ ನೀರು ರಾತ್ರಿಯೆಲ್ಲವೂ ಹರಿದು, ಕೆಸರನ್ನು ಕೊರೆದು, ಆನೆಯ ಮಗ್ಗುಲನ್ನು ಚೆನ್ನಾಗಿ ಬಿಡಿಸಿ ಕೊಟ್ಟಿತ್ತು. ಆದರೂ ಮೇಲಿಂದ ಬರುವ ಕೆಸರು ಒತ್ತಿ ಬರುತ್ತಲೇ ಇತ್ತು. ಕೈಯಲ್ಲೊಂದು ಕೋಲು ಹಿಡಿದು, ಕರಿಯ ಆ ರಾಡಿಯ ಹೊಂಡಕ್ಕೆ ಧುಮುಕಿದ. ಕೋಲೂರುತ್ತ ಹತ್ತು ಹೆಜ್ಜೆ ಮುಂದೆ ಸಾಗಿದ. ಪ್ರವಾಹ ಆಳವಾಗಿರಲಿಲ್ಲ. ಆನೆಯೂ ಸಮೀಪವಾಯಿತು. ಅದರ ಕಾಲಿನ ಕೆಳಗಿನ ನೆಲ ಭದ್ರವಾಗಿತ್ತು. ಆದುದರಿಂದಲೇ ಅದು ಬದುಕಿಕೊಂಡಿತು. ಮೂರು ದಿನಗಳ ಉಪವಾಸದ ಅಶಕ್ತಿಗಳಲ್ಲದೆ ಹೋಗಿದ್ದರೆ ಅದು ತಾನಾಗಿ ಈಚೆ ನಡೆದು ಬರುವುದು ಸುಲಭವಾಗಿತ್ತು. ಈಗ ಅದಕ್ಕೆ ಅಷ್ಟು ಶಕ್ತಿಯೂ ಉಳಿದಿರಲಿಲ್ಲ. ಸಾವಿನ ಭೀತಿಯಿಂದ ಏನೂ ಮಾಡಲಾರದೆ ಬೆಪ್ಪುಗೊಂಡಿತ್ತು ಅದು. ಕರಿಯ ಅದನ್ನು ಸಮೀಪಿಸಿ, ಮೈ ಮುಟ್ಟಿದ. ಹರಿದ ಹಗ್ಗವನ್ನು ತಿರುಗಿ ಜೋಡಿಸಿ, ಅದರ ಹಿಂಗಾಲಿಗೆ ಬಿಗಿದು ಈಚೆಯ ದಡಕ್ಕೆ ಬಂದ. ಊರ ಜನ ಕರೆಯಲು ಬಟ್ಯನನ್ನು ಓಡಿಸಿದ, ಅವರು ಬರುವ ತನಕ ಕರಿಯ ಸುಮ್ಮನಿರಲಾರ. ಆನೆ ಬಂದ ಮೇಲೆ ಅದಕ್ಕೆ ಊಟವಾಗಬೇಡವೇ? ಬಯನಿ ಗಿಡಗಳನ್ನು ಕಡಿದು ಅದರ ನಡುವಣ ತಿರುಳನ್ನು ಸವರಿ ಕಾಂಡ ತೆಗೆದಿರಿಸಿದ. ಜನ ಬಂದರು. ಆನೆ ಮರಿಯನ್ನು ಎಳೆಯತೊಡಗಿದರು. ಕೊನೆಗೆ ಒಂದು ಹಗ್ಗ ಸಾಲ

ದೆಂದು, ಬೀಳಲಿನ ಬೇರೊಂದು ಹಗ್ಗ ಮಾಡಿ ಅದರ ಇನ್ನೊಂದು ಕಾಲಿನ ಸಂದಿಗೆ ಹಾಕಿ ಎಳೆದರು. ಮೆಲ್ಲ ಮೆಲ್ಲಗೆ ಎಳೆಯುತ್ತಿರಲು ನೀರಿನ ಕಲುಕು ಪ್ರವಾಹದಲ್ಲಿ ಆನೆ ಸಂಪೂರ್ಣ ಕುಸಿಯಿತು. 'ಹೋ, ಇನ್ನೇನು? ಮೇಲಿನ ಕೆಸರು ಅದನ್ನು ಮುಚ್ಚಿ ಬಿಟ್ಟರೇನು ಗತಿ' ಎಂಬ ಭೀತಿ ಇವರಿಗಾಯಿತು. ಅದಕ್ಕೂ ಜ್ಞಾನೋದಯವಾಗಿರಬೇಕು. ಕಾಲು ಮೊಟಕುತ್ತ ಎದ್ದು ನಿಂತು, ಎಳೆಯುತ್ತಿರುವ ಇವರ ಕಡೆಗೆ ತಿರುಗಿತು. ಇವರು ಮೆಲ್ಲ ಮೆಲ್ಲನೆ ಹಗ್ಗ ಎಳೆದರು. ಮರಿ ಆಯಾಸದಿಂದ ಬಸವಳಿದು, ಹಾಗೂ ಹೀಗೂ ಈಚಿನ ದಂಡೆಗೆ ಬಂದು ಸೇರಿತು. ದಂಡೆ ಮುಟ್ಟುವುದಕ್ಕೂ ಅದಕ್ಕೆ ಹೆದರಿಕೆ. ತಿರುಗಿ ಮಣ್ಣು ಕುಸಿಯುತ್ತದೋ ಎಂಬ ಅಂಜಿಕೆ. ಗಟ್ಟಿ ನೆಲದ ಮೇಲೆ, ಅದನ್ನು ಎಳೆಯುವುದಕ್ಕೆ ಇವರಿಗೆ ಹೆದರಿಕೆ. ಅದು ದಡ ಸಮೀಪಿಸಿದ ಮೇಲೆ, ಅದರ ಹಗ್ಗ ಮುಟ್ಟುವುದಕ್ಕೆ ಧೈರ್ಯವಿಲ್ಲ. ಅದರ ಬಳಿಗೆ ಹೋಗುವವರೂ ಇಲ್ಲ. ಬಟ್ಯನಂತು ಹೋಗುವ ಪ್ರತಿಯೊಬ್ಬರನ್ನೂ ತಡೆಯುತ್ತಿದ್ದ. "ಕಾಡಾನೆ ಅದು. ಮರಿಯಾದರೇನು? ಪ್ರಾಣ ಉಂಟೆಷ್ಟು? ತಾನು ಸಿಕ್ಕಿ ಬಿದ್ದ ಸಿಟ್ಟಿಗೆ ನಾವೇ ಅದನ್ನು ದೂಡಿ ಹಾಕಿದವರೆಂದು ತಿಳಿದು ಅಟ್ಟಿ ಬಂದರೆ ನಾವು ಒಬ್ಬರೂ ಇಲ್ಲ, ಕರಿಯನೂ ಇಲ್ಲ. ಅದು ಸತ್ತಿದ್ದರೇ ಸುಖವಿತ್ತು" ಎಂದು ನುಡಿದು ಬಹು ದೂರ ಹೋಗಿ ನಿಂತ. "ಇನ್ನೆಲ್ಲ ಕರಿಯಣ್ಣನ ಕೆಲಸ" ಎಂದುಳಿದವರು ನಕ್ಕು ಹೇಳಿದರು. ಜೀವದ ಆಸೆಯಿದ್ದರೆ ಬಿಡುಗಡೆ ಗೊಂಡ ಆನೆಯ ಬಳಿ ಕರಿಯ ಹೋಗಲಾರ—ಎಂದು ಅವರ ತಿಳಿವು. ಕರಿಯನಿಗೆ ಆನೆಯ ಹುಚ್ಚಿನಲ್ಲಿ ಜೀವದ ಆಸೆ ಮರೆತಿತ್ತು. ತನ್ನ ಮುದ್ದು ಮರಿಗೆ ಊಟವಾಗದೆ ದಿನ ಮೂರಾಯಿತೆಂಬ ಚಿಂತೆ! ಹೋಗಿ ಧೈರ್ಯದಿಂದ ಅವರ ಸೊಂಡಿಲಿನೆದುರು ಬಯನಿಯ ಕಾಂಡ ಹಿಡಿದು ನಿಂತ. "ಹತ್ತಿರ ಹೋಗಬೇಡ" ಎಂದು ಬೊಬ್ಬಿರಿಯುತ್ತಾನೆ ಬಟ್ಯ. ಕರಿಯ ಕದಲುವು ದಿಲ್ಲ. ದಿಂಡು ಕೊಡುತ್ತಿದ್ದಾನೆ. ಹಸಿದ ಮರಿ ಅದನ್ನು ಸೊಂಡಿಲಿಂದ ಕೊಂಡು ತಿನ್ನತೊಡಗಿತು. ಅದರ ಊಟವಾದ ಮೇಲೆ ಕರಿಯ ಅದರ ಹಿಂಗಾಲಿನ ಹಗ್ಗವನ್ನು ಒಬ್ಬನೇ ಎಳೆದ. ಮರಿ ಕತ್ತು ತಿರುಗಿಸಿ ಇವನ ಉತ್ಸಾಹಕರ ನುಡಿ ಕೇಳಿ ಹಿಗ್ಗಿದಂತೆ, ದಂಡೆಯನ್ನು ಏರುವ ಪ್ರಯತ್ನ ಮಾಡಿತು. ಮೇಲಕ್ಕೂ ಬಂದಿತು. ಸಮೀಪ ನಿಂತವರೆಲ್ಲರು ನಾಗಾಲೋಟ

ಹೂಡಿದರು. ಕರಿಯ ಬೆರಗಿನಿಂದ ಹಿಂದೆಯೂ ಹೋಗಲಾರ, ಮುಂದೆಯೂ ಹೋಗಲಾರ. ಅದನ್ನು ಬಿಟ್ಟೋಡುವ ಮನಸ್ಸು ಅವನಿಗಿಲ್ಲ. ಅದರ ಹಗ್ಗ ಹಿಡಿದು ಮೆಲ್ಲ ಮೆಲ್ಲನೆ ಕರೆದು ಈಚೆಗೆ ತಂದ. ದಣಿದ ಆನೆ, ಹತ್ತು ಹೆಜ್ಜೆ ಈಚೆ ಬಂದು, ಅಲ್ಲೇ ಮಲಗಿಕೊಂಡಿತು. ಕರಿಯ ಅದಕ್ಕೆ ಕಟ್ಟಿದ ಎರಡೆರಡು ಹಗ್ಗಗಳನ್ನು ಸಮೀಪದ ಮರಕ್ಕೆ ಬಿಗಿದ. ಬೀಳಲುಗಳು, ಮನಸ್ಸಾದರೆ ಆನೆಗೆ ಈಡಲ್ಲ. ಆದರೂ ಅವನದ್ದೊಂದು ಆಸೆ. ಆ ದಿನ ಆತ ಊಟಕ್ಕೂ ಹೋಗದೆ, ಆನೆಗಾಗಿ ಸೊಪ್ಪು, ಈಚಲು ದಿಂಡುಗಳನ್ನು ತಂದು ಅದರ ಮುಂದೆ ಕೆಡವಿದ. ಸ್ನೇಹದಿಂದ ಅದರ ಮೈ ಸವರಿದ. ಎತ್ತಿದ ಅದರ ಸೊಂಡಿಲನ್ನು ಮುಟ್ಟುವುದಕ್ಕೂ ಆತ ಹಿಂಜರಿಯಲಿಲ್ಲ. ಆ ಎರಡು ಮೂರು ದಿನಗಳಲ್ಲಿ, ತನ್ನ ಹಿಂಡು ಕಳೆದುಕೊಂಡು ಅನಾಥವಾದ ಆ ಮರಿಗೆ, ಕರಿಯನಲ್ಲಿ ಅಗಾಧ ಸ್ನೇಹವುಂಟಾಯಿತು. ಕರಿಯನ ಮನಸ್ಸಿನಲ್ಲಿ 'ಆನೆಯ ನಾಯಕ ತಾನಾದೆ, ಎಳೆಯ ಮರಿ ಹೇಳಿದಂತೆ ಕೇಳೀತು. ಅದನ್ನು ಒಂದಲ್ಲ ಒಂದು ದಿನ ಹತ್ತಿ, ಸವಾರಿ ಮಾಡಿ ಸುಬ್ರಹ್ಮಣ್ಯದ ತನಕ ಯಾತ್ರೆ ಬೆಳೆಸಿ, ದೇವರಿಗೆ ನಮಸ್ಕಾರ ಮಾಡಿಸಬೇಕು' ಎಂಬ ಕನಸು ಮೂಡಿತು.

ಆನೆಯ ಹಿಗ್ಗಂತು ಸರಿಯೆ. ಕರಿಯ ಮನೆ ಬಿಟ್ಟು ಮೂರು ದಿನಗಳಾಗಿದ್ದುವು. 'ತಿಮ್ಮ ತಾನು ಮರಳಿ ಬಾರದುದಕ್ಕಾಗಿ ಎಷ್ಟು ಚಿಂತೆಯಲ್ಲಿದ್ದಾನೊ' ಎಂಬ ಯೋಚನೆ ಅವನಿಗೆ. ಅವನಿಗೆ ಹೇಳಿ ಕಳುಹಿಸಬೇಕು, ಇಲ್ಲವೆ ತಾನೇ ಹೋಗಿ ಹೇಳಬೇಕು. ಹೊಲದ ಕೆಲಸಗಳ ಹೊರೆಯಲ್ಲಿ ಬಿದ್ದ ಬಟ್ಯನನ್ನೋ, ಅವನ ಗೆಳೆಯರನ್ನೋ ಕಳುಹಿಸುವುದು ಸಾಧ್ಯವಿರಲಿಲ್ಲ. ತಾನೇ ಹೊರಟ. ಹೊರಡುವಾಗ ತನ್ನ ಮಲೆಯ ಮಳೆ, ಬೆಳೆಗಳ ವಿಚಾರ ಹೇಳಿ "ಹೇಗೂ ಈ ಮರಿಯನ್ನು ನಾನು ಬಿಟ್ಟು ಇರಲು ಬರುವುದಿಲ್ಲ. ಒಂದೆರಡು ತಿಂಗಳು ನಾವೇ ಇಲ್ಲಿ ಬಂದಿರುತ್ತೇವೆ. ನಮ್ಮ ಕುಮರಿ ಬೆಳೆ ಹಾಳಾಗಿದೆ. ನಿಮಗೂ ಆಳುಗಳು ಬೇಕು. ಒಂದು ಕೊಟ್ಟಿಗೆ ನಮಗೆ ಬಿಟ್ಟುಕೊಟ್ಟರೆ, ಬೇಸಾಯ ಮುಗಿಯುವ ತನಕ ನಾವು ಇಲ್ಲೇ ಬಂದು ಇರುತ್ತೇವೆ" ಎಂದು ತಿಳಿಸಿ ಹೋದ.

ತಮ್ಮ ಹೊಲಗದ್ದೆಗಳು ಕೊಚ್ಚಿ ಹೋದಾಗ, ಹೆಚ್ಚಿಗೆ ಮೂವರು ತಮಗೆ ನೆರವಾಗುವುದೆಂದರೆ ಒಂದು ನಿಧಿ ದೊರೆತಂತಾಯಿತು ಕುಕ್ಕರಳ್ಳಿ

ಯುವರಿಗೆ. ಅಲ್ಲದೆ ಈ ಕುಡಿಯರ ಮೇಲೆ ಬಹು ಅಭಿಮಾನ ಅಲ್ಲಿನ ಜನಕ್ಕೆ. ಬಟ್ಯನೆಂದ "ಕರಿಯ, ನಾನನ್ನುತ್ತೇನೆ, ನೀವು ಎರಡು ಮೂರು ಮಂದಿ ಯಾವಾವ ಕಾಡಿನಲ್ಲಿ ಬದುಕಿರುವ ಬದಲು, ನಮ್ಮ ಜತೆಯಲ್ಲೇ ಕಾಯಂ ಇರಬಾರದೇ? ನಿಮಗೆ ಏನೂ ಕಡಿಮೆಯಾಗದ ಹಾಗೆ ನೋಡಿಕೊಳ್ಳುತ್ತೇವೆ" ಎಂದು ಭರವಸೆ ಕೊಟ್ಟ. ಕರಿಯ ತನ್ನ ಮಲೆಗೆ ಧಾವಿಸಿದ. ಆನೆ ಮರಿಗೆ ಎರಡು ದಿನಗಳಿಗೆ ಬೇಕಾಗುವಷ್ಟು ಸೊಪ್ಪಿನ ರಾಶಿ ಹಾಕಿ ಮಲೆಗೆ ಹೊರಟ.

ಆ ದಿನ ಬೆಳಗ್ಗೆ ಹೊರಟುಹೋದ ಕರಿಯ ಸಂಜೆ ಕತ್ತಲು ಕವಿದರೂ ಮರಳಿ ಬಾರದಿದ್ದುದನ್ನು ಕಂಡು ತಿಮ್ಮ ಕಂಗಾಲಾಗಿದ್ದ. ಜರಿ ನೋಡುವುದಕ್ಕೆ ಹೋಗಿ, ಅಲ್ಲೆಲ್ಲಾದರೂ ಕಾಲು ಜಾರಿ ಬಿದ್ದನೋ—ಎಂಬ ಚಿಂತೆ, ಭಯ ಅವನಿಗೆ. ಮರುದಿನ ಮನಸ್ಸು ತಾಳದ್ದಕ್ಕೆ, ಆತನೇ ಆ ಜರಿಯ ಕಡೆ ಹೊರಟ. ಅದರ ಮಗ್ಗುಲಲ್ಲಿ ನಿಂತು, ಇಣಿಕಿ, ನೋಡಿ, ಇಂಥ ಕುಣಿಯಲ್ಲಿ ಕರಿಯ ಬಿದ್ದಿದ್ದಾದರೆ ಕಣ್ಣಿಗೆ ಕಾಣಿಸುವುದಾದರೂ ಹೇಗೆ—ಎಂದು ಚಿಂತೆಯಲ್ಲೇ ಮನೆಗೆ ಮರಳಿ ಬಂದ. ಗಿಡ್ಡಿ, ತಿಮ್ಮರಿಬ್ಬರಿಗೂ ಕರಿಯನನ್ನು ಕಾಣದೆ ಮನಸ್ಸಮಾಧಾನವಿಲ್ಲ. ಆತ ಹೋಗಿ ದಿನವೆರಡಾದುವು; ಮೂರಾದುವು. ಮಳೆ ಬಿಟ್ಟು ಹೊಳ ಉಂಟಾಗಿದ್ದರೂ ಕರಿಯ ಕಾಣದಾದನಲ್ಲ—ಎಂಬ ಚಿಂತೆಯಿಂದ ಅವರು ಅನ್ನ, ನೀರು ಮುಟ್ಟದಾದರು. ಅವನೇ ತಮ್ಮ ಸಂಸಾರಕ್ಕೆ ಧೈರ್ಯ ಗೆಲುವುಗಳನ್ನು ತಂದುಕೊಟ್ಟವನು. ಅವನಿಲ್ಲದೆ ಬದುಕುವ ಬಗೆಯೇ ಇಲ್ಲವೆಂದು ನಿರಾಶೆತಾಳಿದರು. ನಾಲ್ಕನೆಯ ದಿನ, ಬೇಸರದಿಂದ, ಮಗುಚಿ ಬಿದ್ದ ಕುಮರಿ ಬೆಳೆಯ ಹತ್ತಿರ ತಿಮ್ಮ ಅಲೆದಾಡುತ್ತಿದ್ದಾಗ ಕರಿಯನ ಕೇಕೆ ಕೇಳಿಸಿತು. ತಿಮ್ಮ ಮರುಧ್ವನಿ ಕೊಟ್ಟ. ಕರಿಯನ ಗಂಟಲೆಂದು ಗೊತ್ತಾಗುತ್ತಲೇ ಅವನಿಗಾದ ಹಿಗ್ಗು ಅಷ್ಟಿಷ್ಟಲ್ಲ. ಮತ್ತೈದು ನಿಮಿಷಗಳಲ್ಲಿ ಕರಿಯನೇ ಅಲ್ಲಿದ್ದಾನೆ! ತಿಮ್ಮ "ಏನಾಯಿತು ನಿನಗೆ? ಎಲ್ಲಿಗೆ ಹೋದೆ? ಸತ್ತಿದ್ದೀಯಾ? ಬದುಕಿದ್ದೀಯಾ?" ಎಂದು ಕೇಳಿದರೆ, ಆ ಮಾತಿಗೆ ಉತ್ತರವಾಗಿ ಕರಿಯ ಆನೆ ಮರಿಯ ಪುರಾಣ ಹೇಳುತ್ತಾನೆ. ಅರ್ಥಾತ್ ಸಂಬಂಧವಿಲ್ಲದ ಪುರಾಣವಾಗಿ ಕಾಣಿಸಿತು, ತಿಮ್ಮನಿಗೆ. ಆದರೆ ಕರಿಯ ನಿಧಾನವಾಗಿ ಇನ್ನೊಮ್ಮೆ ಕತೆ ಬಿಡಿಸಿ ಹೇಳಿದ. ತಾನು ಜರಿಯ

ಬಳಿಗೆ ಹೋದದ್ದು, ಅಲ್ಲಿಂದ ತೊಡಗಿದ ಪ್ರಯಾಣ, ಆನೆ ಸಿಕ್ಕಿ ಬಿದ್ದ ಕತೆ, ಅದನ್ನು ಹಿಡಿದುತಂದ ಸಾಹಸ, ಅದನ್ನು ಕುಕ್ಕರಳ್ಳಿಯಲ್ಲಿ ಕಟ್ಟಿಬಂದ ವಿಚಾರ—ಒಂದೊಂದನ್ನೇ ಬಿಡಿಸಿ ಹೇಳಿ "ಇನ್ನು ನೋಡು ತಿಮ್ಮ, ತಿಂಗಳು, ನಾಲ್ಕು ತಿಂಗಳು ನೀನೇನೂ ಮಾಡು—ನಾನು ಕುಕ್ಕರಳ್ಳಿಯಲ್ಲಿರುವವ. ಆ ಮರಿಗೆ ಬುದ್ಧಿ ಕಲಿಸಿ, ಅದನ್ನು ನಮ್ಮ ಮನೆಯವರೆಗೆ ಕರೆದು ತರುವವರೆಗೆ, ಅಷ್ಟು ಸಮಯ ಹಿಡಿದೀತು. ಅಲ್ಲಿಯ ತನಕ ನನ್ನ ಬಿಡಾರ ಕುಕ್ಕರಳ್ಳಿಯಲ್ಲೇ. ಅಲ್ಲದೆ ಈ ವರ್ಷ ನಮ್ಮ ಕುಮರಿಯಲ್ಲಿ ಬತ್ತದ ಕಾಳು ಸಿಗಲಾರದು. ಕೆಳಗೆ ಒಂದು ರಾಶಿ ಕೆಲಸ ಇದೆ. ಹಳ್ಳದ ಮಣ್ಣು ಬಂದು, ಹೊಲ ತುಂಬಿ, ಒಂದು ವರ್ಷ ದುಡಿದರೂ ಮುಗಿಯದ ಕೆಲಸವಿದೆ. ನಮ್ಮನ್ನು ಸಾಕುವ ಭಾರ—ಬಟ್ಯ ತನ್ನದೆಂದಿದ್ದಾನೆ. ನಮಗೆ ಅಲ್ಲಾದರೇನು? ಇಲ್ಲಾದರೇನು?" ಎಂದು ಉಪದೇಶಿಸಿದ. ಇಬ್ಬರೂ ತಮ್ಮ ಗವಿಮನೆಗೆ ಹೋದರು. ಯಜಮಾನ ಕರಿಯ ಬದುಕಿ ಬಂದದ್ದಕ್ಕಾಗಿ ಗಿಡ್ಡಿಗಾದ ಸಂತೋಷ ಸಾಮಾನ್ಯವಲ್ಲ. ಕರಿಯ ಅವಳ ಎರಡು ವರ್ಷದ ಮಗುವನ್ನೆತ್ತಿಕೊಂಡು "ಕೂಸಣ್ಣ, ಇನ್ನು ನಾನು, ನೀನು, ನಡೆಯಲಿಕ್ಕೇ ಇಲ್ಲ. ಆನೆಯ ಮೇಲೆಯೇ ನಮ್ಮ ಸವಾರಿ. ನಮ್ಮ ಹಳೆಯ ಧನಿಯರು ಆನೆ ಹಿಡಿದಾಗ, 'ನನಗೆ ಅದನ್ನು ಸಾಕಲು ಕಲಿಸಿ' ಎಂದರೆ, ತುಕ್ರನಿಗೆ ಆ ಕೆಲಸ ಕೊಟ್ಟರು. ಆ ಕೆಲಸ ತುಕ್ರನಿಂದಾಯಿತೇ? ಆನೆಯ ಮರಿ ಓಡಿಯೇ ಹೋಯಿತು" ಎಂದು ನಕ್ಕು ನುಡಿದ. ತಿಮ್ಮ ಅದಕ್ಕೆ "ಕರಿಯಣ್ಣ, ಹಾಗೆನ್ನಬೇಡ. ನೀನು ಹಿಡಿದದ್ದೂ ಕಾಡಾನೆಯ ಮರಿಯನ್ನೇ. ಈಗ ಅದು ಕಂಗಾಲಾಗಿ ನಿನಗೆ ಸಿಕ್ಕಿರಬಹುದು; ನಾಳೆ ಅದೆಲ್ಲಾದರೂ ತನ್ನ ಹಿಂಡನ್ನು ಗುರುತಿಸಿದರೆ, ಅದೂ ಆ ಹಿಂಡಿನೊಂದಿಗೆ ಸೇರಿಕೊಂಡೀತು" ಎಂದು ಅನುಮಾನ ಸೂಚಿಸಿದ. ಕರಿಯನಿಗೆ ಆ ಅನುಮಾನ ಅಹುದೆಂದು ಕಂಡರೂ ಆಸೆ ಬಿಡಲೊಲ್ಲದು. "ಹೂಂ, ಹೂಂ, ಹಾಗಾಗಲಾರದು. ಇದು ಸಣ್ಣ ಮರಿ. ಇನ್ನೂ ಬುದ್ಧಿ ಬಾರದ್ದು. ನಾನು ಅದಕ್ಕೆ ಈಚಲು ದಿಂಡು ಕೊಟ್ಟಾಗಲೇ ಎಷ್ಟು ಪ್ರೀತಿ ಮಾಡಿತು ನನ್ನನ್ನು ಬಲ್ಲೆಯಾ? ಕೈಯಿಂದಲೇ ಅದನ್ನು ಕಿತ್ತು ತಿಂದಿತು. ನನ್ನದು ಎಂದಿಗೂ ಓಡಿಹೋಗುವ ಮರಿಯಲ್ಲ" ಎಂದು ಉತ್ಸಾಹದಿಂದ ನುಡಿದ. ಆ ದಿನವೆಲ್ಲ ಅವರು ಸಂತೋಷದಿಂದ ನಲಿದಾಡಿದರು. ಕರಿಯನ

ಮಾನ ಮಾತ್ರ ಆನೆಯ ಮರಿಯ ಕಡೆಗಿತ್ತು. 'ಅದಕ್ಕೇನು ಹೆಸರಿಡಲಿ?' ಎಂಬ ಚಿಂತೆ ಅವನದ್ದು. ಕೊನೆಗೆ ಯೋಚಿಸಿ, ಯೋಚಿಸಿ ತನ್ನ ಅಜ್ಜನ ಹೆಸರೇ ಅದಕ್ಕೆ ಒಪ್ಪುತ್ತದೆಂದು ತಿಳಿದ. ಬೆಟ್ಟದ ತುದಿಯಿಂದಲೇ 'ಕೆಂಚ' ಎಂದು ನಾಮಕರಣ ಮಾಡಿದ—ಕುಕ್ಕರಳ್ಳಿಯಲ್ಲಿ ಕಟ್ಟಿಬಂದ ಆನೆಯ ಮರಿಗೆ. ಮಾರುದಿನ ಬೆಳಗ್ಗೆ ಅವರೆಲ್ಲರು ಕುಕ್ಕರಳ್ಳಿಗೆ ಹೊರಟರು. ಕರಿಯ ಗಿಡ್ಡಿಯ ಮಗುವನ್ನು ಹೊತ್ತುಕೊಂಡು, ಆನೆಯ ಬಳಿಗೆ ಹೋದಾಗ ತಿಮ್ಮನ ಗಾಬರಿ ಹೇಳುವುದಕ್ಕಿಲ್ಲ. "ನೀನು ಮಗುವನ್ನಿಲ್ಲಿ ಕೊಡು, ಮಗುವನ್ನಿಲ್ಲಿ ಕೊಡು" ಅನ್ನುತ್ತಲೇ ಇದ್ದಾನೆ ತಿಮ್ಮ.

## ಅಧ್ಯಾಯ ೧೮

ಕರಿಯ ಸಾಮಾನ್ಯವಾಗಿ ತನ್ನ ಹುಟ್ಟೂರಿನ ಬೆಟ್ಟಗಳನ್ನು ಬಿಟ್ಟು, ಬಯಲು ಭೂಮಿಯಲ್ಲಿ ತಿಂಗಳು ದಿನವೂ ಕಳೆದವನಲ್ಲ. ಆದರೆ ಬಟ್ಯಗೌಡ ನಿಗೆ ಸಲ್ಲಿಸಿದ ಮಾತಿನ ಸಲುವಾಗಿ ಆ ಮೂರು ನಾಲ್ಕು ತಿಂಗಳಾದರೂ ಕುಕ್ಕರಳ್ಳಿಯಲ್ಲಿ ಕಳೆಯಬೇಕಾಗಿತ್ತು. ಅಷ್ಟು ದಿನ ಕುಕ್ಕರಳ್ಳಿಯಲ್ಲಿದ್ದು ಅವರ ಕೆಲಸಗಳಿಗೆ ನೆರವಾಗಬೇಕು; ತಾನು ಸಾಕಿದ ಆನೆ ಮರಿಯ ಹಿಂದೆ ಕಾವಲಿರಬೇಕು. ಅದಕ್ಕೆ, ಎಳೆಯ ಮಗುವಿಗೆ ಮಾಡುವ ಪೋಷಣೆಯನ್ನೆಲ್ಲ ಮಾಡುತ್ತಾನೆ ಆತ. ಹಳ್ಳಕ್ಕೆ ಕೊಂಡೊಯ್ಯುತ್ತಾನೆ; ಸ್ನಾನ ಮಾಡಿಸುತ್ತಾನೆ. ಕಾಡಿನ ಸೊಪ್ಪು, ಬಯನಿ ದಿಂಡುಗಳನ್ನು ತಂದು ತಿನ್ನಿಸುತ್ತಾನೆ. ಅಷ್ಟು ತೀವ್ರವಾಗಿ ಅದು ಹೋದಲ್ಲಿಗೆ ಹಿಂಬಾಲಿಸುವ ಮರಿಯಾದೀತು—ಎಂದು ಅವನು ಎಣಿಸಿರಲಿಲ್ಲ. ಆದರೂ ಬಟ್ಯಗೌಡ ಒಂದೊಂದಾಗಿ ಅನುಮಾನ ವನ್ನು ಅವನ ತಲೆಯಲ್ಲಿ ತುಂಬಿಸುತ್ತಾನೆ. "ನನಗೆ ಗೊತ್ತಿಲ್ಲ. ನಾನು ಕೇಳಿದ್ದು; ಸ್ವಲ್ಪ ಸ್ವಲ್ಪ ಕಂಡದ್ದು. ನಿನ್ನ ಮರಿಗೆ ನೀನು ಸೊಪ್ಪು, ಕಣಿಲೆ ಮಾತ್ರೊಂದು ಹಾಕಿದರೆ ಎಷ್ಟು ದಿನ ಅದು ನಿನ್ನ ಕೈಯಲ್ಲಿ ಉಳಿದೀತು. ಕಾಡಿ ನಲ್ಲಿ ಸಿಗುವ ಆಹಾರವನ್ನು ಅದು ತಾನೇ ಹುಡುಕಿ ಹೋಗಲಾರದೆ? ಧರ್ಮ ಸ್ಥಳ ದೇವಸ್ಥಾನದಲ್ಲಿ ಆನೆ ಸಾಕಿದ್ದನ್ನು ಕಂಡಿದ್ದೇನೆ. ಅದಕ್ಕೆ ನಿತ್ಯ ರಾಗಿ ಮುದ್ದೆ ಮಾಡಿ ಕೊಡುತ್ತಾರೆ; ಅನ್ನ ಕೊಡುತ್ತಾರೆ; ಬೆಲ್ಲ ಕೊಡುತ್ತಾರೆ. ಅದಕ್ಕೆ ಅಂಥ ತಿಂಡಿ ತಿನಸುಗಳ ರುಚಿ ಹಿಡಿದು ನಮ್ಮ ಜತೆಯಲ್ಲಿ ಉಳಿಯು

ವುದಂತೆ. ನಿನಗೆ ಅದನ್ನೆಲ್ಲ ಮಾಡಿ ಪೂರೈಸೀತೇ? ಎಲ್ಲಿಂದ ಅಷ್ಟನ್ನು ತರುತ್ತೀಯಾ? ಮರಿಯಾದರೇನು? ದಿನಕ್ಕೆ ನಾಲ್ಕು ಸೇರು ಅನ್ನ ತಿಂದೀತು. ಬೆಲ್ಲ ಕೊಂಡುಕೊಡುವುದಕ್ಕೆ ನಿನ್ನ ಸಂಪಾದನೆ ಏನು? ನನ್ನ ಹತ್ತಿರ ಕೇಳಿದರೆ—ಯಾರಿಗಾದರೂ ಅದನ್ನು ಮಾರಿಬಿಡು. ಇಲ್ಲವೆ—ಸುಬ್ರಹ್ಮಣ್ಯಕ್ಕೋ, ಧರ್ಮಸ್ಥಳಕ್ಕೋ ಕೊಂಡುಹೋಗಿ ಕೊಡು. ನೂರು ರೂಪಾಯಿ ಕಾಸಾದರೂ ಕೈಗೆ ಬಂದೀತು. ಅಷ್ಟೇ ಲಾಭ" ಎನ್ನುತ್ತಾನೆ. ಇನ್ನೊಮ್ಮೆ "ಹೌದು ಕರಿಯ, ಆನೆ ಈಗ ಮರಿ. ನೀನು ಹೋದಲ್ಲಿಗೆ ಬರುತ್ತದೆ; ನಿಜ. ಕಟ್ಟಿದಲ್ಲಿಯೂ ನಿಂತಿರುತ್ತದೆ. ಅದು ಗಂಡು. ಬೆಳೆದು ದೊಡ್ಡದಾದರೆ ಅದಕ್ಕೆ ಮತ್ತು ಬರುವುದುಂಟಂತೆ. ಅಂಥ ಆನೆಯನ್ನು ಎರಡೆರಡು ಸರಪಣಿಗಳಿಂದ ಕಟ್ಟುವುದೂ ಕಷ್ಟವಂತೆ. ನೀನು ಬೆತ್ತದ ಹಗ್ಗದಿಂದ ಹೇಗೆಯೋ ಅದನ್ನು ಕಟ್ಟಿದರೆ ಅದು ಒಂದು ಸಾರಿ ಕಾಲು ಜಾಡಿಸಿದರೆ ತುಂಡಾದೀತು" ಎಂದೂ ಸೂಚಿಸಿದ. ಇದರಿಂದೆಲ್ಲ ಆನೆಯ ವಿಚಾರದ ಚಿಂತೆ ಕರಿಯನಿಗೆ ಹೆಚ್ಚಿತು. ಅದನ್ನು ಕೊಡುವ ಮನಸ್ಸು, ಬಿಡುವ ಮನಸ್ಸು ಬರಲೊಲ್ಲದು. ಬಟ್ಯನೆನ್ನುವ ಮಾತುಗಳು ಸುಳ್ಳೆನ್ನುವುದಕ್ಕಿಲ್ಲ. ಹಿಂದೆ ಮೂಲೆಗುಂಪಿನಲ್ಲಿ ನಾಟ ಸಾಗಿಸುವುದಕ್ಕೆ ತಿರುಮಲಭಟ್ಟರು ಆನೆ ತರಿಸಿದ್ದನ್ನು, ಸಾಕಿದ್ದನ್ನೂ ಆತ ಕಂಡಿದ್ದಾನೆ. ಅದನ್ನು ಕಟ್ಟುವುದಕ್ಕೆ ಒಂದು ಸರಪಣಿ ಬೇಕೇಬೇಕು. ಯಾರು ಅದನ್ನು ಕೊಡುವವರು—ಎಂಬ ಚಿಂತೆಯಿಂದ ತಿಂಗಳೆಲ್ಲ ಹುಡುಕಿಕೊಂಡು, ಮಗ್ಗುಲ ಹಳ್ಳಿಗೆ ಹೋಗಿ, ಕಮ್ಮಾರನನ್ನು ಕಂಡು, ತಾನು ದುಡಿದ ಬತ್ತದಲ್ಲಿ ಹೊಟ್ಟೆಗೂ ತಿನ್ನದೆ, ಕಬ್ಬಿಣದ ಒಂದು ಸರಪಣಿ ಸಂಪಾದಿಸುವುದಕ್ಕೆ ಕರಿಯನಿಗೆ ಅಷ್ಟು ಕಷ್ಟವಾಯಿತು. ಹಾಗಿರುತ್ತ, ನಿತ್ಯ ನಿತ್ಯ ಬೇಕಾಗುವ ರಾಗಿ, ಅನ್ನ, ಬೆಲ್ಲಗಳು—ಎಂದರೆ ಅವನೆಲ್ಲಿಂದ ತರಬೇಕು? ತಿಮ್ಮನೂ "ನಿನಗೆ ಇದು ಬೇಡದ ವ್ಯಾಪ್ತಿ" ಅನ್ನುತ್ತಾನೆ. ಅದಕ್ಕೆ ಕರಿಯನ ಉತ್ತರ ಇಷ್ಟೆ: "ತಿಮ್ಮ, ಇಲ್ಲಿಯ ಕೆಲಸ ಮುಗಿದ ಮೇಲೆ ಈ ಮರಿಯನ್ನು ನಮ್ಮ ಮಲೆಗೇನೆ ಕೊಂಡುಹೋಗುವ. ಅಲ್ಲಿ ರಾಗಿಯೂ ಬೆಳೆಯುತ್ತದೆ; ಬತ್ತವೂ ಬೆಳೆಯುತ್ತದೆ. ನಾಲ್ಕು ದಿನ ಹೆಚ್ಚು ದುಡಿಯಬೇಕಾದೀತು. ಒಂದಿಷ್ಟು ಕುಮರಿ ಜಾಗ ಹೆಚ್ಚಿಸಬೇಕಾದೀತು. ಬದಲು 'ಬಿಟ್ಟುಬಿಡು, ಮಾರಿ ಬಿಡು' ಎನ್ನುವ ಮಾತನ್ನಾಡಬೇಡ. ಅದು ನನ್ನ ಜೀವ" ಎನ್ನುತ್ತಿದ್ದ.

"ಹೂಂ, ಇನ್ನು ಆ ಮರಿ ಮಲೆ ಹತ್ತಿ ನಮ್ಮ ತಾವನ್ನು ಸೇರಬೇಕೇ? ನಮಗೆ ಆ ಬೆಟ್ಟ ಹತ್ತುವುದಕ್ಕೆ ಉಸಿರು ಗಂಟಲಿಗೆ ಸಿಗುತ್ತದೆ. ಇನ್ನು ಅದು ಹತ್ತುವುದುಂಟೋ?" ಎಂದು ಅದಕ್ಕೂ ತಣ್ಣೀರು ಎರಚುತ್ತಾನೆ ತಿಮ್ಮ.

ಮುಖ್ಯ ಆದದ್ದೆಂದರೆ, ತಿಮ್ಮ ಸಂಸಾರ ಕಟ್ಟಿಕೊಂಡು ಕೆಳಗೆ ಬಂದ ಮೇಲೆ, ಊರಿನ ನಾಲ್ಕು ಜನಗಳ ಗುರುತು ಆದ ಮೇಲೆ, ಹಿಂದಿನ ಮೂರು ವರ್ಷಗಳ ಒಂಟಿ ಬಾಳನ್ನು ನೆನೆದು, ಮುಗಿಲ ಮನೆಯಾದ ಕರಿಯ ಮಲೆಯಲ್ಲಿ ವಾಸಿಸುವ ಜೀವನ ಕಷ್ಟವೆಂದು ತೋರಿತು. ಗಿಡ್ಡಿಗಂತು ಅದು ಇನ್ನಷ್ಟು ಕಷ್ಟವಾಗಿ ತೋರಿತ್ತು. ಮಲೆಯಲ್ಲಿ ನೆಂಟರೇ, ಇಷ್ಟರೇ, ಸ್ನೇಹಿತರೇ? ಮತ್ತೊಬ್ಬರೇ? ಧನಿಗಳ ಹೆದರಿಕೆಯಿಂದ ಆತ ಓಡಿ ಬಂದದ್ದೇನೋ ನಿಜ. ಆದರೆ ಮನುಷ್ಯರ ಸಂಪರ್ಕವನ್ನೇ ಕಡಿದು, ಬಾಳುವುದಕ್ಕೆ ಹೇಗೆ ಮನಸ್ಸಾದೀತು? ಅವಳು ಆಗಾಗ ಕರಿಯಣ್ಣನೊಡನೆ ಅನ್ನುತ್ತಾಳೆ "ಕರಿಯಣ್ಣ, ಇಲ್ಲಿಗೆ ಬಂದಿದ್ದೇವೆ. ಇಲ್ಲಿ ದುಡಿದರೆ ಜೀವನ ಸುಖವಾಗಿ ಹೋದೀತು. ಬಟ್ಯಗೌಡ ಇರುವುದಕ್ಕೆ ಕೊಟ್ಟಿಗೆ ಕೊಟ್ಟಿದ್ದಾನೆ. ಊರು ಅವನದ್ದಲ್ಲದಿದ್ದರೂ, ಯಾರದ್ದಾದರೂ ಹಾಳುಬಿದ್ದ ಹೊಲ ಸಿಕ್ಕೀತು. ಇಲ್ಲಿಯೇ ಬತ್ತ, ರಾಗಿ ಬೆಳೆಯಬಹುದು. ಮನೆಯ ಬೆಂಗಡೆಯೇ ಕಾಡಿದೆ. ಬೇಟೆಗೂ ಬರಗಾಲವಿಲ್ಲ. ಅತ್ತ, ಅಪ್ಪ ಅಮ್ಮನನ್ನು ಕಾಣದೆ ವರ್ಷದ ಮೇಲಾಯಿತು. ಅವರು ಮಲೆಗೆ ಬಂದು ನಾವಿಲ್ಲದ್ದನ್ನು ಕಂಡು ಹಿಂದಕ್ಕೆ ಹೋದರೋ, ಏನು ತಿಳಿದುಕೊಂಡರೊ. ಅಲ್ಲದೆ ನೋಡು—ನೀವು ಗಂಡಸು. ದಿನವೆಲ್ಲ ತಿರುಗಾಡಿ ಹೇಗೂ ಸಮಯ ಕಳೆಯುತ್ತೀರಿ. ನಾನು ಈ ಒಂದು ಮಗವನ್ನು ಕಟ್ಟಿಕೊಂಡು ಒಬ್ಬಳೇ ಗುಮ್ಮನ ಹಾಗೆ ಎಷ್ಟು ಕಾಲ ಕುಳಿತಿದ್ದೇನು? ಕೆಳಗೆ ಬಂದಮೇಲೆ—ಎಷ್ಟೋ ಸುಖ ಕಾಣುತ್ತೆ, ನನ್ನ ಜೀವಕ್ಕೆ ಪ್ರೀತಿಗೆ, ಸ್ನೇಹಕ್ಕೆ, ಸುಖಕ್ಕೆ ನಾಲ್ಕು ಜನವಾದರೂ ಸಮೀಪ ಇದ್ದಾರೆ. ಜಾತಿಯವರಲ್ಲ ನಿಜ. ಜಾತಿ ಕೊಂಡು ಏನು ಮಾಡುತ್ತೀಯಾ? ಕೇರಿಯಲ್ಲಿದ್ದು ಆದದ್ದೇನು?" ಎನ್ನುತ್ತಾಳೆ. ಸ್ನೇಹರಹಿತವಾದ ಅವರ ಅಜ್ಞಾತ ಬಾಳು ಎಂಥವನ ಎದೆಯನ್ನೂ ಕರಗಿಸಬೇಕಿತ್ತು. ಹೀಗಿರುತ್ತ ಹೆಣ್ಣುಮಗಳಾದ ಗಿಡ್ಡಿ ಅದರಿಂದ ತುಂಬ ಬೇಸರಗೊಂಡುದರಲ್ಲಿ ಆಶ್ಚರ್ಯವಿಲ್ಲ. "ಕರಿಯಣ್ಣ, ನಾನನ್ನುತ್ತೇನೆ—ಕೇಳು. ನೀನೂ ಎಷ್ಟು ದಿನ ಹೀಗೇ

ಇರುತ್ತೀಯಾ? ಕಳೆದ ವರ್ಷ ಅಪ್ಪ ಬಂದಾಗ, ನನ್ನ ತಂಗಿಗಿನ್ನೂ ಮದುವೆ ಯಾಗಿಲ್ಲ ಅನ್ನುತ್ತಿದ್ದ. ಚೆಂದದ ಹುಡುಗಿ, ಅವಳು. ನೀನೂ ನೋಡಿರ ಬಹುದು. ಲಗ್ನ ಮಾಡಿಕೊಂಡು ಅವಳನ್ನು ಇಲ್ಲಿಗೇ ಕರೆದುಕೊಂಡು ಬಾ. ಇರುವ ಈ ಊರಿನಲ್ಲಿ ಒಟ್ಟಿಗೆ" ಎಂದೂ ಅಂದಿದ್ದಾಳೆ. ಅತ್ತ ಸಂಸಾರದ ಆಸೆ, ಇತ್ತ ಆನೆ ಮರಿಯ ಚಿಂತೆ—ಇವುಗಳೆರಡಕ್ಕೂ ಹೊಂದಿಕೆ ಬೀಳ ಲಾರದ್ದು—ಎಂದು ಕರಿಯನ ಮನಸ್ಸು ಹೇಳುತ್ತದೆ. ಇದ್ದ ವೇಳೆಯನ್ನು ಆತ ಹಂಚಿ ಹಾಕಬೇಕಾಗುತ್ತದೆ.

ಎರಡು ಮೂರು ತಿಂಗಳ ಕಾಲ ಸರಿದರೂ ಕುಕ್ಕರಳ್ಳಿಯ ತೋಡು ಮೊದಲಿನ ದಾರಿಯಲ್ಲಿ ಹೋಗುವಂತೆ ಮಾಡಲು, ಬೆಟ್ಟು ಅಗೆಯುವ ಕೆಲಸ ವಾಯಿತು, ನದಿಗೆ ದಂಡೆ ಕಟ್ಟಿಹಾಕಿ, ಕೇದಗೆ, ಮುಂಡಕಗಳನ್ನು ಸಟ್ಟು, ಬಲಪಡಿಸುವುದಕ್ಕೆ ಊರವರು ತಿಂಗಳು ತಿಂಗಳು ದುಡಿಯಬೇಕಾಯಿತು. ಮತ್ತೂ ಆರು ತಿಂಗಳು ದುಡಿದರೂ ಮುಗಿಯದಷ್ಟು ಕೆಲಸ ಬಿದ್ದಿದೆ. ಹಳ್ಳ ದಿಂದ ಒಡಗು ಆಗಿ ಬಂದ ಮಣ್ಣಿನ ರಾಶಿ, ಮೂರು ನಾಲ್ಕು ಎಕ್ರೆಯಷ್ಟು ಸುಗ್ಗಿ ಗದ್ದೆಗಳ ಮೇಲೆ ಹಳ್ಳಕ್ಕಿಂತ ದಪ್ಪನಾಗಿ ಹರಡಿ ಬಿದ್ದಿದೆ. ಅವುಗಳಲ್ಲಿ ಹೆಚ್ಚಿನ ಗದ್ದೆಗಳೆಲ್ಲ ಬಟ್ಯನವು. ಬಟ್ಯ ಈ ವರ್ಷ ತನಗೆ ಉಪವಾಸವೇ ಗತಿ ಎಂದು ತಿಳಿದಿದ್ದಾನೆ. ಆತ ಊರಿಗೆ ಬೇಕಾದವನಾದುದರಿಂದ, ನಾಲ್ಕು ಮನೆಯವರು, ಈ ಕುಡಿಯರು ಸೇರಿ ಬೆಳಗ್ಗೆ ಸಂಜೆ ಮಣ್ಣನ್ನು ಕೊಚ್ಚಿ, ಬುಟ್ಟಿಯಲ್ಲಿ ತುಂಬಿಸಿ ಹೊರುತ್ತಲೇ ಇದ್ದಾರೆ. ಅವರೆಲ್ಲರೂ ಪ್ರತಿಫಲ ಬಯಸಿದುದಾದರೆ, ಬಟ್ಯಗಾಡನ ತಳವೇ ಕಿತ್ತುಹೋಗುತಿತ್ತು. ಹಾಗಾಗ ಲಿಲ್ಲ. ಊರ ಜನ ನೆರವಾದರು. ಎಲ್ಲರೂ ಸೇರಿ ಅವನಿಗಾಗಿ ದುಡಿದರು. ಇದ್ದ ಕಾಳನ್ನು ಹಂಚಿಕೊಂಡು ಅಂಬಲಿಯನ್ನಾದರೂ ಉಂಡರು. ಮೂಲೆ ಗುಂಪಿನ ಜಾತ್ರೆಗೆ ಸಮನಾಗಿ ಕುಕ್ಕರಳ್ಳಿಯ ಹೊಲ, ಗದ್ದೆಗಳು ಮೊದ ಲಿನಂತಾದೀತೆಂಬ ನಿರೀಕ್ಷೆ ತಾಳಿದರು.

ಈ ನಡುವೆ ಕರಿಯ, ತಿಮ್ಮರಿಗೆ ಕಂಡುಬಂದ ತೊಡಕಿನ ಪ್ರಸಂಗ ವೆಂದರೆ, ಅವರ ಆನೆಯ ಕೀರ್ತಿ ಅಸುಪಾಸಿಗೆ ಹಬ್ಬಿದ್ದು. 'ಕುಡಿಯ ನೊಬ್ಬ ಆನೆಯ ಮರಿಯನ್ನು ಹಿಡಿದು ಕಟ್ಟಿಹಾಕಿದ್ದಾನೆ' ಎಂದರೆ ಸುತ್ತಲ ಹಳ್ಳಿಯವರಿಗೆ ಬಹು ದೊಡ್ಡ ಸುದ್ದಿಯಾಗದಿದ್ದೀತೇ! ಹಿಡಿದದ್ದು—ತಾನಾಗಿ

ಸಿಕ್ಕಿಬಿದ್ದ ಒಂದು ಮರಿಯಸ್ನಾದರೂ, ಜನರ ಬಾಯಲ್ಲಿ ಸುದ್ದಿ ಸಂಚರಿಸಿ, ಭಾರಿ ಮುದ್ದಾನೆಯಾಗಿದೆ. ತಿಂಗಳ ಕಾಲ, ಅದನ್ನು ಕಾಣುವುದಕ್ಕೆಂದೇ ಹತ್ತು ನೂರು ಜನ ಕುಕ್ಕರಳ್ಳಿಗೆ ಬಂದುದುಂಟು. ಬಂದು ನೋಡಿ—'ಇದೋ! ಮರಿ. ಇದನ್ನು ಹಿಡಿಯದೆ ಏನು? ಬೆಳೆದ ಕೋಣದ ಗಾತ್ರ ಇದೆ' ಎಂದು ಸುದ್ದಿಯ ಮಹಿಮೆಯನ್ನು 'ಪುಸ್' ಎಂದು ಸಣ್ಣದುಮಾಡಿ ಹೊರಟುಹೋದವರೂ ಉಂಟು. ಆದರೂ ಸುದ್ದಿ ಸುದ್ದಿಯೇ! ಕಂಡವರು ಏನೇ ಅನ್ನಲಿ—ಕಾಣದವರ ಕಿವಿಗೆ ಆನೆ ಆನೆಯಷ್ಟೇ ಗಾತ್ರವಾಗುತ್ತದೆ. ಕಾಡಾನೆ ಹಿಡಿದು ಸಾಕುವ ಕರಿಯ ದೊಡ್ಡ ಮಾವುತನಾಗಿದ್ದಾನೆ. ಕುಕ್ಕರಳ್ಳಿಯಿಂದ ಈ ಸುದ್ದಿ ಸಂಚರಿಸಿ, ಮೂಲೆಗುಂಪಿಗೂ ಮುಟ್ಟಿ, ಅಲ್ಲಿಂದ ಕಿರಿ ಮಲೆಗೂ ಹೋಯಿತು; ಹಿರಿ ಮಲೆಗೂ ಹೋಯಿತು. ಆ ಕುಡಿಯ ಯಾರು, ಏನೆಂಬ ವಿಚಾರ ಯಾರಿಗೂ ತಿಳಿಯದಾದರೂ, ಆ ಕತೆ ಕೇಳಿದ ಕುಡಿಯರಿಗೆ ಅದೊಂದು ಹೆಮ್ಮೆಯ ಸುದ್ದಿ ಎನಿಸಿತು. ತಿರುಮಲಭಟ್ಟರ ಮಗ ರಾಮಚಂದ್ರಯ್ಯ ಮೂರನೆಯ ಮಹಾಲಯ ಅಮಾವಾಸ್ಯೆ ಕಳೆದು ಮಲೆಗೆ ಬಂದಾಗ ಆ ಸುದ್ದಿಯನ್ನು ಕೇಳಿದರು. "ಅಂಥ ಕುಡಿಯರಿದ್ದಾರೋ? ಕುಡಿಯರೆಲ್ಲರು ಬೆಪ್ಪು, ಹೆಡ್ಡ—ಎನ್ನುತ್ತಿದ್ದರು ಅಪ್ಪ. ಅವನ್ಯಾರೆಂದು ನೋಡಬೇಕಲ್ಲ" ಎಂದು ಅವರೆಂದುದುಂಟು. ಮತ್ತೆ ಮಲೆಯ ತಾಪತ್ರಯ ತೊಡಗಿತು. ತಂದೆ ವಿಟ್ಟಲದಲ್ಲಿ ಸಂಪೂರ್ಣ ಹಾಸಿಗೆ ಹಿಡಿದಿದ್ದರು. ಪಾರ್ಶ್ವವಾತದಿಂದ ಅವರು ಮೇಲೆ ಏಳುವ ಭರವಸೆ ಇರಲಿಲ್ಲ. ಹಾಗಾಗಿ ರಾಮಚಂದ್ರಯ್ಯನೇ ಮಲೆಯಿಂದ ಊರಿಗೆ, ಊರಿಂದ ಮಂಗಳೂರಿಗೆ—ಏಲಕ್ಕಿ ಕೊಂಡು ಮಾರುವುದಕ್ಕೂ ಓಡಾಡಬೇಕಾಯಿತು. ಎರಡು ಮೂರು ಬಾರಿ ಅವರು ಮಲೆಗೆ ಬಂದಾಗಲೂ, ಆನೆಯ ಸುದ್ದಿ ಅಂದೇ ಅನ್ನುತ್ತಿದ್ದರು—ಜನ. ಬೇಟೆಯ ಹುಚ್ಚಿನ ಅವರಿಗೆ, ವನ್ಯಮೃಗಗಳ ವಿಷಯವಾಗಿ ಅಪೂರ್ವದ ಕುತೂಹಲ. ಆ ಕುತೂಹಲದ ದೆಸೆಯಿಂದ "ತುಕ್ರ, ಪುರುಸೊತ್ತೇ ಆಗುವುದಿಲ್ಲ. ಯಾವಾಗ ಹೋಗುವುದು ಕುಕ್ಕರಳ್ಳಿಗೆ—ನಾವು. ಸುದ್ದಿ ಕೇಳಿ ಮೂರು ತಿಂಗಳಾಯಿತು. ಈಗ ಆ ಆನೆ ಉಂಟೋ, ಸತ್ತಿತೋ? ನಿನಗೆಲ್ಲಾದರೂ ಬಿಡುವಾದರೆ ಹೋಗಿ ಮೊದಲು ನೋಡಿಕೊಂಡು ಬಾ. ಅದು ಇದ್ದುದು ನಿಜವಾದರೆ ನಾವಿಬ್ಬರೂ ಹೋಗಿ ನೋಡುವ" ಎಂದೂ ಅಂದರು.

ಮಳೆಗೆ ಬಂದಾಗ, ಬಿಡುವಿದ್ದಾಗ ತಾವು ತಂದ, ಹೊಸ ತೋಟಿಕೋವಿಯನ್ನು ಹಿಡಿದುಕೊಂಡು, ತುಕ್ರನನ್ನು ಕಟ್ಟಿಕೊಂಡು ಶಿಕಾರಿಯ ಹುಚ್ಚಿನಿಂದ ಅವರು ಅಲೆದಾಡಿದ್ದೂ ಉಂಟು. ತುಕ್ರನ ಶಿಕಾರಿಯೆಂದರೆ ಉರುಳಿನ ಬೇಟೆ. ಪ್ರಾಣಿ ಎಲ್ಲಿದೆ ಎಂದು ಕಂಡು ಗುಂಡುಹಾರಿಸುವ ವಿಧಾನವಲ್ಲ. ಅದು ಬರುವ ತಾವನ್ನು ಗುರುತಿಸಿ, ಅಲ್ಲಿ ಉರುಳಿಟ್ಟು ಹಿಡಿಯುವ ಬಗೆ. ಆದರೆ ಅವರ ಧನಿಗಳಿಗೆ ಉರುಳಿಗೆ ಸಿಕ್ಕಿದ ಬರ್ಕ, ಕೆಮ್ಮಗಳನ್ನು ಕಾಣುವ ಇಚ್ಛೆಗಿಂತ ಜೀವದಲ್ಲಿ ಸ್ವಚ್ಛಂಧವಾಗಿ ಓಡಾಡುವ ಮಿಕ, ಬರ್ಕಗಳನ್ನು ನೋಡುವ ಹಂಬಲ. ಎಷ್ಟೋ ಬಾರಿ ತುಕ್ರನನ್ನು ಅವರು ಕಟ್ಟಿಕೊಂಡು, ಅಲೆದು, ಅಲೆದು, ಬೇಸತ್ತು—ಸಮೀಪದಲ್ಲಿ ದೃಷ್ಟಿಗೆ ಕಾಣಸಿಗದ ಕಡವೆಯನ್ನೋ, ಕಾಟಿಯನ್ನೊ ದೂರದಲ್ಲೇ ಕಂಡು ಸಮಾಧಾನಪಟ್ಟು ಮರಳಬೇಕಾಗಿತ್ತು. ಒಂದೆರಡು ಬಾರಿ, ತುಂಬಿಸಿದ ತೋಟಿ ಹಾಳಾಗುತ್ತದಲ್ಲ ಎಂಬ ಸಂಕಟದಿಂದ, ಗುರಿ ನೋಡುವುದಕ್ಕೆ ಮರದ ಮೇಲೆ ಕುಳಿತ ಒಂದೆರಡು ಮುಸುವಗಳನ್ನು ಹೊಡೆದು ಉರುಳಿಸಿದ್ದನಾತ. ಆಗ ತುಕ್ರನಿಗಾದ ನಿರಾಶೆ ಹೇಳಿತೀರದು! "ಛೇ ಅದನ್ಯಾಕೆ ಹೊಡೆದಿರಿ; ತಿನ್ನಲಿಕ್ಕೂ ಬರುವುದಿಲ್ಲ. ಮಂಗನನ್ನಾದರೂ ಹೊಡೆಯಬಹುದಿತ್ತು" ಎಂದಿದ್ದ ಅವ. ಮುಸುವಗಳು ಕುಡಿಯರ ಶಾಸ್ತ್ರದಲ್ಲಿ ದೇವರ ಕುಲಕ್ಕೆ ಸೇರಿದವುಗಳು. ಪ್ರಾಯಶಃ ರಾಮಾಯಣದ ಆಂಜನೇಯನ ಮಕ್ಕಳು. ಮಂಗಕ್ಕೆ ಆ ಗೌರವವಿಲ್ಲ; ಅದನ್ನು ತಿನ್ನಬಹುದು. ಉರುಳಿಟ್ಟು ತಿಂದೂ ತಿನ್ನುತ್ತಾರೆ. ತುಕ್ರನ ಜತೆಯಲ್ಲಿ ತಿರುಗಾಡಿದರೆ ರಾಮಚಂದ್ರಯ್ಯಗೆ ಶಿಕಾರಿಯ ಆಸೆಯೂ ತಣಿಯುವಂತಿಲ್ಲ. ಒಮ್ಮೆ ಅಂದೂ ಅಂದರು. "ತುಕ್ರ, ನೀನು ಯಾಕೂ ಮುಡಿಯುದವ. ಇಷ್ಟು ದೊಡ್ಡ ಕಾಡಿನಲ್ಲಿ ಇಷ್ಟು ವರ್ಷಕಾಲ ಇದ್ದು, ಒಂದು ಕಾಟಿಯನ್ನೋ, ಒಂದು ಹುಲಿಯನ್ನೋ ಹತ್ತಿರದಿಂದ ತೋರಿಸದಿದ್ದಮೇಲೆ, ಬರಿಯ ದಂಡ ನೀನು. ಪ್ರಾಯಶಃ ನೀವು ಕುಡಿಯರ ಮಕ್ಕಳೆಲ್ಲ ಹಾಗೆಯೇ ಎಂದು ಕಾಣುತ್ತದೆ. ಕವಣೆ ಬೀಸಿ ಕಾಗೆ ಹೊಡೆಯುವಷ್ಟು ಬುದ್ಧಿವಂತರು" ಎಂದು ಪರಿಹಾಸ್ಯ ಮಾಡಿದರು. ತುಕ್ರ ನಗಬೇಕಾಯಿತು. ಆದರೆ ತಾನಷ್ಟು ಹೆಡ್ಡನೆಂದು ಒಪ್ಪಿಕೊಳ್ಳಲು ಆತ ಸಿದ್ಧನಿರಲಿಲ್ಲ. "ಅಯ್ಯಾ, ನಾನು ಅಷ್ಟು ಸದರವೆಂದು ತಿಳಿದಿರೋ? ಪ್ರಾಯದವನಿರುವಾಗ ಕರಡಿಯನ್ನು ಹಿಡಿದು ಕೊಂದಿದ್ದೆ" ಎಂದ.

" ಅದೆಂಥ ಕರಡಿ—ಮಹಾರಾಯ! ಕರಡಿಯೋ, ಹೆಗ್ಗಣವೋ?"

ತುಕ್ರ ಕರಡಿಯೊಡನೆ ತಾನು ಕಾದಾಡಿದ ಕತೆ ಹೇಳಿದ. ಸಾಕ್ಷಿಗೆ ಆ ಕರಡಿ ಪರಚಿದ ಉಗುರಿನ ಕಲೆಗಳನ್ನೂ ತೋರಿಸಿದ. ಧನಿ ಅವನ ಗತಕಾಲದ ಶೌರ್ಯವನ್ನು ನಂಬಲೇಬೇಕಾಯಿತು. ಆದರೆ ಕತೆ ಕೇಳಿ "ಹೋ, ಹಾಗೋ, ಅದು ಮೈಮೇಲೆ ಬಂದು ಬಿತ್ತು. ನಿನ್ನ ಕೈಯಲ್ಲಿ ಕತ್ತಿ ಇತ್ತು. ನೀನು ಸಾಯಲಾರದ ಹೆದರಿಕೆಯಿಂದ ಕತ್ತಿ ಬೀಸಿದೆ, ಅದು ಸತ್ತಿತು. ನಿಜಕ್ಕೂ ಕರಡಿ ಇದೆ—ಅನ್ನುತ್ತೀಯಾ ಈ ಮಲೆಯಲ್ಲಿ?"

" ಛೆ, ಇಲ್ಲದೆ ಉಂಟೇ? ಒಂದಲ್ಲ ನೂರು ಸಾವಿರ ಇದ್ದೀತು. ಅವು ಹಗಲಿಗೆ ಹೊರಗೆ ಬರುವುದಿಲ್ಲ. ಗುಹೆಯಲ್ಲಿರುತ್ತವೆ. ನಮ್ಮ ತೋಟದ ಸಮೀಪವೇ ಕರಡಿಗುಹೆ ಇದೆ."

" ಹಾಗಾದರೆ ಹೋಗಿ ನೋಡಬೇಕಲ್ಲ. ಎಂದು ಹೋಗುವ?"

" ಹಾಗೆ ಒಬ್ಬಿಬ್ಬರೇ ಹೋಗಬಾರದು, ಒಡೆಯ. ಹೋದಾಗ ಅಲ್ಲಿ ಕರಡಿ ಇರುವುದು, ಅದು ಮೈಮೇಲೆ ಹಾರಿ ಬರೋದು. ಕಾಡಲ್ಲವೇ ಅದು. ಹತ್ತಿರ ಹೋದಮೇಲೆ ಗೊತ್ತಾಗುತ್ತದೆ. ಹತ್ತಿರದಲ್ಲಿ ನಿಂತಾಗ ಕೋವಿಗೀವಿ, ಪ್ರಯೋಜನವಿಲ್ಲ. ಹಿಂದೆ ನನ್ನ ಮೈಯಲ್ಲಿ ತ್ರಾಣವಿತ್ತು, ಕೊಂದನೆಂದು ಈಗೇನು ಮಾಡಿಯೇನೆಂದು ಹೇಳಲಾರೆ. ಅಂತೂ ಹೋಗುವ. ನೀವು ಜಾತ್ರೆಗೆ ಬರುತ್ತೀರಲ್ಲ. ಆಗ ನಮಗೂ ಎಲ್ಲ ಕೆಲಸ ಮುಗಿದಿರುತ್ತೆ. ನಾನು ಅಷ್ಟರೊಳಗೆ ಅದರ ಗುಹೆ ಎಲ್ಲಿದೆ, ಏನು, ಎಂದು ನೋಡಿಕೊಂಡು ಬರುತ್ತೇನೆ."

" ಹೂಂ, ನೀನು ನೋಡಿ, ಬಂದು ನನಗೆ ಕಾಗದ ಹಾಕು. ಅಲ್ಲಿಯ ವರೆಗೆ ಆ ಕರಡಿಗೆ ಅಲ್ಲೇ ಇರಲಿಕ್ಕೆ ಹೇಳು" ಎಂದು ನಕ್ಕು ನುಡಿದರು.

ಅಂಥ ವಿಚಾರಗಳಲ್ಲಿ ರಾಮಚಂದ್ರಯ್ಯ ಬೂದನನ್ನು ಕೇಳಿದರು, ಮತ್ತೊಬ್ಬರನ್ನು ಕೇಳಿದರೂ, ಒಂದೇ ಫಲ. ಆ ಜನರಿಗೆ ಕೋವಿ ಹಿಡಿದೇ ಗೊತ್ತಿಲ್ಲ. ತಿನ್ನುವ ಮೃಗಗಳಿಗಾಗಿ ಅವರು ಬೇಟೆಯಾಡುತ್ತಿದ್ದರೇ ಹೊರತು ಶೋಕಿಗಾಗಿ ಶಿಕಾರಿ ಮಾಡಿದವರಲ್ಲ. ಆದುದರಿಂದ "ಇನ್ನೊಮ್ಮೆ ಬರುವಾಗ ಊರಿಂದ ಯಾರನ್ನಾದರೂ ಕರೆದುಕೊಂಡು ಬರುತ್ತೇನೆ. ನಮ್ಮಲ್ಲಿದಾರೆ ಒಳ್ಳೆಯ ಈಡುಗಾರರು" ಎಂದು ಹೇಳಿ ಹೊರಟುಹೋದರು.

ತುಕ್ರ, ಧನಿಗಳು ಜಾತ್ರೆಗೆ ಮರಳಿ ಬರುವುದರೊಳಗಾಗಿ ಶಿಕಾರಿಯ ವಿಚಾರ ತಾನೇನು ಮಾಡುವುದೂ ಅಷ್ಟಕ್ಕಷ್ಟೆ—ಎಂದು ಬಲ್ಲ. ಆದುದರಿಂದಲೇ ಧನಿಗಳು ತೀರ ನಿರಾಶೆಗೊಳ್ಳಬಾರದೆಂದು, ಆನೆಯ ವಿಚಾರ ತಿಳಿದುಕೊಂಡು ಬರುತ್ತೇನೆಂದು ಹೊರಟ. ಧನಿಗಳನ್ನು ಕಳುಹಿಸಿಕೊಡಲು ಮೂಲೆಗುಂಪಿಗೆ ಹೋಗಿದ್ದ. ಅಲ್ಲಿಗೂ ಕುಕ್ಕರಳ್ಳಿಗೆ ಎರಡು ಹರಿದಾರಿ ದೂರವಿದ್ದರೂ ಆನೆಯಿರುವ ಹಳ್ಳಿ ಯಾವುದೋ ಏನೋ ಅನ್ನುತ್ತಾರೆ ಜನ. ಕುಕ್ಕರಳ್ಳಿಯೋ, ಶಿಶಿಲವೋ, ಶಿರಾಡಿಯೋ, ಸುಬ್ರಹ್ಮಣ್ಯವೋ ಎಲ್ಲಿಯೋ ಒಂದು ಕಡೆಯಲ್ಲಿ ಅದು ಉಂಟಂತೆ. 'ನಿಜವೇ, ಸುಳ್ಳೇ'—ಎಂದು ಕೇಳಿದರೆ, 'ಛೆ, ಸುಳ್ಳಲ್ಲ. ನೋಡಿಬಂದವರಿದ್ದಾರೆ' ಎಂದೂ ಅನ್ನುತ್ತಾರೆ. ಆ ನೋಡಿಬಂದವರನ್ನು ಕೇಳಿ, ಕುಕ್ಕರಳ್ಳಿಯಲ್ಲಿ ಅದನ್ನು ಹಿಡಿದದ್ದು—ಎಂದು ತಿಳಿದುಕೊಂಡು ತುಕ್ರ ಅಲ್ಲಿಗೆ ಹೋದ, ವಿಚಾರಿಸಿದ. ಆನೆ ಕಟ್ಟಿದ ತಾವಿಗೇನೇ ಹೋಗಿ ಅದರ ಮುಂದೆಯೇ ತುಸು ದೂರದಲ್ಲಿ ನಿಂತುಕೊಂಡು ಸಂತೋಷವಾಯಿತು. ಆನೆ ಹೌದು, ಅದನ್ನು ಹಿಡಿದದ್ದೂ ಹೌದು, ಇನ್ನೂ ಬದುಕಿದೆ. ಧನಿಗಳಿಗೆ ಅದನ್ನು ತೋರಿಸಬಹುದು. ಇನ್ನು ಅದನ್ನು ಹಿಡಿದ ಭಟನಾರು—ಎಂದು ತನಿಖೆ ಮಾಡುವ ಕೆಲಸ ಮಾತ್ರ ಉಳಿದಿದೆ. ಅದಕ್ಕಾಗಿ ಸಮೀಪದ ಬಟ್ಯನ ಮನೆಯ ಅಂಗಳಕ್ಕೆ ಬಂದ. ಬರುವಾಗ ಅಂಗಳದಲ್ಲಿದ್ದ ತಿಮ್ಮ ಇವನನ್ನು ಕಂಡದ್ದೇ ತಡ, ನೆಟ್ಟಗೆ ತನ್ನ ಕೊಟ್ಟಿಗೆಯೊಳಕ್ಕೆ ಹೋಗಿ ಅಡಗಿಕೊಳ್ಳಬೇಕೇ? ಅವನಿಗೆ ಕಂಡಿತು—'ಇಷ್ಟು ಕಾಲದ ಮೇಲೂ ನನ್ನ ಮೇಲೆ ಛಲ ಹಿಡಿದು ಧನಿಗಳು ತುಕ್ರನನ್ನು ಹುಡುಕುವುದಕ್ಕೆ ಕಳುಹಿಸಿದ್ದಾರೆಂದು' ಹಾಗೆ ಬೆಪ್ಪುಕಟ್ಟಿ ಕುಳಿತ ತಿಮ್ಮ ಹೊರಕ್ಕೇ ಬರಲಾರ.

ಅನಂತರ ಬಂದವರು ಬಟ್ಯ, ಅವನ ಜತೆಯಲ್ಲಿ ಕರಿಯ. ಕರಿಯನಿಗೆ ತುಕ್ರನನ್ನು ಅಲ್ಲಿ ನೋಡಿ ಆಶ್ಚರ್ಯವಾಯಿತು. ತುಕ್ರ ಹಿರಿ ಮಲೆಯಲ್ಲಿ ತಮ್ಮನ್ನು ವಿಚಾರಿಸುತ್ತಿದ್ದ—ಎಂಬುದನ್ನು ಚೋಮನ ಬಾಯಿಯಿಂದ ಕೇಳಿದ್ದ. ಹೀಗಾಗಿ ಅವನನ್ನು ಕಂಡ ಕ್ಷಣವೇ "ಏನಣ್ಣ, ಇಲ್ಲಿಗೂ ಬಂದೆ. ಮಲೆ ಬಿಟ್ಟರೂ ಎಲ್ಲಿಯೂ ನಾವಿರಬಾರದದೆಂದು, ನಿನ್ನ ಲೆಕ್ಕವೇ? ಏನು ಮಾಡಬೇಕೆಂದಿದ್ದೀಯಾ? ಮಾಡು" ಎಂದು ಒರಟಾಗಿಯೇ ನುಡಿದ. ಆ ಗಳಿಗೆಗೆ, ತುಕ್ರನ ಮನಸ್ಸಿನಲ್ಲಿ ತನ್ನ ಹಳೆಯ ಧನಿಗಳು ಹೊತ್ತ ವೈರ ನೆನ

ಪಾಗದೆ ಹೋಗಲಿಲ್ಲ. ಆದರೆ ಹಳೆಯ ಧನಿಗಳ ಕಾಲ ಮುಗಿದಂತೆಯೇ—ಎಂದು ಅವನಿಗೆ ಗೊತ್ತು. ಕರಿಯ ಮಲೆಗೆ ಬಾರದಿದ್ದರೆ ಅವನಿಗೂ ಸುಖವೇ. ಅವನ ಯಜಮಾನಿಕೆ ಉಳಿಯುತ್ತದೆ ಹಾಗಾಗಿ ಆತ ಕುಕ್ಕರಳ್ಳಿಯಲ್ಲಿದ್ದರೆ ಅವನಿಗೇನು ನಷ್ಟ? ಅವ ನಗುತ್ತ ನುಡಿದ "ಏನಿಲ್ಲ ಕರಿಯಣ್ಣ, ಆನೆ ಹಿಡಿದಿದ್ದಾರೆ ಯಾರೋ—ಎಂದು ಕೇಳಿ, ನೋಡುವ ಚಪಲವಾಗಿ ಬಂದೆ. ನೀನಿಲ್ಲಿದ್ದೀಯಾ? ಏನು ಮಾಡಿಕೊಂಡಿದ್ದೀ; ಸುಖವಾಗಿದ್ದೀಯಷ್ಟೆ? ಚೆನ್ನಾಗಿದ್ದರಾಯಿತು. ಮಲೆಯಾದರೇನು? ಮತ್ತೆಲ್ಲಾದರೇನು? ಹಳೆಯ ನೆನಪಿನಿಂದ ಸಿಟ್ಟಾಗಬೇಡ. ಹೋಯ್ತು ಆ ಕಾಲ. ಧನಿಗಳೂ ಈಗ ಮಲೆಗೆ ಬರುತ್ತಲಿಲ್ಲ. ಅವರಿಗೆ ಹಾಸಿಗೆ ಬಿಟ್ಟೇಳಲಾರದ ಬೇನೆ. ಕಳೆದ ವರ್ಷ ನಾನೇ ವಿಟ್ಟಲಕ್ಕೆ ಹೋಗಿದ್ದೆ, ಅವರನ್ನು ಕಂಡುಬಂದಿದ್ದೆ. ಅವರ ಕಾಲ ಮುಗಿದ ಹಾಗೆಯೇ. ಈಗ ಧನಿಗಳ ಹಿರಿಯ ಮಗ ಮಲೆಗೆ ಬಂದು ಹೋಗುತ್ತಿದ್ದಾರೆ. ಬಹಳ ಒಳ್ಳೆಯವರು ಎಳೆಯ ಪ್ರಾಯ. ನಮ್ಮ ಜನವೆಂದರೆ ಅವರಿಗೆ ತುಂಬ ಪ್ರೀತಿ" ಎಂದು ಸ್ನೇಹದಿಂದ ಮಾತನಾಡಿಸಿದ. ಕರಿಯನಿಗೂ ತನ್ನ ದುಡುಕುತನಕ್ಕೆ ಒಂದು ಕ್ಷಣ ಬೇಸರವಾಯಿತು. "ಹಾಗೋ, ನಾನೆಣಿಸಿದೆ ನಮ್ಮನ್ನು ಹುಡುಕಿ ಕರೆದು ತರುವುದಕ್ಕೆ ಧನಿಗಳು ನಿನ್ನನ್ನು ಕಳುಹಿಸಿದ್ದಾರೆಂದು. ಹೋಗಲಿ, ಬಿಡು. ಇಲ್ಲಿಯೇ ನಾವು ಬಿಡಾರ ಮಾಡಿದ್ದೇವೆ. ತಿಮ್ಮನೂ ಜತೆಗೆ ಇದ್ದಾನೆ. ನಮ್ಮ ಮನೆಯಲ್ಲಿ ಒಂದು ಮುಷ್ಟಿ ಗಂಜಿಯನ್ನುಣ್ಣಬಾರದೆಂದಿಲ್ಲವಲ್ಲ" — ಎಂದು ತಿಮ್ಮನನ್ನು ಕೂಗಿದ. ತುಕ್ರಗೆ ಆನೆಯ ವಿಚಾರ ಹೇಳಿದ. ನಿಷ್ಕಲ್ಮಷ ಮನಸ್ಸಿನಿಂದ ತುಕ್ರನಿಗೆ, ತಮ್ಮ ಮನೆಯಲ್ಲಿ ಊಟ ಉಪಚಾರಗಳನ್ನು ಮಾಡಿಸಿದ. ಆ ದಿನವೆಲ್ಲ ತುಕ್ರ ಅಲ್ಲಿಯೇ ಅವರೊಡನೆ ಕಳೆದು, ಆನೆಯ ಮರಿಗೆ ನಾಲ್ಕು ನಾಲ್ಕು ಬಾರಿ ಪ್ರದಕ್ಷಿಣೆ ಬಂದು, ಮರುದಿನ ಹೊರಟುಹೋದ. ಅವನ ತಪ್ಪೆಂದರೆ 'ಮಲೆಗೆ ತಿರುಗಿ ಬನ್ನಿ'—ಎಂದು ಅವರನ್ನು ಕರೆಯದಿದ್ದುದು. ಅದಕ್ಕೂ ಹೆಚ್ಚಿಲ್ಲ.

ಕರಿಯನ ಕಣ್ಣೆದುರಿಂದ ಮರೆಯಾಗಿ ಕುಕ್ಕರಳ್ಳಿಯ ಗದ್ದೆಗಳ ಏರಿಯ ಮೇಲೆ ನಡೆದು ಸಾಗುತ್ತ ಹೊರಟ ತುಕ್ರನಿಗೆ, ಒಂದೊಂದಾಗಿ ಹಳೆಯ ನೆನಪುಗಳು ಬರತೊಡಗಿದುವು. ಆರಂಭದಲ್ಲಿ ತನಗೂ ಕರಿಯನಿಗೂ ನಡೆದ

ಯಜಮಾನಿಕೆಯ ಹೋರಾಟದ ಚಿತ್ರಗಳು, ಕಾಣಿಸಿದುವು. ಕೇರಿ ಅವನಿಗೆ ಬೆಂಬಲವಾಯಿತು. ತಿಮ್ಮ ಕರಿಯನ ಪಕ್ಷ ವಹಿಸಿ ಮುಂದೊತ್ತಿ ಬಂದ. ತನ್ನ ಧನಿಯು ತನಗೆ ಬೆಂಬಲವಾದರೂ, ಕಲ್ಕುಡನ ಮಾತು ತನಗೆ ವಿರುದ್ಧ ವಾಗಿ ನಿಂತುದರಿಂದ ದೊರಕಿದ ಗುರಿಕಾರಿಕೆ ತಪ್ಪಿಹೋಯಿತು. ಅದನ್ನು ನೆನೆದರೆ ನಗು ಬರುತ್ತದೆ. ಗುರಿಕಾರಿಕೆ ನೋಡಿಕೊಂಡಿರಬಹುದಾದ ಕರಿಯನ ಹಣೆಯಲ್ಲೇ ವಿವಿಧ ಯೋಗ ಬರೆದಿಲ್ಲ ಎಂದೆಣಿಸಿಕೊಂಡ. ಹಾಗಿಲ್ಲದೆ ಹೋದರೆ, ದೊರೆತ ಯಜಮಾನಿಕೆಯನ್ನು ತುಳಿದು ಓಡಿ ಹೋಗುವ ಮರು ಳಾಟಿಕೆಯನ್ನು ಆತ ಮಾಡಬೇಕೇ? ಇನ್ನು ಅವನನ್ನು ಕಂಡ ಪ್ರಸಂಗ ವನ್ನು ಕೇರಿಯಲ್ಲಿ ತಾನು ಹೇಳಿದರೆ, ಬೂದನೋ ಮತ್ತೊಬ್ಬನೋ ಅಲ್ಲಿಗೆ ಹೋಗುತ್ತಾರೆ. ಅವನನ್ನು ಅಂಗಲಾಚಿ 'ಬಾ' ಎಂದು ಬೇಡುತ್ತಾರೆ. ಆತ ಎಲ್ಲಾದರೂ ಹಿಂದಿರುಗಿ ಬಂದರೆ, ಇನ್ನೊಮ್ಮೆ ಗುರಿಕಾರಿಕೆಗೆ ಜಗಳ ಹುಟ್ಟು ವುದೂ ನಿಜ. ಅಂಥ ಪ್ರಸಂಗ ಬರಲೇ ಬೇಡ. ತಾನು ಕರಿಯನ ಸುದ್ದಿ ಯನ್ನು ಯಾರೊಡನೆಯೂ ಎತ್ತಬಾರದು. ಅದೇ ಲೇಸಾದ ಮಾರ್ಗ ಎಂದೆ ಣಿಸಿಕೊಂಡ. ಆದರೂ ಆನೆಯ ಮರಿಯನ್ನು ಹಿಡಿದು ಕಟ್ಟಿ ಹಾಕಿದ ಆ ಹುಡುಗನ ವಿಷಯವಾಗಿ, ಸಲ್ಲದ ದ್ವೇಷ ಅವನ ತಲೆಯಲ್ಲಿ. ಹುಡುಗ ಬುದ್ಧಿ ವಂತನೆಂದು ಒಪ್ಪಿಕೊಳ್ಳುತ್ತಾನೆ. ಕರಡಿ, ಆನೆ ಇಂಥ ಪ್ರಾಣಿಗಳ ಹುಚ್ಚು ಆತನಿಗೆ ಎಳೆತನದಿಂದಲೂ ಬಂದದ್ದೇ. ಪ್ರಾಯಶಃ ಆನೆಯ ಮಾವುತನಾ ಗಲು ಹುಟ್ಟಿದ ಹುಡುಗ ಅವನಿರಬೇಕು. ಇಲ್ಲವಾದರೆ, ಅಂಥ ಧೈರ್ಯ ಸ್ಥೈರ್ಯ ಎಲ್ಲಿಂದ ಬರಬೇಕು? ಆ ಮಾತನ್ನು ನೆನೆದಾಗ ಹಿಂದಣ ರಾತ್ರೆ ತಾನು ಗೌಡನ ಮನೆಯ ಜಗುಲಿಯಲ್ಲಿ ಮಲಗಿಕೊಂಡಾಗ ಬಟ್ಯಗೌಡ ಹೇಳಿದ ನಾಲ್ಕೆಂಟು ಬೇಟೆಯ ಕತೆಗಳೂ ನೆನಪಿಗೆ ಬಂದುವು. ಅದನ್ನು ನಂಬಲಾರದಾದ ಆತ. 'ಕರಿಯನಂಥ ಎಳೆಯ, ಕೋವಿ ಹಿಡಿದು ಹುಲಿ ಕೊಂದಿದ್ದಾನೆ' ಎಂದಿದ್ದ ಗೌಡ. ಚಿರತೆಯನ್ನೂ ಕತ್ತಿಯಿಂದಲೇ ಕುತ್ತಿ ಕೊಂದ ಕಥೆಯನ್ನೂ ಹೇಳಿದ್ದ. ಆದನ್ನೆಲ್ಲ ಗೌಡ ಬಣ್ಣಿಸುವಾಗಲೇ ಇವನಲ್ಲಿ ಅಂಜಿಕೆ ಮೂಡಿತ್ತು. ಅದರಿಂದ ಆ ಹುಡುಗನ ದಿಟ್ಟತನದ ವಿಷಯದಲ್ಲಿ ಒಂದು ವಿಧದ ಹಿಗ್ಗೂ ಉಂಟಾಯಿತು. ಹುಡುಗ ದಿಟ್ಟ, ಒರಟ, ಎದುರು ಸಿಟ್ಟಿ ನವ—ಎಂದು ಕಂಡರೂ—ಯೋಗ್ಯ. ಎಲ್ಲಿ ಎಸೆದರೂ ಬಾಳು ಮಾಡಿಕೊಂಡಿ ರುವವ. ಮೂರು ವರ್ಷ ಕಾಲ ಮಲೆಯಲ್ಲಿ ತಿಮ್ಮನನ್ನು ಕೂಡಿಕೊಂಡು

ಹಾಗೆ ಜೀವನ ನಿರ್ವಹಿಸಬೇಕಾದರೆ, ತಮ್ಮ ಕಣ್ಣು ಸುಳಿಯದಲ್ಲಿ ಯಾರ ಹಂಗೂ ಇಲ್ಲದೆ ಬಾಳಬೇಕಾದರೆ ಅವನೊಬ್ಬ ಸಾಮಾನ್ಯ ಜೀವಿ ಎಂದು ಆತನಿಗೆ ಕಾಣಲಿಲ್ಲ. ಫಕ್ಕನೆ ಒಂದು ಆಸೆಯು ಸಹ ಆ ಯೋಚನೆಯಿಂದ ಮೂಡಿತು. 'ತನ್ನ ಸಂಸಾರದಲ್ಲಿ—ಏಳೆಂಟು ಮಕ್ಕಳು ಮರಿಗಳು, ಇಬ್ಬಿಬ್ಬರು ಹೆಂಡಿರು. ತನಗೂ ಅರುವತ್ತರ ಸಮೀಪದ ವಯಸ್ಸು. ಇನ್ನೆಷ್ಟು ದಿನ ತಾನು ಬದುಕಿಯೇನು? ಇಂದಿನ ಹಾಗೆ ನಾಳೆಯೂ ಪ್ರಾಣ ಉಳಿಯುತ್ತದೆಯೇ? ತನ್ನ ಹಿರಿಯ ಮಗಳು ಚೌಡಿಗೆ ಸುಮಾರು ಇಪ್ಪತ್ತು ವಯಸ್ಸಿರಬಹುದು. ಗುರಿಕಾರನಾದ ತಾನು ಅಂಥಿಂಥವರಿಗೆ ಹೆಣ್ಣು ಕೊಡಲು ಒಪ್ಪಲಿಲ್ಲ. ಕರಿಯನನ್ನು ತಿರುಗಿ ಮಲೆಗೆ ಬರುವಂತೆ ಮಾಡಿಕೊಂಡು ಅವನನ್ನೊಲಿಸಿ, ತನ್ನ ಅಳಿಯನನ್ನಾಗಿ ಮಾಡಿಕೊಂಡರೆ ಹಣೆಯ ಹುಣ್ಣೆಲ್ಲ ಮಾಸಿದಂತಾಗುತ್ತದೆ. ಹೆಂಡತಿ ಚಿನ್ನಿಗೂ ಸಂತೋಷವಾದೀತು. ಆತ ಗುರಿಕಾರನಾದರೂ, ಆಗ ತನಗೆ ಕಡಿಮೆಯಿಲ್ಲ. ತಾನೇ ಆದರೂ ಕರಿಯ ತನ್ನ ಕಾಲದ ತನಕ ಸುಮ್ಮನಿದ್ದಾನು' ಎಂದು ಯೋಚಿಸಿದ. ಯೋಚಿಸಿದ ಹಾಗೆ, ಆ ಆಸೆ ಬೆಳೆದು ಬಲವಾಗುತ್ತ ಹೋಯಿತು. ಅದು ಅಸಾಧ್ಯದ ಮಾತಾಗಿ ತೋರಲಿಲ್ಲ. ನೆಟ್ಟಗೆ ಹಿರಿ ಮಲೆಗೆ ಹೋಗಿ ಚೋಮಣ್ಣನನ್ನು ಕೇಳಿ, ಸಂಧಾನಕ್ಕೆ ದೂತನನ್ನಾಗಿ ಅಟ್ಟಿಬಿಡೋಣ—ಎಂದೂ ಅನಿಸಿತು. ಅಷ್ಟರಲ್ಲಿ ಚೋಮನಿಗೆ ಇನ್ನೊಬ್ಬ ಮಗಳಿರುವ ನೆನಪು ಹೊಳೆಯಿತು. 'ಬೇಡ, ಅವನು ಸರಿಯಾದ ಕುಳವಲ್ಲ. ಬೂದನನ್ನೇ ಹಿಡಿಯುವ. ತನ್ನ ಅವನ ಒಳಜಗಳ ಕೆಂಪಿಯ ಮರಣದಿಂದ ಹುಟ್ಟಡಗಿ ಹೋಗಿದೆ. ಅವನಿಂದ ಈ ಕೆಲಸ ಸಾಧ್ಯವಾಗಬಹುದು'—ಎಂದುಕೊಂಡ. ಇಷ್ಟೆಲ್ಲ ಯೋಚನೆಗಳನ್ನು ಹೊತ್ತು, ಹಾದಿ ಸಾಗುವಾಗ, ಮೂಲೆಗುಂಪಿನ ಬಲ್ಲಾಳರ ಮನೆ ಬಂದಿತು. ಇನ್ನು ಮೂರು ತಿಂಗಳಿಗೆ, ಬರುವ ಜಾತ್ರೆಯ ನೆನಪಾಯಿತು. ಜಾತ್ರೆಯ ಜತೆಯಲ್ಲಿ ಬರುವ ಧನಿಗಳೂ, ಕೊಡುವ ಹಚ್ಚಡವೆಲ್ಲವುಗಳ ನೆನವರಿಕೆ ಉಂಟಾಯಿತು, ಸಣ್ಣ ಧನಿಗಳ ನೆನಪೂ ಆಯಿತು. ತನ್ನ ಧನಿಗಳಿಗೆ ಆನೆಯ ಹುಚ್ಚು, ಶಿಕಾರಿಯ ಹಂಬಲ ಇದ್ದುದನ್ನು ನೆನೆದು 'ಒಂದು ಮೋಸ ಈ ಯೋಚನೆಯಲ್ಲಿದೆ; ಕರಿಯನೂ ಮಲೆಗೆ ಬಂದರೆ ಧನಿಗಳೂ ಸೇರಿದರೆ, ಇಬ್ಬರ ಶಿಕಾರಿಯ ಹುಚ್ಚು ಕಟ್ಟಿಲ್ಲದೆಹೋದೀತು. ಹುಡುಗ

ಒಳ್ಳೆಯುವ, ದಿಟ್ಟ; ನಿಜ. ಆದರೆ ಮದುವೆಯಾದ ಮೇಲೆಯೂ ಹುಲಿ, ಹಂದಿ, ಮತ್ತೊಂದು ಎಂದು—ಬೇಟೆಗೆ ಹೋಗಿ, ಆಪತ್ತು ತಂದುಕೊಂಡರೆ ನನ್ನ ಗತಿ ಏನು? ಇನ್ನೊಬ್ಬರು ಬೇಟೆಯಾಡಿದರೆ ನೋಡಬಹುದು, ಕತೆ ಕೇಳಬಹುದು. ಅಳಿಯನಾಗುವ ಪ್ರಾಣಿ ಅಂಥ ಹುಚ್ಚು ಕಟ್ಟಿಕೊಂಡರೆ' ಎಂದು ಭೀತಿಗೂ ಒಳಗಾದ. ಅಷ್ಟೇ ಅಲ್ಲ. 'ಸದ್ಯಕ್ಕೆ—ಕರಿಯನ ಆನೆ ನೋಡಬೇಕು' ಎಂದು ಹೇಳಿದರೆ ಧನಿಯರಿಗೆ ಏನು ಉತ್ತರ ಕೊಡಲಿ' ಎಂಬ ಅನುಮಾನವಾಯಿತು. 'ಅವರಿಗೆ ಅವನನ್ನು ತೋರಿಸಿದರೆ ಯಾರಾದರೂ ಅವನ ಬೇಟೆಯ ಕತೆ ಹೇಳಿದರೆ, ಆಮೇಲೆ ನಮ್ಮ ಮಲೆಯಿಂದಲೇ ಓಡಿಹೋದ ಹುಡುಗ ಅವನು ಎಂದು ತಿಳಿದರೆ, ಮನಸ್ಸು ಬಂದು ಅವನನ್ನು ಮಲೆಗೆ ಬರಲು ಬಲವಂತ ಮಾಡುತ್ತಾರೆ. ಆಗ ತಿರುಗಿ ಬೇಡದ್ದೇ ಆಗುತ್ತದೆ' ಎಂದು ಬೆಳೆಸಿದ ಆಸೆಗಳನ್ನೆಲ್ಲ ಕಿತ್ತೊಗೆದ. ಮೂಲೆಗುಂಪಿನಿಂದ ಮಲೆ ಸೇರುವಾಗ ಈ ಪ್ರತಿಯೊಂದು ಆಸೆಗಳ ಮರುಕಳಿಕೆ ಮೂರು ಮೂರು ಬಾರಿ ಉಂಟಾಗಿ ಮೂರು ಮೂರು ಬಾರಿಯೂ ಅಭಿಪ್ರಾಯ ಬದಲಿಸಿ, ತಣ್ಣಗೆ ಗುಡಿಸಲನ್ನು ಸೇರಿದ.

ಅವನೇನೋ ಸುಮ್ಮನಿರಬಹುದು. ಕರಿಯನ ಸುದ್ದಿಯ ಗಾಳಿ ತನ್ನ ಕೇರಿಗೇ ಬೀಸಬಾರದು—ಎಂದು ಆತ ಎಣಿಸಿದರೂ ಮಲೆಯ ಗಾಳಿಗೆ ಆ ದಾಕ್ಷಿಣ್ಯವಿದೆಯೇ? ಮಳೆಗಾಲ ಮುಗಿದು, ಏಲಕ್ಕಿ ಉದ್ಯೋಗ ಕಳೆದು, ಕುಡಿಯರಿಗೆ ಬಿಡುವಾಯಿತೆಂದರೆ ಒಬ್ಬರಲ್ಲ ಒಬ್ಬರು ಮೂಲೆಗುಂಪಿಗೆ ಹೋಗಿ ಬರುತ್ತಾರೆ. ಹತ್ತಿರದ ಒಂದೆರಡು ಹಳ್ಳಿಗೂ ಹೋಗಿಬರುತ್ತಾರೆ. ಹೀಗಾಗಿ ಕಿವಿಯಿಂದ ಕಿವಿಗಾದರೂ ಸುದ್ದಿ ಕಿರಿ ಮಲೆಗೂ ಮುಟ್ಟಿತು, ಹಿರಿ ಮಲೆಗೂ ಮುಟ್ಟಿತು—ಆನೆ ಹಿಡಿದ ಕುಡಿಯ, ಕರಿಯನೆಂದು. ಈ ಸುದ್ದಿಯನ್ನು ಬಾಚಿಹಿಡಿದವ ಹಿರಿ ಮಲೆಯ ಚೋಮ. ಆತ, ಮಳೆಗಾಲ ತೊಡಗಿದಂದಿನಿಂದ ತನ್ನ ಮಗಳು ಮತ್ತು ಅಳಿಯಂದಿರ ಕುರಿತಾದ ಧ್ಯಾನ ಮಾಡುತ್ತಿದ್ದ. 'ಮಳೆ ಕಡಿಮೆಯಾಗಲು ಹೋಗಿ ನೋಡಿ ಬರುತ್ತೇನೆ. ಬಹು ದಿನದಿಂದ ಅವರ ಸುದ್ದಿಯಿಲ್ಲ' ಎಂದೆಣಿಸಿಕೊಂಡು ಭಾದ್ರಪದಮಾಸದಲ್ಲಿ ಕೆಲಸ ತಪ್ಪಿಸಿ ಕರಿಯನ ಮಲೆಗೆ ಹೋದ. ಒಕ್ಕಲು ಹೋದ ಅವರ ತಾವನ್ನು ಕಂಡು ತುಂಬ ಖಿನ್ನನಾಗಿ ಮರಳಿದ. ಒಬ್ಬರಾದರೂ ಅಲ್ಲಿರ

ಬೇಡವೇ? ಗುಹೆಯ ಮನೆಯಲ್ಲಿ ಒಟ್ಟಿದ್ದ ಕಟ್ಟಿಗೆ ಹಾಗೆಯೇ ಇತ್ತು. ಒಂದೆರಡು ಹರಕು ಚಿಂದಿಗಳು ಕಾಣಿಸಿದುವು. ಕುಮರಿ ಬೆಳೆದ ಜಾಗಕ್ಕೆ ಹೋಗಿ ನೋಡಿದ. ಬೆಳೆ ನೆಲದ ಮೇಲೆ ಮಗುಚಿ ಬಿದ್ದು ಅದರಲ್ಲಿದ್ದ ನಾಲ್ಕು ಕಾಳುಗಳು ಅಳಿಲು ಗಿಳಿಗೆ ಉಣಿಸಾಗಿತ್ತು. ಬೆಳೆದ ಹುಲ್ಲಿಗೆ ಕತ್ತಿ ಹಾಕಿದವರಿದ್ದಿಲ್ಲ. ಆ ನೋಟ ಕಂಡೊಡನೆಯೇ ಅವನ ದಿಗಿಲು ಹಾರಿತು. 'ಯಾರಿಗೋ ಏನೋ ಆಗಿದೆ—ಆ ಮೂವರ ನಾಲ್ವರಲ್ಲಿ ಯಾರಿಗೋ ಸಾವು ಬಂದಿರಬೇಕು. ಸಾವು ಬಂದಾಗ ಮನೆ ಬಿಟ್ಟೋಡುವುದು ಬದಲು ಮನೆ ಹೂಡುವುದು ಸ್ವಾಭಾವಿಕ. ಹೀಗೇನೋ ಆಗಿದೆ' ಎಂಬ ಚಿಂತೆಗೊಳಗಾದ. ಸತ್ತಿದ್ದರೆ ಯಾರು? ಏನು—ಎಂದೂ ಯೋಚಿಸದಾದ. ಬದುಕಿದ್ದರೆ ಬೆಳೆಯ ಬಳಿಗೆ ಬಂದು ಬತ್ತದ ಕದಿರನ್ನಾದರೂ ಕೊಯ್ದುಕೊಂಡು ಹೋಗಿರಲಾರರೇ? ಬದಲು ಅದನ್ನು ಮುಟ್ಟದೆ ಇರಲು ಕಾರಣವನ್ನು ಅವನು ಊಹಿಸದಾದ. ಅದರಿಂದ 'ಆ ವಠಾರದಲ್ಲೆಲ್ಲೂ ಅವರು ಬದುಕಿಲ್ಲ' ಎಂಬ ನಿರ್ಣಯ ಮಾಡಿಕೊಂಡು, ಮನೆಗೆ ಮರಳಿದ. ಅಸ್ಪಷ್ಟವಾದ ಊಹೆ, ಆ ಊಹೆಯಿಂದ ಕಟ್ಟಿದ ಭೀತಿ, ಇವೆರಡನ್ನೂ ತನ್ನ ಹೆಂಡತಿಯ ಮುಂದು ತೋಡಿಕೊಂಡ. ಒಬ್ಬರ ಗಾಬರಿಗಿಂತ ಇಬ್ಬರದ್ದು ಕೂಡಿ ಹೆಚ್ಚಾಯಿತು. ಹಾಗೆಲ್ಲಾದರೂ ಆಗಿದ್ದರೆ, ಅವರು ಮಲೆಯಲ್ಲೇ ಇನ್ನೂ ವಾಸಿಸುತ್ತಿರಲಾರರು. ಎಲ್ಲಾದರೂ ಒಂದು ಹಳ್ಳಿಯನ್ನು ಸೇರಿರಬಹುದು—ಎಂದು ಯೋಚಿಸಿದರು.

ಇಷ್ಟೆಲ್ಲ ಆಗುವಾಗ, ಬಾಯಿಂದ ಬಾಯಿಗೆ ಆನೆ ಹಿಡಿದ ಕುಡಿಯನ ಕತೆಯೇ ಸಾಗಿ ಬಂದಿತು. 'ಅದಿದ್ದರೆ ಕರಿಯನಿರಬೇಕು' ಎಂಬ ಊಹೆ ಚೋಮನಿಗೆ ಆಯಿತು. ಅವನು ಆ ಸುದ್ದಿಯನ್ನು ಹಿಂಬಾಲಿಸಿ, ಸ್ಥಳ ಯಾವುದೆಂದು ಕೇಳಲು ಹೊರಟ. ನಿಜಕ್ಕೂ ತುಕ್ರ ಯೋಚನಾಪರನಾಗಿ ಬಲ್ಲಾಳರ ಮನೆಯ ಮುಂಪೆ ಕಿರಿ ಮಲೆಗೆ ಹಾದು ಹೋಗುವಾಗ, ಬಲ್ಲಾಳರ ಮನೆಯ ಅಂಗಳದಲ್ಲಿ ಚೋಮ ನೀರನ್ನು ಬೇಡಿ ಕುಡಿಯುತ್ತಿದ್ದ. ನೀರು ಕುಡಿದು ಅಲ್ಲಿಂದ ತಕ್ಷಣವೇ ಹೊರಟ. ದಾರಿಯ ಜನಗಳನ್ನು ವಿಚಾರಿಸಿ, ಕುಕ್ಕರಳ್ಳಿಗೆ ಹೋಗಿ ಬಟ್ಯಗೌಡನ ಮನೆಯನ್ನು ಆತ ಸೇರುವಾಗ ಕತ್ತಲಾಗಿತ್ತು. "ಯಾರು, ನಿನ್ನನ್ನು ತುಕ್ರಣ್ಣ ಕಳುಹಿಸಿದನೇ? ಬೆಳಿಗ್ಗೆ ಹೋಗಿದ್ದ, ನಿನ್ನೆ ಬಂದಿದ್ದ" ಎಂದು ಕರಿಯ ಚೋಮನನ್ನು ಪ್ರಶ್ನಿಸಿದಾಗ, ಅವನಿಗೆ

ಆಶ್ಚರ್ಯವಾಯಿತು. ಮೂರು ತಿಂಗಳಿಗೂ ಮಿಕ್ಕಿ, ಮಕ್ಕಳ ಗೊತ್ತು ಗುರಿಯನ್ನು ಊಹಿಸಲಾರದೆ ನೊಂದಿದ್ದ ಚೋಮನಿಗೆ—ಮಗಳು, ಅಳಿಯ, ಮೊಮ್ಮಕ್ಕಳನ್ನು ಕಂಡು ಎಷ್ಟು ಸಂತೋಷವಾಯಿತೆನ್ನಲಿಕ್ಕಿಲ್ಲ. ತಾನೂ ತನ್ನ ಮಡದಿಯೂ ಕಟ್ಟಿಕೊಂಡ ಅನೇಕ ಸಂಶಯ ಭೀತಿಗಳನ್ನು ತೋಡಿಕೊಂಡ. “ಹೇಗೂ ಇರಲಿ, ಕರಿಯಣ್ಣ. ಇಲ್ಲಿಗೆ ನೀವು ಬಂದದ್ದು ಒಳ್ಳೆಯದಾಯಿತು. ನೀವು ಮೂರೇ ಮಂದಿ ಆ ಚೋಟುದ್ದದ ಮಗುವನ್ನು ಕಟ್ಟಿಕೊಂಡು, ಹಾಗೆ ಬೇರೆಯೇ ಇರುವುದೆಂದರೆ, ನಿಮಗೆ ಸುಖವೆಂದು ಕಂಡರೂ, ಮಕ್ಕಳನ್ನು ಹೆತ್ತ ನಮಗೆ ಯೋಚನೆಯಲ್ಲಿ ರಾತ್ರೆ ನಿದ್ದೆ ಬರುವುದಿಲ್ಲ” ಎಂದ. ತಿಮ್ಮ “ಛೆ, ಛೆ, ಅಂಥ ಹೆದರಿಕೆಯೇನು? ಕರಿಯಣ್ಣ ಒಬ್ಬನಿದ್ದರೆ ಸಾಕು—ಊರು ತೆಗೆದಾನು” ಎನ್ನುತ್ತಲಿದ್ದ. ಅದನ್ನು ಕೇಳಿದ ಕರಿಯ, ಪರಿಹಾಸ್ಯಕ್ಕಾಗಿಯೇ “ಹೌದೋ ತಿಮ್ಮ, ಹಾಗಾದರೆ ಜಾತ್ರೆ ಕಳೆದ ಮೇಲೆ, ನಮ್ಮ ಮಲೆಗೆ ನಾವು ಹಿಂದೆ ಹೋಗುವುದು ಹೌದಲ್ಲ. ಈ ವರ್ಷ ಒಂದಲ್ಲ ಎರಡು ತಟ್ಟು ಕುಮರಿ ಬೆಳೆಯಬೇಕು. ಒಂದರಲ್ಲಿ ಬತ್ತ, ಮತ್ತೊಂದರಲ್ಲಿ ರಾಗಿ” ಎನ್ನುತ್ತಲೇ, ತಿಮ್ಮನ ಉತ್ಸಾಹ ಅರ್ಧಕ್ಕರ್ಧ ತಗ್ಗಿತು. “ಹೋಗುವ. ಹೋಗಬಾರದೆಂದರೆ ನೀನು ಕೇಳುತ್ತೀಯಾ?” ಎನ್ನಬೇಕಾಯಿತು. ತಿಮ್ಮ ಹೇಳಿದ್ದು ಉತ್ಸಾಹಹೀನ ಮನಸ್ಸಿನಿಂದ—ಎಂಬುದು ಕರಿಯನಿಗೆ ಗೊತ್ತು. ಅಲ್ಲದೆ ಮಾವನೂ ಅವನೂ ಸೇರಿ, ಇನ್ನೇನು ತಳಪಾಯ ಹಾಕುತ್ತಾರೋ ಅಥವಾ ಅಳಿಯನನ್ನೂ ಮಗಳನ್ನೂ ಕರೆದುಕೊಂಡು ಹೊರಟು ಹೋಗುತ್ತಾರೋ. ‘ಹಳೆಯ ಧನಿಯ ಹೆದರಿಕೆ ಬಿಟ್ಟ ಮೇಲೆ, ಮಲೆಯಲ್ಲೇ ಇದ್ದು ಬಿಡುವ—’ ಎಂದು ಉಪದೇಶಿಸುತ್ತಾರೋ, ಎಂಬ ಭೀತಿ, ಕರಿಯನದ್ದು. ಅವನಿಗೆ ಮಾತ್ರ ಮಲೆ ಬೇಡವಾಗಿತ್ತು. ಅಲ್ಲಿಗೆ ಹೋದರೆ, ತನ್ನ ಆನೆಯ ಮರಿಯ ಆಸೆಯನ್ನು ಬಿಡಬೇಕಾಗುತ್ತದೆಂದು ಹೊಳೆಯುತಿತ್ತು.

ಆ ರಾತ್ರೆ ನಿತ್ಯದಂತೆ ಕರಿಯ, ಬಟ್ಯನ ಮನೆಯ ಜಗುಲಿಯ ಮೇಲೆ ಮಲಗಿಕೊಂಡ. ಚೋಮ ಅಳಿಯನ ಕೊಟ್ಟಿಗೆಯಲ್ಲಿ ವಾಸ ಮಾಡಿದ. ರಾತ್ರಿ ಬಹು ಹೊತ್ತಿನ ತನಕ—ಆ ಕೊಟ್ಟಿಗೆಯಿಂದ ಅವರು ಮಾತನಾಡುವ ಸ್ವರ ಕೇಳಿಸುತಿತ್ತು. ಬಹು ಮಟ್ಟಿನ ಸ್ವರ ಗಿಡ್ಡಿಯದು. “ನೀನು

ಕರಿಯಣ್ಣನಿಗೆ ಹೇಳಬೇಕು. ಅವನನ್ನು ಬಿಟ್ಟು ಹೋಗುವುದು ಒಳ್ಳೆಯುದಲ್ಲ. ಏನಲ್ಲದಿದ್ದರೆ—ಇಲ್ಲೇ ಇರಲು ಹೇಳು" ಎಂಬುದು ಅವಳ ಮಾತಿನ ಒಂದು ಧಾಟಿ. ಇನ್ನೊಂದು ಧಾಟಿ: "ಯಾಕೆ, ನನ್ನ ತಂಗಿಯನ್ನು ಕರಿಯನಿಗೆ ಕೊಟ್ಟು ಲಗ್ನ ಮಾಡಬಾರದು? ಹಾಗಿದ್ದರೆ ನಾವಿಬ್ಬರೂ ಇಲ್ಲಿಯೇ ಜತೆಗೆ ಜೀವನ ಕಡೆಯಬಹುದು. ಊರವರು ಅನುಕೂಲವಾಗಿದ್ದಾರೆ. ಇಲ್ಲಿ ಬೇಸಾಯ ಮಾಡಬಹುದು. ಕೂಲಿ ನಾಲಿ ಮಾಡಿಕೊಂಡಿರಬಹುದು. ಯಾರ ಹಂಗೂ ಇಲ್ಲ" ಎನ್ನುವುದು ಇನ್ನೊಂದು ಧಾಟಿ. ಚೋಮನ ಮನಸ್ಸಿಗೆ ಆ ಮಕ್ಕಳು ತಮ್ಮಷ್ಟಕ್ಕೆ ಬೇರೆ ಇರುವುದು ಸಂತೋಷವಿಲ್ಲ. 'ತನ್ನ ಮಗಳು ಹೇಳುವ ದಾರಿ ಬಹು ಯೋಗ್ಯವಾದದ್ದ?' ಎಂದು ತೋರಿತು.

ಮರುದಿನ ಬೆಳಗ್ಗೆ ಮುಖ ತೊಳೆದು, ಎಲ್ಲರೂ ಅಡಿಕೆಯ ಹಾಳೆಯಲ್ಲಿ ಗಂಜಿ ಹಾಕಿಸಿಕೊಂಡು, ಬಟ್ಯನ ಮನೆಯಿಂದ ಉಪ್ಪಿನಕಾಯಿ ತರಿಸಿಕೊಂಡು ನೆಂಜುತ್ತಾ, ಹಿಗ್ಗಿಂದ ಊಟ ಮಾಡಿದರು. ಅನಂತರ ಕರಿಯ "ಚೋಮಣ್ಣಾ, ನೀನು ನನ್ನ ಆನೆಯನ್ನಿನ್ನು ನೋಡಲೇ ಇಲ್ಲ. ಒಂದು ದಿನ ನಾನೂ ನಿನ್ನವೊಮ್ಮಗನೂ ಅದರ ಮೇಲೆ ಕೂತು ಸುಬ್ರಹ್ಮಣ್ಯದ ತನಕ ಹೋಗುವುದುಂಟು" ಎಂದು ಪ್ರಸ್ತಾಪ ತೆಗೆದ. ಸರಿ, ಆನೆ ನೋಡುವುದಕ್ಕೆ ಎಲ್ಲರೂ ಹೊರಟರು. ದಾರಿಯಲ್ಲಿ ಚೋಮನೆಂದ—"ಮಹಾರಾಯ, ನಿನ್ನ ಆನೆಯ ಕತೆಯಿಂದಾಗಿ, ನನಗೆ ನೀನು ಇಲ್ಲೆಲ್ಲೋ ಇರಬೇಕೆಂಬ ಊಹೆ ಆದದ್ದು. ಆನೆ ಹಿಡಿದಿದ್ದರೆ ಅದು ನೀನೇ—ಎಂದು ಎಣಿಸಿದೆ. ಏನೂ ಆಗಲಿ. ಆನೆ ಅಷ್ಟೊಂದು ಉಪಕಾರ ಮಾಡಿತಲ್ಲ" ಎಂದು ಆನೆ ನೋಡಲು ಹೋದ. ಸಾಕಷ್ಟು ದೂರದಲ್ಲಿಯೇ ನಿಂತುಕೊಂಡ. ಕರಿಯ ಅದರ ಮೈ ಸವರುವಾಗ, ಕಿವಿ ಜಗ್ಗುವಾಗ, ಸೊಪ್ಪು ಕಡಿದು ಹಾಕುವಾಗ "ಏ ಮಹಾರಾಯ, ಹತ್ತಿರ ಹೋಗಬೇಡ" ಎನ್ನುತ್ತಲೇ ಇದ್ದ. ಆದರೆ "ಪಳಗಿದ ಆನೆ ಸಾಕಿದ ಕೋಣಕ್ಕಿಂತ ಸಾಧು" ಎನ್ನುತ್ತಾನೆ ಕರಿಯ. ಅದನ್ನು ಕಂಡು ಮನೆಗೆ ಬರುವಾಗ "ಆನೆ ಕಂಡಾಯಿತಲ್ಲ. ಇನ್ನು ನೀನು ಕೇರಿಗೆ ಬರುವುದು ಯಾವಾಗ ಎಂದು ಹೇಳು. ಮುಂದೇನು ಮಾಡುವವ? ನಿನ್ನೆ ಹೇಳಿದ ಹಾಗೆಯೆ ತಿರುಗಿ ಆ ಹಾಳು ಕೊಂಪೆಗೆ ಹೋಗಬೇಕೆನ್ನುತ್ತೀಯಾ? ನೀವು ಗಂಡಸರು. ಎಲ್ಲೂ ಬದುಕಬಲ್ಲಿರಿ. ನನ್ನ ಮಗಳಿಗಂತು ಆ ಕೊಂಪೆಯ ಜೀವನ ಕಹಿ

ಹಿಡಿದುಹೋಗಿದೆ. ನನ್ನನ್ನು ಕಂಡಾದರೂ—ತಿಮ್ಮನನ್ನು ಅಲ್ಲಿಗೆ ಸೆಳೆಯ ಬೇಡ" ಎಂದ. ಅವನಿಗೆ ಬಟ್ಯಗೌಡನ ಸ್ನೇಹವಾಗಿತ್ತು. ಗೌಡರನ್ನು ನಿಲ್ಲಿಸಿಕೊಂಡು ಅಂದ: "ಗೌಡರೇ, ಈ ಹುಡುಗರಿಗೆ ನೀವಿಷ್ಟು ಬುದ್ಧಿ ಹೇಳಿರಿ. ಬೇಡ ಆ ಮಲೆಗೆ ಹೋಗುವುದು. ನಿಮ್ಮೂರಲ್ಲಾದರೂ ಇರಿಸಿ ಕೊಳ್ಳಿ. ಅವನಿಗೀಗ ಪ್ರಾಯವಾಗಿಲ್ಲವೇ? ಅವನೇನು ಸಣ್ಣವನೇ? ಸಂಸಾರಿಯಾಗಿರಬೇಡವೇ? ಇಲ್ಲಿಯೇ ಇದ್ದರೆ ನನ್ನ ಮಗಳನ್ನು ಕೊಟ್ಟು ಲಗ್ನ ಮಾಡುವುದಕ್ಕೂ ನಾನು ತಯಾರೇ. ನಮ್ಮ ಗಿಡ್ಡಿಗೂ ಅದೇ ಆಸೆ. ಅವಳೂ ಹೇಳಿರಬಹುದು, ನೀವೂ ಹೇಳಿ" ಎಂದು ಬಿನ್ನವಿಸಿದ. ಬಟ್ಯಗೌಡ ಚೋಮನ ವಕಾಲತ್ತಿಗೆ ಹೆಬ್ಬೆಟ್ಟಿನ ರುಜು ಹಾಕಿದ.

"ಹಿರಿಯರು ಹೇಳಿದ್ದನ್ನು ಸ್ವಲ್ಪ ಕೇಳು" ಎಂದ. ಕರಿಯ ನಕ್ಕು "ಗೌಡರೇ, ಒಂದಾನೆ ಸಾಕುವುದು ಹೇಗೆ ಎಂದು ನಾನು ನೋಡುತ್ತಿದ್ದೇನೆ. ಇನ್ನೊಂದು ಆನೆಯನ್ನೂ ಸಾಕಬೇಕನ್ನುತ್ತೀರಲ್ಲ ನೀವು" ಎಂದ.

"ಇನ್ನೊಂದಾನೆ ಸಾಕಬೇಕೆಂದು ನಾನೆಂದೆನೇ?"

"ಮತ್ತೇನನ್ನುವುದು ನೀವು. ಈ ಆನೆ ಸಾಕಲಿಕ್ಕೆ ರಾಗಿ ಮುದ್ದೆ ಎಲ್ಲಿಂದ ಸಂಪಾದಿಸಲಿ ಎಂದು ನಾನು ಚಿಂತಿಸುವಾಗ, ಮದುವೆ ಮಾಡಿಕೋ ಅಂದರೆ ಇಬ್ಬರ ಬಾಯಿಗೂ ರಾಗಿಯ ಹಿಟ್ಟು ಹೇಗೆ ತುಂಬಿಸಿಯೇನು?"

ಬಟ್ಯ ನಕ್ಕ. "ಹೋ, ಅಷ್ಟೇಯೋ! ಹೆಂಡತಿ ಸಾಕಲಾರದವನೋ ನೀನು? ಹಾಗಿದ್ದರೆ ನೀನು ಆನೆ ಸಾಕುವುದು ಎಷ್ಟು ದಿನ ಎಂದು ನೋಡ ಬಹುದು" ಎಂದು ಚುಚ್ಚಿ ನುಡಿದ. ಕರಿಯ ವಿಚಾರ ಮಾಡಬೇಕಾಗಿ ಬಂತು. ಅವನಿಗೂ ಅನಿಸಿತು—ಪ್ರಾಯಶಃ ತನ್ನ ಪಾಲಿಗೆ ಮಲೆಯ ಜೀವನ ಕೊನೆಯಾಯಿತೋ ಏನೋ. ಮನಸ್ಸಿಲ್ಲದ ತಿಮ್ಮ, ಗಿಡ್ಡಿಯರನ್ನು ತನಗಾಗಿ ಆ ಏಕಾಂತವಾಸದ ರಾಜ್ಯಕ್ಕೆ ಕರೆದುಕೊಂಡು ಹೋಗುವುದು ಒಳಿತಲ್ಲ. ಎಲ್ಲಾದರೇನು? ತಮ್ಮನ್ನು ಬಂಧುಗಳಿಗಿಂತ ಹೆಚ್ಚಾಗಿ ಕಾಣುವ ಬಟ್ಯರಂಥ ಗೆಳೆಯರಿರುವಾಗ ಕುಕ್ಕರಳ್ಳಿಯಲ್ಲಿಯೇ ಏನಾದರೂ ಮಾಡಿಕೊಂಡು ವಾಸ ಮಾಡಬಹುದಲ್ಲ—ಎಂದು.

ಎರಡು ದಿನಗಳ ಬಳಿಕ, ಬಂದ ಚೋಮ, ಇನ್ನೂ ನಾಲ್ಕು ಬುದ್ಧಿಯ ಮಾತುಗಳನ್ನು ಹೇಳಿ ಗಿಡ್ಡಿಯನ್ನೂ, ಮೊಮ್ಮಗನನ್ನೂ ಕರೆದುಕೊಂಡು

ಸಂತೋಷಚಿತ್ತನಾಗಿ ಹಿರಿ ಮನೆಗೆ ಮರಳಿದ. ಹೋಗುತ್ತ "ಕರಿಯಣ್ಣ, ನೀನು ಸಿಟ್ಟು ಮಾಡಬೇಡ. ನಾನು ಹೇಳಿದ್ದನ್ನು ಮನಸ್ಸಿನಲ್ಲಿರಿಸಿಕೋ. ಈ ವರ್ಷ ಹಳೆಯ ಧನಿಯರು ಮನೆಗೆ ಬಂದಿಲ್ಲ, ಇನ್ನು ಬರುವುದಿಲ್ಲವಂತೆ; ಜಾತ್ರೆಗೆ ನಾವೆಲ್ಲರೂ ಬರುತ್ತೇವೆ. ನೀನು, ತಿಮ್ಮನೂ ತಪ್ಪದೆ ಬನ್ನಿ. ದೈವ ನಿನಗೆ ಬುದ್ಧಿ ಕೊಟ್ಟರೆ ತಿಮ್ಮನ ಹಾಗೆ ನೀನೂ ಸಂಸಾರ ಮಾಡಿಕೊಂಡು ಸುಖವಾಗಿರಬಹುದು" ಎಂದು ಹೇಳಿ ಹೋದ. ಬಹುದಿನದಿಂದ ತಾಯಿತಂದೆಗಳಿಂದ ದೂರವಾದ ಗಿಡ್ಡಿ, ತವರುಮನೆಗೆ ಹೋಗುವುದು ನ್ಯಾಯವೆಂದು ಅವರಿಗೂ ಅನಿಸಿತು. ಅವರನ್ನು ಗ್ರಾಮದ ಗಡಿಯ ತನಕ ಇಬ್ಬರೂ ಬೀಳ್ಕೊಟ್ಟು ಬಂದರು. ಅನಂತರ ಅವರ ದಿನನಿತ್ಯದ ಕೆಲಸ ತೊಡಗಿತು.

ಹೊಲದ ಮಣ್ಣು ಹೊತ್ತು ಬಟ್ಯನಿಗೆ ಸಹಾಯ ಮಾಡುವುದರ ಜತೆಗೆ, ಒಂದು ಕಿರಿಯ ಗದ್ದೆಯಲ್ಲಿ ಉತ್ತು ಬಿತ್ತಿ ರಾಗಿ ಬೆಳೆದರು—ಅವರಿಬ್ಬರು. ಮಲೆಯಲ್ಲಿ ಸ್ವೈಯಿಂದ ಅಗತೆ ಮಾಡಿ ನಟ್ಟು ಬೆಳೆದ ಅವರಿಗೆ, ಹೂಟಿ ಉಳುಮೆಯ ಕೆಲಸ ಅದಕ್ಕಿಂತ ಎಷ್ಟೋ ಸುಲಭವಾಗಿ ಕಾಣಿಸಿತು. ನೀರಿಗೂ ಬರಗಾಲವಿಲ್ಲ. ಕುಮರಿ ಸುಟ್ಟು, ಬೂದಿ ಹಾಕುವ ಬದಲು ಸೊಪ್ಪುಗೊಬ್ಬರ ಹಾಕಿದರು. ನೊಲಗಳು ಬಂದು ತಿನ್ನದ ಹಾಗೆ ಆ ಪುಟ್ಟ ಜಾಗಕ್ಕೆ ಬೇಲಿಯನ್ನೂ ಹಾಕಿದರು. ರಾಗಿ ಮೊಳೆತು, ಅದಕ್ಕೆ ಕದಿರು ಬರುವ ತನಕವೂ ಕರಿಯಣ್ಣನಿಗೆ ಒಂದೇ ಕೆಲಸ—ಕೆಂಚನ ಹತ್ತಿರ ಹೋಗಿ 'ಇನ್ನೇನು ಹೆದರಬೇಡ. ನಿನಗೋಸ್ಕರ ರಾಗಿ ಬೆಳೆದಿದ್ದೇನೆ' ಎನ್ನುವುದು. ಆ ದಿನಗಳು ಕೆಲಸ, ಸರಸಗಳಲ್ಲಿ ಮಿಂಚಿನಂತೆ ಮಾಯವಾದುವು. ತಿಂಗಳು, ತಿಂಗಳುಗಳು ಕಳೆದು ಉಳಿದುದು ಮೂಲೆಗುಂಪಿನ ಜಾತ್ರೆಗೆ ಎಂಟೇ ಎಂಟು ದಿನ. ತಿಮ್ಮನಿಗೆ ಜಾತ್ರೆಗೆ ಹೋಗಿ ಬಿಡುವು, ಚೋಮನ ದರ್ಶನ ಪಡೆಯುವ ಆಸೆ. ತವರಿಂದ ಬರುವ ಗಿಡ್ಡಿಯನ್ನು ಕಟ್ಟಿಕೊಂಡು, ಜಾತ್ರೆಯಲ್ಲಿ ಮೆರೆದಾಡಬೇಕೆಂಬ ಹಂಬಲ. ಅವರ ಪಾಲಿಗೆ ಹಚ್ಚಡ ಕೊಡುವ ಧನಿಗಳಿಲ್ಲ ತಾವೇ ಬೆಲೆ ಕೊಟ್ಟು ಅದನ್ನು ಕೊಳ್ಳಬೇಕು. ದುಡಿದಿದ್ದಾರೆ ಬಹು ದಿನ, ಬಟ್ಯನಿಗಾಗಿ. ಬಟ್ಯ ನಾಲ್ಕು ಕಾಸು ಕೊಟ್ಟರೆ ಆದೀತೆಂಬ ಆಸೆ. ಕರಿಯಗೆ 'ತನ್ನ ಮರಿ ಕೋಣನ ಮೇಲೆ ಕೂತು, ಒಮ್ಮೆ ಮೂಲೆಗುಂಪಿಗೆ ಹೋಗಿ ಮೆರೆದಾಡುತ್ತೇನೆ' ಎನ್ನುವ ಬಯಕೆ. ಆದರೂ ಒಳಗಿಂದೊಳಗೆ ಒಂದು ಹೆದರಿಕೆ

ಯೇನೋ ಇದೆ ಹಳೆಯ ಧನಿಗಳು ಹುಶಾರಾಗಿ, ಜಾತ್ರೆಗೆ ಬಂದರೆ ಇನ್ನೇನಾದರೂ ತೊಡಕು ಬಂದೀತೆಂದು. ಆದುದರಿಂದ ಜಾತ್ರೆಯ ಮುಂಚಿನ ದಿನ ತಿಮ್ಮನನ್ನು ನೋಡಿಕೊಂಡು ಬರಲು ಅಟ್ಟಿದ. ಆತ ಹೋಗಿ ಬಂದವ "ಹಳೆಯ ಧನಿಗಳು ಬರಲಿಲ್ಲ; ಅವರ ಮಗಂದಿರು ಬಂದಿದ್ದಾರೆ; ಒಳ್ಳೆಯವರಾಗಿ ಕಾಣುತ್ತಾರೆ. ನಾನೂ ಹೋಗಿ ಅವರನ್ನು ಕಂಡಿದ್ದೆ." 'ಏನು ತಿಮ್ಮ, ನಮ್ಮ ಮಲೆಯವನಂತೆ ನೀನು. ಯಾಕೋ ಓಡಿಹೋದೆಯಂತೆ. ಅದೆಲ್ಲ ಹಳೆಯ ಲೆಕ್ಕ. ಮರೆತುಬಿಡು. ಕಿರಿಮಲೆಯಲ್ಲಿ ಬಂದು ಇದ್ದುಬಿಡು' ಎಂದು ಹೇಳಿದ ಮಾತನ್ನು ತಿಳಿಸಿದ. ಆ ಬಳಿಕ 'ಆನೆ ಹಿಡಿದದ್ದು ಯಾರು? ನಿನಗೆ ಗೊತ್ತೇ?' ಎಂದು ತನ್ನನ್ನು ಕೇಳಿದರೆಂದೂ, ತಾನು 'ಅದು ನೀನೇ ಎಂದೂ, ಧನಿಗಳಿಗೆ ಅದನ್ನು ನೋಡುವ ಆಸೆ ಇದ್ದರೆ ನಾಳಿಗೆ ಆನೆಸಹಿತವಾಗಿ ನಿನ್ನನ್ನು ಕರೆದುಕೊಂಡು ಬರುತ್ತೇನೆ' ಎಂದೂ ಹೇಳಿದ ಮಾತನ್ನೂ ತಿಳಿಸಿದ. ನಿಜ—ತುಕ್ರ ಯಾಕೋ ಏನೋ, ಧನಿಗಳ ಕಿವಿಗೆ ಆ ಸುದ್ದಿಯನ್ನು ಹಾಕಿರಲಿಲ್ಲ. ಆ ಭಾಗ್ಯ ತಿಮ್ಮನಿಗೆ ದೊರೆಯಿತು.

ಜಾತ್ರೆಗೆ ಹೊರಡುವ ನಿಶ್ಚಯವಾಯಿತು. ಅವನ ಆತುರ ಹೇಳಲಾರದ್ದು. ಆನೆಯ ಮೇಲೊಂದು ಹರಕು ಕಂಬಳಿ ಹೊದೆಸಿದ. ತೆಂಗಿನ ಓಲೆಗಳಿಂದ ಏನೇನೋ ಅಲಂಕಾರ ಮಾಡಿ ಅದರ ಕೊರಳಿಗೆ ತೂಗಿದ. ಹಾಕಿದ ಅರೆವಾಸಿ ಅಲಂಕಾರವನ್ನು ಅದು ಕಿತ್ತು ತಿಂದರೂ, ಕೆಂಚನಿಗೆ ಬುದ್ಧಿ ಹೇಳುತ್ತ, ಇನ್ನಷ್ಟು ತೆಂಗಿನ ಗರಿಗಳನ್ನು ಅದರ ಕೊರಳಿಗೆ ಕಟ್ಟಿ ಇಬ್ಬರೂ ಮೂಲೆಗುಂಪಿಗೆ ಹೊರಟರು. ಮುಂದೆ ತಿಮ್ಮ, ಕರಿಯ, ಜತೆಯಲ್ಲಿ ಆನೆ, ಹಿಂದೆ ಕುಕ್ಕರಳ್ಳಿಯ ಗೌಡರ ಸಾಲು. ಆ ಎರಡು ಹರದಾರಿ ಉದ್ದಕ್ಕೆ ದಾರಿಯುದ್ದದ ಮಕ್ಕಳು ಮರಿಗಳು ಸೇರಿ—ಅದು ಮದುವೆಯ ಮೆರವಣಿಗೆಯೇ ಆಯಿತು. ಮೂಲೆಗುಂಪಿನ ದೇವಾಲಯದ ಎದುರಿಗೆ ಅವರು ಹೋದಾಗ, ಕರಿಯನ ಎದೆ ಹಿಗ್ಗಿನಿಂದ ಉಬ್ಬಿತ್ತು. ಅಲ್ಲಿಗೆ ಹೋಗುವಾಗ ನೆಲದ ಮೇಲಿದ್ದ ಕರಿಯ ಆನೆಯ ಬೆನ್ನನ್ನೇರಿದ್ದ. ಅದರ ಸೊಂಡಿಲನ್ನು ಕೋಲಿನಿಂದ ಬಡೆದು ಬಡೆದು, ದೇವರಿಗೆ ಅರ್ಧ ಸಲಾಂಮನ್ನೂ ಹಾಕಿಸಿದ. ಅನಂತರ ರಾಮಚಂದ್ರಯ್ಯನವರು ಇಳಿದುಕೊಂಡ ಮನೆಯ ಮುಂಗಡೆ ಹೋಗಿನಿಂತ. ಕುಡಿಯರ ಕುಲವೆಲ್ಲ ಕಲೆಯಿತು; ಕರಿಯನನ್ನೂ, ಆನೆಯನ್ನೂ ಸುತ್ತುವರಿ

ಯಿತು. ತುಕ್ರ ಧನಿಗಳನ್ನು ಕರೆದುಕೊಂಡು ಬಂದ. ಕರಿಯನೆದುರಿಗೆ ತುಂಬ ಚೆಂದದಿಂದ ಮಾತನಾಡಿದ. “ಅಯ್ಯಾ, ಈ ಹುಡುಗ ನಮ್ಮ ಕೆಂಚ ಗುರಿಕಾರನ ಮೊಮ್ಮಗ. ನಮ್ಮ ಮನೆಯಲ್ಲೇ ಬೆಳೆದು ದೊಡ್ಡದಾದವ. ನಾಲ್ಕು ದಿನ ನಮಗೂ ಗುರಿಕಾರನಾಗಿದ್ದ” ಎಂದ. ಕರಿಯನ ಬಾಯಿಯಿಂದಲೇ ಧನಿಗಳು ಆನೆ ಹಿಡಿದ ಕತೆಯನ್ನು ಕೇಳಿ ತುಂಬ ಹಿಗ್ಗಿದರು. ಅಲ್ಲದೆ ಅವನೂ ತಮ್ಮ ಮನೆಯವನೆಂದು ಕೇಳಿ ಸಂತೋಷಗೊಂಡರು. ಆನೆಗೆ ತಿನ್ನಲು ಕಬ್ಬು, ಬಾಳೆಯ ಹಣ್ಣು, ಓಲೆಬೆಲ್ಲ ತರಿಸಿಕೊಟ್ಟರು. ಅಷ್ಟು ಸಣ್ಣ ಮರಿ ಕರಿಯ ಕೊಟ್ಟದ್ದನ್ನೆಲ್ಲ ಯಾವುದೋ ಬಾವಿಗೆ ತೆಗೆದು ತುಂಬಿಸಿದ ಹಾಗೆ ತುಂಬುವುದನ್ನು ಕಂಡು ‘ಇದರ ಗುಡಾಣದ ಹೊಟ್ಟೆ ತುಂಬುವುದುಂಟೇ!’ ಎಂಬ ಆಶ್ಚರ್ಯ ಅವನಿಗೂ ಆಯಿತು.

ಮೂಲೆಗುಂಪಿನ ಹಬ್ಬ ಕರಿಯನಿಗೂ ಹಿರಿಯ ಹಬ್ಬವಾಯಿತು. ‘ಆನೆ ಬಂದದ್ದರಿಂದಲೇ ಜಾತ್ರೆಗೆ ಕಳೆಕಟ್ಟಿತು’ ಎನ್ನುತ್ತಾರೆ ಜನರೆಲ್ಲ. ಇಷ್ಟೇ ತೊಡಕು—ಆನೆಯನ್ನು ಬಿಟ್ಟು ಕದಲಲಾರ ಕರಿಯ. ಮರಿ, ಜನಗಳನ್ನು ಕಂಡು ಗಾಬರಿಗೊಂಡೀತೆಂಬ ಭೀತಿ. ಹಾಗೆಂದು ಅವನ ಬಳಿಗೆ ಪ್ರತಿಯೊಬ್ಬ ಪರಿಚಿತಿಯೂ ಬಂದವನು, ‘ಬಾ ಅಣ್ಣಾ’ ಎಂದು ಉಪಚರಿಸಿದರು. ಗಿಡ್ಡಿ, ತಂಗಿಗೆ ಆನೆ ತೋರಿಸುವ ನೆವದಿಂದ ಅಲ್ಲಿಯ ತನಕ ಅವಳನ್ನು ಕರೆದು ತಂದಳು. ಅವಳ ಕೈಯಿಂದ, ಅವಳ ಹುಡುಗನನ್ನು ಕರಿಯ ಎತ್ತಿಕೊಂಡು ಆನೆಯ ಮೇಲೆ ಕುಳ್ಳಿರಿಸಿ, ತಿರುಗಿ ತೆಗೆದು ಕೊಟ್ಟ. ರಾಮಚಂದ್ರಯ್ಯನವರಿಗೆ ಏನು ಕಂಡಿತೋ ಏನೋ—ಇನ್ನೊಮ್ಮೆ ಕರಿಯನಿದ್ದಲ್ಲಿಗೆ ಬಂದರು.

“ಕರಿಯಣ್ಣ ಹಿಂದಿನದೆಲ್ಲ ಮರೆತುಬಿಡು. ನಮ್ಮ ಮನೆಗೆ ಬಂದಿರಲೇ ಬೇಕು ನೀನು” ಎಂದು ಚೆನ್ನಾಗಿ ಮಾತಾಡಿ, ಅವನಿಗೂ ಒಂದು ಹಚ್ಚಡ ಕೊಟ್ಟಾಗ, ಕರಿಯನ ಮನಸ್ಸಿನಲ್ಲಿ ಎಲ್ಲಿಲ್ಲದ ಕೃತಜ್ಞತೆ ಉಂಟಾಯಿತು. ಅವರೆದುರಿಗೆ ‘ಬರಲಾರೆ’ ಎನ್ನಲಾರ. ಬದಲು “ದೇವರು ನಡೆಸಿದರೆ ನೋಡುವ. ಯೋಚನೆ ಮಾಡುತ್ತೇನೆ” ಎಂದ.

“ಅಲ್ಲೇನಾದರೂ ಬೇಸಾಯ ಗೀಸಾಯ ಮಾಡಿಕೊಂಡಿದ್ದೀಯಾ?” ಎಂದು ಕೇಳಿದರು ಅವರು.

"ನಟ್ಟಿದ್ದೇನೆ ಒಂದಿಷ್ಟು ರಾಗಿ. ಈ ವರ್ಷ ಒಂದಿಷ್ಟು ಬತ್ತವನ್ನು ಬಿತ್ತುವ ಎಂದಿದೆ" ಎಂದು ಹೇಳಿದ.

ಆತ ಆ ದಿನದ ಜಾತ್ರೆ ನೋಡಿಕೊಂಡು, ಆನೆಯೊಡನೆ ಕುಕ್ಕರಳ್ಳಿಗೆ ಮರಳಿದ. ಕುಕ್ಕರಳ್ಳಿಯ ಗೌಡರೆಲ್ಲರು ಅವನ ಜತೆಗೆ ಮರಳಿದರು. ಬಟ್ಯ ಗೌಡನು ರಾಮಚಂದ್ರಯ್ಯ ಆಡಿದ ಮಾತು ಕೇಳಿದ್ದ. "ನಿಜಕ್ಕೂ ಹೋಗುತ್ತೀಯಾ? ನಮ್ಮೂರಲ್ಲಿಯೇ ನೀನು ಯಾಕಿರಬಾರದು?" ಎಂದು ಅವನೂ ಈ ಕಡೆಯಿಂದ ಆಗ್ರಹಪಡಿಸತೊಡಗಿದ.

ಜಾತ್ರೆ ಹರಿದ ಮೇಲೆ, ಜೋಮನ ಮನೆಯವರು ಕುಕ್ಕರಳ್ಳಿಗೆ ಬಂದು, ನಾಲ್ಕು ದಿನ ಇದ್ದು ಹೋದರು. ಗಿಡ್ಡಿಯ ತಂಗಿಯೂ ಬಂದಿದ್ದಳು. ಮದುವೆಯ ಮಾತು ಆಡೋಣ, ಆಡೋಣ—ಎಂದು ಕಂಡರೂ, ಜೋಮ ಆ ಹೊರೆಯನ್ನೆಲ್ಲ ಗಿಡ್ಡಿಯ ಪಾಲಿಗೆ ಬಿಟ್ಟು, ತನ್ನ ಕುಡಿಯರೊಡನೆ ಮಲೆಗೆ ಮರಳಿದ. ಇತ್ತ ಜಾತ್ರೆಗೆ ಬಂದ ರಾಮಚಂದ್ರಯ್ಯ, ಶಿಕಾರಿಯ ಹುಚ್ಚಿನಿಂದ ಕಿರಿ ಮಲೆಗೆ ಹೋದರು. ಬರುವಾಗ ಊರಿಂದ ಬಂಟ್ರಪ್ಪನೆಂಬ ಒಳ್ಳೆಯ ಈಡುಗಾರನನ್ನು ಕರೆದುಕೊಂಡು ಬಂದಿದ್ದುದರಿಂದ, ಆರೆಂಟು ದಿನ ಮಲೆಯಲ್ಲೇ ಇದ್ದು, ತಮ್ಮ ಬೇಟೆಯ ಹುಚ್ಚನ್ನೆಲ್ಲ ತೀರಿಸಿಕೊಳ್ಳಬಹುದೆಂಬ ನಿರೀಕ್ಷೆ ಅವರದ್ದು.

## ಅಧ್ಯಾಯ ೧೯

ಕಿರಿ ಮಲೆಯ ಮೇಲೆ ವಸಂತಋತುವಿನ ತಂಗಾಳಿ ಮೆಲುವಾಗಿ ಎಲ್ಲೆಡೆಯಲ್ಲೂ ಬೀಸತೊಡಗಿದೆ. ಮೂಲೆಗುಂಪಿನವರಿಗೂ, ಕಣಿವೆಯ ಕೆಳಗಿನ ಇತರ ಜನಕ್ಕೂ ಹವೆ ಅಸಹನೀಯವಾಗಿ ಕಾಣಿಸಬಹುದಾದರೂ, ಮಲೆವಾಸಿಗಳ ಪಾಲಿಗೆ ಬಿಸಿಲಿನ ಬೇಗೆ ಎಂಬುದೇ ಇಲ್ಲ. ಅಲ್ಲಿ ಸದಾ ಶೀತಗಾಳಿಯೇ. ಅದು ನಾಲ್ದೆಸೆಗಳಿಂದ ನೂರಾರು ಬಗೆಯ ಹೂಗಳ ಕಂಪನ್ನು ಹೊತ್ತು ತಂದು, ಎಂಥ ನಿರುತ್ಸಾಹಿ ಜೀವಕ್ಕೂ ಹುರುಪನ್ನು ತುಂಬಿಸುತ್ತಿತ್ತು. ಜಾತ್ರೆ ಮುಗಿಸಿಕೊಂಡು ಮಲೆಗೆ ಮರಳಿದ ಕುಡಿಯರು ಇನ್ನು ನಾಲ್ಕು ದಿನಕ್ಕೆ ಕಾಡು ಸವರಲು ಹೋಗುತ್ತಾರೆ ಮುಂದಿನ ಕುಮರಿ ಬೆಳೆಯ ನೆಲ ಆರಿಸಿ ಬಂದದ್ದಾಯಿತು. ಕೆಲಸ ತೊಡಗಿಲ್ಲ. ಹಬ್ಬದ ಉತ್ಸಾಹವನ್ನೆಲ್ಲ ಕೊಂಡು, ಅವರು ಮಲೆಗೆ ಬಂದಂತೆಯೇ ಅವರ ಚಿಕ್ಕ ಧನಿಗಳಾದ

ರಾಮಚಂದ್ರಯ್ಯನವರು ಈಡುಗಾರ ಬಂಟ್ರಪ್ಪನನ್ನು ಕರೆದುಕೊಂಡು ಬಂದರು; ಅಲ್ಲಿನ ಹವೆಯನ್ನು ನೋಡಿ ಇಬ್ಬರೂ ಉತ್ಸಾಹ ತಾಳಿದರು. ಬಂದ ಮೊದಲ ದಿನ, ಬಂಟ್ರಪ್ಪನಿಗೆ ತಮ್ಮ ರಾಜ್ಯದ ಸಿರಿ ಸೊಬಗುಗಳನ್ನು ತೋರಿಸುವುದರಲ್ಲಿ ರಾಮಚಂದ್ರಯ್ಯ ಕಳೆದರು. ಮುಂದಿನ ಎರಡು ದಿನ, ಅವಶ್ಯವಿದ್ದರೆ ವಾರವೋ, ಪಕ್ಷವೋ ಬೇಟೆಯಾಡುತ್ತ ಅಲೆದಾಡಬೇಕೆಂಬುದು ಅವರ ಇಷ್ಟ. ರಾಮಚಂದ್ರಯ್ಯನವರಿಗೆ ಹುಲಿ, ಕಾಡು ಹಂದಿ ಅಥವಾ ಇನ್ನಾವ ಕಾಡುಮೃಗವನ್ನೂ ಶಿಕಾರಿ ಮಾಡಿ ಗೊತ್ತಿಲ್ಲ. ಗುರಿಯಿಟ್ಟು ಹೊಡೆಯಲು ಕಲಿತಿದ್ದರು—ಅಷ್ಟೇ ಅವರ ಸಂತೋಷ. ಹಿಂಸ್ರಮೃಗಗಳ ಶಿಕಾರಿಗೆ ಅವರು ಒಬ್ಬರೇ ಹೊರಡುವವರೂ ಅಲ್ಲ. ಅಲ್ಲದೆ ಬೇಟೆಯ ಮಾಂಸದ ರುಚಿ, ಅವರ ನಾಲಿಗೆ ಸೇರಿದ್ದೂ ಅಲ್ಲ. ನಾಲಿಗೆಗಾಗಿ ಕಾಡಿನ ಗಡ್ಡೆ, ಊರಿಂದ ತಂದ ಕುಂಬಳಕಾಯಿ, ಸೌತೇಕಾಯಿಗಳಲ್ಲಷ್ಟೆ ಅವರಿಗೆ ತೃಪ್ತಿ. ಬಂಟ್ರಪ್ಪ ಮಾತ್ರ ಹಾಗಲ್ಲ, ಊರಲ್ಲಿರುವಾಗ ಹಕ್ಕಿಪಕ್ಕಿಗಳ ಮಾಂಸಕ್ಕಾಗಿ ಗುಡ್ಡಗಾಡನ್ನು ಸುತ್ತುವವ. ವಿಟ್ಲ ಸೀಮೆ ಬೇಟೆಗೆ ಅಂಥಾ ಹೆಸರಾದ ಪ್ರಾಂತವಲ್ಲ. ಹೀಗಾಗಿ, ಮಲೆಗೆ ರಾಮಚಂದ್ರಯ್ಯ ಹೋಗುತ್ತೇನೆಂದಾಗ, ಅವರ ಬೆನ್ನಿಗೆ ಹೋಗಿ, ಶಿಕಾರಿಯ ಹಂಬಲವನ್ನೆಲ್ಲ ತೀರಿಸಿಕೊಳ್ಳುವುದು ಅವನ ಆಸೆಯಾಗಿತ್ತು. ಎರಡು ವರ್ಷಗಳ ಹಿಂದೆ ಕಳಂಜಿ ಮಲೆಯಲ್ಲಿ, ತಾನು ಒಂದು ಚಿರತೆಯನ್ನು ಗುಂಡಿಟ್ಟು ಕೊಂದ ಧೈರ್ಯದಿಂದಲೇ, ಎಂಥ ಹುಲಿಯನ್ನೂ ಹೊಡೆದೇನು, ಕಾಟಿಯನ್ನು ಉರುಳಿಸಿಯೇನು—ಎಂಬ ಹುಮ್ಮಸ್ಸು ಅವನದ್ದು. ಅವನದೂ ಎಳೆಯ ವಯಸ್ಸು. ಹೀಗಾಗಿ ಅವರಿಬ್ಬರೂ ಕೂಡಿಕೊಂಡ ಮೇಲೆ ಉತ್ಸಾಹಕ್ಕೆ ಮೇರೆಯುಂಟೇ?

ಮರುದಿನ ರಾಮಚಂದ್ರಯ್ಯ ತುಕ್ರನನ್ನು ಕರೆಸಿದರು. "ತುಕ್ರ, ನೋಡುವ. ಕರಡಿ ಇರುವ ಗುಹೆ ಗೊತ್ತು ಅಂದೆಯಲ್ಲ. ಹೋಗುವ—ಜತೆಗೆ ಎರಡೆರಡು ಕೋವಿಗಳಿದ್ದಾವೆ. ಒಂದು ಹೊಸತಾದ ಕೋವಿ. ಇನ್ನೊಂದು ಚರೆ ಮದ್ದಿನದು. ಜತೆಗೆ ಈಟಿ ಹಿಡಿದುಕೊಂಡು ನೀವೂ ಬನ್ನಿ. ಏನು ಸಿಕ್ಕುತ್ತದೆಂದು ನೋಡಿಯೇ ಬಿಡುವ" ಎಂದು ಅಪ್ಪಣೆ ಕೊಡಿಸಿದರು. ಮೇಲಕ್ಕೆ ಬಂಟ್ರಪ್ಪನ ಕುರಿತಾದ ಹೊಗಳಿಕೆಯನ್ನಿಷ್ಟು ಮಾಡಿದರು. ಮರುದಿನ ಬೆಳಿಗ್ಗೆ ಅಂಬಲಿ ಉಂಡ ಬಳಿಕ ಏಳೆಂಟು ಜನ ಕುಡಿಯರು ಅವರ

ಜತೆಗೆ ಶಿಕಾರಿಗೆಂದು ಹೊರಟರು. ಬೂದ, ತುಕ್ರ, ಕಾಳ ಮೊದಲಾದ ಗಂಡಾಳುಗಳೆಲ್ಲ ಹೊರಟರು. 'ಕರಡಿಗುಹೆ ತನಗೆ ಗೊತ್ತುಂಟು' ಎಂದು ಕಾಳ ಮುಂದಾದ. ಅವನ ಹಿಂದೆ ಬಂಟ್ರಪ್ಪ ಮತ್ತು ರಾಮಚಂದ್ರಯ್ಯ ನಿಂತರು. ಬಲ್ಲೆಗಳನ್ನು ಸವರಿಕೊಂಡು, ಕರಡಿಗಳ ಗುಹೆಯ ಪ್ರದೇಶವನ್ನು ಸೇರುವಾಗ ಬಂಟ್ರಪ್ಪನಿಗೆ ಯೋಚನೆಯಾಗದಿರಲಿಲ್ಲ—ಇದು ತಮ್ಮ ಊರಿನ ಕಳಂಜಿ ಮಲೆಯುಲ್ಲವೆಂದು. ಇಲ್ಲಿನ ಗಿಡಗಳ ದಟ್ಟಣೆಯಿಂದ ಹತ್ತು ಗಜ ನೋಟವು ಕೂಡ ನೋಡಲು ಸಿಗುವುದಿಲ್ಲ ಸಾಲದುದಕ್ಕೆ, ಒಂದು ಎಕರೆ ಯಷ್ಟು ಸಮತಟ್ಟಾದ ನೆಲವೂ ಇಲ್ಲ. ಎಲ್ಲವೂ ಏರು ತಗ್ಗು; ಅದರಲ್ಲೇ ಆಗ ಬೇಕಿತ್ತು ಅವರ ಪೌರುಷಪ್ರದರ್ಶನ ಗುಹೆಯ ಸಾಲು ಬಂದಿತು. ಹೆಬ್ಬಂಡೆ ಗಳ ಸೆರಗದು. ಈಚೆ ನಿಂತವ ಆಚೆ ಕಾಣಿಸಲಾರ. ಅಲ್ಲಿಗೆ ಬರುತ್ತಲೆ ಬೂದ, ಕಾಳನ ಕೈಯನ್ನು ಹಿಡಿದು ಹಿಂದಕ್ಕೆ ತಡವಿದ. ಎಲ್ಲರೂ ಮೆಲ್ಲಗೆ ಮಾತಾಡತೊಡಗಿದರು. ಮುಂದಿನ ಉಪಾಯ ಯೋಚಿಸಿದರು. ತುಕ್ರ, ಬಂಟ್ರಪ್ಪ, ಧನಿಗಳು ಗುಹೆಯನ್ನು ಸಮೀಪಿಸಬೇಕೆಂದೂ, ಉಳಿದವರು ಕತ್ತಿ ಕೋಲುಗಳನ್ನು ಹಿಡಿದುಕೊಂಡು ಕೆಳಗಡೆಯಿಂದ ಆ ಪ್ರದೇಶವನ್ನು ಸುತ್ತು ವರಿದು, ಅಲ್ಲಲ್ಲಿ ಕಾವಲು ನಿಲ್ಲಬೇಕೆಂದು ನಿರ್ಣಯವಾಯಿತು. ತುಕ್ರ ವಯ ಸ್ಸಾಗಿದ್ದರೂ ಮಂಗನಂತೆ ಆ ಬಂಡೆಗಳನ್ನು ಜಿಗಿದು ಆಚೀಚೆ ಸರಿದಂತೆ, ಉಳಿದವರಿಬ್ಬರಿಗೂ ಆಗದು. ಜತೆಗೆ ಕೋವಿಯ ಹೊರೆಯನ್ನೂ ಹೊರ ಬೇಕಲ್ಲ. ಆ ಸ್ಥಳವನ್ನು ಕಂಡಮೇಲೆ, ಕುತೂಹಲ ಉತ್ಸಾಹಗಳು ಯಾರಿಗೂ ಹೆಚ್ಚುವಂಥದೇ. ಸಾಲಾಗಿ ಹರಡಿರುವ ಬಂಡೆಗಳ ಪೊಟರೆಗಳನ್ನು ಹಿಂದಕ್ಕೆ ಒಂದೊಂದಾಗಿ ನಿರುಕಿಸುತ್ತ ಹೋದರು. ತುಕ್ರನ ಕೈ, ಸದಾ ಜತೆ ಗಾರನನ್ನು ತಡೆಯುವುದಕ್ಕೆ, ಚಾಚಿಯೇ ಇತ್ತು. ಮೂರು ನಾಲ್ಕು ಪೊಟರೆ ಗಳನ್ನು ಹೊಕ್ಕರು. ಒಂದರ ನೆಲದ ಮೇಲೆ ಮರಳು ಹಾಸಿತ್ತು, ಅದರ ಮೇಲೆ ಚೆನ್ನಾಗಿ ಊರಿದ ಯಾವುದೋ ಪ್ರಾಣಿಯ ಹೆಜ್ಜೆಗಳ ಗುರುತೂ ಕಾಣಿಸಿತು. ಅದನ್ನು ಕಂಡ ತುಕ್ರ "ಕರಡಿಯೋ—ಏನೋ" ಎಂದ. "ಚಿಟ್ಟೆ ಹುಲಿಯೋ ಏನೋ" ಅಂದ ಬಂಟ್ರಪ್ಪ. ಇನ್ನೂ ಹತ್ತು ಹೆಜ್ಜೆ ಮುಂದುವರಿದು ಮತ್ತೊಂದು ಗುಹೆಯನ್ನು ಸಮೀಪಿಸಿದರು. ಬಂಟ್ರಪ್ಪ ಒಂದು ಬಂಡೆ ಯನ್ನು ಹತ್ತಿ ಈಚೆಗೆ ಹಾರುವಾಗಲೇ ಧಡಕ್ಕನೆ ಸದ್ದಾಯಿತು. ಆ ಸದ್ದಿಗೆ

ಸಮೀಪದ ಗವಿಯಲ್ಲಿ ಅಡಗಿದ ಕರಡಿಯೊಂದು, ಹೊರಕ್ಕೆ ಮುಖ ಹಾಕಿತು. ಅದನ್ನು ಮೊದಲು ಕಂಡವ ತುಕ್ರ. "ಹೂಂ, ಹೂಂ" ಎಂದು ಹಿಂದಿನವರನ್ನು ಆತ ತಡೆದು, ಅವರಿಗೆ ಗವಿಯನ್ನು ತೋರಿಸಿದ. "ಈಗಷ್ಟೆ ಕರಡಿ ಒಳಗೆ ಹೋದುದನ್ನು ನೋಡಿದೆ" ಎಂದ. ಕುತೂಹಲ ಹೆಚ್ಚಿತು. ಸಮೀಪ ಹೋಗಲೇ, ಬಿಡಲೇ—ಎಂದೆಂದುಕೊಂಡಿತು ಅವರ ಮನಸ್ಸು. 'ಒಂದಿದೆಯೋ, ಎರಡಿವೆಯೋ' ಎಂದು ಅನುಮಾನಿಸಿದ ತುಕ್ರ. ಬಂಟ್ರಪ್ಪ ತೋಟೆಯ ಕೋವಿ ಹಿಡಿದುಕೊಂಡು ಮೆಲ್ಲನೆ ಬಗ್ಗುತ್ತ, ಒಂದೊಂದೇ ಹೆಜ್ಜೆ ಮುಂದಿಟ್ಟ. ಗುಹೆಯ ಕತ್ತಲಲ್ಲಿ ಯಾವುದೂ ಕಾಣಿಸಲಿಲ್ಲ. 'ಇದ್ದರೆ ಅದು ಒಳಗೆ ಅಡಗಿಕೊಂಡಿರಬೇಕು. ಹೇಗೆ ಅದನ್ನು ಹೊರಗೆ ಹೊರಡಿಸಲಿ' —ಎಂಬ ಯೋಚನೆ ಮಾಡಿದ. ತುಕ್ರ ಕೈಯಲ್ಲಿ ಬಂಡೆಯ ತುಂಡುಗಳನ್ನು ತೆಗೆದುಕೊಂಡು, ಒಂದೊಂದಾಗಿ ಸದ್ದಾಗುವಂತೆ ಗವಿಯ ಒಳಕ್ಕೆ ಎಸೆದ. ಉಳಿದಪರಿಬ್ಬರು ಅವನ ಸಮೀಪದಲ್ಲೇ ಕೋವಿ ಹಿಡಿದು ಕಾದು ನಿಂತರು. ಕಲ್ಲೆಸೆದರೂ ಪ್ರಯೋಜನವಾಗಲಿಲ್ಲ—ಎಂದುಕೊಂಡು ಗದ್ದಲ ಎಬ್ಬಿಸ ತೊಡಗಿದರು. ಯಾವ ಪ್ರಾಣಿಯೂ ಹೊರಕ್ಕೆ ಬರಲಿಲ್ಲ. "ಛೆ, ನೀನು ನೋಡಿದ್ದೇ ಸುಳ್ಳು" ಎಂದ ಬಂಟ್ರಪ್ಪ. ಆದರೂ ನಿರಾಶರಾಗದೆ ಆ ಗವಿಯನ್ನು ದಾಟಿ ಮುಂದಿನ ಬಂಡೆಯ ಕಡೆಗೆ ಹೋದರು. ಒಂದು ಕಣ್ಣು ಹಿಂದೆ, ಒಂದು ಕಣ್ಣು ಮುಂದೆ ತಿರುಗಿಸುತ್ತ ಎಚ್ಚರದಿಂದ ಹೋಗುವಾಗ, ಗವಿಯಲ್ಲಿ ಹೊಕ್ಕ ಕರಡಿ, ಬಂಡೆಗಳ ಎಡೆಯಿಂದಲೇ ಮೆಲ್ಲಗೆ ಸರಿದು, ಹತ್ತಿಪ್ಪತ್ತು ಗಜ ಮುಂದಕ್ಕೆ ಹೋಗಿ, ಇನ್ನೊಂದು ಬಾಗಿಲಿಂದ ಹೊರಕ್ಕೆ ಬಂದು, ಬಂಡೆಯಿಂದ ಬಂಡೆಗೆ ಕುಪ್ಪಳಿಸಿ ಓಡುವುದರಲ್ಲಿತ್ತು. ಬಂಟ್ರಪ್ಪನ ಚುರುಕು ಕಣ್ಣಿಗೆ ಆ ಧಾಂಡಿಗ ಕರಡಿ ಕಾಣಿಸಿಯೇ ಬಿಟ್ಟಿತು. ಗುರಿಯಿಟ್ಟು ಗುಂಡನ್ನು ಹಾರಿಸಿದ. ಕರಡಿ ಉರುಳಿ ಬಿತ್ತು! ಅದು ಪೂರ್ಣ ಸತ್ತಿರಲಾರದೆಂದು ರಾಮಚಂದ್ರಯ್ಯನವರ ಕೈಯಲ್ಲಿದ್ದ ಇನ್ನೊಂದು ಕೋವಿಯನ್ನು ಕಿತ್ತುಕೊಂಡು, ಅದನ್ನು ಸಮೀಪಿಸಿದರು. ಆ ಬಲಿಷ್ಠವಾದ ಕರಡಿ ಕಾಲು ಚಾಚಿ ರಕ್ತ ಕಾರಿ ನೆಲದಲ್ಲಿ ಬಿದ್ದು ಉರುಳಾಡುತಿತ್ತು. ಅದರ ಉರುಳಾಟ ನಿಲ್ಲುವ ತನಕ ದೂರದಲ್ಲೇ ನಿಂತು ನೋಡಿದರು; ಅನಂತರ ಅದನ್ನು ಸಮೀಪಿಸಿದರು. ಎಂಥ ದೆವ್ವನಂಥ ಕರಡಿ ಎಂದು ಎಲ್ಲರಿಗೂ ಆಶ್ಚರ್ಯವಾಯಿತು. ತನ್ನ

ಈಡಿಗೆ ಬಂಟ್ರಪ್ಪ ಹಿಗ್ಗಿ ಹಾರಾಡಿದ. ಬಿದ್ದ ಕರಡಿಯನ್ನು ಉರುಳಿಸಿ, ಅದರ ಕೊರಳ ಬಿಳಿ ಪಟ್ಟೆಯನ್ನು ಕಂಡು ಸಂತೋಷಗೊಂಡ. ಅಲ್ಲಿಂದಲೇ ಉಳಿದವರನ್ನು ಕರೆದರು. ಅವರ ಕೂಗಿಗೆ ದೂರದಲ್ಲಿ ಅಡಗಿ ನಿಂತಿದ್ದ ಎಲ್ಲರೂ ಮಾರ್ದನಿ ಕೊಟ್ಟರು. ಅವರಿಗೂ ಗುಂಡಿನ ಸದ್ದು ಕೇಳಿಸಿತ್ತು. ಬೇಟೆ ಸಿಕ್ಕಿದೆಯೆಂಬ ಧೈರ್ಯವಾಯಿತು. ಅವಸರ ಅವಸರವಾಗಿ ಬಲ್ಲೆಗಳನ್ನು ಸವರಿಕೊಂಡು ಧ್ವನಿ ಕೇಳಿ, ಬಂದರು. ಬರುತ್ತಿದ್ದವರಲ್ಲಿ ಬೂದ, ಕಾಳರು ಜತೆಗಿದ್ದರು. ಬೂದ ಜತೆಗಿದ್ದರೆ, ಕಾಳನನ್ನು ಯಾವ ಹುಚ್ಚು ಉತ್ಸಾಹಕ್ಕೂ ಬಿಡುತ್ತಿರಲಿಲ್ಲ. "ಯಾಕೆ ಅವಸರ ಮಾಡುತ್ತೀಯಾ? ಅವರೇ ನನ್ನೂ ಕೊಂದಿರಬೇಕು. ಎರಡೆರಡು ಗುಂಡು ಕೇಳಿಸಿದೆ. ಮೆಲ್ಲಗೆ ಹೋಗಬೇಕು" ಎಂದು ಈಟಿ ಹಿಡಿದುಕೊಂಡು, ಆಚೀಚೆ ನೋಡುತ್ತ ಹೊರಡುವಾಗ, ಇವರ ಗದ್ದಲದಿಂದ ಭೀತಿಗೊಂಡ ಚಿರತೆಯೊಂದು, ನಾಲ್ಕೆಂಟು ಹೆಜ್ಜೆ ಸಮಾಪದಲ್ಲೇ ಜಿಗಿದು ಹೋದುದು ಕಾಣಿಸಿತು. ಬೂದನಿಗೆ ಪುಕ್ಕುಗಟ್ಟಿತು. "ಎರಡು ಹುಲಿ ಇರಬೇಕು, ಒಂದನ್ನು ಕೊಂದರು, ಒಂದು ತಪ್ಪಿಸಿಕೊಂಡಿತು" ಎಂದು ತೀರ್ಮಾನಿಸಿ, ಮೆಲ್ಲಗೆ ಹೆಜ್ಜೆಯಿಡುತ್ತ ಗುಹೆಯ ಬಳಿಗೆ ಹೋದ. ಹೋಗಿ ನೋಡುತ್ತಾನೆ—ಅಲ್ಲಿ ಬಿದ್ದದ್ದು ಕರಡಿ; ಚಿರತೆಯಲ್ಲ. "ಹಾಗಾದರೆ ಹುಲಿ ಓಡಿದ್ದು ಹೇಗೆ?" ಎಂದ ಬೂದ. ಕಾಳ ಅದರ ಬಣ್ಣನೆ ಮಾಡಿದ. ಅಲ್ಲಿಯೇ ಸಮಾಪದಲ್ಲಿ ಚಿರತೆಯೂ ಬಂದಿತ್ತೆಂದು ಕೇಳಿ ಬಂಟ್ರಪ್ಪನಿಗೆ ಆಶ್ಚರ್ಯವಾಯಿತು. "ಈಗಲೇ ಅದನ್ನು ಅಟ್ಟಿ ಶಿಕಾರಿ ಮಾಡೋಣ" ಎಂದರು ಧನಿಗಳು. ಬಂಟ್ರಪ್ಪ ಅಷ್ಟು ಉತ್ಸಾಹಿಯಲ್ಲ. ಅವನಿಗೆ ಈ ಪೊದೆ, ಬಲ್ಲೆಗಳು ತುಂಬಿದಲ್ಲಿ, ಚಿರತೆ ಹುಡುಕುವುದು ಸುಲಭದ ಕೆಲಸವಲ್ಲವೆಂದು ತೋರಿತು. "ಅಡಗಿರಲಿಕ್ಕೂ ತಾವಿಲ್ಲ. ಅದಕ್ಕೇನಾದರೂ ಆಹಾರ ಕಟ್ಟಿ ಶಿಕಾರಿ ಮಾಡಬೇಕೇ ಹೊರತು, ಹೀಗೆಯೇ ಮಾಡುವುದಲ್ಲ. ಅದನ್ನು ಅಟ್ಟಲು ಜನರಿದ್ದರೂ, ಈಡು ಹಿಡಿದವರು ಪೊದೆ, ಮರ, ಬಲ್ಲೆಗಳಿಲ್ಲದ ತಾವನ್ನು ಅರಸಿ, ಅಲ್ಲಿ ಕಾದಿರಬೇಕು" ಎಂದು ಅಭಿಪ್ರಾಯ ಸೂಚಿಸಿದ.

ಅವರಾರಿಗೂ ಕರಿಯನೊಡನೆ ಸೇರಿ ಅರಣ್ಯ ಸುತ್ತಾಡುತ್ತಿದ್ದ ಕಾಳನಷ್ಟು ಪರಿಚಯವಿಲ್ಲ. ಅವನೆಂದ "ಚಿರತೆ, ಹುಲಿ ಕೊಲ್ಲಬೇಕಾದರೆ ಇಲ್ಲೆಲ್ಲಿಯೂ ಆಗಲಾರದು. ನನಗೆ ಅದು ಹೋಗಿಬರುವ ತಾವು ಗೊತ್ತುಂಟು.

ನೀರು ಕುಡಿಯಲು ಅದು ಇಂಥಲ್ಲಿಗೇ ಬರುತ್ತದೆ—ಎಂದು ಬಲ್ಲೆ. ಮತ್ತೆ ತೋರಿಸುತ್ತೇನೆ" ಎಂದ. ಆ ಬೆಳಿಗ್ಗೆ, ಕೊಂದ ಕರಡಿಯನ್ನು ಹೊತ್ತು, ಸಾಗಿಸುವ ಕೆಲಸವಾಯಿತು. ಇನ್ನು ಅದರ ಚರ್ಮ, ಉಗುರು ಕೀಳುವ ಕೆಲಸ ನಡೆಯಬೇಕು. ಬಂದದ್ದಕ್ಕೆ ಅಷ್ಟಾದರೂ ಸಿಕ್ಕಿತಲ್ಲ—ಎಂದು ಹೆಮ್ಮೆ ತಾಳಿ ಎಲ್ಲರೂ ಕೇರಿಗೆ ಮರಳಿದರು. ಮರಳುವಾಗ ದಾರಿಯುದ್ದಕ್ಕೂ ಬಂಟ್ರಪ್ಪನೊಡನೆ 'ತಾನಂಥದೇ ಕರಡಿಯನ್ನು ಕೈಯಿಂದಲೇ ಕೊಂದಿದ್ದೇನೆ' ಎಂದು ಹೆಮ್ಮೆ ಕೊಚ್ಚುತ್ತಿದ್ದ ತುಕ್ರ.

ಮಧ್ಯಾಹ್ನದ ಊಟ ಮುಗಿಸಿ ಅವರು ತಿರುಗಿ ಬೇಟೆಗೆ ಹೊರಟರು. ಧನಿಗಳು, ಬಂಟ್ರಪ್ಪ, ತುಕ್ರ, ಕಾಳ— ನಾಲ್ವರೇ ಹೊರಟರು. ಹರದಾರಿಗೂ ಹೆಚ್ಚಾಗಿ ಅಲೆದಾಡಿದರು; ಬೆಟ್ಟ ಹತ್ತಿದರು; ಇಳಿದರು. ತಮ್ಮ ಮಲೆಯನ್ನು ಕಳೆದು ಬೆಟ್ಟದ ತೀರ ತುದಿಯ ಸೆರಗಿನ ತನಕ ನಡೆದುಹೋದರು. ಆ ಸೆರಗಿನಲ್ಲಿ ಬೇಸಿಗೆಯಲ್ಲಿ ನೀರಿನ ಆಶ್ರಯ ತೀರ ಕಡಿಮೆಯಾಗಿತ್ತು. ಬರಿಯ ಒಂದೆರಡು ಕಡೆಗಳಲ್ಲಷ್ಟೆ ಕೊರಕಲುಗಳಿಂದ ಜಿನುಗಿ ಬರುತ್ತಿದ್ದ ನೀರು ಸಣ್ಣ ಕುಣಿಗಳಲ್ಲಿ ತುಂಬಿ ಮುಂದುವರಿಯುತಿತ್ತು. ನಾಲ್ಕು ಸುತ್ತ ಬಹು ವಿಶಾಲಕ್ಕೆ ಹುಲ್ಲು ಬೆಳೆಯುತ್ತಿದ್ದ ಪ್ರದೇಶ. ಕಾಡಿನ ದಟ್ಟಣೆಯೂ ಇಲ್ಲ, ಅಲ್ಲೊಂದು ಇಲ್ಲೊಂದು ಸಾಮಾನ್ಯ ಮರಗಳು ಮಾತ್ರ ಬೆಳೆದಿದ್ದುವು. ಇವರು ಹೋದಾಗ ಹುಲ್ಲೆಲ್ಲ ಬೆಂಕಿಯಿಂದ ಸುಟ್ಟಿತ್ತು; ಹೊಸ ಸುಳಿ ಇನ್ನೂ ಒಡೆಯಬೇಕಷ್ಟೆ. "ಇಂಥಲ್ಲಿ ಹುಲಿ ಎಷ್ಟು ದೂರದಲ್ಲಿ ಕಾಣಸಿಕ್ಕಿದರೂ ಗುರಿ ಸಾಧಿಸುವುದು ಸುಲಭ" ಎನ್ನುತ್ತಾನೆ ಬಂಟ್ರಪ್ಪ. ಕಾಳ ಅವರನ್ನು ನಡೆಸಿಕೊಂಡು, ಆ ಕುಣಿಗಳ ತನಕ ಕರೆದುಕೊಂಡು ಹೋದ. ಕುಣಿಯ ಸುತ್ತಲೂ ನೀರಿಗೆ ಬಂದು ಹೋಗುತ್ತಿದ್ದ ಕಾಟಿ, ಕಡವೆಗಳ ಹೆಜ್ಜೆಯ ಗುರುತು ಅಲ್ಲಲ್ಲಿ ಕಾಣುತ್ತಿದ್ದುವು. ಇಂಥ ಸ್ಥಳದಲ್ಲಿ ಹುಲಿ, ಚಿರತೆ ಬಂದೇ ತೀರಬೇಕು—ಎಂಬ ವಿಶ್ವಾಸ ಅವರಿಗೂ ಆಯಿತು. ಕಾಳ ಅಷ್ಟಕ್ಕೇ ಬಿಡಲಿಲ್ಲ—ನೆಲವನ್ನೆ ದಿಟ್ಟಿಸುತ್ತ ಆಚೀಚೆ ಅಡ್ಡಾಡಿದ. ಒಂದೆರಡು ಕಡೆ ಹುಲಿಯ ಲದ್ದಿ ಬಿದ್ದುದನ್ನೂ ತೋರಿಸಿದ. ಅದರೊಳಗಿನ ರೋಮಗಳನ್ನು ಕಂಡು—'ಖಂಡಿತ ಇದು ಚಿರತೆಯದೋ, ಬರೆ ಹುಲಿಯದೋ ಇರಬೇಕೆಂದು' ಹೇಳಿದ. ಆದರೆ ಈ ಸ್ಥಳದಲ್ಲಿ ಅಡಗಿ ಕುಳಿತಿರುವ ತಾವೆಲ್ಲಿ—ಎಂಬ ಯೋಚನೆಯನ್ನು ಅವರು

ಬಹುವಾಗಿ ಮಾಡಿದರು. ಕೊನೆಗೆ, ಬಹು ಎತ್ತರವಲ್ಲದಿದ್ದರೂ ಎಲೆ ತುಂಬಿದ ಸಾಮಾನ್ಯವಾದೊಂದು ಮರವನ್ನು ಏರಿ ಕುಳಿತರು. ಹಾಗೆ ಸಂಜೆಯ ತನಕ ಕಾದರೂ ಯಾವೊಂದು ಪ್ರಾಣಿಯೂ ಕಾಣಿಸಲಿಲ್ಲ. "ಅವು ಹೆಚ್ಚಾಗಿ ಬರುವುದು ಸಂಜೆ ಕಳೆದ ಮೇಲೆ. ಅಥವಾ ಬೆಳಗ್ಗಿನ ಜಾವಕ್ಕೆ" ಎಂದ ಕಾಳ. ಕತ್ತಲಾಯಿತೆಂದು ಅವರು ಕೇರಿಗೆ ಮರಳಿದರು. ಮರುದಿನ ನಸುಕಿಗೆ ಎದ್ದು ಮೂವರೇ ಹೊರಟರು. ಬೂದ ಬೇಡವೆಂದರೂ ಕಾಳನೂ ಹೊರಟ—ಧನಿಗಳ ಜತೆಯಲ್ಲಿ. ಇವರು ಕಾಡು ಕಳೆದು, ಆ ಹುಲ್ಲುಗಾವಲಿಗೆ ಬರುವಾಗ, ಎರಡು ಮೂರು ಜಿಂಕೆಗಳು ನೀರು ಕುಡಿಯಲು ಬಂದು, ನೀರು ಕುಡಿದು, ಆಚೀಚೆ ಆಲಸ್ಯದಿಂದ ನೋಡುತ್ತ ನಿಂತಿದ್ದುವು. ಮೂಡಣ ಬಾನಿನ ಹೊಂಬಣ್ಣ ಅವುಗಳ ಮೈಮೇಲೆ ಬಿದ್ದು ಚಿನ್ನದಂತೆ ಹೊಳೆಯುತಿತ್ತು. ಜಿಂಕೆಯನ್ನು ಕಂಡಮೇಲೆ ಬಂಟ್ರಪ್ಪ ಬಿಟ್ಟಾನೆಯೇ? ಅದರ ಮಾಂಸದ ರುಚಿ ಅರಿತವ. ಉಳಿದವರನ್ನು ಅಲ್ಲೇ ನಿಲ್ಲಲು ಹೇಳಿದ. ತಾನು ಮೈ ಬಗ್ಗಿಸಿಕೊಂಡು, ತುಸು ವಕ್ರ ಹಾದಿಯಿಂದ ಮುಂದುವರಿದ. ಅಷ್ಟರಲ್ಲಿ ಜಿಂಕೆಗಳು ಉಳಿದವರನ್ನು ನೋಡಿದುವು. ಕೂಡಲೆ ನಾಗಾಲೋಟ ಹೂಡಿದುವು. ಅವು ಹೋದುದು ಮಾತ್ರ, ಬಂಟ್ರಪ್ಪ ಸರಿದು ಮರೆಯಾದ ದಿಕ್ಕಿಗೇ. ಬಂಟ್ರಪ್ಪ ಅಡಗಿ ನಿಂತಿದ್ದ. ಜಿಂಕೆಗಳ ಓಟ ವೇಗವಾಗಿತ್ತು. ಅವು ಸಾಕಷ್ಟು ದೂರದಲ್ಲೇ ಇದ್ದುವು. ಬಂಟ್ರಪ್ಪ ಈಡನ್ನೇನೋ ಹಾರಿಸಿದ. ಸದ್ದಾಯಿತು—ಆದರೆ ಸಿಕ್ಕಿದ್ದೇನೂ ಇಲ್ಲ "ಛೆ, ತಪ್ಪಿತೇ, ಛೆ, ತಪ್ಪಿತೇ" ಎಂದು ಹಲ್ಲು ಕಡಿಯುತ್ತ ಆತ ಹಿಂದಕ್ಕೆ ಬಂದ ನಿರಾಶೆಯಲ್ಲಿ ಮರಳುವ ಮನವಾಗಲಿಲ್ಲ. ಕಾಳ ಸೂಚಿಸಿದಂತೆ, ಆ ನೀರ ಕುಣಿಗೆ ಸಮೀಪವಾಗಿ ಗೆಲ್ಲುರೆಂಬೆಗಳನ್ನು ಕಡಿದು, ಕೃತಕ ಪೊದೆಯೊಂದನ್ನು ಮಾಡಿ, ಅಲ್ಲಿ ಕಾದು ಕುಳಿತರೆ, ಬೇಟೆ ಸುಲಭಸಾಧ್ಯ ಎಂದು ತೋರಿತು. ನಾಲ್ಕೆಂಟು ಮರದ ಗೆಲ್ಲುಗಳನ್ನು ಕಡಿದರು. ನೀರ ಕುಣಿಗೆ ಹತ್ತಿಪ್ಪತ್ತು ಗಜ ದೂರದಲ್ಲಿ ತಂದು ರಾಶಿ ಹಾಕಿದರು. ಅಂದು ಮಧ್ಯಾಹ್ನ, ಬೇರೆ ಆಳುಗಳನ್ನು ಕರೆಯಿಸಿಕೊಂಡು ಬಲವಾದೊಂದು ಪೊದೆಮನೆಯನ್ನೆ ಮಾಡಿದರು. ಅದು ತೀರ ಸಮೀಪಕ್ಕೂ ಬರಿಯ ಪೊದೆಯೊಂದರಂತೆ ಕಾಣಿಸುವಂತಿತ್ತು. ತಮ್ಮ ಬೇಟೆ ಸಾಧ್ಯವಾಗಲು, ಕೆಲಸಕ್ಕೆ ಬಾರದ ಒಂದು ಕರುವನ್ನು ಅಲ್ಲಿ ಕಟ್ಟಬೇಕೆಂದು

ಯೋಚಿಸಿದರು. ಕಟ್ಟೆ, ರಾತ್ರಿಯೆಲ್ಲ ಅಲ್ಲಿ ಕಾವಲು ಕುಳಿತಿರಬೇಕೆಂದು ನಿಶ್ಚಯಮಾಡಿಕೊಂಡರು. ಸಮಯ ಮುಂದಕ್ಕೆ ತಳ್ಳಲು ಯಾರಿಗೂ ಇಷ್ಟ ವಿಲ್ಲ. ಕೊನೆಗೆ ಏನಿಲ್ಲದೆ ಹೋದರೆ, ಕಾಟಿ, ಕಡವೆಗಳಾದರೂ ಕಾಣಲು ಸಿಕ್ಕಿ ಯಾವೆಂದು ರಾಮಚಂದ್ರಯ್ಯನ ಯೋಚನೆ. ಒಂದು ಜಿಂಕೆಯಾದರೂ ತನ್ನ ಈಡಿಗೆ ಬಲಿಯಾಗದೆ ಹೋಗದೆಂದು, ಅದರ ಮಾಂಸದ ರುಚಿ ಸವೆಯದೆ ಊರಿಗೆ ಮರಳೆನೆಂದು ಬಂಟ್ರಪ್ಪನ ಯೋಚನೆ. ಇವರ ಇಮ್ಮಡಿ ಉತ್ಸಾಹ, ಕುತೂಹಲ ಉಳ್ಳವನು ಕಾಳ. ಅವನ ಕೈಯಲ್ಲಿ ಕೋವಿ ಮಾತ್ರ ಇಲ್ಲ. ಆದರೆ ಬಿಲ್ಲುಬಾಣ ಹಿಡಿದು ಬಂದಿದ್ದಾನೆ ಆತ. ಕತ್ತಲಾಗುವುದರೊಳಗೆ ಪೊದೆಮನೆ ಸಿದ್ಧವಾಯಿತು. ಬಡಕಲು ಕರುವೊಂದನ್ನು ನೀರ ಕುಣಿಯ ಬಳಿ, ಗೂಟ ಹೊಡೆದು ಕಟ್ಟಿದ್ದೂ ಆಯಿತು. ಮೂವರೇ ಕಾದು ಕುಳಿತರು. ಉಳಿದವರೆಲ್ಲ ಮರಳಿದರು. ಇನ್ನು ಜಾವಹೊತ್ತಿಗೆ ತಿಂಗಳುಬೆಳಕು ಬೀಳುತ್ತದೆ. ಆಗ ಬೇಟೆಯನ್ನು ಗುರುತಿಸುವುದು ಕಷ್ಟದ ಕೆಲಸವಲ್ಲ—ಎಂದಂದುಕೊಂಡರು.

ಕತ್ತಲಾಯಿತು. ಕಟ್ಟಿದ ಕರು ಯಾರನ್ನೂ ಬಳಿಯಲ್ಲಿ ಕಾಣದೆ, ಬೆದರಿ, 'ಅಂಬಾ' ಎಂದು ಒದರತೊಡಗಿತು. ಅದರ ಕೂಗಿಗೆ ಹುಲಿ ಹಂಬಲಿಸಿ ಬರುವುದು ನಿಶ್ಚಯವೆಂದು ತೋರಿತು—ಅವರಿಗೆ. ಕತ್ತಲು ಕವಿ ಯಿತು. ಪೊದೆಮನೆಯೊಳಗೆ ಕುಳಿತು, ಅವಲಕ್ಕಿ ಬೆಲ್ಲ, ಕೊಬ್ಬರಿ ಸೇರಿಸಿ, ಮೂವರೂ ತಿಂದರು. ಇನ್ನು ಕಾವಲಿನ ಕೆಲಸ. ಕರು ಆಗಾಗ ಬೆದರಿ ಒದರು ತ್ತಲೇ ಇತ್ತು. ಇವರಿಗೆ ಕಣ್ಣು ಚಾಚಿ ಅದನ್ನು ನೋಡುವ ಕೆಲಸ. ಆ ಪ್ರದೇಶದಲ್ಲಿ ಸಾಕಷ್ಟು ಛಾಯೆ ನಲಿದಾಡಿದಾಗಲೆಲ್ಲ 'ಏನೋ ಬಂತು, ಏನೋ ಬಂತು' ಎಂದು ಊಹಿಸಿ ನೋಡುತ್ತಾರೆ ಮೂಡಣ ಪರ್ವತ ಪ್ರಾಂತದ ಹಿಂದೆ ಚಂದ್ರನ ಬೆಳಕು ಕಾಣಿಸಿತು ಅಷ್ಟಕ್ಕೆ ಕಾಳನ ಮೂಗು ಸುಯಿಂ, ಸುಯಿಂ ಎನ್ನತೊಡಗಿತು "ವಾಸನೆ ಬರುತ್ತಿದೆ, ತೀರ ಸಮೀಪ ದಲ್ಲಿ. ಕಂಡರೆ ಹುಲಿಯದೇ ವಾಸನೆ" ಎಂದ ಆತ. ಆ ವಾಸನೆ ಗಾಳಿ ಯೊಂದಿಗೆ ಬಂದದ್ದು. ಒಮ್ಮೊಮ್ಮೆ ಬಂದು, ಅದು ಮಾಯವಾಗುವಂತಿತ್ತು. ಆ ವಾಸನೆ ಆ ಕರುವಿಗೆ ಚೆನ್ನಾಗಿ ಹೊಡೆದಿರಬೇಕು. ಅದು ಕಟ್ಟಿದ ಗೂಟ ವನ್ನು ಕೀಳುವಷ್ಟು ಬಲದಿಂದ ಜಗ್ಗಿ ಒದರಿತು. ಒಮ್ಮೆಗೇ ಅದರ ಧ್ವನಿ ತಟಸ್ಥವಾದುದನ್ನು ಕಂಡು "ಹಿಡಿಯಿತು, ಹಿಡಿಯಿತು" ಎಂದ ಕಾಳ.

ನೀರ ಕುಣಿಯ ಬಳಿ ಕಪ್ಪು ನೆರಳೊಂದು ಅಸ್ಪಷ್ಟವಾಗಿ ಕಾಣಿಸಿತು. ಸ್ಪಷ್ಟವಾಗಿ ಕಾಣಿಸುವ ತನಕ, ಅಂದರೆ ತಿಂಗಳು ಉದಯಿಸುವ ತನಕ, ಏನು ಮಾಡಲಿ—ಎಂಬ ಯೋಚನೆ ಅವರಿಬ್ಬರಿಗೆ ಹೌದೊ, ಅಲ್ಲವೋ—ಎನ್ನುವಷ್ಟು ತಿಂಗಳು ಬೆಳಕು ಆ ಪ್ರದೇಶಕ್ಕೆ ಬೀಳುತ್ತಲೇ, ಬಂಟ್ರಪ್ಪ ತಾಮಸ ಮಾಡಬಾರದೆಂದು, ಎಲೆಗಳ ಮರೆಯಲ್ಲಿ ನಿಂತು, ಆ ಕಡೆಗೇ ಗುರಿ ಹಿಡಿದ. ಆತುರ ಹೆಚ್ಚಿತು. ಗುಂಡನ್ನೂ ಹಾರಿಸಿದ. ಹುಲಿಯ ಆರ್ಭಟೆಯೊಂದು ಕೇಳಿಸಿತು. ಅಲ್ಲಿಂದ ಏನೋ ಜಿಗಿದು ಓಡಿದಂತೆಯೂ ಕಾಣಿಸಿತು. ಸಮನಾಗಿ ತಿಂಗಳು ಬೆಳಕು ಬೀಳುವ ತನಕ, ಯಾರಿಗೂ ಕುಳಿತಲ್ಲಿಂದ ಏಳುವ ಧೈರ್ಯವಿಲ್ಲ. ತುಸು ಹೊತ್ತಿನಲ್ಲೇ ಚೆನ್ನಾಗಿ ಬೆಳಕೂ ಬಂತು. ಇಬ್ಬರೂ ಕೋವಿ ಹಿಡಿದು, ಮೈ ಬಗ್ಗಿಸಿಕೊಂಡು, ಹೆಜ್ಜೆ ಹಾಕುತ್ತ ಮುಂದುವರಿದರು. ಬೆಳಕು ಕುಣಿಯ ನೀರಿನ ಮೇಲೆ ಥಳಿಸುತಿತ್ತು, ಆದರೆ ಸಮೀಪದಲ್ಲಿ ಏನೂ ಕಾಣಿಸಲಿಲ್ಲ. ಮುಂದೆ ನಡೆದು, ಆ ತಾವಿಗೆ ಹೋದರೆ—ಗೋಣು ಮುರಿದು ಬಿದ್ದ ಕರುವೊಂದೇ ಇತ್ತು. 'ಕೆಟ್ಟಿತಲ್ಲ ಕೆಲಸ' ಎಂದು ನಿರಾಶೆಯಿಂದ, ಅವರು ಪೊದೆಮನೆಗೆ ಮರಳಬೇಕಾಯಿತು.

ಆ ರಾತ್ರಿಯೆಲ್ಲ ಅವರಿಗೆ ಎಚ್ಚರವೇ. ಬೆಳಗಾಗುವ ತನಕ ಕಾವಲೇ. ಎಚ್ಚರ ಕೊಡದ್ದಕ್ಕೆ ಆ ನಸುಬೆಳಕಿನಲ್ಲಿ ನಾಲ್ಕಾರು ಕಡವೆಗಳು ಕಾಣಿಸಿದುವು. ಅವು ನೀರ ಕುಣಿಯ ಕಡೆಗೆ ಹೆಜ್ಜೆಯಿಟ್ಟು ಬರುವುವು, ತುಸು ದೂರದಲ್ಲೇ ತಡವರಿಸಿ ನಿಂತವು. ಕೋವಿ ಹಿಡಿದ ಇಬ್ಬರಿಗೂ ನಿದ್ದೆಯ ಅಮಲಿನಿಂದ ತೂಕಡಿಕೆ ಬರುತಿತ್ತು. ಕಾಳ "ಅದೋ, ಅದೋ" ಎಂದು ಕರೆದು ತೋರಿಸಿದ. ಇವರು "ಏನು?" ಎಂದು ಕೇಳುವುದರೊಳಗಾಗಿ, ಅನುಮಾನದಿಂದ ಬಂದ ಕಡವೆಗಳು ಓಡಿಹೋದುವು. ಓಟದ ಭರದಲ್ಲಿ ಕಾಲಿಗೆ ಎಡವಿದ ಕಲ್ಲುಗಳ ಸದ್ದು ಮಾತ್ರ ಇವರಿಗೆ ಕೇಳಿಸಿತು ಬೆಳಗಾದ ಮೇಲೆ ನೀರ ಹೊಂಡದ ಕಡೆಗೆ ಇನ್ನೊಮ್ಮೆ ಹೋದರು. ಕರು ಮಾತ್ರ ಸತ್ತು ಬಿದ್ದಿತ್ತು. ಹುಲಿಯ ಹೆಜ್ಜೆ, ಕೆಸರು ಮಣ್ಣಿನಲ್ಲಿ ಚೆನ್ನಾಗಿ ಊರಿದ್ದೂ ಕಾಣಿಸಿತು. ಅದನ್ನು ನೋಡಿ ಕಾಳ "ನೋಡಿ, ರಕ್ತವೂ ಚೆಲ್ಲಿದೆ" ಎಂದು ತೋರಿಸಿಕೊಟ್ಟ. ಅಲ್ಲಲ್ಲಿ ನೆಲದ ಮೇಲೆ ಒಣ ಹುಲ್ಲುಗಳ ಮೇಲೆ, ಹುಲಿಯ ಮೈಯ ರಕ್ತ ಬಿದ್ದದ್ದು ಸ್ಪಷ್ಟವಾಗಿ ಕಾಣಿಸಿತು. ಅದನ್ನೇ ಹಿಂಬಾಲಿಸಿ

ಹೋದರು. ಅದು ಹೋದ ಜಾಡು, ತಾವು ಬಂದ ಕಾಡಿನ ತನಕವೂ ಕಾಣಿಸಿತು. ಮುಂದೆ ಮರಗಳ ದಟ್ಟಣೆಯಲ್ಲಿ ಅದನ್ನು ಗುರುತಿಸಿ ಹಿಂಬಾಲಿಸುವುದು ಅಸಾಧ್ಯದ ಮಾತೆಂದು, ಎಲ್ಲರೂ ಮನೆಗೆ ಬಂದರು. ಮಧ್ಯಾಹ್ನ ಬೇಗನೆ ಊಟ ಮುಗಿಸಿ, ಜನರನ್ನು ಕಟ್ಟಿಕೊಂಡು, ಕಾಡಿನಲ್ಲಿ ಗುಲ್ಲೆಬ್ಬಿಸಿ ಅದನ್ನು ಹೊರಗೆಡಹಲು ಬಂದೀತೇ—ಎಂಬ ಆಸೆಯಿಂದ ತೊಳಲಾಡಿದರು.

ಮಧ್ಯಾಹ್ನವೆಲ್ಲ ಹಾಗೆ ಗುಲ್ಲೆಬ್ಬಿಸುವ ಕೆಲಸವೇನೋ ನಡೆಯಿತು. ಆದರೆ ಗಾಯಗೊಂಡ ಹುಲಿ ಯಾರ ಕಣ್ಣಿಗೂ ಕಾಣಿಸಲಿಲ್ಲ. ಆ ಮರುದಿನವೂ ಅದೇ ಕೆಲಸ ನಡೆಸಿದ್ದಾಯಿತು. ಯಾವ ಪ್ರಯೋಜನವೂ ಬರಲಿಲ್ಲ. ಗುಂಡಿನ ಪೆಟ್ಟು ತಿಂದ ಆ ಹುಲಿ ಇನ್ನೊಮ್ಮೆ ಅವರೆದುರಿಗೆ ಬೀಳಲು ಸಾಹಸಪಡಲಿಲ್ಲ; ಆದರಿಂದ ಬಂಟ್ರಪ್ಪನಿಗೆ ನಿರಾಶೆಯಾದರೂ ಅದೇನೋ ಬದುಕಿಕೊಂಡಿತು. ಬಂಟ್ರಪ್ಪ ಅನಂತರ ಎರಡು ದಿನಗಳ ಕಾಲ ಧನಿಗಳನ್ನು ಕರೆದುಕೊಂಡು ಚಿಕ್ಕ ಪುಟ್ಟ ಶಿಕಾರಿ ಮಾಡಿ, ತನ್ನ ಮಾಂಸದ ಆಸೆಯನ್ನು ತೀರಿಸಿಕೊಂಡ. ಅಷ್ಟರಲ್ಲಿ ವಿಟ್ಲದಿಂದ ರಾಮಚಂದ್ರಯ್ಯನವರಿಗೆ ಕರೆಬಂದಿತು. ತಿರುಮಲಭಟ್ಟರು ಕಾಯಿಲೆಯಿಂದ ಮರಣೋನ್ಮುಖರಾಗಿದ್ದಾರೆಂತಲೂ, ರಾಮಚಂದ್ರಯ್ಯ ಕೂಡಲೆ ಹೊರಟು ಬರಬೇಕೆಂತಲೂ ಸುದ್ದಿ ಬಂದಿತು. ಅವರು ಹೊರಟುಹೋದರು. ಬೇಟೆಯ ಹೆಚ್ಚಿನ ಅವಕಾಶ ತಪ್ಪಿತಲ್ಲ—ಎಂದು ಕಾಳನಿಗೆ ತುಂಬ ನಿರಾಶೆಯಾಯಿತು.

ಮುಂದೆ ಕುಡಿಯರ ಪಾಲಿಗಿತ್ತು ಬೇಕಷ್ಟು ಬೇಸಾಯದ ಕೆಲಸ. ಕಾಡು ಕಡಿಯಬೇಕು, ಕುಮರಿಗೆ ಬೇಲಿ ಮಾಡಬೇಕು. ಅಲ್ಲದೆ, ಮಳೆಗಾಲದ ಏರ್ಪಾಟು ಮಾಡಬೇಕು. ಕೇರಿಯ ಜನರೆಲ್ಲರೂ ಬೆಳಗು, ಸಂಜೆ ಉಸಿರಿಗೂ ಬಿಡುವಿಲ್ಲದೆ ದುಡಿಯಬೇಕಾದ ದಿನಗಳು ಬಂದುವು. ಈ ಕೆಲಸಕ್ಕೆ ಭಾಗಿಯಾಗದವರೆಂದರೆ ಎಳೆಯ ಮಕ್ಕಳು, ಮನೆಯ ಮುದುಕರು ಮಾತ್ರ.

ಅಂಥವರಲ್ಲಿ ಬೂದನ ತಾಯಿಯೊಬ್ಬಳು. ಅವಳಿಗೀಗ ಎಪ್ಪತ್ತು ವಯಸ್ಸು. ಆಕೆ ಹೆಚ್ಚಿನ ಕೆಲಸ ಮಾಡಲಾರದಾದರೂ ಮನೆ ನೋಡಿಕೊಂಡಿರಬಲ್ಲಳು, ಚಿಲುಮೆಗೆ ಹೋಗಿ ನೀರು ಹೊತ್ತುಕೊಂಡು ಬರಬಲ್ಲಳು. ಒಂದು ದಿನ ಮಲೆಯ ಆಳುಗಳು ಕುಮರಿ ಕಡಿಯುವಲ್ಲಿಗೆ ಕತ್ತಿ ಕೊಡಲಿ ಹಿಡಿದುಕೊಂಡು ಹೋಗಿದ್ದರು. ಅವರು ಹೋದಮೇಲೆ, ಆ ಮುದುಕಿ ಗಡಿಗೆ

ಯೊಂದನ್ನು ಹಿಡಿದುಕೊಂಡು, ಕೇರಿಯ ಸಮೀಪದ ನೀರಿನ ಚಿಲುಮೆಗೆ ಹೋದಳು. ದಂಬೆಯ ನೀರಿನಲ್ಲಿ ಮೈಯೊಡ್ಡಿ ಮೀಯುತ್ತ ಕುಳಿತಳು. ಒಳ್ಳೆಯ ಆಹಾರವಾಯಿತು—ಕಾದು ಕುಳಿತಿದ್ದ ಗಾಯಗೊಂಡ ಚಿರತೆಗೆ. ಅದೋ—ಈ ನಾಲ್ಕಾರು ದಿನಗಳಿಂದ ಗುಂಡಿನೇಟಿಗೆ ನೊಂದು, ರಕ್ತ ಸೋರಿ ದಣಿದಿತ್ತು. ಬಿದ್ದ ಏಟಿನಿಂದ ಅದರ ಹಿಂಗಾಲೇ ಮುರಿದುಹೋಗಿತ್ತು. ಅದು ಕಾಲನ್ನು ಸಮನಾಗಿ ಊರುವುದಕ್ಕಿಲ್ಲ, ಸರಾಗವಾಗಿ ನಡೆಯುವುದಕ್ಕಿಲ್ಲ. ಅದರ ಬಾಳು ನಿತ್ಯ ಬೇಟೆಗೆ ವ್ಯರ್ಥವಾಗಿ ಹೋಗಿತ್ತು. ಕುಂಟುತ್ತ, ನೋವಿನಿಂದ ಬಾತಿರುವ ಕಾಲನ್ನು ಹೊತ್ತುಕೊಂಡು, ಎಷ್ಟು ದಿನ ತಾನೇ ಅದು ಅಡಗಿದ್ದೀತು? ಹಾಗೆ ಒಂದೆರಡು ದಿನ ಅಡಗಿಕೊಂಡಿತು. ಹಸಿವು ಹೆಚ್ಚಾದ ಮೇಲೆ ಕಾಡಿನಲ್ಲಿ ಸುತ್ತಾಡಲೇಬೇಕಾಯಿತು. ಮೋಟುತ್ತಿರುವ ಆ ಚಿರತೆ, ಕುಡಿಯರ ಕೇರಿಯ ಬಳಿಗೂ ಬಂದಿತು. ಜನರ ಧ್ವನಿ ಕೇಳುತ್ತಿರುವವರ ತನಕ ಅದು ಹೊರಬೀಳಲಿಲ್ಲ. ಮುದುಕಿ ಒಂದೆ ದಂಬೆನೀರಿನಲ್ಲಿ ಕಾಣಸಿಕ್ಕಿದ್ದೆಂಬುದು, ಔತಣ ದೊರಕಿದಂತಾಯಿತ್ತು ಅದಕ್ಕೆ. ಮೆಲ್ಲನೆ ಬಂದು, ಫಕ್ಕನೆ ಹಾರಿ, ಅವಳನ್ನು ಹೊತ್ತುಕೊಂಡೇ ಹೋಯಿತು!

ಸಂಜೆ, ತಮ್ಮ ಕೆಲಸ ಮುಗಿಸಿ, ಕತ್ತಲು ಹರಿಯುವ ವೇಳೆಗೆ ಊರವರು ಒಬ್ಬೊಬ್ಬರಾಗಿ ಕೇರಿಯನ್ನು ಸೇರಿದರು. ಬೂದ ಮನೆಯಲ್ಲಿ ತಾಯನ್ನು ಕಾಣದೆ ಅಚೀಚೆ ಹುಡುಕಿದ; ಕೂಗಿದ. ಸ್ವಲ್ಪ ಹೊತ್ತಿನಲ್ಲೇ ಗಾಬರಿಗೊಂಡ. ಮನೆಯ ಗಡಿಗೆ ನೀರಿನ ದಂಬೆಯ ಬಳಿ ಬಿದ್ದಿದೆ ಎಂಬುದು ಗೊತ್ತಾಯಿತು. ಅಲ್ಲಿ ನಿಂತು ಕೂಗಿದರೂ, ಮರುಧ್ವನಿ ಬರಲಿಲ್ಲ. ಮುದುಕಿಗೇನೋ ಆಗಿದೆ ಎಂದು ಗಾಬರಿಯಾಯಿತು. ಸೂಟಿ ಹಿಡಿದುಕೊಂಡು ಅಲ್ಲಿಯೇ ಸುತ್ತಮುತ್ತ ಹುಡುಕಿದರು. ಅವಳನ್ನು ಚಿರತೆ ಹೊತ್ತುಕೊಂಡು ಹೋಗಿರಬಹುದು—ಎಂಬ ಊಹೆ ಯಾರಿಗೂ ಬರಲಿಲ್ಲ. ಅದು ಗೊತ್ತಾದದ್ದು ಮರುದಿನ ಬೆಳಗ್ಗೆ. ಮರುದಿನ ಬೆಳಗ್ಗೆ ಹುಡುಕಾಡುವಾಗ, ನೀರಿನ ಚಿಲುಮೆಗೆ ಬರಿಯ ನೂರು ಗಜ ದೂರದಲ್ಲಿ, ಆಕೆಯ ತಿಂದುಳಿದ ಶರೀರ, ಚಿಂದಿ ಅರಿವೆಗಳು ಬಿದ್ದುದನ್ನು ಕಂಡೊಡನೆಯೇ ಹುಲಿಯ ಬಾಯಿಗೆ ಬಿದ್ದಳೆಂಬುದು ಖಚಿತವಾಯಿತು. ಅವರ ನೆನಪಿನಲ್ಲಿ—ಹುಲಿ ಇಲ್ಲವೆ ಚಿರತೆ ಬಂದು, ಜನರನ್ನು ಕೊಂಡೊಯ್ದ ಕತೆ ಕೇಳಿಯೇ ಇಲ್ಲ. ಈಗ ಹೊಳೆಯಿತು

—ಅದು ನಾಲ್ಕು ದಿನಗಳ ಹಿಂದೆ ಬೇಟೆಯಾಡಿ, ಚಿರತೆಯೊಂದನ್ನು ಗಾಯಗೊಳಿಸಿದುದರ ಪರಿಣಾಮವೆಂದು. ಚಿರತೆ, ಹುಲಿ—ಹಳ್ಳಿಯವರ ಬಾಯಿಯಲ್ಲಿ ಹುಲಿಯೆಂದೆ ಅನಿಸಿಕೊಳ್ಳುತ್ತದೆ. ಚಿಟ್ಟೆಹುಲಿ, ಬರೆಹುಲಿ—ಅನ್ನುತ್ತಾರೆ ಅವಕ್ಕೆ ವಾಡಿಕೆಯಲ್ಲಿ. ಅಂತು ಹೊಸ ಮಾರಿಯೊಂದು ಸಿದ್ಧವಾಯಿತಲ್ಲ ಎಂಬ ಬೆದರಿಕೆ ಮೂಡಿತು ಎಲ್ಲರಲ್ಲಿ. ಒಬ್ಬೊಬ್ಬರಿಗೇ ತಿರುಗಾಡಲು ಅಂಜಿಕೆಯಾಯಿತು. ಕೇರಿಯಲ್ಲಿ ಕೆಲಸಕ್ಕೆ ಹೋಗುವಾಗ ಒಬ್ಬೊಬ್ಬರನ್ನು ಮನೆಯಲ್ಲಿ ಬಿಟ್ಟುಹೋಗುವುದು ಕಷ್ಟವೆನಿಸಿತು. ಆ ಒಂದು ದಿನ ದುಃಖದಿಂದಲೂ, ಭೀತಿಯಿಂದಲೂ ಒಬ್ಬರಿಗೂ ಕೆಲಸ ಮಾಡಲು ಮನ ಬರಲಿಲ್ಲ. ಆದರಲ್ಲೂ ಹುಲಿಯ ಬಿಡಾರ ಹತ್ತಿರವಿದೆ, ಎಂದು ತಿಳಿದಮೇಲೆ ಏನು ಮಾಡಬೇಕು! ಕತ್ತಿ, ಕೋಲುಗಳನ್ನೇ ಹಿಡಿದು ಗುಲ್ಲೆಬ್ಬಿಸಿ ಬಂದರು. ಮರುದಿನ ಯಥಾಪ್ರಕಾರವಾಗಿ ಕೆಲಸಕ್ಕೆ ಹೋದರು. ಮನೆಯಲ್ಲಿರುವ ಮುದುಕರು ಕದವನ್ನಿಕ್ಕಿಕೊಂಡು ಕುಳಿತಿರಬೇಕೆಂದು ಎಚ್ಚರ ಹೇಳಿ ಹೋದರು. ಕುಮರಿ ಬೆಟ್ಟದಲ್ಲಿ, ಮರ ಕಡಿಯುವಾಗಲೂ ಆಚೀಚೆ ನೋಡುತ್ತ ಕೆಲಸ ಮಾಡಬೇಕಾಯಿತು. ಸಂಜೆ ಒಟ್ಟಿಗೆ ಗುಂಪಾಗಿಯೇ ಮನೆಗೆ ಬಂದರು. ಆ ದಿನ ಹೇಗೂ ಕಳೆಯಿತು. ಮರುದಿನ ಕುಡಿಯರ ತರುಣನೊಬ್ಬ ಬಯನಿ ಮರವನ್ನು ಹತ್ತಲು ಕೇರಿಗೆ ಸಮೀಪವಾದ ಕಾಡಿನ ಭಾಗಕ್ಕೆ ಹೋದ. ಹೆಂಡದ ಯೋಚನೆಯಿಂದ ಹೊರಟವನಿಗೆ 'ಹೋಗುತ್ತೇನೆ, ಈಗ ಬರುತ್ತೇನೆ' ಎನ್ನುವುದಕ್ಕೂ ನೆನಪಿರಲಿಲ್ಲ.

ಆತ ಮರ ಹತ್ತಿ ಇಳಿದದ್ದೇನೋ ನಿಜ. ಆದರೆ ತಂದ ಹೆಂಡ ಕುಡಿಯುವ ಯೋಗ ಅವನಿಗಿರಲಿಲ್ಲ. ಹೊಂಚುಹಾಕಿ ಕುಳಿತಿದ್ದ ಹುಲಿ ಅವನನ್ನೆತ್ತಿಕೊಂಡು ಹೋಯಿತು. ಕುಮರಿಗೆ ಹೋದವರು, ಮರಳಿ ಬಂದು, ಅವನ ನೆನಪಾಗಿ, ಬಯನಿ ಮರಗಳ ಬಳಿ ಸುತ್ತಿದರೆ ಹೆಂಡ ತುಂಬುವ ಬಿದಿರಿನ ಅಂಡೆ ಮಾತ್ರ ಕಾಣಲು ಸಿಕ್ಕಿತು. ಎರಡನೆಯ ಜೀವ ಹೋದದ್ದೇ ತಡ—ಜನಗಳ ಗಾಬರಿ ಮೇರೆ ಮೀರಿತು. ಈ ನಡುವೆ ಶುಕ್ರ, ಸಣ್ಣ ಧನಿಗಳೊಂದಿಗೆ ವಿಟ್ಲಕ್ಕೆ ಹೋಗಿದ್ದ. ಮುಂದಿನ ಯೋಚನೆ ಕೇಳುವುದಕ್ಕೆ ಗುರಿಕಾರನಾದ ಅವನಿರಲಿಲ್ಲ. ತತ್ಕಾಲ—ತಾವೆಲ್ಲರು ಊರು ಬಿಡುವುದೇ ಕ್ಷೇಮ—ಎಂಬ ಯೋಚನೆ ಹುಟ್ಟಿತು, ಪ್ರತಿಯೊಬ್ಬರಿಗೂ. ಬಿಟ್ಟುಹೋಗುವುದು ಎಲ್ಲಿಗೆ—

ಎಂದು ಯೋಚಿಸಿ, ಯೋಚಿಸಿ ದಣಿದರು. ತುಕ್ರ ಮರಳುವ ತನಕ ಅಲ್ಲೇ ಉಳಿಯುವ ಧೈರ್ಯ ಯಾರೊಬ್ಬರಿಗಿಲ್ಲ. ಮನುಷ್ಯರ ರಕ್ತದ ರುಚಿ ಹಿಡಿದ ಹುಲಿ, ಮೃಗರಾಕ್ಷಸನೇ ಸರಿ—ಎಂದು ಅವರಿಗೆ ಕೇಳಿ ಗೊತ್ತು. ಅಂತೂ ಇಂಥ ವೇಳೆಯಲ್ಲಿ ಗಾಬರಿಗೊಂಡ ಅವರು, ಬಂದ ಆಪತ್ತಿನ ನಿವಾರಣೆಗೆ ಏನು ಮಾಡಬಹುದೆಂದು ದಾರಿ ಕಾಣದೆ, ಹಿರಿ ಮನೆಗೆ ಜನ ಅಟ್ಟಿದರು. ಬಿರುಮನನ್ನು ಕರೆಯಿಸಿ ಹುಲಿಗೆ ಏನಾದರೂ—ಮಂತ್ರ ಮಾಟ ಮಾಡಿಸಬಹುದೇ ಎಂದು ಕೇಳುವ ಸಲುವಾಗಿ. ಕಾಳ, ಬೂಲ, ಇನ್ನೊಬ್ಬ ಬಲಿಷ್ಠ ಕುಡಿಯ—ಮೂವರೂ ಸೇರಿ ಕತ್ತಿ, ಕೋಲುಗಳನ್ನು ಹಿಡಿದು ಹೊರಟರು. ತಾವು ಬರುವ ತನಕ ಕುಡಿಯರೆಲ್ಲರು ಕೇರಿಯಲ್ಲೇ ಕಾವಲಿರಬೇಕೆಂದೂ, ರಾತ್ರಿ ಅಗ್ಗಿಷ್ಟಿಕೆ ಹಾಕಿಕೊಂಡು ಗದ್ದಲ ಎಬ್ಬಿಸುತ್ತ, ಎಚ್ಚರದಲ್ಲಿರಬೇಕೆಂದೂ, ಹೇಳಿಹೋದರು.

ಹಿರಿ ಮನೆಯ ಬಿರುಮ ಪೂಜಾರಿ ಮದ್ದು, ಮಾಟ ಬಲ್ಲವ. ಆತ ಪ್ರಶ್ನೆ ನೋಡಿದ. “ಇದು ದೈವದ್ದೇ ಕೋಪ; ಹರಕೆ ಸಲ್ಲಿಸಬೇಕು” ಎಂದು ಏನೇನೋ ಹೇಳಿದ. ಕೇಳಹೋದವ “ನೀನು ಬಂದು ಕೇರಿಯಲ್ಲಿ ಹುಲಿ ಸುಳಿಯದ ಹಾಗೆ ಮಂತ್ರಿಸಿದ ಬೂದಿಯನ್ನೋ, ಕಾಯಿಯನ್ನೋ ಕಟ್ಟುವ ತನಕ ನಮಗೆ ಕ್ಷೇಮವಿಲ್ಲ” ಎಂದ ಬೂದ. ತನ್ನ ಪ್ರತಿಷ್ಠೆಯನ್ನು ಕಳಕೊಳ್ಳಲಾರದೆ ಬಿರುಮ ಅವರ ಜತೆಗೆ ಹೊರಟ. ಗುರಿಕಾರ ಪೂದ ತನ್ನಲ್ಲಿದ್ದ ಒಂದು ಚರೆಮದ್ದಿನ ಕೋವಿಯನ್ನು ಹಿಡಕೊಂಡು, ಇವರ ಜತೆಗೆ ಬಂದ. ಮದ್ದು ಮಾಟದ ಜತೆಗೆ—ಶಿಕಾರಿ ಮಾಡಬೇಕೆಂದು ಪೂದನ ಯೋಚನೆ. ಮಲೆ ಇಳಿದು, ನಡುವಣ ಹಳ್ಳವನ್ನು ಸಮೀಪಿಸಿದರು. ತೊರೆಯ ನೀರನ್ನು ಕಂಡು ಮುಖ ತೊಳೆಯಲು ನಿಂತರು. ಬಿರುಮ ಪೂಜಾರಿ ಜಲಬಾಧೆಗೆಂದು ಹತ್ತು ಗಜ ದೂರಕ್ಕೆ ಹೋದ. ಉಳಿದವರು ಹಳ್ಳದ ದಂಡೆಯಲ್ಲಿ ನಿಂತು ಮಾತನಾಡುತ್ತಲೇ ಇದ್ದರು. ನಿಂತು, ನಿಂತು ಬೇಸರವಾಯಿತು. ಪೂಜಾರಿ ಬಾರದ್ದನ್ನು ಕಾಣದೆ ‘ಬಿರುಮಣ್ಣ’ ಎಂದು ಕೂಗಿದರು. ಕೂಗಿಗೆ ಪ್ರತ್ಯುತ್ತರ ದೊರೆಯಲಿಲ್ಲ; ಗಾಬರಿಯಾಯಿತು. ಅವನು ಹೋದಲ್ಲಿಗೆ ಹೋದರು. ಬಿದ್ದ ರುಮಾಲೆಯೊಂದು ಕಂಡಿತು. ಬಿರುಮಣ್ಣನನ್ನು ಹುಲಿ ಒಯ್ದದ್ದು ನಿಶ್ಚಯವೆನಿಸಿತು. ಆದರೂ ಆತ ಒಂದಿಷ್ಟು ಬೊಬ್ಬಿಡದೆ, ಹೇಗೆ

ಕುಳಿತಾನೋ ಎಂಬುದು ತೋರದಾಯಿತು. ಗಾಬರಿ ಇನ್ನಷ್ಟು ಹೆಚ್ಚಿತು. ಅಲ್ಲೇ ನಿಂತು ಗದ್ದಲವೆಬ್ಬಿಸಿದರು. ನಾಲ್ಕು ಸುತ್ತ ದೊಡ್ಡ ದೊಡ್ಡ ಕಲ್ಲುಗಳನ್ನೆಸೆದರು. ತುಸು ಎತ್ತರದಲ್ಲಿ ಪೊದೆಗಳಲ್ಲಿ, ಸದ್ದಾಗಿ, ಏನೋ ಹೊರಟು ಹೋದಂತಾಯಿತು—ಅಲ್ಲಿಗೆ ಧಾವಿಸಿದರು. ಅವರಿಗೆ ಕಾಣಸಿಕ್ಕದ್ದು ಕಚ್ಚಿ, ಹಿಸಿದು, ರಾಮಾರೂಢಿಯಾದ ಬಿರುಮಣ್ಣನ ಶರೀರ ಮಾತ್ರ. ಈಗ ಮಾತ್ರ ಅವರ ಭೀತಿ ಕೊನೆಯಿಲ್ಲದಾಯಿತು. ಆ ಶವವನ್ನು ಹೊತ್ತು ತರುವುದಕ್ಕೂ ಧೈರ್ಯವಿಲ್ಲ. ಅದನ್ನು ಹೊತ್ತು ತಂದರೆ, ಹುಲಿ ಉಳಿದವರ ಮೈಮೇಲೆ ಹಾರಿದರೆ ಏನು ಗತಿ?—ಎಂಬ ಭೀತಿಗೊಳಗಾದರು. ಒಂದೇ ಓಟಕ್ಕೆ ಎಲ್ಲರೂ ಕಿರಿ ಮಲೆಗೆ ಓಡಿದರು. ಅಲ್ಲಿಂದ, ನಿತ್ಯದ ದಾರಿಯನ್ನು ಬಿಟ್ಟು, ಕೇರಿಯವರೆಲ್ಲರೂ ಬಳಸು ದಾರಿಯಿಂದ ಹಿರಿ ಮಲೆಗೆ ವಲಸೆ ಹೋದರು. ಹುಲಿ ಸತ್ತ ವಾರ್ತೆ ಸಿಗುವ ತನಕ, ಕಿರಿ ಮಲೆಗೆ ಅಥವಾ ಅಲ್ಲಿನ ಕುಮರಿಗೆ ತಾವು ಹೋಗಲು ಅಸಾಧ್ಯವೆಂಬುದು ಅವರಿಗೆ ತೋರಿತು.

ಹಿರಿ ಮಲೆಯಿಂದಲೇ—ನಿತ್ಯದ ದಾರಿಯನ್ನು ಬಿಟ್ಟು, ಕಾಳನೂ ಮತ್ತಿಬ್ಬರೂ ಸೇರಿ, ಧನಿಗಳ ತನಕ ಹೋಗಿ, ದೂರು ಮುಟ್ಟಿಸಿ ಬರಬೇಕೆಂದು ಹೊರಟರು. ಮೂಲೆಗುಂಪಿಗೆ ಹೋದರು. ಅಲ್ಲಿ ಬಲ್ಲಾಳರ ಮನೆಗೆ ಸುದ್ದಿಯನ್ನು ಕೊಟ್ಟು, ಅಲ್ಲಿಂದ ಉಸಿರಿಗೂ ಬಿಡುವಿಲ್ಲದಂತೆ ವಿಟ್ಲಲಕ್ಕೆ ಧಾವಿಸಿದರು.

ಇವರು ಹೋಗಿ ಸೇರುವ ಎರಡು ದಿನಗಳ ಮುಂಚೆ, ತಿರುಮಲಭಟ್ಟರ ಅವಸಾನವಾಗಿತ್ತು. ರಾಮಚಂದ್ರಯ್ಯ ಮತ್ತು ಮನೆಯವರೆಲ್ಲ ದುಃಖದಿಂದ ನೊಂದಿದ್ದ ಗಳಿಗೆಯಲ್ಲೇ, ಈ ಕುಡಿಯರ ಆಗಮನವನ್ನು ಕಂಡು, ಅವರಿಗೆ ಆಶ್ಚರ್ಯವಾಯಿತು. ಅವರ ಬಾಯಿಂದ ಹುಲಿಯ ಕತೆ ಕೇಳಿದ ಬಳಿಕ ರಾಮಚಂದ್ರಯ್ಯನವರ ಬೇಸರ ಇಮ್ಮಡಿಸಿತು. "ಕಾಳ, ಇದು ನಾವು ಮಾಡಿದ ತಪ್ಪು. ಹುಲಿ ಶಿಕಾರಿ ಏನೆಂದು ಗೊತ್ತಿಲ್ಲದೆ ಅದನ್ನು ನೋಯಿಸಿ ಬಿಟ್ಟ ತಪ್ಪು. ಇನ್ನು ಅದನ್ನು ಹುಡುಕಿ, ಕೊಂದು ಮುಗಿಸುವ ತನಕ ಎಷ್ಟು ಜೀವ ಬಲಿಯಾಗುತ್ತದೋ, ದೇವರೇ ಬಲ್ಲ" ಎಂದಂದರು.

ಬಂಟ್ರಪ್ಪನನ್ನು ಮನೆಗೆ ಕರೆಯಿಸಿಕೊಂಡರು; ತಲೆ ತುರಿಸುತ್ತ ಕುಳಿತರು. ತಾವು ಮಾಡಿದ ತಪ್ಪಿಗೆ ಉಳಿದವರು ಜೀವ ತೆರುವುದು ಅವರಿಗೆ

ನ್ಯಾಯುವಲ್ಲವೆಂದು ಕಂಡಿತು. ಆದರೆ ಅವರೋ—ಸೂತಕದ ದಿನಗಳು ಮುಗಿಯುವ ತನಕ ಮನೆ ಬಿಟ್ಟು ಹೊರಡಲಾರರು. ಅದರಲ್ಲೂ ನರಭಕ್ಷಕನ ಶಿಕಾರಿಗೆ ಹೊರಟಿದ್ದಾನೆ, ಮನೆಯ ಹುಡುಗ—ಎಂದು ಕೇಳಿದರೆ, ಅವರ ತಾಯಿ, ಹೆಂಡತಿ— ಇಬ್ಬರೂ ಸಮ್ಮತಿಸಲಾರರು. ಹಾಗೆ ಹೊರಡುವುದಾದರೂ ಇನ್ನೂ ಹದಿನೈದು ದಿನಗಳು ಬೇಕು. "ಬಂಟ್ರಪ್ಪ, ನೀನು ಹೋಗಿ ನೋಡು ತ್ತೀಯಾ? ಇನ್ಯಾರಾದರೂ ನಾಲ್ಕು ಮಂದಿಯನ್ನು ನಾಲ್ಕು ಕೋವಿಗಳನ್ನು ಕಟ್ಟಿಕೊಂಡು" ಎಂದರೆ, ಆತ "ನೀವು ಬಾರದೆ ನಾನು ಒಬ್ಬನೇ ಹೇಗೆ ಹೊರಡಲಿ" ಅನ್ನುತ್ತಾನೆ.

ಮಾತಿನ ಎಡೆಯಲ್ಲಿ ಧನಿಗಳು "ತುಕ್ರ ನೆನ್ನೆ ದಿನ ಮಲೆಗೆ ಒಬ್ಬನೇ ಹೋದನಲ್ಲ. ಇಷ್ಟರಲ್ಲಿ ಆತ ಮಲೆಯನ್ನು ಸೇರುವುದಕ್ಕೂ ಆಯಿತು. ನೀವೆಲ್ಲರೂ ಮಲೆ ಬಿಟ್ಟಿದ್ದೀರಾ? ಆತ ಒಬ್ಬನೇ ಹೋಗಿದ್ದಾನೆ. ಏನಾಗುತ್ತದೋ ಅವನ ಪಾಡು" ಎಂದು ಅವನ ವಿಷಯದಲ್ಲೂ ಗಾಬರಿ ತಾಳಿದರು. ಧನಿಗಳು ಬರಲಾರದ್ದಕ್ಕೆ, ಈ ಬೇಟೆಯ ಕೆಲಸ ಮುಂದುವರಿಸಲಾರದ್ದಕ್ಕೆ, ಬಂದ ಕುಡಿಯರು ಮೂಲೆಗುಂಪಿಗೆ ಹೋಗಿ ಅವರಿಗಾಗಿ ಕಾದಿರಬೇಕೆಂದೂ ಒಂದೆರಡು ದಿನಗಳಲ್ಲೇ ಒಳ್ಳೆಯ ಶಿಕಾರಿಯನ್ನು ಹುಡುಕಿ ಕಳುಹಿಸುತ್ತೇವೆಂದೂ ಭರವಸೆ ಕೊಟ್ಟು ಕಳುಹಿಸಿದರು. ಕಾಳ, ಮತ್ತಿಬ್ಬರು, ಆ ದಿನವೆಲ್ಲ ಧನಿಗಳ ಮನೆಯಲ್ಲೆ ಉಳಿದು, ಮರುದಿನ ಒಂದೇ ಸಮನೆ ಪ್ರಯಾಣ ಮಾಡಿ ರಾತ್ರಿಯ ಎಂಟು ಗಂಟೆಯ ಹೊತ್ತಿಗೆ ಮೂಲೆಗುಂಪಿನ ಬಲ್ಲಾಳರ ಮನೆಯನ್ನು ಸೇರಿದರು. ಬಲ್ಲಾಳರು ಎಲ್ಲ ಸಂಗತಿಗಳನ್ನು ಅವರಿಂದ ಕೇಳಿ ತಿಳಿದು 'ಇಲ್ಲಿಗೂ ಅದು ಬಂದರೇನು ಗತಿ!' ಎಂಬ ಭೀತಿಗೊಳಗಾದರು. ಮಲಗಿಕೊಂಡ ಕಾಳನಿಗೆ ಸಮನಾಗಿ ನಿದ್ರೆಯೂ ಹತ್ತಲಾರದು. ತುಂಬ ಯೋಚಿಸಿದ. 'ಧನಿಗಳ ಸಹಾಯ ಎಂದು ಬರುತ್ತದೋ, ಏನು ಕತೆಯೊ. ಅಲ್ಲಿಯ ತನಕ ಏನು ಮಾಡಲಿ' ಎಂಬ ಚಿಂತೆ ಅವನಿಗೆ. 'ಅಲ್ಲದೆ ಈಗ ತುಕ್ರಣ್ಣನಿಗೆ ಈ ಸಂಗತಿಯೊಂದೂ ಗೊತ್ತಿಲ್ಲದೆ, ಆತ ಮಲೆಗೆ ಹೋಗಿದ್ದಾನಲ್ಲ. ಅವನ ಪಾಡು ಏನಾಯಿತೋ' ಎಂಬ ಚಿಂತೆಯೂ ಸೇರಿತು. ತಟ್ಟನೆ ಬೇರೊಂದು ವಿಚಾರವೂ ಹೊಳೆಯಿತು. 'ನಾವೆಲ್ಲರು ಹೊರಡುವ ಗಡಿಬಿಡಿಯಲ್ಲಿ, ಧನಿಗಳ ಮನೆಯ ಕೊಟ್ಟಿಗೆಯಲ್ಲಿದ್ದ ನಾಲ್ಕು ದನಕರುಗಳನ್ನು

ಅಲ್ಲಿಯೇ ಬಿಟ್ಟು ಬಂದೆವಲ್ಲ! ಅವುಗಳ ಗತಿಯೇನು' ಎಂಬ ಚಿಂತೆ ಮತ್ತಷ್ಟೂ ಬಲವಾಯಿತು. ಬೆಳಗ್ಗಿನ ತನಕ ಆತ ಕಾದು ಕುಳಿತ. ಬೆಳಗ್ಗೆ ಇಷ್ಟಿಷ್ಟೂ ಮನಸ್ಸು ಕೇಳಲಿಲ್ಲ. "ಅನ್ಯಾಯವಾಗಿ ಆ ದನಕರುಗಳು— ಒಂದೋ ಹೊಟ್ಟೆಗಿಲ್ಲದೆ ಸಾಯುತ್ತವೆ, ಇಲ್ಲವೆ ಹುಲಿ ಹಿಡಿದುಕೊಂಡು ಹೋಗುತ್ತವೆ. ಧಣಿಗಳು ಅದನ್ನು ಕೇಳಿದರೆ ಎಷ್ಟು ನೊಂದುಕೊಳ್ಳುತ್ತಾರೋ" ಎಂದು ತನ್ನವರಿಗೆ ಹೇಳಿದ. "ಏನೇ ಆಗಲಿ. ಮಲೆಗೆ ಹೋಗಿ ಬರುವ" ಎಂದ ಕಾಳ. ಉಳಿದವರಿಗೆ ಇನ್ನೊಮ್ಮೆ ಕಿರಿ ಮಲೆಗೆ ಹೋಗುವ ಧೈರ್ಯ ಎಲ್ಲಿಂದ ಬರಬೇಕು? ಆತ ಬಲ್ಲಾಳರಲ್ಲಿ ಮೊರೆಯಿಟ್ಟ.

"ಅಯ್ಯ, ಏನು ಮಾಡಲಿ ಈಗ? ಈಗೊಂದು ಮೋಸವಾಗಿದೆಯಲ್ಲ. ತುಕ್ರ ಅಲ್ಲಿಗೆ ಹೋಗಿದ್ದಾನೆ. ಅಲ್ಲದೆ ನಾವೂ ಕೇರಿ ಬಿಡುವ ಗಡಿಬಿಡಿಯಲ್ಲಿ ದನಕರುಗಳನ್ನು ಕೊಟ್ಟಿಗೆಯಲ್ಲಿ ಬಿಟ್ಟು ಬಂದೆವು" ಎಂದ.

ಬಲ್ಲಾಳರೆಂದರು: "ಹೌದೊ ಕಾಳ, ನಿಮ್ಮವರ ಹುಡುಗನೊಬ್ಬ ಕುಕ್ಕರ ಳ್ಳಿಯಲ್ಲಿದ್ದಾನಲ್ಲ. ಆನಿ ಹಿಡಿದವ. ಆ ದಿನ ಬಂದಿದ್ದನಲ್ಲ ಜಾತ್ರೆಗೆ. ಅವನು ಹುಲಿಯನ್ನೂ ಕೊಲ್ಲುತ್ತಾನೆಂದು ಕೇಳಿದ್ದೆ. ನಿಲ್ಲು, ಸುದ್ದಿ ಹೇಳಿ ಕಳುಹಿಸಿ ಅವನನ್ನು ಇಲ್ಲಿ ಕರೆಯಿಸುವ. ಅವನು ಬರುವುದಾದರೆ ಒಳ್ಳೆಯ ಕೋವಿ ತರಿಸಿ ಕೊಡುವ. ಎಲ್ಲಿಂದಲಾದರೂ ಒಂದಾರೆಂಟು ಮಂದಿ ಸೇರಿ ಮಲೆಗೆ ಹೋಗುವ ಹೋಗುವ ಎಂದರೆ—ನಾನು ಬರುವುದಿಲ್ಲ—ಧೈರ್ಯದ ಒಕ್ಕಲುಗಳಿದ್ದಾರೆ, ಅವರನ್ನು ಕಳುಹಿಸುತ್ತೇನೆ. ಅಲ್ಲಿ ಅದಕ್ಕೆ ತಿನ್ನಲು ಜನ ಸಿಗದಿದ್ದರೆ, ನಾಳೆ ಇಲ್ಲಿಗೂ ಅದು ಬಂದೀತು. ಬರಲಾರದೋ ಏನೋ.... ನಡುವೆ ಹಳ್ಳ ಒಂದಿದೆಯಲ್ಲ, ದಾಟಲಾರದು; ಒಂದು ವೇಳೆ ದಾಟಿದರೆ ಮಾಡಬೇಕೇನು? ಅದನ್ನು ಕೊಲ್ಲಿಸುವ ಏರ್ಪಾಟು ಬೇಗನೆ ಮಾಡದೆ ಉಪಾಯವುಂಟೇ?" ಎಂದು ಉಪದೇಶ ಮಾಡಿದರು.

ಕಾಳನ ಕಿವಿ ನೆಟ್ಟಗಾಯಿತು; ಆನೆ, ಕರಿಯನ ಹೆಸರು ಹೇಳುತ್ತಲೇ ಅವನ ಧೈರ್ಯ ಒಂದಕ್ಕೆ ಹತ್ತಾಯಿತು. ಕರಿಯಣ್ಣ ಏನೂ ಮಾಡಬಲ್ಲನೆಂಬ ಧೈರ್ಯ. ಕುಕ್ಕರಳ್ಳಿ ಮಾತ್ರ ಎಲ್ಲಿದೆಯೆಂದು ಅವನಿಗೆ ಗೊತ್ತಿಲ್ಲ. ಬಲ್ಲಾಳರ ಒಬ್ಬ ಒಕ್ಕಲನ್ನು ಕರೆದುಕೊಂಡು, ಕಾಳ ಅಲ್ಲಿಗೆ ನಾಗಾಲೋಟ ಹೂಡಿದ. ಕರಿಯಣ್ಣನನ್ನು ಕಾಣುವ ತನಕ ಅವನ ಆತುರ ಅಷ್ಟಿಷ್ಟಲ್ಲ. ಆತ ಒಪ್ಪಿ

ದ್ದಾದರೆ, ಬಿಲ್ಲಾಳರು ಹೇಳಿದ ಹಾಗೆ, ಸಹಾಯಕರನ್ನು ಕರೆದುಕೊಂಡು, ಧನಿಗಳ ಜನ ಬರುವುದರೊಳಗಾಗಿ, ಹುಲಿ ಶಿಕಾರಿ ಮಾಡಲಾರೆವೇ?— ಎಂಬ ಯೋಚನೆ ಅವನದ್ದು. ಕುಕ್ಕರಳ್ಳಿಯನ್ನು ಸೇರಿ ಹೊಲದಲ್ಲಿ ಕೆಲಸ ಮಾಡುತ್ತಿದ್ದ ಕರಿಯನನ್ನು ಕಂಡಾಗ, ಅವನಿಗೆ ಹೋದ ಜೀವ ಬಂದಂತಾಯಿತು. ತನ್ನೆಲ್ಲ ಗಾಬರಿ, ದುಃಖಗಳನ್ನು ಆತನ ಮುಂದೆ ತೋಡಿಕೊಂಡ. ಮಲೆಗೆ ಒದಗಿದ ಆಪತ್ತನ್ನು ನೆನೆದು, ಕರಿಯನಿಗಾದ ಸಂತಾಪವೂ ತಿಮ್ಮನಿಗಾದ ಗಾಬರಿಯೂ ಅದಕ್ಕಿಂತ ಕಡಿಮೆಯಾಗಿರಲಿಲ್ಲ. ತಿಮ್ಮ ಮಾತ್ರ, ಕರಿಯನನ್ನು ನರಭಕ್ಷಕ ಹುಲಿಯ ಬೇಟೆಗೆ ಕಳುಹಿಸಲು ಒಡಂಬಡಲಿಲ್ಲ. ಅವನೆನ್ನುತ್ತಾನೆ "ಕಾಳಣ್ಣ, ಅದೆಲ್ಲ ಸಮನೇ. ಹೋದವರ ಬಗ್ಗೆ ನಮಗೂ ದುಃಖವಾಗುತ್ತೆ. ಕರಿಯನಿಗೆ ಹುಲಿ ಹೊಡೆಯಲು ಗೊತ್ತಿಲ್ಲವೆಂದಲ್ಲ. ಆದರೆ ಸಾಮಾನ್ಯ ಹುಲಿಗೂ, ಗಾಯಗೊಂಡ ಮನುಷ್ಯರನ್ನು ತಿನ್ನಲು ಬರುವ ಹುಲಿಗೂ ವ್ಯತ್ಯಾಸ ಉಂಟು. ಮಲೆಯಲ್ಲಿ ಅದನ್ನು ಹುಡುಕುವುದೂ ಸುಲಭವಲ್ಲ; ಬೇಟೆಯಾಡುವುದೂ ಸುಲಭವಲ್ಲ. ನಾಲ್ಕು ಜೀವ ಹೋಯಿತೆಂದು, ಇನ್ನೆರಡು ಜೀವ ಬಲಿ ಕೊಟ್ಟಹಾಗಾದೀತು. ನನ್ನ ಹತ್ತಿರ ಕೇಳಿದರೆ— ನಿಮ್ಮ ಧನಿಗಳ ಜನರೇ ಬರಲಿ. ಆಮೇಲೆ ನೋಡುವ."

ಕರಿಯನ ಕಳವಳ ಮಾತ್ರ ನಿಜವಾಗಿಯೂ ಬಣ್ಣಿಸಲು ಬಾರದ್ದು. ತಮ್ಮ ಜನ ಸತ್ತಿದ್ದಾರೆ. ತಾನು ಮಲೆಯ ಋಣ ಕಡಿದು ಬಂದರೂ, ಹೋದವರು ತನ್ನವರು. ಬಿರುಮನಾಗಲಿ, ಬೂದನ ತಾಯಾಗಲೀ, ಇನ್ನೊಬ್ಬನಾಗಲೀ ತನಗೆ ಬಂಧುಗಳಾದವರು. ಅಲ್ಲದೆ ಈ ಸಂಗತಿಯನ್ನು ತಿಳಿಯದ ಶುಕ್ರ ಅಲ್ಲಿಗೆ ಹೋಗಿದ್ದಾನೆ. ಅವನ ಪಾಡು ಏನಾಗಿದೆಯೋ? ಕಾಳ ಹೇಳಿದ ಹಾಗೆ, ದನಕರುಗಳನ್ನು ಹಾಗೆ ಬಿಟ್ಟಿರುವುದೂ ಸಮನಲ್ಲ. ಅವುಗಳನ್ನು ಕೆಳಕ್ಕೆ ಅಟ್ಟಿಕೊಂಡು ಬರಬೇಕು. ಅಷ್ಟು ಮಾಡದಿದ್ದರೇನು ಫಲ? ಬಾಯಿ ಬಾರದಿದ್ದ ದನಗಳು ತಮ್ಮ ಗೋಳನ್ನು ಯಾರೊಡನೆ ಹೇಳಿಕೊಳ್ಳಬೇಕು" ಎಂದು ವಿಷಾದಪಟ್ಟ. ಬಟ್ಟೆನ ಚರೆಕೋವಿ, ಹುಸಿಮದ್ದು, ಕೇಪುಗಳನ್ನೆಲ್ಲ ಹಿಡಿದುಕೊಂಡ. ತಿಮ್ಮನೊಡನೆ "ನೀನು ಇಲ್ಲಿ ನಿಲ್ಲು, ನಾನು ಕಾಳನೊಡನೆ ಹೋಗಿ ಆ ದನಕರುಗಳನ್ನಾದರೂ ಅಟ್ಟಿಕೊಂಡು ಬರುತ್ತೇನೆ" ಎಂದು ಹೇಳಿ ಹೊರಟ. ಫಕ್ಕನೆ ಅನಿಸಿತು—ಆನೆಯ ಮರಿಯನ್ನು ಕರೆದು

ಕೊಂಡು ಹೋದರೆ ಬೇಟೆಗೆ ಸುಲಭವಲ್ಲವೇ—ಎಂದು. ಬಟ್ಯಗೌಡ ಅವನನ್ನು ಬೆದರಿಸಿದ. "ಕರಿಯಣ್ಣ, ಹುಲಿಯ ಮುಖವನ್ನು ನೋಡಿರಲಾರದು ನಿನ್ನ ಈ ಆನೆಯ ಮರಿ. ಎಲ್ಲಾದರೂ ಕಣ್ಣಿಗೆ ಹುಲಿ ಬಿದ್ದು, ಅದಕ್ಕೆ ಗಾಬರಿಯಾಯಿತೆಂದರೆ ನೀನೆಲ್ಲೋ, ಅದೆಲ್ಲೋ. ಏನೂ ಬೇಡ—ಹೋಗು ನೀನೊಬ್ಬನೇ. ಆದರೆ ಬಲ್ಲಾಳರ ಜನ ಇಲ್ಲದೆ ಹುಚ್ಚರ ಹಾಗೆ ನೀವಿಷ್ಟೇ ಮಂದಿ ಹೋಗಬೇಡಿ. ರಾತ್ರಿ ಎಲ್ಲೂ ತಿರುಗಾಡಬೇಡಿ. ಏನಿದ್ದರೂ ಹಗಲೇ ಮಾಡಿ. ತುಂಬ ಕಾಡಿದ್ದಲ್ಲಿ ಅಲೆದಾಡಬೇಡಿ" ಎಂದು ಹಲವಾರು ಎಚ್ಚರದ ಮಾತುಗಳನ್ನು ಹೇಳಿ ಕಳುಹಿಸಿಕೊಟ್ಟ.

ಕರಿಯ, ಕಾಳರು ಮೂಲೆಗುಂಪಿನ ಬಲ್ಲಾಳರ ಮನೆಗೆ ಬಂದರು. ಅಲ್ಲಿ ಅವರ ಇಬ್ಬರ ಒಕ್ಕಲುಗಳನ್ನು ಕೂಡಿಕೊಂಡು ಮಲೆಗೆ ಹೊರಟರು. ನಾಲ್ಕಾರು ಮಂದಿ ಜತೆಗೆ ಹೋಗುವಾಗ, ಯಾವ ಭೀತಿಯೂ ಅನಿಸಲಿಲ್ಲ. ಅಲ್ಲದೆ ಆರು ಮಂದಿಯಲ್ಲಿ ಮೂವರ ಕೈಗಳಲ್ಲಿ ಕೋವಿಗಳಿದ್ದುವು. ಅವರಿಗೆ ಮಾತನಾಡುತ್ತ ಮಲೆ ಏರಿ ತಮ್ಮ ಕೇರಿಯನ್ನು ಸೇರುವುದಕ್ಕೆ ಬರಿಯ ಎರಡು ತಾಸುಗಳಷ್ಟೆ ಹಿಡಿಯಿತು. ಕಾಳ ಕರಿಯರಿಬ್ಬರು—ಮೊದಲು ಧನಿಗಳ ಮನೆಯ ಕೊಟ್ಟಿಗೆಯನ್ನು ಹೊಕ್ಕರು. ಕೊಟ್ಟಿಗೆಯು ಗೋಡೆ, ತಡಿಕೆಯ ಬಾಗಿಲುಗಳಿಂದ ಭದ್ರವಾಗಿತ್ತು. ಒಳಗೆ ಆರು ದಿನಗಳ ಉಪವಾಸದಿಂದ ದನಕರುಗಳು ದಣಿದು ಬಿದ್ದಿದ್ದುವು. ಕೂಗಿ, ದಣಿದು ಗೊಬ್ಬರದಲ್ಲೇ ಉಪವಾಸ ಬಿದ್ದಿದ್ದುವು. ಇವರು ಹೋಗಿ ಕದ ತೆರೆದು, ಅವಕ್ಕೆ ನೀರು ಕೊಟ್ಟು, ಹುಲ್ಲು ಹಾಕಿ, ಹೊಟ್ಟೆ ತಣಿಸುವ ತನಕ ಕಾಳ, ಕರಿಯರ ಮನಸ್ಸು ನೆಮ್ಮದಿಗೊಳ್ಳಲಿಲ್ಲ. ಅನಂತರ ಅವರು ತುಕ್ರನಿಗಾಗಿ ಕೇರಿಯಲ್ಲಿ ಹುಡುಕಾಡಿದರು, ಕೂಗಿದರು, ಕರೆದರು. ಅವನ ಸುಳಿವು ಕಾಣಸಿಗಲಿಲ್ಲ. ಅಲ್ಲಿಯೇ ಕುಳಿತು— ಹುಲಿಯ ಹೊಂಚು ಹಾಕಲೇ, ಮೊದಲು ದನಕರುಗಳನ್ನು ಮಲೆಯಿಂದ ಕೆಳಕ್ಕೆ ಅಟ್ಟಬರಲೇ—ಎಂಬ ವಿಚಾರ ಮಾಡಿದರು. ಅವರ ಜತೆಗೆ ಬಂದ ಕೆಳಗಿನ ಆಳುಗಳು, ಬೇಟೆಯ ಉತ್ಸಾಹ ಏನೇನೂ ಇಲ್ಲದವರು; ದಾಕ್ಷಿಣ್ಯಕ್ಕೆ ಕಟ್ಟುಬಿದ್ದು ಬಂದವರು. 'ನಾವಿಷ್ಟೇ ಜನ ಏನು ಮಾಡುವುದು' ಎಂದು ಗೊಣಗುವ ಅವರನ್ನು ಇರಿಸಿಕೊಳ್ಳುವುದಕ್ಕೂ ಇಲ್ಲ, ಬಿಡುವುದಕ್ಕೂ ಇಲ್ಲ. ಹಾಗಾದರೆ "ನಾನು, ಕಾಳ ಇಲ್ಲಿ ಉಳಿದುಕೊಳ್ಳುತ್ತೇವೆ. ಎರಡು

ಕೋವಿಗಳು ಇಲ್ಲಿರಲಿ. ನೀವು ಉಳಿದವರು—ದನ ಅಟ್ಟಿಕೊಂಡು ಹೋಗಿ. ಇಲ್ಲಿ ಅವುಗಳನ್ನು ಬಿಟ್ಟು ಮೇಯಿಸುವ ಹಾಗಿಲ್ಲವಲ್ಲ" ಎಂದರೆ, ಅದಕ್ಕೂ ಅವರು ಸಿದ್ಧರಿಲ್ಲ. ಹೀಗಾಗಿ ಮರುದಿನ, ಆ ದನಕರುಗಳು ಚೇತರಿಸಿದ ಮೇಲೆ ದನಕರುಗಳನ್ನು ಮೆಲ್ಲಗೆ ಅಟ್ಟಿಕೊಂಡು ಮಲೆಯನ್ನು ಇಳಿಯ ಬೇಕಾಯಿತು. ಬಂದ ಕೆಲಸ ಹೀಗೆ ಮುಂದಕ್ಕೆ ಹೋದುದ್ದನ್ನು ಕಂಡು, ಕರಿಯನಿಗೆ ಏನೂ ಸಮಾಧಾನವಾಗಲಿಲ್ಲ. ಬೇರೆ ಬಗೆಗಾಣದೆ ಆತ ಮೂಲೆ ಗುಂಪಿಗೆ ಹೋದ. ಜಾನುವಾರುಗಳನ್ನಂತು ಪಾರುಮಾಡಿದ್ದಾಯಿತು,

ಆ ದಿನ ಸಂಜೆಯೇ ರಾಮಚಂದ್ರಯ್ಯ ಕಳುಹಿಸಿದ ಇಬ್ಬರು ಈಡುಗಾರರು ಮೂಲೆಗುಂಪನ್ನು ಸೇರಿದ್ದರು. ಬಂಟ್ರಪ್ಪ ತನಗೆ ಮೈ ಚೆನ್ನಾಗಿಲ್ಲವೆಂದು ಹಿಂದಕ್ಕೆ ಉಳಿದುಕೊಂಡ. ಧನಿಗಳು 'ನಾಲ್ಕು ದಿನ ತಡೆಯುವುದಾದರೆ ತಡೆಯಿರಿ, ತಾನಂತೂ ಬಂದೇ ತೀರುತ್ತೇನೆ. ಮೊದಲೇ ನಿಮ್ಮಿಂದೇನಾದರೂ ಆಗುವುದಿದ್ದರೆ ಮಾಡಿ' ಎಂದು ಎರಡೆರಡು ತೋಟೆಯ ಕೋವಿಗಳನ್ನೂ, ಸಾಕಷ್ಟು ಮದ್ದು ಗುಂಡುಗಳನ್ನೂ ಕಳುಹಿಸಿಕೊಟ್ಟಿದ್ದರು. ಅದನ್ನು ಕಂಡ ಕರಿಯನಿಗೆ—'ಇಷ್ಟಿದ್ದರೆ ಊರೇ ತೆಗೆದೇನು' ಎಂಬ ಹುಮ್ಮಸವಾಯಿತು. ಯಾರ ಬರಕ್ಕೂ ಆತ ಕಾಯಲು ಸಿದ್ಧನಿಲ್ಲ. 'ಕಾಳ ನಿದ್ದಾನೆ, ತಾನಿದ್ದೇನೆ. ವಿಟ್ಲದಿಂದ ಬಂದ ಇಬ್ಬರು ಈಡುಗಾರರಿದ್ದಾರೆ. ಜನ ಹೆಚ್ಚಿಗೆ ಇದ್ದು ಮಾಡುವುದೇನು—ಹೋಗಿಯೇ ಬಿಡುವ!' ಎಂದು ನಿಶ್ಚಯಿಸಿದ. ಆ ರಾತ್ರೆ ಬಲ್ಲಾಳರ ಮಾತಿಗೆ ಮನ್ನಣೆಯಿತ್ತು, ಅವರಲ್ಲಿ ಉಳಿದುಕೊಂಡು, ಬೆಳಗಾದ ಮೇಲೆ ಹೊರಟರು. ನಾಲ್ಕು ಕೋವಿಗಳು, ನಾಲ್ವರು ಈಡುಗಾರರು. ಅವರಲ್ಲಿ ಚೆನ್ನಾಗಿ ಕೋವಿ ಹಿಡಿಯಲು ಬಾರದವ ನೆಂದರೆ ಕಾಳನೊಬ್ಬನೇ. ಆದರೆ ಕರಿಯನ ಧೈರ್ಯಕ್ಕೆ ಸಮನಾದ ಧೈರ್ಯ ಆತನದು. ಕರಿಯ ಆ ಗೆಳೆಯರನ್ನು ಕರೆದುಕೊಂಡು ಕಾಡು ಕಳೆದು, ಕುಡಿಯರ ಕೇರಿಗೆ ಬಂದ. ಅಲ್ಲಿ ಕುಳಿತು ಮುಂದಿನ ಬಗೆಯನ್ನು ಯೋಚಿಸ ತೊಡಗಿದ.

# ಅಧ್ಯಾಯ ೨೦

ವಿಟ್ಟಲದಿಂದ ರಾಮಚಂದ್ರಯ್ಯ ಕಳುಹಿಸಿಕೊಟ್ಟ ಈಡುಗಾರರಿಬ್ಬರೂ ಯೌವನಸ್ಥರೇ. ಧೈರ್ಯದಲ್ಲಾಗಲಿ, ಗುರಿಯಲ್ಲಾಗಲಿ ಕಡಿಮೆಯವರಲ್ಲ. ಆದರೆ ಬೆಟ್ಟದ ಸೆರಗು ಅವರಿಗೆ ಹೊಸತಾದದ್ದು. ಅವರು ಏನು ಬೇಟೆ ಯಾಡಿದ್ದಿದ್ದರೂ, ಅದು ಸಾಮಾನ್ಯ ಕಾಡುಗಳಲ್ಲಿ; ಹೆಚ್ಚುಕಡಿಮೆ ಸಮ ತಟ್ಟಾದ ಪ್ರದೇಶದಲ್ಲಿ. ಅಲ್ಲದೆ ನರಭಕ್ಷಕ ಹುಲಿಯ ಸ್ವಭಾವ ತಿಳಿದವರಲ್ಲ. ಹತ್ತು ವರ್ಷಕ್ಕೋ, ಹದಿನೈದು ವರ್ಷಕ್ಕೊ ಊರಿನ ಎಲ್ಲಾದರೊಂದು ಕಡೆ ಅಂಥ ಹುಲಿಯ ಸಂಗತಿ ಕೇಳಿಬರುತಿತ್ತು. ಹೊರತು ಅದರ ರೀತಿ ನೀತಿ ಗಳನ್ನು ಅವರು ಬಲ್ಲವರಲ್ಲ. ಅದಕ್ಕೂ ಅಂಥ ರೀತಿ ನೀತಿ ಉಂಟೋ ಇಲ್ಲವೋ! ತನ್ನ ಆವರಣಕ್ಕೆ ಸರಿಯಾಗಿ ನಿತ್ಯದ ಬೇಟೆಯನ್ನು ಹಿಡಿಯ ಲಾರದ ಹಸಿದ ಪ್ರಾಣಿ, ಸುಲಭಸಾಧ್ಯವಾದ ಬೇಟೆಯನ್ನು ಆರಿಸಿಕೊಳ್ಳ ಬೇಕು. ಬಡಪಾಯಿ ಮನುಷ್ಯನಿಗಿಂತ ಸುಲಭದ ಪ್ರಾಣಿಯಿಲ್ಲವೆಂದು ಕಿರಿ ಮಲೆಯ ಈ ಹುಲಿಯೂ ತಿಳಿದುಕೊಂಡಿರಬೇಕು. ಪಾಪ, ಅದಕ್ಕೂ ಕಷ್ಟವೇ! ಗಾಯಗೊಂಡು, ಕಾಲು ಮೊಟಕುತ್ತ, ಕದ್ದು, ತಿರುಗಿ, ಕಾದು, ಮೂರು ನಾಲ್ಕು ಮಂದಿಯನ್ನು ಅದು ಹಿಡಿದು ತಿಂದದ್ದು ನಿಜ. ಅಷ್ಟಕ್ಕೆ— ಆ ಮಲೆಯು ಜನಹೀನವಾಗಬೇಕೇ? ಸಾಮಾನ್ಯ ಪಶು, ಪ್ರಾಣಿಗಳಿಗೆ ವಾಸನೆಯಿಂದಲೇ ಹುಲಿಯ ಇರವು ತಿಳಿಯುತ್ತದೆ. ಅವು, ವಾಸನೆ ತಿಳಿ ದೊಡನೆಯೇ, ಬಾಲ ಎತ್ತಿಕೊಂಡು ಓಡಿಹೋಗುತ್ತವೆ. ಹೀಗಾಗಿ ಕರಿಯ ಮತ್ತು ಅವರ ಗೆಳೆಯರು ಬರುವ ತನಕ, ಆ ಹುಲಿ ಉಪವಾಸ ಬಿದ್ದಿರ ಬೇಕಾಯಿತು. ಅದು ನಿತ್ಯ ಕುಡಿಯರ ಕೇರಿಯನ್ನು ಸುತ್ತಿತು. ಒಂದೆರಡು ಗುಡಿಸಲುಗಳನ್ನು ಧೈರ್ಯದಿಂದ ಹೊಕ್ಕು ಹೊರಟಿತು. ಧನಿಗಳ ಮನೆಯ ದನದ ಕೊಟ್ಟಿಗೆಯನ್ನು ಒಂದೆರಡು ದಿನ ಸುತ್ತಿತು; ಕೂಗಿತು. ಅದರ ಒಳಕ್ಕೆ ಹೋಗಲಾಗದೆ ನಿರಾಶೆಯಿಂದ ಮರಳಿ ಬಂದಿತು. ನಿರಾಶೆಯಿಂದ ಮಗ್ಗುಲ ಕಾಡಿನಲ್ಲಿ ಹಸಿದು ಬಿದ್ದುಕೊಂಡಿತು. ಕೇರಿಗೆ ಬಂದು—ಮಾತಿ ನಲ್ಲೂ, ಹುಡುಕುವಿಕೆಯಲ್ಲೂ ಸಮಯ ಕಳೆಯುತ್ತಿರುವ ಈ ನಾಲ್ವರನ್ನು ಕಾಣದೆಹೋದರೂ, ಮನುಷ್ಯರ ಧ್ವನಿ ಕೇಳಿದ ಆ ಹುಲಿಗೆ ಬೇಟೆಯ ಆಸೆ ತಿರುಗಿ ಉಂಟಾಯಿತು. ಮೂರು ನಾಲ್ಕು ಬಾರಿ ಅದು ಪೊದೆಗಳ ಮರೆಯಿಂದ

ಹೊರಕ್ಕೆ ಬಂದು, ಇಣಿಕಿ ನೋಡಿತು. ಆ ಜನರು ಒಟ್ಟೊಟ್ಟಿಗೆ ತಿರುಗು ತ್ತಿದ್ದುದರಿಂದ, ಬೇಟೆಯ ಮೇಲೆ ಬೀಳಲಾರದೆ ಅಂಜಿ, ಯಾರಾದರೂ ಒಂಟಿ ಯಾಗಿ ದೊರೆಯಲಾರರೇ—ಎಂದು ಸಮಯ ಹೊಂಚುಹಾಕುತ್ತ ಕುಳಿತಿತು.

ಕರಿಯ, ಕಾಳಕ ಜತೆಗೆ ಬಂದ ಆ ಇನ್ನಿಬ್ಬರೂ ಒಂಟಿಯಾಗಿ ಅಲೆ ದಾಡುವುದು ಒಳಿತಲ್ಲವೆಂದು ಅರಿತವರು. ನೀರಿಗೆ ಹೋಗುವಾಗ, ಅಡುಗೆ ಅಡುವಾಗ, ಅಂಗಳದಲ್ಲಿ ಅಲೆದಾಡುವಾಗ ಕೋವಿ ಹಿಡಕೊಂಡು ಜತೆ ಯಾಗಿಯೇ ಇರುತ್ತಿದ್ದರು. ಒಮ್ಮೊಮ್ಮೆ ಗಾಳಿ ಹುಲಿಯ ವಾಸನೆಯನ್ನು ತರುತ್ತಿದ್ದುದರಿಂದ, ಅದೇ ಹುಲಿಯೋ, ಇನ್ನೊಂದೋ ಸಮೀಪದಲ್ಲಿ ಇರಲೇಬೇಕು—ಎಂದು ಅವರಿಗೂ ಅನಿಸಿತು. ಬಂದ ಮೊದಲ ದಿನ ಅವರು ಆಚೀಚೆ ಅಡ್ಡಾಡಿದರು; ಕೂಗೆಬ್ಬಿಸಿದರು. ಆದರೆ ಹುಲಿ ಮಾತ್ರ ಹೊರಕ್ಕೆ ಬಂದು ಅವರ ಕಣ್ಣೆದುರಿಗೆ ಬೀಳುವ ಸಾಹಸ ಮಾಡಲಿಲ್ಲ.

ಇವರು ರಾತ್ರಿಯೆಲ್ಲ ಯೋಚಿಸಿದರು; ಮುಂದಿನ ದಾರಿಯೇನು?—ಎಂದು ಎಣಿಕೆ ಹಾಕಿದರು. ಇದ್ದುದರಲ್ಲಿ ಬೂದನ ಮನೆಗೆ ಮಣ್ಣಿಗೋಡೆ, ದಪ್ಪನಾದ ಬಾಗಿಲುಗಳು ಇದ್ದುವು. ಅದರ ಒಳಕ್ಕೆ ಹೋಗಿ ಮಲಗಿಕೊಳ್ಳ ಬೇಕು ವಿನಾ ಹೊರಗಡೆ ಮನೆಯ ಜಗುಲಿಗಳಲ್ಲಿ ಯಾರೂ ಮಲಗುವಂತಿರ ಲಿಲ್ಲ. ಅಲ್ಲದೆ ರಾತ್ರಿ ಅಂಥ ಹುಲಿಯನ್ನು ಕಾದು ಕುಳಿತು, ಶಿಕಾರಿ ಮಾಡು ವುದೂ ಕಷ್ಟ. ಹುಲಿ ಇದೆಯೋ ಇಲ್ಲವೋ ಎಂದು ತಿಳಿಯುವುದೂ ಕಷ್ಟ. ಹಾಗೆ ತಿಳಿಯುವುದಕ್ಕೊಂದು ಉಪಾಯ ಮಾಡಿದರು. ಮನೆಯ ಅಂಗಳ ದಲ್ಲಿ ಒಂದು ಮಂಚ ಹಾಕಿ, ಅದರ ಮೇಲೆ ಚಾಪೆ ದಿಂಬುಗಳನ್ನಿರಿಸಿ, ಅದರ ಮೇಲೊಂದು ಕಂಬಳಿ ಹೊದೆಸಿ, ತಾವು ಮಾತ್ರ ಅಗಳಿ ಹಾಕಿ ಮನೆಯ ಒಳಗೆ ಮಲಗಿಕೊಂಡರು. ಹೊರಗೇನೇ ಇರುವ ಧೈರ್ಯ ಅವರಿಗಿರಲಿಲ್ಲ. ಬೆಳಗ್ಗೆ ಎದ್ದು ಬಂದು ನೋಡಿದರೆ, ಮಂಚದ ಮೇಲಿನ ಕಂಬಳಿ ಕೆಳಗೆ ಬಿದ್ದಿತ್ತು. ದಿಂಬು ಹರಿದು, ಉರುಳಿತ್ತು. ಹುಲಿ ಕೇರಿಗೆ ಬಂದು ಅಷ್ಟು ಕೆಲಸ ಮಾಡಿದ್ದು ನಿಜ ಎಂಬುದು ನಿಶ್ಚಯವಾಯಿತು. ಅದು ಸಮೀಪ ದಲ್ಲಿದ್ದರೂ ಪೊದೆಗಳನ್ನು ಹೊಕ್ಕು, ಅದನ್ನು ಹೊರಕ್ಕೆ ಅಟ್ಟಲು ಬಂದೀತೆ? ಅಥವಾ ಬಲಿಯನ್ನು ಕಟ್ಟಿ ಅದನ್ನು ಆಕರ್ಷಿಸಲು ಬಂದೀತೇ ಎಂಬುದನ್ನು ಅವರು ಯೋಚಿಸಬೇಕಾಯಿತು.

ಕರಿಯನಿಗೆ, ಹುಲಿಯನ್ನು ಅಟ್ಟಿಹೋಗಿ ಶಿಕಾರಿಮಾಡಿದ ಪರಿಚಯ ವಿಲ್ಲ. ಏನಿದ್ದರೂ, ಹುಲಿ ಕೊಂದ ಬೇಟೆಗಾಗಿ, ಅದು ಬರುವ ಗಳಿಗೆಯನ್ನು ಕಾದು, ಶಿಕಾರಿಮಾಡಿದವ ಅವನು. ಅವನ ಹೆಚ್ಚಿನ ಎಲ್ಲ ಶಿಕಾರಿ ಹಾಗೇನೆ. ಈ ಹುಲಿಗಾಗಿ ಏನು ಕಟ್ಟಬೇಕು, ಎಲ್ಲಿ—ಎಂದೆಲ್ಲ ಯೋಚನೆಮಾಡು ತ್ತಿದ್ದಾಗ ಕಾಳನೆಂದ: "ಕರಿಯಣ್ಣ, ಒಮ್ಮೆ ಮನುಷ್ಯರ ರಕ್ತದ ರುಚಿ ನೋಡಿದ ಹುಲಿ ಬೇರೆ ಪ್ರಾಣಿ ತಿನ್ನುವುದಿಲ್ಲ ಅನ್ನುತ್ತಾರೆ. ಎಷ್ಟು ನಿಜವೋ, ಎಷ್ಟು ಸುಳ್ಳೋ. ನಾವು ನಾಲ್ಕು ಮಂದಿ ಇದ್ದೇವೆ. ಒಂದು ಬೋನಿನ ಹಾಗೆ ಮಾಡಿ ಒಬ್ಬ ಅದರಲ್ಲಿ ಕುಳಿತುಕೊಂಡರೇನು? ಮೂವರು ಹೊರಗೆ ಕೂತು ಹೊಂಚು ಹಾಕಬಹುದಲ್ಲ. ಗಟ್ಟಿಯಾದ ಕೋವಿಗಳು ಮೂರು ಇವೆ" ಎಂದ. ಕರಿಯನಿಗೆ ಆ ಸೂಚನೆ ಚೆನ್ನಾದದ್ದೆಂದು ತೋರಿತು. ಆದರೆ ಬೋನಿನೊಳಗೆ ಮನುಷ್ಯನನ್ನೇ ಬಲಿಯೊಡ್ಡುವ ಯೋಚನೆ ಮಾತ್ರ, ಉಳಿದ ಇಬ್ಬರಿಗೆ ಒಪ್ಪಿಗೆಯಾಗಲಿಲ್ಲ. ಅವರೆಂದರು: "ಅದು ಸಲ್ಲದ ವ್ಯಾಪಾರ. ಮೊದಲು ಒಳಗೆ ಕುಳಿತುಕೊಳ್ಳುವರ್‍ಯಾರೆಂದು ಬೇಡವೇ? ನಮಗಂತು ಜೀವ ಬೇಡವಾಗಲಿಲ್ಲ. ಅಲ್ಲದೆ ಹುಲಿ ಬಂದು ಬೋನು ಹೊಕ್ಕ ಮೇಲೆ, ಒಳಗೆ ಕುಳಿತವನು ಸತ್ತಹಾಗೆಯೆ. ಹುಲಿ ಗುಂಡಿಗೆ ತುತ್ತಾಗಲಿ, ಬಿಡಲಿ—ಒಬ್ಬನನ್ನು ಬಲಿಕೊಡುವುದು ನಿಶ್ಚಯ. ಅದು ಸಲ್ಲದ ಕೆಲಸ" ಎಂದರು. ಕರಿಯನ ಮನಸ್ಸು ಮಾತ್ರ 'ಕಾಳನೆನ್ನುವುದೇ ಸಮನಾದ ಉಪಾಯ' ಎನ್ನುತಿತ್ತು. "ಹಾಗಲ್ಲಯ್ಯ, ಬೋನೆಂದರೆ ಹುಲಿ ಒಳಗೆ ಹೋಗಿ ಸಿಕ್ಕಿಬೀಳಬೇಕಾಗಿಲ್ಲ. ಮನುಷ್ಯ ಅದಕ್ಕೆ ಕಾಣಲು ಸಿಕ್ಕಿದರೆ ಸಾಕು. ನಾಲ್ಕು ಸುತ್ತಲೂ ಮರದ ಗೂಟ ಬಿಗಿದು ಬಲವಾದ ಬೋನು ಮಾಡಬಹುದು. ಮೂರು ದಿಕ್ಕಿನಿಂದ ಮೂರು ಜನ ಕಾದು ಕುಳಿತರೆ ಆಯಿತು" ಎಂದ.

"ಏನೋ ಅಪ್ಪ, ನೀನೆಂಥ ಬೋನು ಮಾಡುತ್ತೀ—ಎಂದು ನೋಡಿ ಆಮೇಲೆ ಹೇಳಿಯೇವು. ನಮ್ಮೂರಲ್ಲಿ ಬೋನು ಕಟ್ಟಿದರೆ, ಅದರ ಒಳಗೆ ಆಡು ಕಟ್ಟಿ, ಬಾಗಿಲು ದಡಾರನೆ ಬೀಳುವ ಹಾಗೆ ಮಾಡುತ್ತಾರೆ. ಆಡೇನೋ ಸಾಯುವುದೇ. ಹುಲಿ ಮಾತ್ರ ಬೋನಿನ ಒಳಗೆ ಸಿಕ್ಕಿಬೀಳುತ್ತದೆ" ಎಂದರು. ಕರಿಯ ನಾಲ್ವರನ್ನು ಕೂಡಿಕೊಂಡು ಸಮೀಪದ ಕಾಡಿಗೆ ಹೋದ. ಬೀಳಲು

ಕಡಿದು ತಂದ; ಉದ್ದನಾದ ದಪ್ಪನಾದ ಸೋಟೆಗಳನ್ನು ಕಡಿದು ತಂದು ಅವುಗಳನ್ನು ಚೆನ್ನಾಗಿ ಬಿಗಿದು, ನಾಲ್ಕು ಮೈಯುಳ್ಳ ಒಂದು ಪಂಜರ ಮಾಡಿದ, ಬಾಗಿಲಿಲ್ಲದ್ದು. ಹುಲಿ ಎಲ್ಲಿ ಹೋಗದಿದ್ದರೂ ಕುಡಿಯುವ ನೀರಿಗಾಗಿ ಬಂದೇ ತೀರಬೇಕಷ್ಟೆ—ಎಂದು, ಕೇರಿಯ ನೀರಿನ ದಂಬೆಯ ಹತ್ತಿರ, ಬರಿದಾಗಿದ್ದ ಜಾಗದಲ್ಲಿ, ನಾಲ್ಕು ಬಲವಾದ ಕಂಬಗಳನ್ನು ನಟ್ಟು, ಆ ಪಂಜರವನ್ನು ಬೀಳಲುಗಳಿಂದ ಅವಕ್ಕೆ ಬಿಗಿದರು. ಅದರೊಳಗೆ ಕಾಳ ಕುಳಿತಿರುವುದೆಂದೂ, ಪಂಜರದ ಮೇಲುಗಡೆ, ಆತ ಕುಳಿತ ಮೇಲೆ ತಿರುಗಿ ಅಡ್ಡಗಳನ್ನಿಟ್ಟು ಮೇಲಿಂದ ರಕ್ಷಣೆ ನಿರ್ಮಿಸುವುದೆಂದು ನಿರ್ಣಯಮಾಡಿದರು. ಆ ಕೆಲಸ ಸಂಜೆಯ ತನಕ ಸಾಗಿತು. ಊಟಕ್ಕೂ ಬಿಡುವಿಲ್ಲದೆ ದುಡಿದರು. ಸುತ್ತಲು ಮರಗಳಿದ್ದಾವೆ. ಅವುಗಳ ಏರಿನ ರೆಂಬೆಗಳಲ್ಲಿ, ಮೂವರು ಕಾದು ಕುಳಿತಿರಬೇಕೆಂದು ನಿರ್ಣಯಿಸಿದರು. ಬೆಳುದಿಂಗಳ ದಿನಗಳಾದುದರಿಂದ ಬಂದ ಹುಲಿ ಕಾಣಿಸಲು ತೊಡಕಿಲ್ಲ. ಅಲ್ಲದೆ ಆ ನೀರಿನ ಚಿಲುಮೆಯ ಬಳಿ ಒಂದು ದಿಕ್ಕಿಂದ ಬೆಳಗಿನ ಜಾವದ ತನಕವೂ, ಬೆಳಕು ಬೀಳುವುದಕ್ಕೆ ತಡೆ ಇರಲಿಲ್ಲ. ಅವರು ಮಾಡಬೇಕಾದ ಕೆಲಸವೆಂದರೆ, ರಾತ್ರಿಯೆಲ್ಲ ಮರದ ರೆಂಬೆಗಳ ಮೇಲೆ ಕುಳಿತು ತಪಸ್ಸು ಮಾಡಬೇಕಾದದ್ದು; ನಿದ್ದೆ ಬಿಡಬೇಕಾದದ್ದು. ಒಂದು ರಾತ್ರಿಯೇನೋ ಹಾಗೆ ಕಾವಲಿಟ್ಟರು. ಆ ಕಾವಲು ವ್ಯರ್ಥವಾಯಿತು. ರೆಂಬೆಯ ಮೇಲೆ ಕುಳಿತ ಇವರನ್ನು ಆ ಹುಲಿ ಕಂಡಿತೋ ಏನೋ, ಬೆಳಗಾಗುವ ತನಕ ಆ ಪ್ರದೇಶಕ್ಕೆ ಅದು ಹಾಯಲಿಲ್ಲ.

ಮರುದಿನ ಬೇರೆ ಉಪಾಯ ಹೂಡಿದರು. ಕಾದು ಕುಳಿತಿರುವವರು ಮರದಲ್ಲಿ ಕುಳಿತಿರಬೇಕೆಂದೇನು? ಕೇರಿಯ ಅಂಗಣದಲ್ಲಿ ಈ ವ್ಯವಸ್ಥೆಯನ್ನು ಮಾಡಿದ್ದಾದರೆ, ಇನ್ನಷ್ಟು ಸ್ವಾಭಾವಿಕವಾಗಿ ಕಂಡೀತು. ಅಚೀಚೆ ಮನೆಗಳಲ್ಲಿ ಮೂವರು ಅಡಗಿದ್ದು, ಹುಲಿ ಬಂದರೆ, ತಡಿಕೆಯ ಎಡೆಗಳಿಂದ ಗುರಿ ಇಟ್ಟು ಹೊಡೆಯಲು ಬಂದೀತು—ಎಂದು ಯೋಚಿಸಿದರು. ನಾಲ್ಕು ಮನೆಗಳ ಮಧ್ಯ ಇದ್ದೊಂದು ಅಂಗಣದಲ್ಲಿ ಅದೇ ಪಂಜರವನ್ನು ಕಿತ್ತು ತಂದು ತಿರುಗಿ ನಟ್ಟರು. ರಾತ್ರಿ ಸ್ವಲ್ಪ ಹೊತ್ತಿನ ತನಕ ಮಾತನಾಡುತ್ತ ಸಮಯ ಕಳೆದರು. ಆಮೇಲೆ ಕಾಳ ಹೋಗಿ ಪಂಜರ ಸೇರಿಕೊಂಡು,

ಚಾಪೆ ಬಿಡಿಸಿ ಮಲಗಿಕೊಂಡ. ಪಂಚದ ಮೇಲೆ ಮುಚ್ಚಳ ಬಿಗಿದರು. ಉಳಿದ ಮೂವರು, ಮೂರು ಮನೆ ಸೇರಿ ಅಡಗಿ ಕುಳಿತು, ಕಾವಲು ಹಾಕಿದರು. ಯಾರಿಗೂ ಹಿಂದಣ ರಾತ್ರಿ ನಿದ್ರೆ ಇದ್ದಿರಲಿಲ್ಲ. ಹಾಗೆಂದು—ಯಾರಾದರೊಬ್ಬರು ತೂಕಡಿಸಿದರೆ ಮಲಾಮತಿಯಾದೀತು ಎಂದು, ಒಬ್ಬರು ಇನ್ನೊಬ್ಬರಿಗೆ ಎಚ್ಚರ ಹೇಳಿದ್ದರು. ಕಾಳನಿಗೆ ಆ ಮಾತನ್ನು ಹೇಳಬೇಕಾಗಿರಲಿಲ್ಲ. ಹುಲಿಗೆ ಬಲಿ ನಿಂತ ವ್ಯಕ್ತಿ ನಿದ್ದೆ ಮಾಡುವುದಾದರೂ ಹೇಗೆ? ಆತ ಮಲಗಿಕೊಂಡ. ಕೊನೆಗೆ ನಿದ್ದೆ ಬಾರದೆ, ಗೂಡಿನೊಳಗೆ ಕುಳಿತುಕೊಂಡ; ಸಿಳ್ಳು ಹಾಕಿದ, ಹಾಡನ್ನೂ ಹಾಡಿದ. ಸಾಲದುದಕ್ಕೆ ತನ್ನ ಬಳಿಯಲ್ಲಿ ಕತ್ತಿಯೊಂದನ್ನು ಇರಿಸಿಕೊಂಡಿದ್ದ. ಹುಲಿಗೆ ಮನಸ್ಸಾದರೆ, ತನ್ನ ಪಂಜರವನ್ನು ಮುರಿದುಹಾಕುವ ಕೆಲಸ ನಿಮಿಷದಲ್ಲಿ ಸಾಧ್ಯ ಎಂದು ಅವನ ಊಹೆ. ಆದರೆ ಅವನಿಗೆ ಕರಿಯನ ಮೇಲೆ ಅಷ್ಟೇ ವಿಶ್ವಾಸ. ಕರಿಯಗೆ ಕೇಳಿಸುವಂತೆ, ಆಗಾಗ ಆತ ಗೂಬೆ ಕೂಗಿದ ಹಾಗೆ ಒಂದೊಂದು ಕೂಗು ಕೊಡುತ್ತಿದ್ದ. ಎದುರು ಮನೆಯಲ್ಲಿ ಅಡಗಿದ್ದ ಕರಿಯ ಅದಕ್ಕೆ ತಕ್ಕ ಮರುಧ್ವನಿ ಕೊಡುತ್ತಿದ್ದ. 'ಎಚ್ಚರ ಇದೆ ತನಗೆ' ಎಂಬ ಸಂಕೇತ ಅದು.

ನಾಲ್ಕು ದಿನಗಳ ಉಪವಾಸವಿದ್ದ ಹುಲಿ—ಮೊದಲ ದಿನ ರಾತ್ರಿ ನೀರಿನ ಆಸೆಗಾಗಿ ಚಿಲುಮೆಯ ಬಳಿ ಬಂದು, ಅನುಮಾನಗೊಂಡು ಮರಳಿತ್ತು. ಈ ಹಗಲೂ ಅಲ್ಲಿಯೇ ಸಮೀಪ ಅದು ಸುತ್ತಾಡಿತ್ತು. ಆದರೂ ಜನರ ಧ್ವನಿಯನ್ನು ಕೇಳಿದ ಅದು ಆಸೆಯಿಂದ ಕಾದು ಕುಳಿತಿತ್ತು. ರಾತ್ರೆ ಕಳೆದು, ಕೇರಿಯ ಮೇಲೆ ಬೆಳುದಿಂಗಳು ಚೆಲ್ಲಿತು. ಸುಮಾರು ಮಧ್ಯರಾತ್ರಿಯಾಗಬಹುದು. ಹುಲಿ ಬಲ್ಲೆಯೊಳಗಿಂದ ಹೊರಟು ಕೇರಿಗೆ ಸುತ್ತು ಬರತೊಡಗಿತು. ಅಲ್ಲಿನ ಮನೆಗಳಿಗೆ ಸುತ್ತುಬಂದು ಕರಿಯನಿರುವ ಮನೆಯ ಮಗ್ಗುಲಲ್ಲೇ ಹಾಯುವಾಗ, ಕರಿಯನಿಗೆ, ಸ್ಪಷ್ಟವಾಗಿ ಅದರ ವಾಸನೆ ಹೊಡೆಯಿತು. ಆತ ಕಣ್ಣುಜ್ಜಿಕೊಂಡ. ತೋಟಿಕೋವಿಯನ್ನು ಹಿಡಿದು ಬಾಗಿಲ ತಡಿಕೆಯ ಎಡೆಯಿಂದ ನೋಡತೊಡಗಿದ. ಸ್ಪಷ್ಟವಾದ ನೋಟ ಕಾಣಸಿಗದೆ, ತಡಿಕೆಯನ್ನು ಸ್ವಲ್ಪ ಸರಿಸಿ, ಮುಖವನ್ನು ಹೊರಕ್ಕೆ ಹಾಕಿದ. ಧೈರ್ಯವಾಗದೆ ಕತ್ತು ಹಿಂದೆಳೆದ. ಈಗಲೋ ಇನ್ನೊಂದು ಗಳಿಗೆಗೋ—ಹುಲಿ ಪಂಜರಕ್ಕೆ ಇದಿರಾಗಿ ಬರಲೇಬೇಕು—ಎಂದುಕೊಂಡ. ಉಳಿದವರಿಗೆ

ಸಂಜ್ಞೆಮಾಡಲು ಕೂಗುವ ಎಂದು ಯೋಚನೆ ಮಾಡಿದ. ಆದರೆ ಆ ಕೂಗಿಗೆ ಹುಲಿ ಬೆದರಿದರೆ ಏನು ಗತಿ—ಎಂಬ ಅಂಜಿಕೆಯಾಗಿ ಸುಮ್ಮನಾದ.

ಹುಲಿ ಸಮೀಪಿಸಿದಂತೆ ಕಂಡುಬರಲು ಸಿಂತಲ್ಲಿಂದ ಹಿಂದಕ್ಕೆ ಸರಿದ. ಅದು ಅವನಿರುವ ಮನೆಯನ್ನು ಸುತ್ತಿ, ಪಂಜರವಿಟ್ಟ ಅಂಗಳಕ್ಕೆ ಕಾಲಿರಿಸಿತು. ವಾಸನೆಯಂತು ಕರಿಯನ ಮೂಗಿಗೆ ಇನ್ನಷ್ಟು ಸ್ಪಷ್ಟವಾಗಿ ಬರುತಿತ್ತು. ಒಳಕ್ಕೆ ಕುಳಿತಿರಲಾರ; ತವಕ ಹೆಚ್ಚಿತು; ತಡಿಕೆಯ ಎಡೆಯಿಂದ ಗುರಿ ಹಿಡಿಯುವುದು ಅಷ್ಟು ಸುಲಭವಲ್ಲ. ಕಣ್ಣಿಗೂ, ಲಕ್ಷ್ಯಕ್ಕೂ ತಡಿಕೆಯ ಬಿದಿರ ಕಡ್ಡಿಗಳು ಅಡ್ಡವಾಗುತ್ತವೆ. ಮೊದಲೇ—ಸಾಕಷ್ಟು ದೊಡ್ಡ ಕಂಡಿ ಮಾಡಿರಿಸಿಕೊಳ್ಳಬೇಕಿತ್ತು ಎಂದೆನಿಸಿತು. 'ಏನೇ ಆಗಲಿ, ಹೊರಕ್ಕೆ ಬೀಳುತ್ತೇನೆ' ಎಂದು ತಡಿಕೆಯನ್ನು ತುಸುವೇ ಎಳೆದು ಅದರ ಎಡೆಯಲ್ಲಿ ಕೋವಿ ಹಿಡಿದು ಕುಳಿತ ಹುಲಿ ಕಳ್ಳರಂತೆ ಹೆಜ್ಜೆ ಇಡುತ್ತ, ಮನುಷ್ಯರ ವಾಸನೆ ಬಲ್ಲವರಂತೆ ಆಚೀಚೆ ನೋಡಿತು. ಒಂದು ಕಡೆ ಪಂಜರ, ಇನ್ನೊಂದು ಕಡೆ ಸಮೀಪದ ಮನೆಗಳಿಂದಲೂ ಆ ವಾಸನೆ ಬರುತಿತ್ತು. ಪಂಜರದ ಕಡೆಗೆ ಹೋಗುವ ಬದಲು ಎದುರುಗಡೆಯ ಒಂದು ಮನೆಯ ಕಡೆಗೆ ಮೈ ತಿರುಗಿಸಿಕೊಂಡಿತು. ಆಗ ಬೆಳುದಿಂಗಳಲ್ಲಿ ಹುಲಿಯ ಶರೀರ ಕರಿಯನಿಗೆ ಅಡ್ಡವಾಗಿ ಕಾಣಿಸಿತು. ಉಳಿದವರು ಅದನ್ನು ಕಂಡರೋ ಇಲ್ಲವೊ; ಕಾಳನಿಗೆ ಅದು ಗೊತ್ತಾಯಿತೋ ಇಲ್ಲವೊ; ಕರಿಯ ಮಾತ್ರ ಇದಕ್ಕಿಂತ ಚೆನ್ನಾದ ಅವಕಾಶ ಸಿಗಲಾರದೆಂದು, ಅದರ ತೋಳಿನ ಸಂದಿಗೆ ಗುರಿಯಿಟ್ಟು ಗುಂಡು ಹಾರಿಸಿದ. ಹುಲಿ, ನೆಲ ಬಿರಿಯುವಂಥ ಆರ್ಭಟೆ ಮಾಡಿ, ನೆಟ್ಟಗೆ ಜಿಗಿಯಿತು. ಜಿಗಿದದ್ದು ಎದುರು ಮನೆಯ ತಡಿಕೆಯ ಗೋಡೆಗೆ. ಗೋಡೆಯ ಮೇಲೆರಗಿ ಆವೇಶವನ್ನೆಲ್ಲ ತೋರತೊಡಗಿತು. ಆಗ ಅದರ ಒಳಗಡೆ ಹುಲಿಗಾಗಿ ಕಾದು, ತೂಕಡಿಸುತ್ತಿದ್ದ ಈಡುಗಾರನಿಗೆ ಉಂಟಾದ ಗಾಬರಿ ಅಷ್ಟಿಷ್ಟಲ್ಲ. ಇತ್ತ ಪಂಜರದಲ್ಲಿ ಮಲಗಿದ್ದ ಕಾಳನಿಗೂ ಬಂದಿದ್ದ ತೂಕಡಿಕೆ ಒಮ್ಮೆಗೆ ಕತ್ತರಿಸಿ, ಆತನೂ ಗಾಬರಿಯಿಂದ ಕಿರುಚಿದ. ಮೂರನೆಯ ಮನೆಯಲ್ಲಿದ್ದ ಈಡುಗಾರ ಗಾಬರಿಗೊಂಡು, ಮನೆಯಿಂದ ಹೊರಗೆ ಬರಲಾರ. ಹುಲಿಗೂ ಅವನಿಗೂ ನಡುವೆ ಪಂಜರ ಅಡ್ಡವಾದುದರಿಂದ, ಆತ ಗುರಿಯನ್ನೂ ಹಿಡಿಯಲಾರ. ಕರಿಯ ಅಷ್ಟಕ್ಕೇ ಕುಳಿತಿರಲಾರದೆ ಕೋವಿಗೆ

ಇನ್ನೊಂದು ಈಡು ತುಂಬಿಸಿಕೊಂಡು, ಅಂಗಳಕ್ಕೆ ಬಂದ. ಅಲ್ಲಿಂದಲೇ ಗುಂಡು ಹೊಡೆದರೆ ಮನೆಯ ಒಳಗಿದ್ದವನಿಗೆ ತಾಗೀತಲ್ಲ—ಎಂಬ ಅನುಮಾನವಾಯಿತು. ಮನೆಯನ್ನು ಸುತ್ತಿ, ಈಚೆಗೆ ಬಂದು, ನಿಮಿಷದಲ್ಲಿ ಸಮನಾದ ತಾವಿಗೆ ಸರಿದು ನಿಂತು ಗುಂಡು ಹಾರಿಸಿದ. ಈ ಗುಂಡು ಮೊದಲಿನಂತೆ ಸಫಲವಾಯಿತು. ತಡಿಕೆಯ ಗೋಡೆಯನ್ನು ಮುರಿಯುತ್ತಿದ್ದ ಹುಲಿ, ಉರುಳಿ ನೆಲಕ್ಕೆ ಬಿದ್ದಿತು. ಅದನ್ನು ಕಂಡು ಕರಿಯ "ಹುಲಿ ಬಿದ್ದಿದೆ ಬನ್ನಿ" ಎಂದು ಕೂಗಿದ ಮೇಲೆಯೇ, ಒಬ್ಬ ಕೋವಿ ಹಿಡಿದುಕೊಂಡು ಬಂದ. ಮನೆಯೊಳಗೆ ಕುಳಿತ ಆಳು, ಹುಲಿ ಬಿದ್ದರೂ ಹೊರಗೆ ಬರುವ ಸಾಹಸ ಪಡಲಿಲ್ಲ. ಕಾಳ ಪಂಜರದಿಂದ "ಏನಾಯಿತು, ಏನಾಯಿತು, ಸತ್ತಿತೇ" ಎಂದು ಕೂಗಿ ಕೇಳಿದ. ಕಾಳನನ್ನು ಪಂಜರದಿಂದ ಪಾರುಮಾಡಿ, ಮೂವರೂ ಬಿದ್ದ ಹುಲಿಯನ್ನು ಸಮಿಾಪಿಸಿದರು. 'ಅದು ಸತ್ತಿದೆ' ಎಂದು ಅವರೆಲ್ಲ ಒದರಿದ ಮೇಲೆ ಮನೆಯ ಒಳಗಿದ್ದ ಈಡುಗಾರ ಹೊರಕ್ಕೆ ಬಂದ. ಅಂತು ಕರಿಯನ ಸುದೈವದಿಂದ ಬೇಟೆಯ ಯಶಸ್ಸು ಅವನಿಗೆ ದೊರೆಯಿತು. ಅವನ ಹೊದಲನೆಯ ಗುಂಡಿನ ಸದ್ದು ಕೇಳಿದ ಮೇಲೆಯೇ ಉಳಿದವರಿಗೆ ಎಚ್ಚರವಾದದ್ದು. ಕಾಳ ಸಹ ಹುಲಿಯ ಘೋರ ಮುಖವನ್ನು ಸ್ಮರಿಸಿಕೊಂಡು, ಅದು ನಿಜವಾಗಿ ಬರುವಾಗ ನಿದ್ದೆಹೋಗಿದ್ದ. ಅಂತು ತಮ್ಮ ಕೆಲಸ ಸಾರ್ಥಕವಾಯಿತಲ್ಲ—ಎಂಬ ಹಿಗ್ಗಿನ ಮಾತುಕತೆಗಳಲ್ಲಿ ಅವರು ಕುಣಿದಾಡಿದರು. ಬೆಳಗಾದ ಮೇಲೆ ಹುಲಿಯ ಶವವನ್ನು ಪರೀಕ್ಷೆ ಮಾಡಿದರು. ಅದರ ಹಿಂಗಾಲೊಂದು ಮುರಿದು ತೂಗುತಿತ್ತು. ಬೆನ್ನಿಗೆ ಎರಡನೆಯ ಏಟು ಬಿದ್ದಿತ್ತು. ಆ ಗುಂಡು ಹುಲಿಯ ಮೈಯನ್ನು ದಾಟಿ, ಮನೆಯ ತಡಿಕೆಗಳನ್ನು ದಾಟಿ, ಒಳಗಿನ ಗೋಡೆಗೇನೆ ಗಾಯ ಮಾಡಿತ್ತು. ವಿಟ್ಟಲದ ಈಡುಗಾರರು "ಬೇಟೆಗಾರ ಎಂದರೆ ನೀನೆ" ಎಂದು ಕರಿಯನ ಬೆನ್ನು ಚಪ್ಪರಿಸಿದರು.

ಹುಲಿಯನ್ನು ಕೊಂದುದಾಯಿತು. ಇನ್ನು ಕರಿಯನಿಗೆ ನಿಮಿಷವೂ ಅಲ್ಲಿರುವ ಮನಸ್ಸಿಲ್ಲ. ಅವನ ಮನಸ್ಸೆಲ್ಲ 'ಕೆಂಚ'ನ ಕಡೆಗೆ ನಟ್ಟಿತ್ತು. "ಕಾಳ, ನೀನು ಹಿರಿ ಮಲೆಗೆ ಹೋಗಿ ಸುದ್ದಿ ಕೊಡು. ಜನ ಬರಲಿ. ನಾನು ಇವರೊಂದಿಗೆ ಕುಕ್ಕರಳ್ಳಿಗೆ ಹೋಗುತ್ತೇನೆ. ಇನ್ನು ನನ್ನ ಕೆಲಸವಾಯಿತು"

ಎಂದ. "ಕೇರಿಯವರನ್ನು ಕರೆದು ತರುವ ತನಕ ಅಲ್ಲಿಯೇ ಇರು" ಎಂದು ಕಾಳ ಅವನನ್ನು ಎಷ್ಟು ಬಲವಂತ ಮಾಡಿದರೂ ಕರಿಯ ಉಳಿಯಲಿಲ್ಲ. "ಮಹಾರಾಯ, ನಾಸಿಲ್ಲಿ ಎರಡು ದಿನ ಕಳೆದದ್ದಕ್ಕೆ ನನ್ನ ಕೆಂಚನಿಗೆ ಎಷ್ಟು ಬೇಸರವೋ" ಎಂದು ಮಲೆ ಬಿಟ್ಟು ಹೊರಟ. ಅವನ ಎದೆ ಅತಿ ಸಂತೋಷ ದಿಂದ ತುಂಬಿತು. ತನ್ನ ಆನೆಯನ್ನು ಕಾಣುವ ತನಕ, ಅವನ ಆತುರ ಅಷ್ಟಿಷ್ಟಲ್ಲ. ಕುಕ್ಕರಳ್ಳಿ ಸೇರಿ ಬಟ್ಯನಿಗೆ ತಾನು ಬಂದ ಸುದ್ದಿ ತಿಳಿಸುವ ಮೊದಲೇ, ಕೆಂಚನಿದ್ದಲ್ಲಿಗೆ ಹೋಗಿ "ಬಂದಿದ್ದೇನೆ ಮಹಾರಾಯ, ಸಿಟ್ಟಾ ದೆಯಾ? ಬರಿದೆ ಬಂದಿಲ್ಲ, ಹುಲಿ ಕೊಂದು ಬಂದಿದ್ದೇನೆ" ಎಂದು ಅದರ ಬೆನ್ನು ಚಪ್ಪರಿಸಿ ಮಾತನಾಡಿಸಿದ.

ಬಹುಕಾಲದ ಬಳಿಕ ಕರಿಯನ ಗೆಳೆತನ ದೊರಕಿದ್ದು ಕಾಳನಿಗೆ. ಇಬ್ಬರೂ ತಮ್ಮ ಬಾಲ್ಯವನ್ನು ಜತೆಯಲ್ಲಿ ಆಟವಾಡಿ, ಬೇಟೆಯಾಡಿ ಕಳೆ ದವರು. ಹಲವು ಬಾರಿ ತಮ್ಮ ಭವಿಷ್ಯವನ್ನು ಕುರಿತು ಜತೆಯಲ್ಲೇ ನಲಿ ದವರು. ಮಲೆರಾಯನ ಗುಡಿಯಲ್ಲಿ ಮರುಳಾಟಿಕೆಯ ಪೂಜೆ ಮಾಡಿದವರು. ಇತ್ತೀಚೆಗೆ ಕರಿಯನನ್ನು ಆತ ಕಾಣದೆ ಮೂರು ವರ್ಷವಾಗಿತ್ತು. ಅನಂತರ ಕಂಡದ್ದು—ಅವನು ಮೂಲೆಗುಡ್ಡನ ಜಾತ್ರೆಗೆ ಬಂದಾಗ. ಅವನನ್ನೂ ಅವನ ಆನೆಯನ್ನೂ ಕಂಡಾಗ, ಅವನ ಹಿಂದೆಯೇ ಹೋಗೋಣ ಎಂಬ ಹುಚ್ಚು ಕಾಳನಿಗೆ ಉಂಟಾಗಿತ್ತು. ಅನಂತರ ಅವನನ್ನು ಕಂಡದ್ದು— ಕೇರಿಗೆ ಈ ಆಪತ್ತು ಸಂಭವಿಸಿದ ಮೇಲೆ. ಕುಕ್ಕರಳ್ಳಿಗೆ ಹೋಗಿ ಅವನನ್ನು ಕರತಂದು, ಹುಲಿಯ ಶಿಕಾರಿಗೆ ನೆರವಾದವನು ಕಾಳನೇ. ಆ ನೆನಪುಗಳೆಲ್ಲ ಉಕ್ಕಿ, ಕಾಳನಿಗೆ ಕರಿಯನನ್ನು ಬಿಟ್ಟು ಉಳಿದುಕೊಳ್ಳಲು ಇಷ್ಟಿಷ್ಟೂ ಸಮಾಧಾನವಿಲ್ಲ. ಕೇರಿ ಸುರಕ್ಷಿತವಾದುದರಿಂದ ಉಂಟಾದ ಸಂತೋಷ ವನ್ನು ಮರೆಸುವಂತಿತ್ತು ಅವನಿಗಾದ ವಿರಹದ ನೋವು. ಹತ್ತು ಹತ್ತು ಬಾರಿ "ಕರಿಯಣ್ಣ, ಹೋಗಬೇಡ. ನಾಲ್ಕು ದಿನ ಇದ್ದಾದರೂ ಹೋಗು" ಎಂದು ಆತ ಬೇಡಿದರೂ, ಪ್ರಯೋಜನವಾಗಲಿಲ್ಲ. ಕರಿಯನನ್ನು ಬೀಳ್ಕೊಟ್ಟು, ಕಾಳ ಭಾರವಾದ ಎದೆಯಿಂದಲೇ ಹೊರಟ. ದಾರಿಯಲ್ಲಿ ತನ್ನ ಜನಗಳಿಗೆ ಸಂತೋಷದ ಸುದ್ದಿ ಕೊಡುತ್ತೇನೆಂಬ ಹಿಗ್ಗು ಮನದಲ್ಲಿ ತುಂಬಿದ್ದುದರಿಂದ, ಕಾಲುಗಳು ಲಘುವಾಗಿ ದಾರಿಯನ್ನು ಸಾಗಿದುವು.

ಹಿರಿ ಮಲೆ ಬರುವ ತನಕ ಆತಗೆ ಹಳ್ಳ ದಾಟಿದ್ದೂ ಗೊತ್ತಿಲ್ಲ; ಗುಡ್ಡ ಹತ್ತಿ ಇಳಿದದ್ದೂ ಗೊತ್ತಿಲ್ಲ. ಅಲ್ಲಿಗೆ ಹೋಗಿ ಬೂದನಿಗೆ, ಉಳಿದವರಿಗೆ ಆ ಸಮಾಚಾರ ಕೊಡುವ ತನಕ ಅವನಿಗೆ ತಾಳ್ಮೆಯಿರಲಿಲ್ಲ. ಸುದ್ದಿ ಹೇಳಲು ಬಾಯಿ ತೊದಲುತಿತ್ತು. ಉತ್ಸಾಹದಿಂದ "ಕರಿಯಣ್ಣ ಕೊಂದದ್ದು; ತಮ್ಮ ಕೇರಿಯವರಿಗೆ ಬೇಡವಾದರೂ ಮಲೆಯನ್ನು ಉಳಿಸಿದವನು ಕರಿಯಣ್ಣನೇ" ಎಂಬ ಸುದ್ದಿ ಕೊಟ್ಟ. ಸುದ್ದಿ ಕೇಳಿ, ಕೇರಿಯ ಜನರು ಒಟ್ಟುಗೂಡಿದರು. ಆ ಜನಗಳಲ್ಲಿ ತುಕ್ರನಿದ್ದುದನ್ನು ಕಂಡು ಕಾಳನಿಗಾದ ಆಶ್ಚರ್ಯ ಅಷ್ಟಿಷ್ಟಲ್ಲ. "ನಿನ್ನೆ ಆಸೆಯನ್ನೇ ಬಿಟ್ಟಿದ್ದೆವು ನಾವು. ಹೇಗೆ ಬಂದೆಯಪ್ಪ" ಎಂದ ಕಾಳ. ತುಕ್ರ ತನ್ನ ಅನುಭವ ಹೇಳಿದ. ಅದು ವಿಶೇಷದ ಅನುಭವವೇನಲ್ಲ. ಧನಿಗಳು ತೀರಿಕೊಂಡ ಬಳಿಕ ಆತ ಮಲೆಗೆ ಮರಳಿದ್ದು, ಕೇರಿಯಲ್ಲಿ ಯಾರನ್ನೂ ಕಾಣದೆ ಭೀತನಾದದ್ದು, ತಾಸು ಎರಡು ತಾಸು ಅವರನ್ನು ಕೂಗಿ ಕರೆದು ಕುಮರಿಗೆ ಹೋಗಿ, ಅಲ್ಲಿಯೂ ಯಾರನ್ನೂ ಕಾಣದೆ, ತಿರುಗಿ ಕೇರಿಗೆ ಬಂದು 'ಏನೋ ಆಗಿರಬೇಕು—ನಮ್ಮ ಜನಕ್ಕೆ' ಎಂಬ ಯೋಚನೆ ಹೊತ್ತು ಹಿರಿ ಮಲೆಗೆ ಓಡಿದ್ದು; ಅಲ್ಲಿ ನಡೆದ ವೃತ್ತಾಂತ ತಿಳಿದದ್ದು—ಇವುಗಳನ್ನೆಲ್ಲ ಹೇಳಿದ.

ಆ ದಿನವೇ ತಮ್ಮ ಮಲೆಗೆ ಹೊರಟರು, ಕೇರಿಯ ಜನ. ಈಗಾಗಲೇ ಎಂಟು ದಿನಗಳ ಕೆಲಸ ಕಜೆಗೆಟ್ಟಿತಲ್ಲ-ಎಂದು ಪ್ರತಿಯೊಬ್ಬರಿಗೂ ಚಿಂತೆಯೇ. ಜತೆಗೆ ಕಳೆದುಕೊಂಡವರ ಸಲುವಾಗಿ ದುಃಖ. ಅಲ್ಲದೆ ಆ ವರ್ಷದ ದೈವದ ಕೋಲ ಇನ್ನೂ ನಡೆಯಬೇಕಷ್ಟೆ. ಅದಷ್ಟು ತೀವ್ರ ಅದನ್ನು ನಡೆಯಿಸದೆ ಹೋದರೆ ಇನ್ನೊಂದೇನಾದರೂ ಅಪಾಯ ಬಂದೀತೆಂಬ ಭೀತಿ—ಅವರಿಗೆ ಇದ್ದೇ ಇತ್ತು. ಕೋಲ ಮಾಡಿಸಲು ಉಂಟಾದ ಮುಖ್ಯ ಅಡಚಣೆ ಎಂದರೆ, ದೈವದ ಪಾತ್ರಿ ಬಿರುಮ ಸತ್ತದ್ದು. ಬರಿದೆ ಸತ್ತುದಲ್ಲ. ಆ ಕೆಟ್ಟ ಹುಲಿಯ ಬಾಯಿಗೇನೆ ಬಿದ್ದು ಸತ್ತದ್ದು. ಅವನ ಹೆಣವನ್ನು ಕಾಡಲ್ಲೇ ಬಿಟ್ಟು, ಅಂಜಿಕೆಯಿಂದ ಓಡಿಬಂದು, ಶವವಿಲ್ಲದೆ ಅವನ ಉತ್ತರಕ್ರಿಯೆ ನಡೆಸಿದ್ದು. ಅದೂ ಒಂದು ತಪ್ಪು ಕೆಲಸವೇ. ಆದರೂ ದೈವಕ್ಕೆ ಸಲುವ ಮನ್ನಣೆಯನ್ನು ಸಲಿಸಲೇಬೇಕಲ್ಲ. ಈ ಎಲ್ಲ ತಪ್ಪುಗಳಿಗಾಗಿ ಕ್ಷಮೆ ಕೇಳಬೇಕಲ್ಲ. ಬಿರುಮನ ಮಗ ಪ್ರಾಯದ ಹುಡುಗನಿದ್ದಾನೆ. ತಂದೆಯ ವೃತ್ತಿ ಅವನಿಗೆ ತಿಳಿಯಲಿ,

ತಿಳಿಯದಿರಲಿ. ಆತ ಅದನ್ನು ನಡೆಯಿಸಬೇಕು. ಕಿರಿ ಮಲೆಯವರು, ಹಿರಿ ಮಲೆಯನ್ನು ಬಿಡುವ ಮುಂಚೆ ಕೋಲದ ದಿನ ಬೇಗನೆ ಗೊತ್ತುಮಾಡಿ ತಮಗೆ ತಿಳಿಸುವಂತೆ ಕೇಳಿಕೊಂಡು ಹೊರಟರು.

ಕರಿಯ, ಕುಕ್ಕರಳ್ಳಿಗೆ ಮರಳಿದ ಮೇಲೆ, ತಿಮ್ಮನಿಗೆ ಮಾವನ ಮನೆಗೆ ಹೋಗುವ ಆತುರವಾಯಿತು. ಹಳೆಯ ಧನಿಗಳು ತೀರಿಕೊಂಡ ಸುದ್ದಿ ಗೊತ್ತಾಗಿದ್ದುದರಿಂದ ಈಗಲೇ ಹೋಗುವುದು ಉಚಿತವೆಂದು ಯೋಚಿಸಿ, ಸಕುಟುಂಬಿಯಾಗಿ ಮಲೆಗೆ ಹೊರಟ. ಅಲ್ಲಿಂದ ಕದಲಲಾರದವ ಕರಿಯ. ತಿಮ್ಮ ಹೊರಡುತ್ತ ಕರಿಯನಿಗೆಂದ "ಅಣ್ಣ, ಬೇಗ ಬರುತ್ತೇನೆ. ಮಳೆ ಬೀಳುವುದರೊಳಗೇ ಬರುತ್ತೇನೆ. ಮುಂದಿನ ಯೋಚನೆ ಏನೂ ಇರಲಿ— ಈ ವರ್ಷ ಮಾತ್ರ ಮಲೆಗೆ ನಾವು ಹೋಗುವುದು ಬೇಡ. ಕುಕ್ಕರಳ್ಳಿಯಲ್ಲೇ ಏನಾದರೂ ಮಾಡಿಕೊಂಡಿರುವ" ಎಂದಂದು ಹೋದ ಹಾಗೆಂದು ಹೋಗಿದ್ದರೂ, ಅವನ ಮನಸ್ಸೆಲ್ಲ ತನ್ನ ಜನಗಳನ್ನು ಬಿಟ್ಟುದರಿಂದ ಖಿನ್ನವಾಗಿಯೇ ಇತ್ತು. ಹೇಗಾದರೂ ಮಾಡಿ ಅವರನ್ನು ತಾನು ಕೂಡಿಕೊಳ್ಳಬೇಕೆಂಬ ಆಸೆಯಾಗಿತ್ತು. ಕಿರಿ ಮಲೆಯಲ್ಲಿ ತಮಗೆ ಆಶ್ರಯ ದೊರೆಯದಿದ್ದರೆ, ಮಾವ ಇರುವ ಊರಲ್ಲಿ ತೊಂದರೆ, ತೊಡಕಿಲ್ಲ ಎಂದು ತಿಳಿದುಕೊಂಡಿದ್ದ. ತಿಮ್ಮ ಹೋದಮೇಲೆ, ಕರಿಯ ತೀರ ಒಂಟಿಯಾದ. ತನ್ನ ಗಂಜಿಯನ್ನು ತಾನು ಬೇಯಿಸಿಕೊಳ್ಳಬೇಕು, ತಿಮ್ಮ ಎಂದು ಬಂದಾನೆಂದು ಗಳಿಗೆ ಕಾಯುತ್ತಿರಬೇಕು. ಅಲ್ಲದೆ, ತಿಮ್ಮನೆಂದ ಮಾತುಗಳನ್ನು ಕೇಳಿದರೆ, ಮರಳಿ ಕುಕ್ಕರಳ್ಳಿಗೆ ಆತ ಬಂದಾನೆಯೇ—ಎಂಬ ಅನುಮಾನವೂ ಅವನಿಗೆ. ಹಾಗೆಯೇ ಹೊತ್ತು ಕಳೆಯಲಾರದ್ದಕ್ಕೆ ಆತ, ಇದೇ ಸುಸಂಧಿ ಎಂದುಕೊಂಡು, ಆನೆಯ ಮರಿಯನ್ನು ಕರೆದುಕೊಂಡು, ಜತೆಗೆ ಬಟ್ಯಗೌಡನನ್ನು ಕರೆದುಕೊಂಡು ಸುಬ್ರಹ್ಮಣ್ಯದ ಹಾದಿ ಹಿಡಿದ. ಎಳೆತನದಲ್ಲಿ ಅಜ್ಜನ ಜತೆಗೆ ನಡೆದುಹೋದ ನೆನಪು ಅವನಿಗೆ ದಾರಿಯುದ್ದಕ್ಕೂ ಮರುಕಳಿಸಿದುವು. ಸುಬ್ರಹ್ಮಣ್ಯದಲ್ಲಿ ಎರಡು ದಿನ ಕಾಲ ಇದ್ದ. ಅಲ್ಲಿ ನದಿಯ ಸ್ನಾನವಾಯಿತು; ದೇವರ ಪೂಜೆ ನೋಡಿದ್ದಾಯಿತು. ತನ್ನ ಆನೆಯನ್ನು ಅಲ್ಲಿನ ಆನೆಗಳ ಜತೆಗೆ, ದೇವರ ಗುಡಿಗೆ ಸುತ್ತುವರಿಸಿದ್ದೂ ಆಯಿತು. ಅಲ್ಲಿ "ಆನೆ ನಿನ್ನದೇ?" ಎಂದು ಕೇಳುವವರು ಪ್ರತಿಯೊಬ್ಬರು. 'ನನ್ನದು, ನನ್ನದು' ಎಂದು ಆತನ ಮನ

ಹೇಳುತ್ತಿದ್ದರೂ, 'ತಾನಾಗಿ ಸಿಕ್ಕಿದ ಆನೆಯನ್ನು ತಾನೆಷ್ಟು ದಿನ ಸಾಕಿಯೇನು? ದೊಡ್ಡದಾದ ಮೇಲೂ ಅದನ್ನು ಇರಿಸಿಕೊಳ್ಳಲು ಬಂದೀತೇ?' ಎಂಬ ಸಂಶಯ ಇದ್ದೇ ಇತ್ತು. ಆತನೆಂದ "ಮಲೆಯಲ್ಲಿ ಸಿಕ್ಕಿದ ಆನೆ. ನನ್ನದೆಂದರೇನು? ಸುಬ್ರಹ್ಮಣ್ಯದೇವರದ್ದು. ಅವನೇ ಕೊಟ್ಟದ್ದು. ಇರಿಸಿಕೊಳ್ಳುವಷ್ಟು ದಿನ ಇರಿಸಿಕೊಳುತ್ತೇನೆ. ಮತ್ತೆ ಇಲ್ಲಿಗೇ ತಂದುಬಿಡುತ್ತೇನೆ. ಇನ್ನೂ ಎಳೆಯ ಮರಿ. ಬುದ್ಧಿ ಬಂದಿಲ್ಲ, ಬಂದಮೇಲೆ ಅದು ದೇವರಿಗೇ ಸಲುವುದು ನ್ಯಾಯ" ಎಂದ. ಅದೆಷ್ಟು ವಿರಕ್ತಿಯ ಮಾತೋ, ಅಷ್ಟು ವಿನಯದ ಮಾತೂ ಆಗಿತ್ತು. ದೇವರ ಗುಡಿಯ ಮುಂದೆ ನಲಿದಾಗ ಏನೋ ಒಂದು ಬಗೆಯ ಭಕ್ತಿ ಮನದಲ್ಲಿ ಮೂಡಿ ಆ ಮಾತನ್ನಾಡಿಸಿದುದು ನಿಜ. ಬಟ್ಯಗೌಡ ಕರಿಯನ ಈ ಮಾತನ್ನು ಕೇಳಿ "ಕರಿಯಣ್ಣ, ನೀನೆಂದ ಮಾತು ಸಾವಿರ ಪಾಲಿಗೂ ನಿಜ. ನೋಡು, ಈ ಲೋಕದಲ್ಲಿ ನಮ್ಮದು ನಮ್ಮದು ಎಂಬುದೇನಿಲ್ಲ. ಕೊಡುವುದು, ಕೊಳ್ಳುವುದು ಅವನ ಕೈಯಲ್ಲಿರುವಾಗ ನಮ್ಮ ಆಟ ಏನಿದೆ?" ಎಂದ. ಎರಡು ದಿನ ಕಾಲ ಸುಬ್ರಹ್ಮಣ್ಯದಲ್ಲಿದ್ದು, ಮೂರನೆಯ ದಿನಕ್ಕೆ ಅವರಿಬ್ಬರೂ ಹರ್ಷಚಿತ್ತರಾಗಿ ತಮ್ಮ ಊರಿಗೆ ಹೊರಟರು. ದೇವರ ಗುಡಿಯನ್ನು ಕಂಡುಬಂದ ಮೇಲೆ ಕರಿಯನ ಎದೆ ಎಷ್ಟೋ ಉಲ್ಲಸಿತವಾಗಿತ್ತು. ಹಗುರವಾದ ಮನಸ್ಸಿನಿಂದ ಆತ ಯಾತ್ರೆ ಮುಗಿಸಿಕೊಂಡು ಕುಕ್ಕರಳ್ಳಿಯನ್ನು ಸೇರಿದ.

ಹೀಗೆ ಮರಳಿ ಬಂದು ಒಂದು ವಾರ ಕಳೆಯಿತು. ಅಷ್ಟಾದರೂ ಹಿರಿಮಲೆಗೆ ಹೋಗಿದ್ದ ತಿಮ್ಮ ಮರಳಿ ಬಂದಿರಲಿಲ್ಲ. ಕರಿಯ ತನ್ನ ಬಿಡುವೇಳೆಗಳಲ್ಲಿ, ಬಟ್ಯನ ಬೇಸಾಯದ ಹಲವಾರು ಕೆಲಸಗಳಲ್ಲಿ ನೆರವಾಗತೊಡಗಿದ. ಬಿಡುವಿದ್ದಾಗ ಆನೆಯ ಚಾಕರಿ ಇದ್ದೇ ಇದೆ. ಕೊಟ್ಟಷ್ಟು ತಿನ್ನುವ ಆನೆಮರಿಯದು; ಮುದ್ದಿಸಿದಷ್ಟು ಒಲಿಯುವ ಆನೆಮರಿ. ಒಂದು ದಿನ ಬೆಳಗ್ಗೆ ತೋಡಿನಲ್ಲಿ ಆ ಮರಿಯನ್ನು ನಿಲ್ಲಿಸಿಕೊಂಡು, ಅದರ ಮೈ ಉಜ್ಜುತ್ತಿದ್ದನು. ಆಗ 'ಅಣ್ಣಾ' ಎಂದು ಯಾರೋ ಕರೆದು ಕೂಗಿದ ಧ್ವನಿ ಕೇಳಿತು. ಬಂದವರು ಬೂದ ಮತ್ತು ತುಕ್ರ. ತುಕ್ರ ಹೆಚ್ಚಿಗೆ ಮಾತನಾಡಲಿಲ್ಲ. ಬೂದ ಮಾತ್ರ ಕರಿಯನನ್ನು ಕಂಡವನೇ "ಏನಣ್ಣ, ಎಷ್ಟು ದಿನ ನಮ್ಮನ್ನು ಬಿಟ್ಟಿರಬೇಕೆಂದು ಮಾಡಿದ್ದೀಯೆ" ಎಂದು ಮಾತಿಗೆ ಪ್ರಾರಂಭಿಸಿದ. ಅವನ

ಕಣ್ಣಿಂದ ಪ್ರೇಮ, ಕೃತಜ್ಞತೆಗಳ ಕಂಬನಿ ಮಿಡಿಯುತಿತ್ತು. "ನೋಡು, ಸಣ್ಣ ಧನಿಗಳು ಮಲೆಗೆ ಬಂದಿದ್ದಾರೆ. ದೊಡ್ಡ ಧನಿಗಳ ಕಾಲವಾಯಿತು. ನಾಳೆಗೆ ಮೂರು ದಿನಕ್ಕೆ ದೈವದ ಕೋಲವಿದೆ. ನಿನ್ನನ್ನು ಕರೆದುತರಬೇಕು, ಹುಲಿ ಕೊಂದವ ಎಂಥವ ಎಂದು ನೋಡಬೇಕು—ಎಂದು ಧನಿಗಳು ಹೇಳಿದ್ದಾರೆ; ಅಲ್ಲ, ಬರುವುದಿಲ್ಲ ಎನ್ನಬೇಡ" ಎಂದು ಪಟ್ಟುಹಿಡಿದು ಕುಳಿತ. ತುಕ್ರ ತನ್ನೆಲ್ಲ ಹಳೆಯ ದ್ವೇಷಗಳನ್ನು ಮರೆತವನಾಗಿ "ಇಲ್ಲ, ಕೂಡದು—ಎನ್ನಬಾರದು. ನಿನ್ನ ಆನೆಮರಿಯನ್ನು ಸಾಕುವುದಲ್ಲವೆ, ಕೂಡಿದಷ್ಟು ಸಾಕುವ. ಅದಕ್ಕಾಗಿ ಒಂದು ಎರಡು ಎಕ್ರೆ ಕುಮರಿ ಜಾಸ್ತಿ ಬೆಳೆಸಿದರಾಯಿತಲ್ಲ" ಎಂದ. 'ಕೇರಿಯ ಜನಗಳು ತಿರುಗಿ ತನ್ನನ್ನೇ ಆಶಿಸುತ್ತಿದ್ದಾರೆ' ಎಂಬ ಅಭಿಪ್ರಾಯ ಕರಿಯನಲ್ಲಿ ಮೂಡಿತು. ಆದರೂ 'ಹಾಂ, ಹೂಂ' ಅನ್ನಲಾರ. ತನ್ನ ಗುಡಿಸಲಿಗೆ, ಬಂದ ಸ್ನೇಹಿತರನ್ನು ಕರೆದುತಂದ. ಅವರಿಗೆ ಗಂಜಿ ಬೇಯಿಸಿ ಬಡಿಸಿದ. ಆಗ ಬೂದ "ನೀನು ಮಲೆಗೆ ಬರುತ್ತೀ ಎಂದು ಮಾತು ಕೊಟ್ಟರೆ, ಊಟ ಮಾಡುತ್ತೇವೆ; ಇಲ್ಲವಾದರೆ ಇಲ್ಲ" ಎಂದು ಪಣ ತೊಟ್ಟ. ಅದಕ್ಕೆ ಕರಿಯ ಉಪಾಯಗಾಣದೆ "ಆಯಿತಪ್ಪ, ಬರುತ್ತೇನೆ. ಅಲ್ಲೇ ನಿಲ್ಲಬೇಕು, ಗಿಲ್ಲಬೇಕು—ಎಂದು ಒತ್ತಾಯಮಾಡಬಾರದು ನೀವು. ದೈವದ ಕೋಲಕ್ಕೆ ನನಗೆ ಆಮಂತ್ರಣ ಬೇಕೇ? ದೈವದ ಕೃಪೆಯಿಲ್ಲದೆ ನಾನು ಆ ದಿನ ಹುಲಿ ಕೊಲ್ಲುವುದಕ್ಕಿತ್ತೇ?" ಎಂದು ಅವರನ್ನು ಸಮಾಧಾನ ಪಡಿಸಿದ. ಅನಂತರ ಗಂಜಿ ಉಂಡು ಅವರೊಡನೆ ಹಿರಿಮಲೆಗೆ ಹೊರಟ. ಒಬ್ಬನೇ ಹೋಗಲಾರದ್ದಕ್ಕೆ ಕೆಂಚನನ್ನು ಕರೆದುಕೊಂಡು ಹೊರಟ. ಕೆಂಚನಿಗೆ ಆ ಸಂಜೆಯ ತನಕ ಮಲೆಯ ಮೆರವಣಿಗೆಯಾಯಿತು. ಅವರು ಕೇರಿಯನ್ನು ಸೇರಿದ್ದೇ ತಡ, ಅವರ ಸುತ್ತು ಜನ ಕಲೆತರು. ರಾಮಚಂದ್ರಯ್ಯ ಕರಿಯನನ್ನು ಮನೆಗೆ ಕರೆಯಿಸಿಕೊಂಡರು. ವೀಳೆಯ ಕೊಟ್ಟು, ಉಪಚಾರದ ಮಾತುಗಳನ್ನಾಡುತ್ತ, ಬಂಟ್ರಪ್ಪ, ತಾನೂ ಸೇರಿ ಹುಲಿಗೆ ಗಾಯಮಾಡಿದ ಮೂರ್ಖತನಕ್ಕಾಗಿ ವ್ಯಥೆಯನ್ನು ವ್ಯಕ್ತಪಡಿಸಿದರು. ಅನಂತರ ಮೆಲ್ಲಗೆ "ಕರಿಯಣ್ಣ, ನೀನು ಹಳೆಯ ನೆನಪುಗಳೇನಿದ್ದರೂ ಅದರ ಕಹಿಯಿಂದ ಮಲೆ ಬಿಡುವುದು ಚೆಂದವಲ್ಲ. ಮಲೆ ಯಾರದ್ದೆಂದು ತಿಳಿಯುತ್ತೀಯಾ? ನಿಮ್ಮದೇ. ಅನಾದಿ ಕಾಲದಿಂದ ಇಲ್ಲಿಯೇ ಬೆಳೆದವರು ನೀವು. ನಾವೇನೋ

ವ್ಯಾಪಾರಿಗಳ ಹಾಗೆ, ಜೇನು ಹಿಂಡಿ ತಟ್ಟೆ ಬಿಸುಡುವವರ ಹಾಗೆ, ವರ್ಷಕ್ಕೆ ನಾಲ್ಕು ತಿಂಗಳು ಬಂದು ಇದ್ದು ಹೋಗುವವರಲ್ಲವೆ? ನೀನು ಈ ಮಲೆ ಬಿಟ್ಟು ಹೋಗುವುದೆಂದರೇನು? ನಿನ್ನ ಅಜ್ಜ, ಮುತ್ತಜ್ಜ ಇಲ್ಲಿಯೇ ಹುಟ್ಟಿ ಬೆಳೆದವರಲ್ಲವೇ. ಇಲ್ಲೇ ಸತ್ತವರು. ಅವರ ನೆನಪು ನಿನಗೆ ಇರಬೇಡವೇ" ಎಂದು ಉಪದೇಶಿಸಿದರು. ಕರಿಯು "ಅದು ಸರಿಯೆ, ಅದು ಸರಿಯೆ" ಅನ್ನುತ್ತಿದ್ದ ಹೊರತು 'ಇರುತ್ತೇನೆ' ಎಂದು ಹೇಳಲಾರ. ಅವನಿಗೆ ಗೊತ್ತಿತ್ತು—ಒಂದು ಮಲೆಗೆ ಇಬ್ಬಿಬ್ಬರು ಗುರಿಕಾರರು ಇರಲಾರರೆಂದು. ಅಲ್ಲದೆ ತಾನು ಬಿಟ್ಟ ಗುರಿಕಾರಿಕೆಯನ್ನು, ತಿರುಗಿ ತಾನೇ ಬೇಡಬಾರದೆಂದು

ಸಾವು, ನೋವುಗಳ ಭೀತಿಯಿಂದ ಕಗ್ಗತ್ತಲೆ ತುಂಬಿದ ಮಲೆಯ ಜೀವನದಲ್ಲಿ, ಕಲ್ಕುಡನ ನೇಮ ಹುಣ್ಣಿಮೆಯಂತೆ ಸಂತೋಷದ ಬೆಳುದಿಂಗಳನ್ನು ತುಂಬಿತು. ಕೇರಿಯವರೆಲ್ಲರು ತುಂಬ ಉತ್ಸಾಹಿಗಳಾದರು. ಕರಿಯುನೊಬ್ಬನೇ ಮುಂದಿನ ದಾರಿಗಾಣದೆ ತೆಪ್ಪಗೆ ಕುಳಿತವ. ಕಲ್ಕುಡನ ತಾವಿನ ಬಳಿ, ಆ ಬೆಳಿಗ್ಗೆ ಎಲ್ಲರಂತೆ ಅವನೂ ಕೋಲ ನೋಡಲು ಹೋಗಿದ್ದ. ಬರಿಗೈಯಿಂದ ಹೋದವ ಅವನೊಬ್ಬನೇ. ಮನೆ ಮಠವಿಲ್ಲದೆ ಕೋಳಿ, ಹಂದಿಗಳನ್ನು ಅವನೆಲ್ಲಿಂದ ಒಯ್ಯಬೇಕು? ಎಲ್ಲರಂತೆ ಗುಡಿಯ ಮುಂದೆ ವಾದ್ಯವಾಗುತ್ತಿದ್ದಾಗ, ಆತ ದೂರದಲ್ಲಿ ಕೈಕಟ್ಟಿ ನೋಡುತ್ತಿದ್ದ. ರಾಮಚಂದ್ರಯ್ಯನವರ ಪಾಲಿಗೆ, ಮಲೆಯ ಕಲ್ಕುಡನ ಪೂಜೆ ಹೊಸತು. ಬೆಳಗ್ಗೇನೆ ಅವರು ಅಲ್ಲಿಗೆ ಬಂದು ನೋಡಲು ಕುಳಿತಿದ್ದರು. ಏನೇನು ನಡೆಯುತ್ತಿದೆ ಎಂದು ನೋಡುವ ಆತುರ ಅವರಿಗೆ.

ಬಿರುಮ ಪೂಜಾರಿಯ ಮಗ ಚೆನ್ನ, ಪಾತ್ರಿಯ ವೇಷ ತೊಟ್ಟಿದ್ದ, ಪಟ್ಟೆ ಉಟ್ಟಿದ್ದ, ನಡುವಿಗೆ ಉಡಿದಾರ ಹಾಕಿದ್ದ. ತಲೆಗೂದಲು ಕೆದರಿಕೊಂಡು ನಿಂತಿದ್ದ. ಅವನ ಕೈಗೆ ಎರಡೂ ಮಲೆಯ ಗುರಿಕಾರರು ಸೇರಿ ಹೂವನ್ನು ಕೊಟ್ಟರು. ವಾದ್ಯ ಮೊಳಗುತ್ತಲೇ ಆತನ ಮೈ ಕಂಪಿಸ ತೊಡಗಿತು. ಆತ ಅರ್ಭಟಿಸಿದ, ಕೂಗಿದ. ಆದರೆ ರೂಢಿಯ ದೈವದ ನುಡಿಕಟ್ಟುಗಳು, ಅವನ ಅಪ್ಪ ಬಿರುಮನ ಬಾಯಿಯಿಂದ ಬರುತ್ತಿದ್ದಂತೆ ಅವನ ಬಾಯಿಂದ ಸರಾಗವಾಗಿ ಬರಲೊಲ್ಲವು. ಹೀಗಾಗಿ—ಅಲ್ಲಿ ನಿಂತ ಹಿರಿಯರು ಪ್ರಶ್ನೆ ಕೇಳಿಯೇ, ಅವನಿಂದ ಮಾತು ಹೊರಡಿಸಬೇಕಿತ್ತು. ಆ ಭಾಗದಲ್ಲಿ

ಹಿರಿ ಮಲೆಯ ಗುರಿಕಾರ ಬಹು ಬುದ್ಧಿವಂತ. ದೈವವನ್ನು ಸಾಕಷ್ಟು ಹೊಗಳಿದ. ಅದರ ಕೆಚ್ಚು, ಪರಾಕ್ರಮಗಳನ್ನು ಕೊಂಡಾಡಿದ. ಮಲೆಗೆ ಬಂದೊದಗಿದ ವಿಪತ್ತನ್ನು ವಿವರಿಸಿದ. "ಯಾಕೆ ನೀನು ಸಿಟ್ಟಾದೆಯೋ? ಬಡ ಮಕ್ಕಳ ಜೀವ ಯಾಕೆ ತೆಗೆದೆಯೋ? ಅಂತು ಇನ್ನುಮುಂದೆ ನಿನ್ನ ಮಕ್ಕಳನ್ನು ಚೆನ್ನಾಗಿ ನಡೆಸಿಕೊಂಡು ಹೋಗುವ ಭಾರ ನಿನ್ನದು" ಎಂದ. ಅದಕ್ಕೆ ದೈವ "ಹೂಂ, ನೋಡುವ" ಎಂದಿಷ್ಟೇ ಹೇಳಿತು. ಮುಂದೆ ತುಕ್ರನ ಮಾತಿನ ಸರದಿ ಬಂದಿತು. ತುಕ್ರ ತುಂಬ ವಿನಯನಾಗಿ "ನೀನೇನನ್ನುತ್ತೀಯಾ? ಅನ್ನು—ಈ ಮೂರು ವರ್ಷ ನಾನು ನೋಡಿಕೊಂಡೆ ಈ ಮಲೆಯ ಮೇಲ್ತನಿಖೆಯನ್ನು. ನಾನಾಗಿ ಅದನ್ನು ಬಯಸಿದ್ದಲ್ಲ. ಕರಿಯಣ್ಣ ಗುರಿಕಾರಿಕೆ ಬಿಟ್ಟದ್ದರಿಂದ, ಆ ಗುರಿಕಾರಿಕೆ ನನ್ನ ಕೊರಳಿಗೆ ಬಿತ್ತು. ಆದರೆ ನನ್ನ ಯೋಗ್ಯತೆ ಕಡಿಮೆಯಾದದ್ದು. ನಿನಗೆ ಸಿಟ್ಟು ಬಂದಿರಬೇಕು. ಹಳೆಯ ಧನಿಗಳಂತು ತೀರಿಕೊಂಡರು. ನೀನು ಸಿಟ್ಟಿಂದ ಹುಲಿ ರೂಪ ತಾಳಿ, ಕೊಳ್ಳುವ ಬಲಿ ಕೊಂಡೇಬಿಟ್ಟೆ. ನೋಡು, ನನ್ನ ಯಜಮಾನಿಕೆ ಈಗ ನಿನ್ನ ಕೈಮೇಲಿಟ್ಟಿದ್ದೇನೆ. ನಿನಗೇ ಅದನ್ನು ಒಪ್ಪಿಸುತ್ತೇನೆ. ಅದರ ನ್ಯಾಯವಾದ ಅಧಿಕಾರಿ ಬಂದಿದ್ದಾನೆ, ನಿನ್ನ ಮುಂದೆ ನಿಂತಿದ್ದಾನೆ. ಅವನಿಗೆ ಬುದ್ಧಿಯ ಮಾತು ಹೇಳಿ, ಅವನನ್ನು ಇರಿಸಿಕೊಳ್ಳುವ, ಇಲ್ಲವೆ ಬಿಡುವ ಭಾರ ನಿನ್ನದು" ಎಂದ. ಕರಿಯನಿಗೆ ಒಮ್ಮೆಗೇ ಎಚ್ಚರವಾಯಿತು. ಈ ಬಗೆಯ ನುಡಿ, ತುಕ್ರನ ಬಾಯಿಯಿಂದಲೇ—ಬಂದೀತೆಂದು ಅವನು ಎಣಿಸಿರಲಿಲ್ಲ. ಆ ಮಾತುಗಳು ದುಃಖಪೂರಿತವಾಗಿದ್ದಂತೆಯೂ, ಆತನ ಅಂತರಾಳದಿಂದ ಬಂದಂತೆಯೂ ಕಂಡಿತು. ತುಕ್ರನೇ ಹಾಗೆಂದ ಮೇಲೆ ತಾನೇನು ಮಾಡಬೇಕು—ಎಂದು ಕರಿಯನಿಗೆ ತೋಚದಾಯಿತು.

ದೈವ ನುಡಿಸಿತು, ಆ ಹೊಸ ಪಾತ್ರಿಯ ಬಾಯಿಯಿಂದ—"ಏನು ಕರಿಯ, ಕೇಳಿದೆಯಲ್ಲ ತುಕ್ರ ಹೇಳಿದ್ದನ್ನು. ನಿನ್ನವರನ್ನು ನೀನು ಬಿಟ್ಟು ಹೋಗುವುದೇನು ನ್ಯಾಯ? ಕಷ್ಟದಲ್ಲೂ ಸುಖದಲ್ಲೂ ನಿನ್ನವರೇ ಅಲ್ಲವೆ ಅವರು? ಏನನ್ನುತ್ತೀ?" ಎಂದಿತು.

"ನನ್ನ ಧೊರೆಯೆ, ನಾನೇನನ್ನಲಿ. ನಿನಗಿಂತ ದೊಡ್ಡವ ನಾನಲ್ಲ ನೀನಂದದ್ದನ್ನು ಕೇಳುವ ಕೆಲಸ ನನಗೆ. ಪ್ರತಿ ಹೇಳುವುದಕ್ಕೆ ನಾನೆಷ್ಟರವ?

ನೀನು ಇರು ಎಂದರೆ ಇರುತ್ತೇನಷ್ಟೆ; ಹೋಗು ಅಂದರೆ ಹೋಗುತ್ತೇನೆ” ಎಂದ. ಆಗ ದೈವ “ಸಂತೋಷವಾಯಿತು, ಸಂತೋಷವಾಯಿತು” ಎನ್ನುತ್ತಲೇ ವಾದ್ಯದ ಭರ ಹೆಚ್ಚಿತು. ಪಾತ್ರಿಯ ಮೈ ಕುಲುಕು ಹೆಚ್ಚಿತು. ಆತ ಕೈಯಲ್ಲಿ ಖಡ್ಗ ಹಿಡಿದು, ಹಳೆಯ ಸಂಪ್ರದಾಯದಂತೆ ಬೆಟ್ಟದ ತುದಿಯನ್ನೇರಿ, ಕೇರಿಯನ್ನು ಸುತ್ತಿ, ಮರಳಿ ಬಂದದ್ದೂ ಆಯಿತು. ಆ ಓಟದ ಗತಿ ಮಾತ್ರ ಬಿರುಮನ ಓಟಕ್ಕಿಂತ ಅದ್ಭುತವಾಗಿತ್ತು—ಎಂದು ಕಂಡವರು ಹೇಳುತ್ತಾರೆ. ಬೂದ ಮೊದಲಾದವರು “ನಮ್ಮ ಹೊಸ ಪಾತ್ರಿ ತಪ್ಪಲ್ಲ; ಮಾತು ಹೆಚ್ಚೂ ಇಲ್ಲ, ಕಡಿಮೆಯೂ ಇಲ್ಲ ಲೆಕ್ಕಾಚಾರದ ಮಾತು; ಎಷ್ಟು ಬೇಕೋ ಅಷ್ಟು” ಎಂದು ಅಭಿಪ್ರಾಯ ಸೂಚಿಸಿದರು. ಪೂಜೆ ಸಮಾಪ್ತವಾಗುವಾಗ ತಿಕ್ರನೇ ಕರಿಯನನ್ನು ಮುಂದಿರಿಸಿಕೊಂಡು, ಅವನಿಂದ ಮೊದಲ ಪ್ರಸಾದವನ್ನು ಸ್ವೀಕರಿಸುವಂತೆ ಮಾಡಿ, ನೆರೆದ ಎಲ್ಲರಿಗೂ ಸಂತೋಷವಾಗುವಂತೆ ಮಾಡಿದ.

ರಾತ್ರಿ ನಡೆದ ವನಭೋಜನದಲ್ಲಿ, ಕರಿಯನಿಗಾಗಲಿ, ಕಾಳ, ಬೂದರಿಗಾಗಲಿ, ಮೂರು ವರ್ಷಗಳ ಹಿಂದೆ, ಅದೇ ವೇಳೆ ಕರಿಯ ಗುರಿಕಾರನನ್ನು ತಾವು ಕಳೆದುಕೊಂಡ ನೆನಪಾಗದೆ ಹೋಗಲಿಲ್ಲ. ಆ ದಿನ ಕರಿಯನಿಗೆ ಮಾತ್ರ ಊಟ ಪೂರ್ಣ ಮುಗಿಸುವಷ್ಟು ತಾಳ್ಮೆ ಇರಲಿಲ್ಲ. ಆತ ಅನ್ನವನ್ನು ಹೊತ್ತುಕೊಂಡು, ಕಾಳನನ್ನು ಜತೆಗೆ ಕರೆದುಕೊಂಡು, ಒಂದೇ ಓಟ ಹೂಡಿದ, ಕೆಂಚನಿಗೆ ಔತಣ ಮಾಡಿಸುವುದಕ್ಕೆ. - ಮುಂದೆ ಸಿಟ್ಟಿಯ ಲೆಂಗಿಯ ಜೊತೆಗೆ ಅವನ ವಿವಾಹವು ನೆರವೇರಿತು.

ಉಷಾ ಪ್ರೆಸ್, ಮೈಸೂರು

# ಉಷಾ ಸಾಹಿತ್ಯ ಮಾಲೆ, ಮೈಸೂರು.

| | | | | | |
|---|---|---|---|---|---|
| ೧ | ರಕ್ತ ತರ್ಪಣ | ತ. ರಾ. ಸು. | ೧ | ೮ | ೦ |
| ೨ | ಪಯಣದ ಹಾದಿಯಲ್ಲಿ | ಎಸ್. ಅನಂತನಾರಾಯಣ | ೧ | ೧೨ | ೦ |
| ೩ | ಕಣ್ಣೀರು | ಅ. ನ. ಕೃಷ್ಣರಾಯ | ೧ | ೧೨ | ೦ |
| ೪ | ಅಸ್ಥಿಪಂಜರ | ಅರ್ಚಿಕ ವೆಂಕಟೇಶ | ೩ | ೦ | ೦ |
| ೫ | ನಾಲ್ಕನೆಯ ಮನೆ | ನರೇಂದ್ರಬಾಬು | ೨ | ೦ | ೦ |
| ೬ | ಕನಸಿನ ಮನೆ | ವಿ. ಎಂ. ಇನಾಂದಾರ್ | ೩ | ೦ | ೦ |
| ೭ | ಶಂಖವಾದ್ಯ | ನಾ. ಕಸ್ತೂರಿ | ೧ | ೧೨ | ೦ |
| ೮ | ತತ್ವಜೀವಿ | ಎಸ್. ಸೂರಪ್ಪ | ೧ | ೧೨ | ೦ |
| ೯ | ಹೇಮಾವತಿ | ಗೊ. ರಾಮಸ್ವಾಮಯ್ಯಂಗಾರ್ | ೩ | ೮ | ೦ |
| ೧೦ | ಸನ್ಯಾಸಿಯ ಬದುಕು | ಶಿವರಾಮ ಕಾರಂತ | ೨ | ೮ | ೦ |
| ೧೧ | ಕುಮಾರ ಸಂಭವ | ಶ್ರೀರಂಗ | ೨ | ೧೨ | ೦ |
| ೧೨ | ಕೊನೆಯ ದಾಂ | ಕೃಷ್ಣಮೂರ್ತಿ ಪುರಾಣಿಕ | ೩ | ೦ | ೦ |
| ೧೩ | ಭಸ್ಮಾಸುರ | ಮಿರ್ಜಿ ಅಣ್ಣಾರಾಯ | ೧ | ೮ | ೦ |
| ೧೪ | ಶಾಪ | ವಿ. ಎಂ. ಇನಾಂದಾರ್ | ೩ | ೦ | ೦ |
| ೧೫ | ರೂಪದರ್ಶಿ | ಕೆ. ವಿ. ಅಯ್ಯರ್ | ೪ | ೦ | ೦ |
| ೧೬ | ಮಾಡಿ ಮಡಿದವರು | ಬಸವರಾಜ ಕಟ್ಟೀಮನಿ | ೩ | ೦ | ೦ |
| ೧೭ | ದಾಸಕೂಟ | ಬಳ್ಳಾರಿ ಬೀಚಿ | ೧ | ೧೨ | ೦ |
| ೧೮ | ಕುಡಿಯರ ಕೂಸು | ಶಿವರಾಮ ಕಾರಂತ | ೪ | ೮ | ೦ |
| ೧೯ | ಕಾರಂತರ ಕಾದಂಬರಿಗಳು | ಎಸ್. ಅನಂತನಾರಾಯಣ | ೨ | ೦ | ೦ |
| ೨೦ | ಉಷಾ ಸ್ವಪ್ನ | „ „ | ೧ | ೦ | ೦ |
| ೨೧ | ಅಗ್ನಿ ಕನ್ಯೆ | ಅ. ನ. ಕೃಷ್ಣರಾಯ | ೨ | ೦ | ೦ |
| ೨೨ | ಮುತ್ತು ಹವಳ | ಬೇರೆ ಬೇರೆ ಬರಹಗಾರರಿಂದ | ೨ | ೪ | ೦ |
| ೨೩ | ಜಗಜ್ಯೋತಿ ಬಸವೇಶ್ವರ | ಅ. ನ. ಕೃಷ್ಣರಾಯ | ೨ | ೦ | ೦ |
| ೨೪ | ಮೂರಾಬಟ್ಟೆ | ವಿ. ಎಂ. ಇನಾಂದಾರ್ | ೩ | ೧೫ | ೦ |
| ೨೫ | ನಟಸಾರ್ವಭೌಮ | ಅ. ನ. ಕೃಷ್ಣರಾಯ | ೧೦ | ೦ | ೦ |
| ೨೬ | ಯಶೋಧರ ಚರಿತೆ | ಕ. ವೆಂ. ರಾಘವಾಚಾರ್ | ೨ | ೪ | ೦ |
| ೨೭ | ಐಸಾಕ್ ನ್ಯೂಟನ್ | ಎಲ್. ಎಸ್. ವೀರಪ್ಪ | ೩ | ೦ | ೦ |
| ೨೮ | ದಿಲ್ಲಿಯ ಪತ್ರಗಳು | ಎಸ್. ವಿ. ಕೃಷ್ಣಮೂರ್ತಿರಾವ್ | ೧ | ೮ | ೦ |